# ಜನಪದ ಮಹಾಭಾರತ, ಪಂಪಭಾರತ ಮತ್ತು ಕುಮಾರವ್ಯಾಸಭಾರತ
## ಒಂದು ತೌಲನಿಕ ವಿಶ್ಲೇಷಣೆ

ಕನ್ನಡ ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ (ಹಂಪಿ)
ಸಾದರಪಡಿಸುವ ಮಹಾಪ್ರಬಂಧ

ಸಂಶೋಧಕರು

ಪಿ. ಕೋಕಿಲ
ಸಹಾಯಕ ಪ್ರಾಧ್ಯಾಪಕರು,
ಕನ್ನಡ ವಿಭಾಗ,
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ

ಮಾರ್ಗದರ್ಶಕರು

ಡಾ. ಎ.ಆರ್. ಮದನಕುಮಾರ್
ಸಹ ಪ್ರಾಧ್ಯಾಪಕರು,
ಕನ್ನಡ ವಿಭಾಗ,
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ

ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ) ಮಂಡ್ಯ.
(ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)

೨೦೧೩

# ಜನಪದ ಮಹಾಭಾರತ, ಪಂಪಭಾರತ ಮತ್ತು ಕುಮಾರವ್ಯಾಸಭಾರತ
# ಒಂದು ತೌಲನಿಕ ವಿಶ್ಲೇಷಣೆ

ಕನ್ನಡ ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ (ಹಂಪೆ)
ಸಾದರಪಡಿಸುವ ಮಹಾಪ್ರಬಂಧ


**ಸಂಶೋಧಕರು**

**ಪಿ. ಕೋಕಿಲ**
ಸಹಾಯಕ ಪ್ರಾಧ್ಯಾಪಕರು,
ಕನ್ನಡ ವಿಭಾಗ,
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ.

**ಮಾರ್ಗದರ್ಶಕರು**

**ಡಾ. ಎ.ಆರ್. ಮದನಕುಮಾರ್**
ಸಹ ಪ್ರಾಧ್ಯಾಪಕರು,
ಕನ್ನಡ ವಿಭಾಗ,
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ.



ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ) ಮಂಡ್ಯ.
(ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ)
೨೦೧೩

# ಸಂಶೋಧಕರ ಪ್ರಮಾಣಪತ್ರ

ಕನ್ನಡ ವಿಶ್ವವಿದ್ಯಾನಿಲಯದ (ಹಂಪೆ) ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿರುವ **ಜನಪದ ಮಹಾಭಾರತ, ಪಂಪಭಾರತ ಮತ್ತು ಕುಮಾರವ್ಯಾಸಭಾರತ :- ಒಂದು ತೌಲನಿಕ ವಿಶ್ಲೇಷಣೆ** ಎಂಬ ಸಂಶೋಧನಾ ಮಹಾಪ್ರಬಂಧವನ್ನು ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ ಕರ್ನಾಟಕ ಸಂಘ(ರಿ) ಮಂಡ್ಯ (ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿದೆ), ಈ ಸಂಸ್ಥೆಯ ಮೂಲಕ, ಮಹಿಳಾ ಸರ್ಕಾರಿ ಕಾಲೇಜಿನ ಕನ್ನಡ ಸಹಪ್ರಾಧ್ಯಾಪಕರು ಮತ್ತು ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ಸಂಪನ್ಮೂಲವ್ಯಕ್ತಿಯಾಗಿರುವ **ಡಾ. ಎ.ಆರ್.ಮದನಕುಮಾರ** ಇವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದೇನೆ. ಈ ಮಹಾಪ್ರಬಂಧ ನನ್ನ ಸ್ವಂತ ಸಂಶೋಧನೆ ಆಗಿದೆ. ಇದನ್ನು ಸಂಪೂರ್ಣವಾಗಿ ಆಗಲೀ ಅಥವಾ ಭಾಗಶಃವಾಗಲೀ ಯಾವುದೇ ವಿಶ್ವವಿದ್ಯಾನಿಲಯದ ಪದವಿ ಅಥವಾ ಡಿಪ್ಲೊಮಗೆ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ಮಂಡ್ಯ
ದಿನಾಂಕ: 15. 02. 2013

(ಪಿ. ಕೋಕಿಲ)
ಕನ್ನಡ ಸಹಾಯಕ ಪ್ರಾಧ್ಯಾಪಕರು,
ಮಹಿಳಾ ಸರ್ಕಾರಿ ಕಾಲೇಜು,
ಮಂಡ್ಯ.

# ಮಾರ್ಗದರ್ಶಕರ ದೃಢೀಕರಣಪತ್ರ

ಶ್ರೀಮತಿ. **ಪಿ.ಕೋಕಿಲ** ಇವರು ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ ಕರ್ನಾಟಕ ಸಂಘ(ರಿ) ಮಂಡ್ಯ (ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿದೆ), ಈ ಸಂಸ್ಥೆಯ ಮೂಲಕ **ಜನಪದ ಮಹಾಭಾರತ, ಪಂಪಭಾರತ ಮತ್ತು ಕುಮಾರವ್ಯಾಸಭಾರತ: – ಒಂದು ತೌಲನಿಕ ವಿಶ್ಲೇಷಣೆ** ಎಂಬ ವಿಷಯವನ್ನು ಕುರಿತು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಂಶೋಧಕರಾಗಿ ಸಂಶೋಧನೆ ನಡೆಸಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಈ ಮಹಾಪ್ರಬಂಧವನ್ನು ಇಡಿಯಾಗಿ ಅಥವಾ ಬಿಡಿಯಾಗಿ ಈ ಮೊದಲು ಇವರು ಯಾವುದೇ ಪದವಿ ಅಥವಾ ಡಿಪ್ಲೊಮ ಪದವಿಗಾಗಿ ಬಳಸಿಕೊಂಡಿಲ್ಲ. ಈ ಅಭ್ಯರ್ಥಿ ನನ್ನೊಂದಿಗೆ ೪ ವರ್ಷ ಸಂಶೋಧನೆಯ ಕೆಲಸ ಮಾಡಿದ್ದಾರೆಂದೂ ಈ ಪ್ರಬಂಧವನ್ನು ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ (ಹಂಪೆ) ಸಾದರ ಪಡಿಸಲು ನಾನು ಸಮ್ಮತಿಸುತ್ತೇನೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ: ಮಂಡ್ಯ.
ದಿನಾಂಕ: 15.02.13

(ಡಾ. ಎ.ಆರ್. ಮದನಕುಮಾರ)
ಕನ್ನಡ ಸಹ ಪ್ರಾಧ್ಯಾಪಕರು,
ಮಹಿಳಾ ಸರ್ಕಾರಿ ಕಾಲೇಜು,
ಮಂಡ್ಯ

ಮಹಿಳಾ ಸರ್ಕಾರಿ ಕಾಲೇಜು
ಮಂಡ್ಯ.

# ಪರಿವಿಡಿ

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಮನುಷ್ಯನ ಸಂವೇದನೆಗಳ ಸೂಕ್ಷ್ಮತೆ ಹಾಗೂ ಹರವು ಚಿಂತಿಸಿದಷ್ಟು ಗಹನ ಮತ್ತು ವಿಶಾಲ. ತನ್ನ ಪ್ರತಿಯೊಂದು ಕ್ರಿಯೆ ಹಾಗೂ ಮಾತಿನ ಹಿಂದೆ ತಪ್ಪೋ ಸರಿಯೋ, ಅಂತೂ ಒಂದು ಭಾವನೆ ಅರಿವು ಸಾಮಾನ್ಯವಾಗಿ ಇರುತ್ತದೆ. ಯಾವುದಾದರೊಂದು ಬಗೆಯ ಭಾವನೆಯಿಲ್ಲದೆ ಕ್ರಿಯೆ ನಡೆಯುವುದಿಲ್ಲ. ಅಂತರಂಗದ ಈ ಭಾವನೆಗಳು ಹೊರಹೊಮ್ಮಲು ತುಡಿಯುತ್ತಿರುತ್ತವೆ. ತೀವ್ರ ಸಂವೇದನಾಶೀಲರಲ್ಲದವರಲ್ಲಿ ಅವು ಯಾವುದಾದರೊಂದು ತಾತ್ಕಾಲಿಕ ಕ್ರಿಯೆ ಅಥವಾ ಮಾತಿನ ಮೂಲಕ ತಕ್ಷಣ ವ್ಯಕ್ತಗೊಳ್ಳುತ್ತವೆ. ಆದರೆ ಸ್ವಲ್ಪ ಹೆಚ್ಚು ಸಂವೇದನಾಶೀಲನಾದವನಲ್ಲಿ ಅದು ಪರಿಣಾಮಕಾರಿಯಾದ ರೂಪದಿಂದ ಹೊರಬೀಳುತ್ತದೆ. ಕಲಾಭಿರುಚಿಯುಳ್ಳ ಜನರಲ್ಲಿ ಅದು ಚಿತ್ರ, ನಾಟ್ಯ, ಸಂಗೀತ, ಸಾಹಿತ್ಯಗಳ ರೂಪಧಾರಣೆಯಾಗಿ ಮೂಡುತ್ತದೆ. ಶಾಸ್ತ್ರಾಧ್ಯಯನ ಹೊಂದಿದವರಾಗಿದ್ದರೆ ಆ ಅಭಿವ್ಯಕ್ತಿ ಹೆಚ್ಚು ಪ್ರೌಢವಾಗಿ 'ಮಾರ್ಗೀಯ' ಎನ್ನಿಸಿಕೊಳ್ಳುತ್ತದೆ. ಜನಸಾಮಾನ್ಯರಿಂದ ಅದು ಸಹಜಸುಂದರವಾಗಿ ಅಭಿವ್ಯಕ್ತಗೊಂಡರೆ 'ಜನಪದ ಸಾಹಿತ್ಯ' ಎಂದು ಕರೆಸಿಕೊಳ್ಳುತ್ತದೆ.

ಈ ಜನಪದಸಾಹಿತ್ಯ ನಮ್ಮ ಸಾಮಾನ್ಯ ಜನಜೀವನದ, ಜನಮನದ ಕಲಾನುಭೂತಿಯ ಕೈಗನ್ನಡಿಯಾಗಿದೆ. ಜನಸಾಮಾನ್ಯರ ನುಡಿಗಳಾದುದರಿಂದ ಇವುಗಳಲ್ಲಿ ಕೃತಕ ವರ್ಣನೆಗಳಿರುವುದಿಲ್ಲ. ಲೌಕಿಕವನ್ನೋ ಅಧ್ಯಾತ್ಮಿಕತೆಯನ್ನೋ ಮೆರೆವ ಹಂಬಲವಿರುವುದಿಲ್ಲ. 'ಅರಸುಗಳಿಗಿದು ವೀರ, ದ್ವಿಜರಿಗೆ ಪರಮವೇದದಸಾರ, ಯೋಗೀಶ್ವರರ ತತ್ವವಿಚಾರ...' ಇತ್ಯಾದಿ, ಇತ್ಯಾದಿ ಆಗಿರಬೇಕೆಂಬ ಅತ್ಯಾಸೆ ಇರುವುದಿಲ್ಲ. ಇವು ಕೇವಲ ತಮಗಾಗಿಯೇ ಹೇಳಿಕೊಳ್ಳುವ, ತಾನಾಗಿಯೇ ಹೊರ ಹೊಮ್ಮುವ ಕಾಜಾಣದಿಂಚರಗಳಾಗಿರುತ್ತವೆ. ಆದುದರಿಂದಲೇ ಇಲ್ಲಿ ಅವರು ಅವರೇ ಆಗಿ ಕಾಣುತ್ತಾರೆ. ಅವರ ಒಳ-ಹೊರಗಿನ ಸಂಸ್ಕಾರಗಳು, ಭಾವನೆಗಳು ತಮ್ಮ ನಿಜವರ್ಣದಲ್ಲಿ ಗೋಚರಿಸುತ್ತವೆ.

ಈ ಹಿನ್ನಲೆಯಿಂದಲೇ 'ಜನಪದ ಸಾಹಿತ್ಯ'ವನ್ನು ವಿವಿಧ ಮಗ್ಗಲುಗಳಿಂದ ಅಭ್ಯಾಸಿಸುವುದು ತುಂಬ ಪ್ರಯೋಜನಕಾರಿಯಾಗುತ್ತದೆ. ಜನಪದ ಸಾಹಿತ್ಯದ ಮಹತ್ವವನ್ನು ಗುರುತಿಸುತ್ತಾ, ವಿದ್ವಾಂಸರು ಅದು 'ಐತಿಹಾಸಿಕ, ಭೌಗೋಳಿಕ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ನೈತಿಕ ಹಾಗೂ ಭಾಷಾವಿಜ್ಞಾನ ಸಂಬಂಧಿ ಮಹತ್ವ'ಗಳನ್ನು ಹೊಂದಿದೆ ಎಂದಿರುವುದು ಸಹಜವಾಗಿದೆ.

ಮನುಷ್ಯನ ಮನಸ್ಸು ಮೂಲತಃ ಒಂದೇ ಆದರೂ ವಾತಾವರಣ, ಸಂಸ್ಕೃತಿ, ವಿದ್ಯಾಭ್ಯಾಸ, ಕನಸು ಹಾಗೂ ದೊರೆತ ಅನುಭವಗಳಿಗನುಸಾರವಾಗಿ ಅದು ಭಿನ್ನರೂಪ ಪಡೆಯುತ್ತದೆ. ಈ ಮೇಲಿನ ಅಂಶಗಳಲ್ಲದೆ ಜನರ ಮನಸ್ಸಿನ ಮೇಲೆ ಪ್ರಭಾವ ಬೀರುವ ಬದುಕನ್ನೂ ರೂಪಿಸುವ ಇನ್ನೊಂದು ಮಹತ್ವದ ಅಂಶವಿರುತ್ತದೆ; ಅದೇ ಅವರ ಮತಧರ್ಮ. ಆದ್ದರಿಂದಲೇ ವಿವಿಧ ಮತಸ್ಥರ ಜನಪದ ಸಾಹಿತ್ಯದಲ್ಲಿ ಅವರ ಧರ್ಮದ ಪ್ರಭಾವವನ್ನು ಸ್ಪಷ್ಟವಾಗಿ ಕಾಣಬಹುದು. 'ಮತಧರ್ಮಗಳಿಂದ ಪ್ರಭಾವಿತವಾದ ನಂಬುಗೆ, ಆಚರಣೆ ಮೊದಲಾದವು ಒಂದು ಜನವರ್ಗದ ಸಂಸ್ಕೃತಿಯನ್ನು ರೂಪಿಸುತ್ತದೆ. ಉಳಿದ ಪ್ರಭಾವಗಳು ಅವರ ಮೇಲೆ ಬೀಳುವುದಿಲ್ಲ ಎಂದಲ್ಲಿ, ಮತ, ಧರ್ಮಗಳಿಂದಾಗುವ ಪ್ರಭಾವ ಅತ್ಯಧಿಕ. ಅವುಗಳಿಂದ ಬರುವ ಅನೇಕಾನೇಕ ಭಾವನೆಗಳು, ಕಲ್ಪನೆಗಳು ನಮ್ಮ ಸಾಹಿತ್ಯ, ಕಲೆಗಳಲ್ಲಿ ಅವುಗಳ ಸಂಕೇತಗಳು, ಆಶಯಗಳು ಪ್ರಕಟಗೊಳ್ಳುತ್ತವೆ. ಇದಕ್ಕೆ ಸಂಪ್ರದಾಯಗಳು ಬಲವಾದ ಕಾರಣಗಳಾಗುತ್ತವೆ. ಸಂಸ್ಕೃತಿ ಎನ್ನುವುದು ಮುಂದುವರೆಯುವುದೇ ಸಂಪ್ರದಾಯಶೀಲತೆಯಿಂದಾಗಿ' ಎಂಬ ಶಿವರಾಮ ಕಾರಂತರ ಮಾತುಗಳು ಇಲ್ಲಿ ಅರ್ಥಪೂರ್ಣವಾಗಿವೆ.

ಒಂದು ವಿಶಾಲ ಸಮಾಜದಲ್ಲಿ ಬದುಕುತ್ತಿರುವ ಹಲವು ಪಂಗಡ ಅಥವಾ ಸಮುದಾಯಗಳ ನಡುವೆ ಸಾಂಸ್ಕೃತಿಕ ವಿನಿಮಯ ಅನಿವಾರ್ಯವಾಗುತ್ತದೆ. 'ಹಾಗಾಗಿ ಒಂದು ನಿರ್ದಿಷ್ಟಮತದ ಮೂಲ ಸ್ವರೂಪವೇನು? ಅದರ ಮೇಲಿನ ಹೊರಗಿನ ಪ್ರಭಾವವೇನು? ಆ ಪ್ರಭಾವಗಳ ಮೂಲ ಯಾವುದು? ಅವುಗಳ ವಲಸೆಯಲ್ಲಿ ನಡೆದ ರೂಪಾಂತರವೇನು?'– ಎಂಬುದನ್ನರಿಯಲು ಮೂಲತಃ ಆ ಮತೀಯರಲ್ಲಿನ ಜನಪದ ಸಾಹಿತ್ಯವನ್ನೇ ಅವಲೋಕಿಸಬೇಕು. ಏಕೆಂದರೆ 'ಹಿಂದೆಯೇ ಸ್ಪಷ್ಟಪಡಿಸಿರುವಂತೆ ಅಲ್ಲಿ ಮಾತ್ರ ಅವು ಹೆಚ್ಚು ಸಹಜವಾದ ಬಣ್ಣದಲ್ಲಿ ಕಾಣಿಸಿಕೊಳ್ಳುತ್ತವೆ. ಅನಕ್ಷರಸ್ಥ ಸಮಾಜದಲ್ಲಿ ಕಂಠಪಾಠ ಸಂಪ್ರದಾಯದ ಮೂಲಕ ಉಳಿದು ಬರುವ ಸಾಹಿತ್ಯಕ ಭೌತಿಕ ವರ್ಗಗಳು ತಮ್ಮ ಜನಪದ ಅಂಶಗಳಿಂದಾಗಿ ನಾಗರಿಕ ಸಮಾಜದವಕ್ಕಿಂತ ಹೆಚ್ಚು ಶ್ರೀಮಂತವಾಗಿರುತ್ತವೆ. ಅನಕ್ಷರಸ್ಥ ಸಮಾಜದ ಜನಪದದಲ್ಲಿ ಮಾನವನ ಮೂಲಭೂತ ಅನಿಸಿಕೆಗಳನ್ನು ಹೆಚ್ಚು ಹೆಚ್ಚಾಗಿ ಹೆಕ್ಕುವುದಕ್ಕೆ ಅವಕಾಶವಿರುತ್ತದೆ.'

ಜನಪದ ಸಹಸ್ರಾರು ವರ್ಷಗಳಿಂದ ಕಂಠಸ್ಥವಾಗಿ, ತಲೆಮಾರಿನಿಂದ ತಲೆಮಾರಿಗೆ ಸಾಗುತ್ತಾ ಬಂದಿರುವಂಥದು. ಆದರೆ ಅಕ್ಷರದಿಂದ ಆದ ವೈಯಕ್ತಿಕ ರಚನೆಗಳೇ ಶಿಷ್ಟಪದ. ಇದು ವ್ಯಕ್ತಿಯೊಬ್ಬನಿಂದ ಅಥವಾ ಸಮೂಹ ಮಾಧ್ಯಮಗಳಿಂದ ಪಡೆಯುವ ಜ್ಞಾನ. ಜನಪದ

ಕಂಠಸ್ಥಸಂಪ್ರದಾಯದಿಂದ ಸಂವಹನಗೊಂಡರೆ ಶಿಷ್ಟಪದ ಲಿಖಿತ ರೂಪವುಳ್ಳ ಭಾಷೆಯಲ್ಲಿ ಗ್ರಂಥಗಳ ಹಾಗೂ ಸಮೂಹ ಮಾಧ್ಯಮಗಳ ಮುಖಾಂತರ, ವಿದ್ಯಾವಂತರಿಂದ ಹರಿದುಬರುತ್ತದೆ. ಶಿಷ್ಟ ಸಾಹಿತ್ಯಕ್ಕೆ ಕರ್ತೃ ಇರುವಂತೆ, ಅವರ ಪರಿಸರ, ಕಾಲ, ದೇಶ ಗೊತ್ತಾಗುತ್ತದೆ. ಹಾಗಾಗಿ ಆ ಕಾಲದ ಸಾಹಿತ್ಯದಲ್ಲಿನ ಇತಿಮಿತಿಗಳನ್ನು, ಮೌಲ್ಯಗಳನ್ನು ಬಹುಮಟ್ಟಿಗೆ ಗುರುತಿಸಬಹುದು. ಆದರೆ ಜನಪದಕ್ಕೆ ಕರ್ತೃ, ಕಾಲ, ಪರಿಸರ– ಇವೇ ಮೊದಲಾದ ಪ್ರಶ್ನೆಗಳಿಗೆ ಸಮರ್ಪಕ ಉತ್ತರವಿಲ್ಲ. ಕಾರಣ ಜನಪದ ವ್ಯಷ್ಟಿಯಿಂದ ಆರಂಭಗೊಂಡು ಸಮಷ್ಟಿಯಲ್ಲಿ ಐಕ್ಯಗೊಂಡು ಕರ್ತೃ ಅನಾಮಧೇಯನಾಗುತ್ತಾನೆ. ಇಲ್ಲಿ ಸಮಷ್ಟಿಯ ಅಶೋತ್ತರಗಳಿಗೆ ಮಾತ್ರ ಬೆಲೆಯೇ ಹೊರತು ವ್ಯಕ್ತಿಯ ಅಶೋತ್ತರಗಳು ಗೌಣವಾಗುತ್ತವೆ.

ಶಿಷ್ಟ ಸಾಹಿತ್ಯದಲ್ಲಿ ಕರ್ತೃ ಹಾಗೂ ಸಹೃದಯರು ಬೇರೆ ಬೇರೆಯಾದರೆ, ಜನಪದ ಸಾಹಿತ್ಯದಲ್ಲಿ ಈ ಎರಡು ಹಂತದಲ್ಲೂ ಏಕವ್ಯಕ್ತಿಯೇ ಇರುತ್ತಾನೆ. ಹಾಗಾಗಿ ಜನಪದ ಗಾಯಕ, ಹಾಡುಗಾರ, ಪ್ರದರ್ಶನಕಾರ ಹಾಗೂ ಕವಿ– ಈ ಮೂರು ಏಕವ್ಯಕ್ತಿಯೇ ಆಗಿದ್ದು ಏಕಕಾಲದಲ್ಲಿಯೇ ಎಲ್ಲವನ್ನು ನಿಭಾಯಿಸಬಲ್ಲ. ಹೀಗಾಗಿ ಇಲ್ಲಿ ಪ್ರೇಕ್ಷಕರ ಅಪೇಕ್ಷೆಗೆ ಅನುಗುಣವಾಗಿ ಸಾಹಿತ್ಯ ನಿರೂಪಣೆಗೊಳ್ಳುತ್ತದೆ. ಆದರೆ ಶಿಷ್ಟ ಸಾಹಿತ್ಯದಲ್ಲಿ ಇದು ತೀರ ಭಿನ್ನವಾಗಿದ್ದು, ಇಲ್ಲಿನ ರಚನಾ ಕೆಲಸ ಕವಿಯ ವಿವೇಚನೆಗನುಗುಣವಾಗಿರುತ್ತದೆ. ಅದನ್ನು ವಿಮರ್ಶಿಸಿ, ವಿವರಿಸುವ ಕಾರ್ಯವನ್ನು ಸಹೃದಯ ಅಥವಾ ವಿಮರ್ಶಕ ಕೈಗೊಳ್ಳುತ್ತಾನೆ. ಶಿಷ್ಟ ಸಾಹಿತ್ಯದಲ್ಲಿ ಕವಿಗೆ ಬೇಕಾದ ಪ್ರತಿಭೆ, ಕೃತಿಯನ್ನು ವಿಶ್ಲೇಷಿಸುವ ವಿಮರ್ಶಕನಿಗೂ ಅನಿವಾರ್ಯವಾಗುತ್ತದೆ. ಜನಪದ ಸಾಹಿತ್ಯ ಹಾಗೂ ಶಿಷ್ಟ ಸಾಹಿತ್ಯಗಳಿಗೆ ಭಿನ್ನತೆ ಇರುವಂತೆ ನಿಕಟವಾದ ಸಂಬಂಧವೂ ಇರುವುದುಂಟು. ಇವುಗಳ ಸಂಬಂಧವನ್ನು ಕುರಿತು ಗ್ರಹಿಸುವಾಗ ಬಿ.ಎಂ. ಶ್ರೀಕಂಠಯ್ಯನವರು 'ಜನವಾಣಿ ಬೇರು ಕವಿವಾಣಿ ಹೂವು' ಎಂದು ಹೇಳಿರುವ ಮಾತು ಔಚಿತ್ಯಪೂರ್ಣವೆನ್ನಿಸುತ್ತದೆ. ಇದು ಶಿಷ್ಟ ಸಾಹಿತ್ಯ ಹಾಗೂ ಜನಪದಕ್ಕೆ ಇರುವ ಅವಿನಾಭಾವ ಸಂಬಂಧವನ್ನು ತಿಳಿಸುತ್ತದೆ. ಈ ಹಿನ್ನಲೆಯಲ್ಲಿ ಶಿಷ್ಟ ಸಾಹಿತ್ಯದ ಉಗಮಕ್ಕೆ ಮೂಲ ಪ್ರೇರಕ, ಪ್ರಚೋದಕ ಹಾಗೂ ಪೋಷಕಶಕ್ತಿಯಾಗಿ ಜನಪದ ಸಾಹಿತ್ಯವಿರುತ್ತದೆ.

ಜನಪದ ಕವಿ ಅಕ್ಷರಸ್ಥನಲ್ಲದಿದ್ದರೂ ಅವನಿಗೆ ಪರಂಪರೆಯ ಜ್ಞಾನವಿರುತ್ತದೆ. ಆ ಪರಂಪರೆಯಿಂದ ಬಂದ ಗೀತೆಗಳನ್ನು ಅನುಕರಿಸುವುದರಲ್ಲಿ ಅವನ ಪ್ರತಿಭೆ ಸಹಾಯ ಮಾಡುತ್ತದೆ. ತಾನು ಕೇಳಿದ ಗೀತೆಯನ್ನು ಅನುಕರಿಸಿ, ಅನುಸರಿಸಿ ಅದರಲ್ಲಿ ತನಗೆ ಇಷ್ಟವಾದ ಅಂಶಗಳನ್ನು ಉಳಿಸಿಕೊಂಡು ಬೇಡವಾದ ಅಂಶಗಳನ್ನು ಬಿಟ್ಟು ತನ್ನ ಕಾಲಕ್ಕನುಗುಣವಾದ ಹೊಸ ಹೊಸ ಅಂಶಗಳನ್ನು ಸೇರಿಸುತ್ತಾ ಹೋಗುವುದು ಅವನ ವಿಶೇಷವಾಗಿರುತ್ತದೆ. 'ಮಹಾಭಾರತ' ಪ್ರಾಚೀನ

ಕಾಲದಿಂದಲೂ ಅತ್ಯಂತ ಜನಾನುರಾಗವನ್ನು ಪಡೆದ ಮಹಾಕಾವ್ಯ. ಜನರು ಮಹಾಭಾರತವನ್ನು ಪ್ರತಿದಿನ ಪಾರಾಯಣ ಮಾಡಲು ಇಟ್ಟುಕೊಂಡು ಅದರಲ್ಲಿನ ತತ್ವಗಳನ್ನು ಅನುಷ್ಠಾನಕ್ಕೆ ತರಲು ಪ್ರಯತ್ನಿಸಿದರು. ಬ್ರಾಹ್ಮಣ ಕ್ಷತ್ರಿಯರಿಗೆ ಮಾತ್ರ ಮೀಸಲಾಗಿದ್ದ ವೇದಗಳಂತಲ್ಲದೆ ಅದು ಸರ್ವರೂ ಓದಬಹುದಾದಂಥ ಗ್ರಂಥವಾಗಿ 'ಪಂಚಮವೇದ'ವೆಂಬ ಗೌರವವೂ ದೊರೆಯಿತು. ಅನೇಕ ದಾರ್ಶನಿಕರೂ ಸಾಧುಸಂತರೂ ರಾಜಮಹಾರಾಜರುಗಳೂ ಅದರಿಂದ ಆಕರ್ಷಿತರಾದರಲ್ಲದೆ ಅಸಂಖ್ಯಾತ ಕವಿಗಳೂ ನಾಟಕಕಾರರೂ ಶಿಲ್ಪಿಗಳೂ ಚಿತ್ರಕಾರರೂ ತಮ್ಮ ಕೃತಿಗಳ ಮೂಲ ಸಾಮಗ್ರಿಗೂ ಮಹೋನ್ನತ ಭಾವನೆಗಳಿಗೂ ಅದನ್ನೇ ಆಶ್ರಯಿಸಿದರು.

ಮಹಾಕಾವ್ಯ ಪರಂಪರೆಯಲ್ಲಿ ಕನ್ನಡದ ಅವತರಣಿಕೆಯಾಗಿ ರೂಪುಗೊಂಡ ಮೊದಲ ಕನ್ನಡದ ಮಹಾಕಾವ್ಯ ಪಂಪ ವಿರಚಿಸಿದ 'ವಿಕ್ರಮಾರ್ಜುನ ವಿಜಯಂ' ಅಥವಾ 'ಪಂಪಭಾರತ'. ಪಂಪ ತನ್ನ ಕಾವ್ಯರಚನೆಯ ಹಿನ್ನಲೆಯಲ್ಲಿ ವ್ಯಾಸ ಮಹಾಭಾರತದ ಕಥಾವಸ್ತುವನ್ನು ಆರಿಸಿಕೊಂಡರೂ ಅದನ್ನೇ ಯಥಾವತ್ತಾಗಿ ಅನುಕರಿಸದೆ ತನಗೆ ಆಶ್ರಯ ನೀಡಿದ ಅರಿಕೇಸರಿಯನ್ನು ಹೊಗಳಲು ಅನುವಾಗುವಂತೆ ಕಥೆಯನ್ನು ಮಾರ್ಪಡಿಸಿಕೊಂಡ. ಅಲ್ಲದೆ ಹತ್ತನೆಯ ಶತಮಾನದ ತನ್ನ ಕಾಲದ ಇತಿಹಾಸ, ರಾಜಕೀಯ ಮತ್ತು ಸಾಮಾಜಿಕ ಸನ್ನಿವೇಶವನ್ನು ಕಾವ್ಯದಲ್ಲಿ ಅನಾವರಣಗೊಳಿಸಿದ್ದಾನೆ. ಈ ಹಿನ್ನಲೆಯಿಂದ ಪಂಪಭಾರತ ಚಾರಿತ್ರಿಕ ಹಾಗೂ ಲೌಕಿಕ ಕಾವ್ಯವೆಂದು ಪ್ರಸಿದ್ಧವಾಗಿದೆ.

ಗದುಗಿನ ನಾರಣಪ್ಪ ತನ್ನನ್ನು 'ಕುಮಾರವ್ಯಾಸ'ನೆಂದು ಕರೆದುಕೊಂಡು ಮಹಾಭಾರತದ ಕಥೆಯನ್ನು ಆಕರವಾಗಿ ಸ್ವೀಕರಿಸಿ, ಭಾಗವತ ಪರಂಪರೆಯ ಕೃಷ್ಣನ ಕಥೆಯನ್ನು ಹಿಗ್ಗಿಸಿ ತನಗೆ ಅನುಕೂಲವಾಗುವಂತೆ ಮಹಾಭಾರತ ಕಥೆಯನ್ನು ನಿರೂಪಿಸಿದ್ದಾನೆ. ಅಂತೆಯೇ ತನ್ನ ಸಮಕಾಲೀನ ಸಾಮಾಜಿಕ ಸ್ಥಿತ್ಯಂತರಗಳನ್ನು ತನ್ನ ಕಾವ್ಯದಲ್ಲಿ ಒಡಮೂಡಿಸಿರುವುದನ್ನು ಕಾಣಬಹುದಾಗಿದೆ. ಈ ನಿಟ್ಟಿನಲ್ಲಿ ಪಂಪ ಮತ್ತು ಕುಮಾರವ್ಯಾಸರಿಬ್ಬರೂ ತಮ್ಮದೇ ನಿರ್ದಿಷ್ಟ ಬದ್ಧತೆಯಿಂದ ಕಾವ್ಯ ರಚಿಸಿದವರು. ವ್ಯಾಸನ ಮಹಾಭಾರತವನ್ನು ತಮ್ಮ ಆಶಯಕ್ಕನುಗುಣವಾಗಿ ಮಾರ್ಪಡಿಸಿಕೊಂಡಿದ್ದಾರೆ.

'ಜನಪದ ಮಹಾಭಾರತ' ಮೇಲಿನ ಶಿಷ್ಟಕವಿಗಳ ಯಾವುದೇ ನಿಯಮಗಳಿಗೂ ಒಳಗಾಗದೆ ಮೌಖಿಕ ಪರಂಪರೆಯಿಂದ ಸಾಗಿಬಂದ ಕಾವ್ಯ. ಹೀಗೆ ಪೀಳಿಗೆಯಿಂದ ಪೀಳಿಗೆಗೆ ಹರಿದು ಬಂದ ಸಂದರ್ಭದಲ್ಲಿ ಅಂದಿನ ಪ್ರಾದೇಶಿಕ, ಸಾಮಾಜಿಕ ಸಂದರ್ಭಗಳಿಗನುಗುಣವಾಗಿ ಮಾರ್ಪಡುತ್ತಾ ಬಂದಿದೆ. ವಸ್ತು ಮತ್ತು ರಚನಾವಿನ್ಯಾಸದಿಂದ ಪಂಪಭಾರತ ಲೌಕಿಕ ಕಾವ್ಯವಾದರೆ,

ಕುಮಾರವ್ಯಾಸಭಾರತ ವೈದಿಕೋತ್ತರ ಸಂವೇದನೆಯ ಕಾವ್ಯವಾಗಿದೆ. ಇವೆರಡಕ್ಕೂ ವ್ಯಾಸನಮಹಾಭಾರತ ಮೂಲವಾದರೂ ಅವುಗಳ ಸ್ವರೂಪ ಹಾಗೂ ಆಶಯದ ಹಿನ್ನಲೆಯಲ್ಲಿ ಅವುಗಳು ತತ್ಕಾಲೀನ ಸಂದರ್ಭಕ್ಕೆ ಬದ್ಧವಾಗಿರುವುದು ಸ್ಪಷ್ಟವಾಗಿದೆ. ಈ ಎರಡು ಕಾವ್ಯಗಳು ಅಭಿಜಾತೀಯ ಕಾವ್ಯಪರಂಪರೆಯಲ್ಲಿ ಬಂದ ಪರಮೋತ್ಕೃಷ್ಟ ಕಾವ್ಯಗಳಾಗಿವೆ. ಆದರೆ ಈ ಎರಡೂ ಕಾವ್ಯಗಳ ವಿರುದ್ಧದ ನೆಲೆಯಿಂದ ಒಡಮೂಡಿದ ಕಾವ್ಯ ಜನಪದ ಮಹಾಭಾರತ.

ಭಾರತದ ಮಹಾಕಾವ್ಯಗಳಲ್ಲಿ ಒಂದಾದ ಮಹಾಭಾರತ ಜನಪದರ ಬದುಕಿನಲ್ಲಿ ಅಚ್ಚಳಿಯದ ಪ್ರಭಾವಬೀರಿ ಪ್ರಾಚೀನದಿಂದ ಅರ್ವಾಚೀನದವರೆಗೂ ಪರಂಪರೆಯಲ್ಲಿ ಮೌಖಿಕವಾಗಿ ಸಾಗುತ್ತಾ ಬಂದಿದೆ. ಇದು ಕಾಲಮಾನಕ್ಕನುಗುಣವಾಗಿ ಬದಲಾವಣೆ ಹೊಂದುತ್ತಾ ಜನಪದರಲ್ಲಿ ರೂಢಿಮೂಲವಾಗಿ ಹರಿದು ಬಂದಿದ್ದ ವಿಭಿನ್ನ ಸಂಪ್ರದಾಯದ ಆಚರಣೆ, ನಂಬಿಕೆಗಳನ್ನೊಳಗೊಂಡು ಪ್ರವಹಿಸಿದೆ. ಜನಪದರು ತಮ್ಮ ಮನೋಭಾವಕ್ಕನುಗುಣವಾಗಿ ತಮ್ಮ ಆಸೆ-ಆಕಾಂಕ್ಷೆಗಳನ್ನು ಸೇರಿಸಿದ್ದಾರೆ; ಹೀಗೆ ಜನಸಾಮಾನ್ಯರ ಮನಸ್ಸಿನ ಮೂಸೆಯಲ್ಲಿ ಕುದಿದು ಹೊಸ ಹೊಸ ಆವಿಷ್ಕಾರ ಹೊಂದಿ ಇಂದು ಜನಪದ ಮಹಾಭಾರತ ಬೃಹದಾಕಾರ ತಾಳಿದೆ. ಇದರ ಮೇಲೆ ಯಾವುದರ ಪ್ರೇರಣೆ ಪ್ರಭಾವಗಳೂ ಇಲ್ಲವೆ ಇಲ್ಲವೆಂದು ಹೇಳಲಾಗದು. ಅಭಿಜಾತ ಮಹಾಭಾರತದ ಪ್ರಭಾವ, ಪುರಾಣಪ್ರವಚನಾದಿಗಳ ಪ್ರಭಾವ, ವಿಭಿನ್ನ ಸಂಪ್ರದಾಯದ ಕಥಾಪುಂಜಗಳ ಪ್ರಭಾವ, ವರ್ತಮಾನ ಪ್ರಜ್ಞೆಯ ಪ್ರಭಾವ ಬೀರಿದಂತಿದೆ. ಆದರೂ ಜನಪದ ಮಹಾಭಾರತ ಇವೆಲ್ಲಕೂ ಭಿನ್ನವಾದ ತನ್ನದೇ ಆದ ಆಶಯಗಳಿಂದಾಗಿ ಬೆಳೆದು ರೂಪುಗೊಂಡಿದೆ. ಶಿಷ್ಟ ಮಹಾಭಾರತಕ್ಕೆ ಎಲ್ಲಿ ವೈದೃಶ್ಯವಾಗಿದೆ, ಎಲ್ಲಿ ಪ್ರಭಾವಕ್ಕೆ ಒಳಗಾಗಿದೆ ಎಂಬುದನ್ನು ತೌಲನಿಕವಾಗಿ ವಿಶ್ಲೇಷಿಸಲಾಗಿದೆ.

ಜನಪದ ಮಹಾಭಾರತ ಲಿಖಿತವಾಗದೆ ಮೌಖಿಕ ಕಾವ್ಯವಾಗಿದೆ. ಜನಮಾನಸದಲ್ಲಿರುವ ಐತಿಹ್ಯ, ಪುರಾಣ, ಇತಿಹಾಸ, ಮಹಾಕಾವ್ಯ, ಕಥೆ-ಇವೆಲ್ಲವುಗಳು ಒಂದರೊಡನೊಂದು ಬೆರೆತು ವಿಶಿಷ್ಟಕೃತಿಯನ್ನು ಪಡೆದು ಹೊರಹೊಮ್ಮಿರುವ ಕಾವ್ಯ. ಪಂಪ, ಕುಮಾರವ್ಯಾಸರು ಸಮಾಜದ ಮುಖ್ಯವಾಹಿನಿಗೆ ಸೇರಿದ್ದು ಅವರಿಗೆ ಸುಭದ್ರವಾದ ನೆಲೆ, ಪರಂಪರೆ ಮತ್ತು ಸಂಸ್ಕೃತಿಗಳಿವೆ. ಆದರೆ ಜನಪದ ಮಹಾಭಾರತದ ಕವಿ ಅನಾಮಧೇಯನಾಗಿದ್ದು, ವಿದ್ಯೆ, ಅಂತಸ್ತು ಹಾಗೂ ಚಹರೆಯಿಲ್ಲದವನು. ತಳಸಂಸ್ಕೃತಿಯ ನೆಲೆಯಿಂದ ಬಂದ ಅನನ್ಯ ಕವಿಯೊಬ್ಬನ ದನಿಯ ಅಭಿವ್ಯಕ್ತಿಯಾಗಿ ಕಾವ್ಯ ಒಡಮಾಡಿದೆ.

ಹೀಗಾಗಿ ಈ ಮೂರು ಮಹಾಕಾವ್ಯಗಳು ಸಮಾನಾಂತರ ಅಂಶಗಳಿಗಿಂತ ಹೆಚ್ಚಾಗಿ ತಮ್ಮದೇ ಕಾಲ, ದೇಶ, ಸಂಸ್ಕೃತಿ, ಚಿಂತನಾಕ್ರಮ ಮುಂತಾದ ಹಲವು ವಿಶಿಷ್ಟತೆಗಳಿಂದ ಭಿನ್ನವಾಗಿ ನಿಂತ ಕಾವ್ಯಗಳಾಗಿವೆ. ಇವುಗಳ ವೈಶಿಷ್ಟ್ಯ ಮತ್ತು ರಚನೆಯ ಪೇರಣೆ, ಕಾವ್ಯಮನೋಧರ್ಮ ಭಿನ್ನವಾಗಿದೆ. ಸೃಜನಶೀಲ ಹಾಗೂ ಶಿಷ್ಟ ಕಾವ್ಯ ಪರಂಪರೆಯೊಂದಿಗೆ ಮುಖಾಮುಖಿಯಾಗಿ ನಿಂತಂತಿರುವ ಮೌಖಿಕ ಪರಂಪರೆಯ ಅಭಿವ್ಯಕ್ತಿ ಜನಪದ ಮಹಾಭಾರತ. ಈ ಹಿನ್ನೆಲೆಯಲ್ಲಿ ಈ ಮೂರು ಮಹಾಕಾವ್ಯಗಳನ್ನು ತೌಲನಿಕವಾಗಿ ವಿಶ್ಲೇಷಣೆಗೆ ಒಳಪಡಿಸುವುದೇ ಅಧ್ಯಯನದ ಉದ್ದೇಶ.

ಶಿಷ್ಟ ಕವಿಗಳು ರಚಿಸಿರುವ ಮಹಾಭಾರತ ಗ್ರಂಥಗಳನ್ನು ಬಿಡಿಯಾಗಿ ಹಾಗೂ ಇಡಿಯಾಗಿ, ಅನೇಕ ದೃಷ್ಟಿಕೋನಗಳಿಂದ ಅಧ್ಯಯನಕ್ಕೊಳಪಡಿಸಲಾಗಿದೆ. ಉದಾಹರಣೆಗೆ ವ್ಯಾಸಭಾರತ ಮತ್ತು ಪಂಪಭಾರತದೊಂದಿಗೆ, 'ವ್ಯಾಸಭಾರತ, ಪಂಪಭಾರತ ಮತ್ತು ಕುಮಾರವ್ಯಾಸಭಾರತಗಳೊಂದಿಗೆ ತೌಲನಿಕವಾಗಿ ವಿಶ್ಲೇಷಣೆಗೊಳಪಡಿಸಲಾಗಿದೆ. ಆದರೆ ಇದುವರೆಗೂ ಶಿಷ್ಟ ಮಹಾಭಾರತ ಗ್ರಂಥಗಳೊಂದಿಗೆ ಜನಪದ ಮಹಾಭಾರತವನ್ನು ಕುರಿತು ತೌಲನಿಕವಾಗಿ ಅಧ್ಯಯನಗಳು ಸಮಗ್ರವಾಗಿ ನಡೆದಿಲ್ಲ. ಜನಪದ ಮಹಾಭಾರತವನ್ನು ಚರ್ಚಿಸುವಾಗ ಒಂದೆರಡು ವೈದೃಶ್ಯ ಅಥವಾ ಸಾದೃಶ್ಯದ ಘಟನೆಗಳನ್ನೂ, ಅಂಶಗಳನ್ನೋ ಕುರಿತು ಪ್ರಾಸಂಗಿಕವಾಗಿ ಹೇಳಲಾಗಿದೆ. ಸೋಮಶೇಖರ ಇಮ್ರಾಪುರ ಅವರ 'ಜನಪದ ಮಹಾಭಾರತ' (ಆದಿಪರ್ವ ಮತ್ತು ಸಭಾಪರ್ವ), ಎನ್.ಆರ್. ನಾಯಕ ಅವರ 'ಗಾಮೊಕ್ಕಲ ಮಹಾಭಾರತ', ಕರಾಕೃ ಅವರ 'ಹಣತೆ ಉರಿಯುತ್ತಿದೆ', ರಾಮದೇವನ ಹಳ್ಳಿ ಬಿ.ರಾಮಯ್ಯನವರ 'ಜನಪದ ಮಹಾಭಾರತ', ಪುಟ್ಟಸ್ವಾಮಿಯವರ 'ಕನ್ನಡ ಜಾನಪದದಲ್ಲಿ ರಾಮಾಯಣ-ಮಹಾಭಾರತ' ಮುಂತಾದವುಗಳಲ್ಲಿ ತಕ್ಕಮಟ್ಟಿಗೆ ಬಿಡಿ ಬಿಡಿ ಪ್ರಸಂಗಗಳನ್ನು ವಿಶ್ಲೇಷಿಸಲಾಗಿದೆ. ಸಿದ್ದಶೆಟ್ಟಿಯವರು ಹಾಡಿರುವ ಪಿ.ಕೆ.ರಾಜಶೇಖರ ಅವರು ಸಂಪಾದಿಸಿರುವ ಜನಪದ ಮಹಾಭಾರತದಲ್ಲಿ ಸಮಗ್ರ ಚಿತ್ರಣ ದೊರೆಯುತ್ತದೆ. ಆದ್ದರಿಂದಲೇ ಆಧುನಿಕತೆಯ ಆಕರ್ಷಣೆಯಿಂದ ಬದಲಾಗುತ್ತಿರುವ ಸಾಮಾಜಿಕ ಬದುಕಿನಿಂದಾಗಿ ಕಣ್ಮರೆಯಾಗುವ ಮೊದಲು ದೇಶೀಯ ಸಂಪತ್ತನ್ನು ರಕ್ಷಿಸಿಕೊಳ್ಳುವ ಕೆಲಸ ಜರೂರಾಗಬೇಕಾಗಿದೆ. ಈ ಹಿನ್ನಲೆಯಿಂದ ಪ್ರಪ್ರಥಮಬಾರಿಗೆ ದೊರೆಯುವ ಎಲ್ಲಾ ಸಂಗ್ರಹಗಳನ್ನು ಒಂದೆಡೆ ಕ್ರೋಢೀಕರಿಸಿ 'ಜನಪದ ಮಹಾಭಾರತ, ಪಂಪ ಭಾರತ ಮತ್ತು ಕುಮಾರವ್ಯಾಸ ಭಾರತ ಒಂದು ತೌಲನಿಕ ವಿಶ್ಲೇಷಣೆ' ಎಂಬ ಶಿರ್ಷಿಕೆಯಡಿಯಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. 'ಜನಪದ ಮಹಾಭಾರತ'ದ ಪ್ರೇರಕಾಂಶಗಳನ್ನು ಕಲಾತ್ಮಕಸಿದ್ಧಿಯನ್ನೂ ಪರಿಣಾಮಗಳ ನೆಲೆಗಳನ್ನೂ ತೌಲನಿಕವಾಗಿ ಶೋಧಿಸುವುದು ಈ ಅಧ್ಯಯನದ ಮುಖ್ಯವಾದ ಉದ್ದೇಶ. ಮುಖ್ಯವಾಗಿ ಪಂಪಭಾರತ, ಕುಮಾರವ್ಯಾಸಭಾರತಗಳೊಡನೆ ಸಾಧ್ಯವಾದೆಡೆಗಳಲ್ಲಿ ಮೂಲ ಭಾರತದೊಡನೆಯೂ

ಕನ್ನಡದ ಇತರ ಭಾರತ ಕೃತಿಗಳೊಡನೆಯೂ ಹೋಲಿಸಿ 'ಜನಪದ ಮಹಾಭಾರತ' ಅವುಗಳಿಗಿಂತ ಎಲ್ಲಿ ಭಿನ್ನವಾಗಿದೆ, ಏಕೆ ಎಂಬ ವಿಷಯವನ್ನು ಬಿಡಿಸಿ ನೋಡುವ ಯತ್ನ ಮಾಡಲಾಗಿದೆ. ಮೊದಲೇ ತಿಳಿಸಿರುವಂತೆ ಶಿಷ್ಟ ಮಹಾಭಾರತ ಗ್ರಂಥಗಳ ಬಗೆಗೆ ಈಗಾಗಲೇ ಸಾಕಷ್ಟು ಅಧ್ಯಯನಗಳೂ ವಿಮರ್ಶೆಗಳೂ ನಡೆದಿರುವುದರಿಂದ ಪ್ರಸ್ತುತ ಅಧ್ಯಯನ ಅವುಗಳ ಮರುಧ್ವನಿ ಮಾತ್ರವಾಗುವುದನ್ನು ತಡೆದು ಸ್ವಂತ ವಿವೇಚನೆಯನ್ನು ಮುಂದಿಟ್ಟು ಜನಪದ ಮಹಾಭಾರತದ ಹೊಸ ವಿಚಾರಗಳನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ.

ಶಿಷ್ಟ ಕವಿಗಳ ವ್ಯಕ್ತಿ ವಿಚಾರವನ್ನು ಕುರಿತ ಚರ್ಚೆಯನ್ನು ಉದ್ದೇಶಪೂರ್ವಕವಾಗಿ ಮಿತಿಗೊಳಿಸಲಾಗಿದೆ. ವ್ಯಾಸ, ಪಂಪ, ಕುಮಾರವ್ಯಾಸರ ಹೆಸರು, ಕಾಲ, ದೇಶ, ಮತ ಮತ್ತು ಬಂಧುತ್ವ ವಿಚಾರದಲ್ಲಿ ಸಾಕಷ್ಟು ವಾದ ವಿವಾದಗಳು ಚರ್ಚೆಗಳು ಬಹು ಹಿಂದಿನಿಂದಲೂ ನಡೆದಿದ್ದು ಆ ವಿಷಯವನ್ನು ಕುರಿತ ಒಂದು ಪರಿಗ್ರಹಿಕೆ ಈಗಾಗಲೇ ನಿರ್ಮಾಣವಾಗಿರುವುದರಿಂದ ವಾತಾವರಣವನ್ನು ಮತ್ತೆ ಕಲಕುವುದು ಬೇಡವೆಂತಲೂ ಆ ಚರ್ಚೆಯನ್ನು ವಿಸ್ತರಿಸಿದಷ್ಟು ಪುನರುಕ್ತಿ ಮಾತ್ರವಾಗುವ ಅಪಾಯದ ಸಾಧ್ಯತೆಗಳಿರುವುದರಿಂದಲೂ ಹೆಚ್ಚು ಬೆಳಸದೆ ಮೊಟಕು ಗೊಳಿಸಲಾಗಿದೆ. ಆದರೆ ಸಂಪೂರ್ಣ ಅಲಕ್ಷಿಸಿದಂತಾಗಬಾರದೆಂಬ ಉದ್ದೇಶದಿಂದ ಇದುವರೆಗೆ ನಡೆದಿರುವ ಚರ್ಚೆಗಳನ್ನು ಅನುಲಕ್ಷಿಸಿ ವಿದ್ವತ್ ಕ್ಷೇತ್ರದಲ್ಲಿ ಈಗಾಗಲೇ ಸ್ಥಾಪಿತವಾಗಿರುವ ಸಾಮಾನ್ಯಾಭಿಪ್ರಾಯವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಮಹಾಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಎಂಟು ಅಧ್ಯಾಯಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಅಧ್ಯಾಯ ಒಂದರಲ್ಲಿ **ಅಧ್ಯಯನ ಉದ್ದೇಶ ಮತ್ತು ವ್ಯಾಪ್ತಿಯನ್ನು** ಕುರಿತು ಸ್ಪಷ್ಟಪಡಿಸಲಾಗಿದೆ. ಅಧ್ಯಾಯ ಎರಡರಲ್ಲಿ **ವ್ಯಾಸಮಹಾಭಾರತ ಹಾಗೂ ಜನಪದಮಹಾಭಾರತ ಕಥೆ ರೂಪುಗೊಂಡ ಬಗೆಯನ್ನು** ಕುರಿತು ಸಮೀಕ್ಷಿಸಲಾಗಿದೆ. **ಕನ್ನಡದಲ್ಲಿ ಮಹಾಭಾರತ ಪರಂಪರೆ** ಎಂಬ ಅಧ್ಯಾಯ ಮೂರರಲ್ಲಿ ಕನ್ನಡ ಸಾಹಿತ್ಯದಲ್ಲಿ ಬಂದಿರುವ ಮಹಾಭಾರತಗಳ ಸ್ಥೂಲ ಪರಿಚಯ ಮಾಡಿಕೊಡಲಾಗಿದೆ. **ಕಥಾವಸ್ತು ಮತ್ತು ವಿನ್ಯಾಸ** ಎಂಬ ನಾಲ್ಕನೆಯ ಅಧ್ಯಾಯದಲ್ಲಿ ವ್ಯಾಸ ಮಹಾಭಾರತದ ಕಥಾವಸ್ತು, ಪಂಪ, ಕುಮಾರವ್ಯಾಸ ಹಾಗೂ ಜನಪದ ಮಹಾಭಾರತಗಳಲ್ಲಿ ಹೇಗೆ ಭಿನ್ನ ನೆಲೆಯಲ್ಲಿ ಅಭಿವ್ಯಕ್ತಿಗೊಂಡಿದೆ ಎಂಬುದನ್ನು ತೌಲನಿಕವಾಗಿ ವಿಶ್ಲೇಷಿಸಲಾಗಿದೆ. **ಪಾತ್ರಚಿತ್ರಣ** ಎಂಬ ಐದನೆಯ ಅಧ್ಯಾಯದಲ್ಲಿ ಜನಪದ ಮಹಾಭಾರತ, ಪಂಪಭಾರತ ಹಾಗೂ ಕುಮಾರವ್ಯಾಸ ಭಾರತಗಳಲ್ಲಿನ ಪ್ರಮುಖ ಪಾತ್ರಗಳನ್ನು ತೌಲನಿಕವಾಗಿ ಅಧ್ಯಯನಕ್ಕೊಳಪಡಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ **ಜನಪದ ಮಹಾಭಾರತದಲ್ಲಿ ಕಂಡುಬರುವ ಸಾಹಿತ್ಯಕ ಪ್ರಜ್ಞೆಯನ್ನು** ಸಮೀಕ್ಷಿಸಲಾಗಿದೆ. ಅಧ್ಯಾಯ ಏಳರಲ್ಲಿ **ಜನಪದ ಮಹಾಭಾರತದಲ್ಲಿ ಸೇರ್ಪಡೆಯಾಗಿರುವ ಉಪಕಥೆಗಳನ್ನು** ಕುರಿತು ಪರಿಶೀಲಿಸಲಾಗಿದೆ. **ಜನಪದ ಮಹಾಭಾರತ ಪಂಪಭಾರತ ಮತ್ತು ಕುಮಾರವ್ಯಾಸಭಾರತಗಳ ಒಂದು ಸಮಗ್ರ ನೋಟ** ಎಂಬ ಎಂಟನೆಯ ಅಧ್ಯಾಯದಲ್ಲಿ ಜನಪದ ಮಹಾಭಾರತ, ಪಂಪಭಾರತ ಮತ್ತು ಕುಮಾರವ್ಯಾಸಭಾರತ- ಈ ಮೂರು ಕೃತಿಗಳಲ್ಲಿ ಕಂಡುಬರುವ ಭಿನ್ನತೆ ಹಾಗೂ ಸಮನಾಂಶಗಳನ್ನು ಚರ್ಚಿಸಲಾಗಿದೆ. **ಉಪಸಂಹಾರದಲ್ಲಿ** ಜನಪದ ಮಹಾಭಾರತ ಸಾಹಿತ್ಯ ಕ್ಷೇತ್ರಕ್ಕೆ ಕೊಡುಗೆ ಹೇಗೆ ಎಂಬುದರ ಬಗ್ಗೆ ಪ್ರಸ್ತಾಪಿಸಲಾಗಿದೆ.

## ಅಧ್ಯಾಯ ಎರಡು

## ವ್ಯಾಸಮಹಾಭಾರತ ಹಾಗೂ ಜನಪದಮಹಾಭಾರತ ಕಥೆ ರೂಪುಗೊಂಡ ಬಗೆ

**ಪೀಠಿಕೆ:**

ಮಹಾಭಾರತವು ಭಾರತೀಯ ವಾಙ್ಮಯದಲ್ಲಿ ಒಂದು ಅಸದೃಶ್ಯವಾದ ಮಹಾಗ್ರಂಥ. ಭಾರತೀಯ ಸಂಸ್ಕೃತಿ ಮತ್ತು ಆದರ್ಶಗಳ ಸಮಗ್ರ ಸ್ವರೂಪದ ಚಿತ್ರಣವಿದೆ. ಮಹಾಭಾರತವು ಮಹಾಸಾಗರ ಸದೃಶವಾಗಿದೆ. ಮಾನವ ಜೀವನದ ಪರಮ ಲಕ್ಷ್ಯವಾಗಿರುವ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂದು ಚತುರ್ ಪುರುಷಾರ್ಥಗಳ ಸಾಧನೆಯ ಮಾರ್ಗ ಇಲ್ಲಿ ನಿರೂಪಿತವಾಗಿದೆ. ಅದಕ್ಕೆ ಸಂಬಂಧಪಟ್ಟ ಉಪದೇಶಾತ್ಮಕವಾದ ಮಾತುಗಳು, ಈ ಸಾಗರದಲ್ಲಿ ಹೇರಳವಾಗಿವೆ. ಭಾರತೀಯ ಸಂಸ್ಕೃತಿಯ ಆಕರವಾಗಿರುವ ವೇದ, ಉಪನಿಷತ್ತು, ದರ್ಶನ, ಪುರಾಣ, ಧರ್ಮಶಾಸ್ತ್ರ, ಅರ್ಥಶಾಸ್ತ್ರ ಮತ್ತು ಮೋಕ್ಷಶಾಸ್ತ್ರಗಳ ಸಾರವಾಗಿರುವ, ಒಂದು ಇತಿಹಾಸವೂ ಮಹಾಕಾವ್ಯವೂ ಆಗಿರುವ ಈ ಆರ್ಷ ಗ್ರಂಥವನ್ನು ವಿಶಾಲವಾದ ಭಾರತೀಯ ಸಂಸ್ಕೃತಿಯ ಏಕಮಾತ್ರ ಪ್ರತಿನಿಧ್ಯಾತ್ಮಕ ಗ್ರಂಥವೆಂದರೆ ತಪ್ಪಿಲ್ಲವೆನ್ನಬಹುದು. ಭಾರತದ ವಿಚಾರದಲ್ಲಿ ಅದರಲ್ಲೇ ಒಂದು ಮಾತಿದೆ: 'ಈ ಗ್ರಂಥದಲ್ಲಿ ಏನಿದೆಯೋ ಅದೇ ರೂಪಾಂತರದಿಂದ ಬೇರೆ ಕಡೆಗಳಲ್ಲೂ ಇದೆ; ಯಾವುದು ಇದರಲ್ಲಿ ಇಲ್ಲವೋ ಅದು ಬೇರೆಲ್ಲೂ ಇಲ್ಲ'. ಈ ಉಕ್ತಿ ಉತ್ಪ್ರೇಕ್ಷೆಯಲ್ಲ ಸತ್ಯ. ಇಂತಹ ಮಹಾನ್ ಗ್ರಂಥದ ಕರ್ತೃ ಯಾರು? ಗ್ರಂಥರಚನೆಯ ಹಿನ್ನಲೆ ಏನು? ಅದರಲ್ಲಿ ವರ್ಣಿತವಾದ ವಿಚಾರಗಳು ಯಾರಿಗೆ ಸಂಬಂಧಿಸಿದವುಗಳು? ಗ್ರಂಥದ ಮುಖ್ಯ ಉದ್ದೇಶವೇನು? ಎಂಬಿತ್ಯಾದಿ ವಿಷಯಗಳ ವಿವೇಚನೆಯೇ ಈ ಅಧ್ಯಾಯದ ಉದ್ದೇಶ.

ಮಹಾಭಾರತ ಅಷ್ಟಾದಶ ಪುರಾಣಗಳನ್ನು ರಚಿಸಿದ ಸರ್ವಜ್ಞರಾದ ವ್ಯಾಸಮಹರ್ಷಿಗಳಿಂದ ಪ್ರಣೀತವಾದ ಒಂದು ಇತಿಹಾಸ. ಈ ಇತಿಹಾಸ ಶಬ್ದದ ವ್ಯುತ್ಪತ್ತಿಯಿಂದ ಸಿಗುವ ಅರ್ಥದಂತೆ [ಇತಿ+ಹ+ಆಸ=ಈ ಪ್ರಕಾರ ಇದ್ದನು] ಭರತವಂಶದಲ್ಲಿ ಹುಟ್ಟಿದ ಯುಧಿಷ್ಠಿರ ಮೊದಲಾದವರ ಜೀವನ ಚರಿತ್ರೆಯ ಸವಿಸ್ತಾರ ವರ್ಣನೆಯೇ ಇದರ ಪ್ರಧಾನವಾದ ಕಥಾವಸ್ತು. ಆದಿಪರ್ವದಿಂದ ಆರಂಭಿಸಿ ಸ್ವರ್ಗಾರೋಹಣ ಪರ್ಯಂತವಾಗಿ ಹದಿನೆಂಟು ಭಾಗವಾಗಿ ವಿಂಗಡಿಸಲ್ಪಟ್ಟ ಈ ಸುಧೀರ್ಘವಾದ ಕಥಾನಕದ ಒಂದೊಂದು ವಿಭಾಗವನ್ನು ಪರ್ವ ಎನ್ನಲಾಗಿದೆ. 'ಪರ್ವ' ಎಂದರೆ 'ಗೆಣ್ಣು' ಎಂಬರ್ಥವಿದೆ; ವಂಶ ಕವಲೊಡೆದಂತೆ ಬಿದುರಿನ ಗೆಣ್ಣಿನಲ್ಲಿ ಅಂಕುರಿಸಿದ ಕೊಂಬೆ ಕವಲೊಡೆದು ಹಬ್ಬಿದಂತೆ ಇಲ್ಲಿನ ಹದಿನೆಂಟು ಪರ್ವಗಳು ಹಬ್ಬಿ ವಿಸ್ತೃತವಾಗಿದೆ.

ಈ ಹದಿನೆಂಟು ಪರ್ವಗಳಲ್ಲಿ ಒಟ್ಟು ಒಂದು ಲಕ್ಷ ಶ್ಲೋಕಗಳು ಹಾಸುಹೊಕ್ಕಾಗಿವೆ. ಒಂದು ಅನುಷ್ಟುಪ್ ಛಂದಸ್ಸಿನ ಪದ್ಯದ ಅಕ್ಷರಗಳು ೩೨; ಇದಕ್ಕೆ 'ಗ್ರಂಥ' ಎಂದು ಹೆಸರು. ಬೇರೆ ಬೇರೆ ಛಂದಸ್ಸಿನ ಪದ್ಯಗಳೂ, ಅಲ್ಲಲ್ಲಿ ಗದ್ಯಗಳೂ ಭಾರತದಲ್ಲಿ ಇದ್ದರೂ ಸಹ ೩೨ ಅಕ್ಷರಗಳಿಗೆ ಒಂದು 'ಗ್ರಂಥ' ಎಂಬ ಅಭಿಪ್ರಾಯದಿಂದ 'ಭಾರತ ಒಂದು ಲಕ್ಷ ಗ್ರಂಥಗಳುಳ್ಳದ್ದು' ಎಂದು ಹೇಳಲಾಗಿದೆ.

ವೇದವ್ಯಾಸರ ಅಂತರ್ದೃಷ್ಟಿ, ಲೋಕಾನುಭವ, ವೇದಪುರಾಣಜ್ಞಾನ, ಪಾತ್ರಪ್ರಜ್ಞೆ, ಭಾಷಾಕೌಶಲ, ಕಥನ ಸಾಮರ್ಥ್ಯ– ಇವೆಲ್ಲ ಆದರಣೀಯವಾಗಿವೆ. ಮಹಾಭಾರತದಲ್ಲಿ ಒಂದು ಪಾತ್ರವೂ ಆಗಿ ಅದನ್ನು ನಡೆಸಿರುವ ವ್ಯಾಸರು ತಾವೇ ಅದರ ನಿರೂಪಕರೂ ಆಗಿ ನಿರ್ವಹಿಸಿರುವುದು ಒಂದು ಅಪೂರ್ವಘಟನೆ ಎನ್ನಬಹುದು. ತ್ರೈಕಾಲೀನ ಜ್ಞಾನವು ತಮಗೆ ತಪಃಪ್ರಭಾವದಿಂದ ಪ್ರಾಪ್ತವಾಗಿದೆ ಎಂದು ಸ್ವಯಂ ವೇದವ್ಯಾಸರೇ ಹೇಳಿಕೊಂಡಿದ್ದಾರೆ (ಶಾಂತಿ ಪರ್ವದ ೩೪೪ನೆಯ ಅಧ್ಯಾಯ).

ಕುರುವಂಶದ ಮೂಲಪುರುಷರಲ್ಲಿ ವ್ಯಾಸಮಹರ್ಷಿಗಳು ಒಬ್ಬರಾಗಿದ್ದು, ಕೌರವ–ಪಾಂಡವರಿಗೆ ವೃದ್ಧಪಿತಾಮಹರಾಗಿದ್ದಾರೆ. ತಮ್ಮ ವಂಶದ ಮೂರು ತಲೆಮಾರುಗಳ ಜೀವನ ಚಿತ್ರಣಗಳನ್ನು ಕಣ್ಣಾರೆ ಕಂಡವರೂ, ತತ್ಕಾಲೀನಜನಜೀವನವನ್ನೂ ಸಂಸ್ಕೃತಿಯನ್ನೂ ಸಮಗ್ರವಾಗಿ ತಿಳಿದವರಾದುದರಿಂದ ತಮ್ಮ ಅನುಭವಜನ್ಯವಾದ ಭರತವಂಶದವರ ಚರಿತ್ರೆಯನ್ನು ಮಹಾಭಾರತದಲ್ಲಿ ನಿಷ್ಪಕ್ಷಪಾತ ದೃಷ್ಟಿಕೋನದಿಂದ ಚಿತ್ರಿಸಿದ್ದಾರೆ. ವ್ಯಾಸರು 'ಮಹಾಭಾರತ' ಮಾತ್ರವಲ್ಲದೆ ಅಷ್ಟಾದಶಪುರಾಣಗಳನ್ನು ರಚಿಸಿದರೆಂದೂ, ವೇದಗಳನ್ನು ನಾಲ್ಕು ವಿಭಾಗಗಳಾಗಿ ವಿಭಾಗಿಸಿದವರೆಂದೂ ಪ್ರತೀತಿ ಇದೆ. ಆದರೆ ಏಕವ್ಯಕ್ತಿಯಿಂದ ಇಷ್ಟೆಲ್ಲವನ್ನು ಮಾಡಲು ಹೇಗೆ ಸಾಧ್ಯ, ಭಿನ್ನ ಕರ್ತೃಗಳಿಂದ ರಚಿತವಾಗಿರಬಹುದೆಂಬ ಸಂದೇಹವನ್ನು ಹಲವು ವಿದ್ವಾಂಸರು ವ್ಯಕ್ತಪಡಿಸಿದ್ದಾರೆ.

ಆದರೆ ಮಹಾತಪೋನಿರತರೂ ಮಹಾಮೇಧಾವಿಗಳೂ ಆದ ವ್ಯಾಸ ಮಹರ್ಷಿಗಳ ದಿವ್ಯಶಕ್ತಿಯನ್ನು ತಾತ್ವಿಕ ನೆಲೆಗಟ್ಟಿನಿಂದ ಪರಿಭಾವಿಸದಿದ್ದರೆ ತಪ್ಪಾಗಬಹುದು. ಆದರೂ ಅವುಗಳೆಲ್ಲವೂ ಏಕಕಾಲದಲ್ಲಿ, ಏಕಕರ್ತೃವಿನಿಂದ ರಚಿತವಾದುವಲ್ಲವೆಂದು ಅನೇಕ ಬಾಹ್ಯ ಹಾಗೂ ಆಂತರಿಕ ಸಾಕ್ಷ್ಯಗಳು ಕಂಡುಬರುವುದರಿಂದ ಆ ಸಂದೇಹ ಸಾಧುವೆಂದು ತೋರುತ್ತದೆ. 'ವ್ಯಾಸ' ಎನ್ನುವುದು ಒಬ್ಬ ವ್ಯಕ್ತಿಯ ಹೆಸರಲ್ಲವೆಂದೂ ಒಂದು 'ಕುಟುಂಬ' ಅಥವಾ 'ಗುರು' ಪರಂಪರೆಯ ಹೆಸರಿರಬೇಕೆನ್ನುವ ಅಭಿಪ್ರಾಯವೂ ಉಂಟು.

ಮಹಾಭಾರತದ 'ಅನುಕ್ರಮಣಿಕಾಪರ್ವ'ದಲ್ಲಿ ಉಲ್ಲೇಖಗೊಂಡಿರುವಂತೆ ವ್ಯಾಸರು ಈ ಮಹಾಗ್ರಂಥವನ್ನು ಬರೆಯಲು ಯಾರು ಸಮರ್ಥರು ಎಂದು ಯೋಚಿಸುತ್ತಿರುವಾಗ ಬ್ರಹ್ಮನು ಅಲ್ಲಿ ಆವಿರ್ಭವಿಸಿ 'ಶಿವಪುತ್ರನಾದ ಗಣೇಶನು ಮಹಾಭಾರತ ಲೇಖನ ಕಾರ್ಯವನ್ನು ದಕ್ಷತೆಯಿಂದ ನಿರ್ವಹಿಸುವನು. ಆದುದರಿಂದ ಆತನನ್ನೇ ಬರೆಯಲು ಪ್ರಾರ್ಥಿಸು' ಎಂದು ಹೇಳಿದನು. ಬ್ರಹ್ಮನ ಆಣತಿಯಂತೆ ವ್ಯಾಸರು ಗಣೇಶನನ್ನು ಸ್ಮರಿಸಿ ಪ್ರಾರ್ಥಿಸಿದರು.

ವ್ಯಾಸರ ಪ್ರಾರ್ಥನೆಗೆ ಪ್ರತಿಕ್ರಿಯಿಸಿದ ಗಣೇಶನು 'ನನ್ನ ಲೇಖನಿಗೆ ವಿರಾಮವನ್ನು ಕೊಡದೆ 'ನಿರರ್ಗಳವಾಗಿ ಕಾವ್ಯವನ್ನು ಹೇಳುವುದಾದರೆ ಮಾತ್ರ ನಾನು ಬರೆಯುತ್ತೇನೆ' ಎಂಬ ನಿಬಂಧನೆ ಹಾಕಿದನು. ಆಗ ವ್ಯಾಸರು 'ನಾನು ಹೇಳುವ ಶ್ಲೋಕಗಳನ್ನು ಅರ್ಥಮಾಡಿಕೊಂಡೇ ಬರೆಯಬೇಕೆಂದು' ಹೇಳಿದ್ದಕ್ಕೆ ಇಬ್ಬರೂ ಪರಸ್ಪರ ನಿಬಂಧನೆಯನ್ನು ಒಪ್ಪಿ ರಚನೆಯ ಕಾರ್ಯದಲ್ಲಿ ಪ್ರವೃತ್ತರಾದರು.

ಮಹಾಭಾರತದ ಆದಿಪರ್ವದ ಆರಂಭದಲ್ಲಿ ಸರ್ವ ಲೋಕ ಪೂಜಿತರು ಮಹರ್ಷಿಗಳು, ಮಹಾತ್ಮರು ಎಂಬಿತ್ಯಾದಿ ವ್ಯಾಸ ಪರವಾದ ಸ್ತುತಿಗಳನ್ನು ಕಾಣುತ್ತೇವೆ. 'ಅನುಕ್ರಮಣಿಕಾಪರ್ವ'ದಲ್ಲಿ ಶಾನಕನೆಂಬ ಕುಲಪತಿ ನೈಮಿಷಾರಣ್ಯದಲ್ಲಿ ದೀರ್ಘಸತ್ರವನ್ನು ಕೈಗೊಂಡ ಸಂಗತಿ, ಅಲ್ಲಿಗೆ ಬಂದ ಉಗ್ರಶ್ರವನೆಂಬ ಸೌತಿ ಅಲ್ಲಿ ನೆರೆದಿದ್ದ ಮಹರ್ಷಿಗಳಿಗೆ ವ್ಯಾಸಕೃತ ಮಹಾಭಾರತವನ್ನು ಹೇಳತೊಡಗಿದನೆಂಬ ವಿಷಯ ಬರುತ್ತದೆ. ಅಲ್ಲದೆ ತೇಜೋಮಯನಾದ ವ್ಯಾಸರ ಪ್ರಸಾದ ಲೇಪಿತ ಕಥೆಯನ್ನು ಹೇಳುವಂತಾಗಲಿ ಎಂದು ವ್ಯಾಸಮಹರ್ಷಿಗಳಿಗೆ ವಂದಿಸಿ ಸೌತಿ ಕಥೆಯನ್ನು ಪ್ರಾರಂಭಿಸುವುದರಿಂದ ಆ ಭಾಗ ವ್ಯಾಸವಿರಚಿತವಾದುದ್ದೆಂದು ಹೇಳುವುದು ಉಚಿತವೆನ್ನಿಸುವುದಿಲ್ಲ.

ಅಲ್ಲದೆ ವ್ಯಾಸವಿರಚಿತ ಮಹಾಭಾರತವನ್ನು ಮೊದಲು ವೈಶಂಪಾಯನನು ಅರ್ಜುನನ ಮರಿಮಗನಾದ ಜನಮೇಜಯನಿಗೆ ಹೇಳಿದನೆಂದೂ, ಅದನ್ನೇ ಮತ್ತೆ ತಾನು ಹೇಳತೊಡಗುವೆನೆಂದೂ ಸೌತಿ ಹೇಳುತ್ತಾನೆ. ಆದುದರಿಂದ ವೈಶಂಪಾಯನನ ಮತ್ತು ಸೌತಿಯ ಉಕ್ತಿಗಳೂ ಕೃತಿಯೊಡನೆ ಸೇರಿಹೋಗಿರಬೇಕಾದುದು ಅನಿವಾರ್ಯವಾಗಿರಬಹುದು. ಅನಂತರ ಬರುವ 'ಪರ್ವಸಂಗ್ರಹ'ವೂ ಶೌನಕಾದಿಗಳ ನಡುವೆ ನಡೆಯುವ ಸಂಭಾಷಣೆಯೂ ವ್ಯಾಸಕೃತವಾಗಿರಲಾರದು. ಮುಂದೆ 'ಪೌಷ್ಯಪರ್ವ'ದಲ್ಲಿ ಜನಮೇಜಯ ತನ್ನ ಸಹೋದರರೊಡನೆ ಕುರುಕ್ಷೇತ್ರದಲ್ಲಿ ಆಯೋಜಿಸಿದ ಸತ್ರಯಾಗದ ಪ್ರಸ್ತಾಪವಿದೆ. ಅದನ್ನು ಕೂಡ ವ್ಯಾಸರೇ ಬರೆದರೆಂದೂ ವೈಶಂಪಾಯನನು ಅದನ್ನು ಜನಮೇಜಯನಿಗೆ ಹೇಳಿದನೆಂದೂ ಹೇಳಿದರೆ ಆಭಾಸವಾಗುತ್ತದೆ.

ತದನಂತರದ 'ಪೌಲೋಮಪರ್ವ'ದಲ್ಲಿ ಉಗ್ರಶ್ರವ ಶೌನಕರ ಸಂಭಾಷಣೆ ಮುಂದುವರಿದು ಶೌನಕನ ವಂಶವಾದ ಭೃಗುವಂಶದ ಮಹಾತ್ಮ್ಯೆ ವಿಸ್ತಾರವಾಗಿ ಬರುತ್ತದೆ. ಮುಂದಿನ 'ಆಸ್ತೀಕಪರ್ವ'ದಲ್ಲೂ ಜನಮೇಜಯನ ವಿಷಯವೇ ಸವಿಸ್ತಾರವಾಗಿದೆ.

ಹಾಗಾಗಿ ಪೀಠಿಕಾಭಾಗದಲ್ಲಿ ಬರುವ ಎಲ್ಲಾ ವಿಷಯಗಳನ್ನು ವ್ಯಾಸರೇ ಬರೆದರೆಂದರೆ ಉಚಿತವೆನಿಸದು. ಅಲ್ಲದೆ 'ಅನುಕ್ರಮಣಿಕಾಪರ್ವ'ದಲ್ಲೇ 'ಮನ್ವಾದಿ ಭಾರತಂ ಕೇಚಿತ್ ಆಸ್ತಿಕಾದಿ ತಥಾಪರೇ। ತಥೋಪರಿಚರಾದನ್ಯೇ ವಿಪ್ರಾಃ ಸಮ್ಯಗಧೀಯತೇ॥ ವಿವಿಧಂ ಸಂಹಿತಾಜ್ಞಾನಂ ದೀಪಯನ್ತಿಮನೀಷಿಣಃ।' (ಆದಿ. ಅನು. ಅಧ್ಯಾಯ೧-ಶ್ಲೋಕ ೫೨) ಎಂದಿರುವುದನ್ನು ನೋಡಿದರೆ ವ್ಯಾಸಕೃತಭಾರತ ಎಲ್ಲಿಂದ ಪ್ರಾರಂಭವಾಗುತ್ತದೆಯೆನ್ನುವ ವಿಷಯದಲ್ಲಿ ಆ ಕಾಲಕ್ಕೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿತ್ತೆಂಬುದು ತಿಳಿಯುತ್ತದೆ.

ಅದೇ 'ಅನುಕ್ರಮಣಿಕಾಪರ್ವ'ದಲ್ಲಿ 'ಎಂಟು ಸಾವಿರದ ಎಂಟುನೂರು ಶ್ಲೋಕಗಳನ್ನು ಅರ್ಥದೊಡನೆ ನಾನು ಪೂರ್ಣಬಲ್ಲೆ; ಶಕುನಿಗೂ ಅದು ಗೊತ್ತು. ಸಂಜಯನಿಗೆ ಮಾತ್ರ ಅದು ತಿಳಿದಿದ್ದರೆ ಉಂಟು; ಇಲ್ಲವಾದರೆ ಇಲ್ಲ' ಎಂದು ವ್ಯಾಸರೇ ಹೇಳಿದ್ದಾರೆಂದು ಶ್ಲೋಕದ ಮೂಲಕ ತಿಳಿಯುತ್ತದೆ:

**ಇದಂ ಶತಸಹಸ್ರಂ ತುಲೋಕಾನಾಂ ಪುಣ್ಯಕರ್ಮಣಾಂ।**
**ಉಪಾಖ್ಯಾನೈಃ ಸಹಜ್ಞೇಯಂ ಆದ್ಯಂ ಭಾರತಮುತ್ತಮಂ॥**
**ಉಪಾಖ್ಯಾನೈರ್ವಿನಾತಾಮ್ ಭಾರತಂ ಪ್ರೋಚ್ಯತೇಬುಧೈಃ।**
**ಚತುತಿರ್ವಿಂಶತಿ ಸಾಹಸ್ತ್ರೀಂ ಚಕ್ರೇ ಭಾರತ ಸಂಹಿತಾಂ॥**
**(ಆದಿ. ಅನು. ಅಧ್ಯಾಯ ೧- ಶ್ಲೋಕ ೧೦೧, ೧೦೨)**

ಲಕ್ಷಶ್ಲೋಕಗಳ ಭಾರತ ಗ್ರಂಥವನ್ನೇ 'ಆದಿ' ಎಂದು ಕರೆದಿರುವುದೂ ಗಮನೀಯ. ಇದರಿಂದ ವ್ಯಾಸರು ಉಪಾಖ್ಯಾನಗಳನ್ನು ಬರೆಯದೆ ಬೇರಾರೋ ಬರೆದರೆಂಬ ಮಾತಿಗೆ ಅರ್ಥವೇ ಇಲ್ಲ. ಸೌತಿಯ, ವೈಶಂಪಾಯನರ ಪೀಠಿಕೆಗಳನ್ನು ಬಿಟ್ಟರೂ ಅದು ಲಕ್ಷಗ್ರಂಥವೇ ಎಂದಿದೆ.

'ಏಕಂ ಶತಸಹಸ್ರಂ ತುಮಯೋಕ್ತಂ ವೈನಿಬೋಧತ' (ಆದಿ. ಅನು. ಅಧ್ಯಾತ ೧-ಶ್ಲೋಕ ೧೦೯) ಎಂದೂ, 'ಚತುರ್ವಿಶತಿ ಸಾಹಸ್ರೀಂ ಚಕ್ರೇಭಾರತ ಸಂಹಿತಾಂ ಉಪಾಖ್ಯಾನೈರ್ವಿನಾ ತಾಮತ್ ಭಾರತಂ ಪ್ರೋಚ್ಯತೇ ಬುಧೈಃ' (ಆದಿ. ಅನು. ಅಧ್ಯಾಯ ೧-ಶ್ಲೋಕ ೧೦೨-೧೦೩) ಎಂದು

ಹೇಳಿರುವುದನ್ನು ನೋಡಿದರೆ ಅದರ ಗಾತ್ರದ ವಿಷಯದಲ್ಲೂ ಏಕಾಭಿಪ್ರಾಯವಿಲ್ಲದಿರುವುದನ್ನು ಕಾಣಬಹುದು.

ಜಿ.ಎನ್.ಚಕ್ರವರ್ತಿಯವರು 'ವೈಶಂಪಾಯನನಿಗೆ ಮಹಾಭಾರತದ ಕಥೆಯನ್ನು ಹೇಳಿದ ವ್ಯಾಸ ಮಹಾಭಾರತದ ಕಾಲದಲ್ಲಿದ್ದನೆಂಬುದಕ್ಕೆ ಮಹಾಭಾರತವೇ ಸಾಕ್ಷಿಯಾಗಿದೆ. ಮಹಾಭಾರತದ ರಚನೆಯಲ್ಲಿ ಮೂರು ಕಾಲಘಟ್ಟಗಳನ್ನು ಹೇಳಬಹುದು. ವ್ಯಾಸನು ವೈಶಂಪಾಯನಿಗೆ ಹೇಳಿದುದು ಜಯ. ಇದು ಇಪ್ಪತ್ನಾಲ್ಕು ಸಾವಿರ ಶ್ಲೋಕಗಳಿಗೆ ವೈಶಂಪಾಯನನಿಂದ ವಿಸ್ತರಿತವಾಯಿತು. ಆದರೆ ಜಯದಲ್ಲಿದ್ದದ್ದು ಕೇವಲ ಎಂಟು ಸಾವಿರ ಶ್ಲೋಕಗಳು ಮಾತ್ರ, ಸೂತ ಪುರಾಣಿಕನು ಇದನ್ನು ಮತ್ತಷ್ಟು ವಿಸ್ತರಿಸಿ ಒಂದು ಲಕ್ಷ ಶ್ಲೋಕಗಳಲ್ಲಿ ರಚಿಸಿದನು. ಮೊದಲನೆಯದು 'ಜಯ', ಎರಡನೆಯದು 'ಭಾರತ', ಮೂರನೆಯದು 'ಮಹಾಭಾರತ'. ಭಗವದ್ಗೀತೆ ವ್ಯಾಸನ ಜಯದಲ್ಲಿ ಸೇರಿದೆ. ವಿಧಿ ಮತ್ತು ಪುರುಷ ಸ್ವಾತಂತ್ರ್ಯವೆಂಬಾ ವಿವರಣೆಯನ್ನು ವ್ಯಾಸನೇ ಪ್ರತಿಪಾದಿಸಿ ಭಗವದ್ಗೀತೆಯಲ್ಲಿ ಸ್ಪಷ್ಟ ಪಡಿಸಿದ್ದಾನೆ. ಭಗವದ್ಗೀತೆ ಜಯದಲ್ಲಿ ಸೇರಿಲ್ಲ, ಅದು ಅನಂತರದಲ್ಲಿ ಸೇರಿಸಲಾಗಿದೆ ಎಂಬ ವಿವರಣೆ ಸಾಧುವಲ್ಲ ಯುಕ್ತವೂ ಅಲ್ಲ. ಮಹಾಭಾರತದಲ್ಲಿ ಭಗವದ್ಗೀತೆ ಸುಸಂಘಟಿತವಾಗಿದೆ'[೧] ಎಂದು ಉಲ್ಲೇಖಿಸಿದ್ದಾರೆ.

ಆರ್.ಆರ್.ಪಾಂಗಾಳ ಅವರು 'ವ್ಯಾಸಭಾರತ ಭಿನ್ನವಿನ್ಯಾಸವೈಚಾರಿಕ ವಿಶ್ಲೇಷಣೆ' ಎಂಬ ಗ್ರಂಥದಲ್ಲಿ ಮಹಾಭಾರತದ ಕರ್ತೃ ವಿಚಾರವನ್ನು ಕುರಿತು ಹೀಗೆ ಅಭಿಪ್ರಾಯ ಪಟ್ಟಿರುವುದನ್ನು ಇಲ್ಲಿ ಅವಲೋಕಿಸುವುದು ಉಚಿತವೆನಿಸುತ್ತದೆ: ಮಹಾಭಾರತ ರಚನಾ ಪ್ರಕ್ರಿಯೆಯಲ್ಲಿ ಮಹತ್ವದ ಪಾತ್ರ ಕೃಷ್ಣದ್ವೈಪಾಯನ ವ್ಯಾಸರದು ಎನ್ನುವುದು ನಿಸ್ಸಂದೇಹ (ಈ ವ್ಯಕ್ತಿಕಾಲ್ಪನಿಕ ವ್ಯಕ್ತಿಯೇ ಆಗಿರಲಿ ಅಥವಾ ಇತಿಹಾಸ ಪುರುಷನೇ ಆಗಿರಲಿ). ಪಾಂಡವರ ಸ್ವರ್ಗಾರೋಹಣದ ನಂತರ ಬರುವ ಪರೀಕ್ಷಿತ, ಜನಮೇಜಯರ ಪ್ರಸಂಗಗಳನ್ನು ಪ್ರಕ್ಷೇಪಗಳೆಂದು ಭಾವಿಸಿದರೂ ಪಾಂಡವರಕತೆ ಬರೆಯಬೇಕಾದಲ್ಲಿ ಅದು ನಡೆದ ಬಳಿಕವೇ ಬರೆದುದು ಎಂಬುದು ನಿಸ್ಸಂಶಯ. ಹಾಗಿರುವಾಗ ವ್ಯಾಸ ಎನ್ನುವ ವ್ಯಕ್ತಿ, ಪಾಂಡವರ ಅಜ್ಜ, ಪಾಂಡವರು ಸ್ವರ್ಗಸ್ಥರಾದ ಬಳಿಕ ಕತೆ ಬರೆದ ಎನ್ನುವುದು ಹಲವರಿಗೆ ಹುಬ್ಬೇರಿಸುವಂತೆ ಮಾಡುತ್ತದೆ (ಇಲ್ಲಿ ಅತಿಮಾನವೀಯ; ದೈವಿಕ ಕಲ್ಪನೆಗಳನ್ನು ಒತ್ತಟ್ಟಿಗಿಟಿದ್ದೇನೆ). ಮಹಾಭಾರತದಲ್ಲಿ ಅನೇಕ ಪ್ರಕ್ಷಿಪ್ತಗಳು ಸೇರಿವೆ ಎನ್ನಬಹುದು ವಿವಾದರಹಿತ. ವ್ಯಾಸರಿಂದ ಮೊದಲು ೮೮೦೦ ಶ್ಲೋಕಗಳ ಜಯವೆನ್ನುವ ಗ್ರಂಥ ರಚಿತವಾಗಿ (ಧರ್ಮಕ್ಕೆ ಜಯವೆನ್ನುವ ತಾತ್ವಿಕ ನೆಲೆಯಾಧರಿಸಿ ಇರಬಹುದೇ!) ಬಳಿಕ ಅವರ ಶಿಷ್ಯರಾದ ವೈಶಂಪಾಯನರಿಂದ ಜನಮೇಜಯನಿಗೆ

ಸರ್ಪಯಾಗ ಪರಿಸಮಾಪ್ತಿ ವೇಳೆಯಲ್ಲಿ ಹೇಳಲ್ಪಟ್ಟ ೨೪೦೦೦ ಶ್ಲೋಕಗಳ ಭಾರತ (ಪ್ರಾಯಶಃ ಭಾರತ ವಂಶೀಯರ ಕತೆಯಾದ್ದರಿಂದಲೇ!) ಅದನ್ನು ಆ ಸಮಯ ಕೇಳಿಸಿಕೊಂಡ ಉಗ್ರಶ್ರವಸೌತಿ; ಶೌನಕಋಷಿಗಳಿಗೆ ಸತ್ರಯಾಗದ ಬಿಡುವಿನ ವೇಳೆ ಅದನ್ನು ತನ್ನ ತಂದೆ ಲೋಮಹರ್ಷಣ ನೇರವಾಗಿ ವ್ಯಾಸರಿಂದ ಕೇಳಿಸಿಕೊಂಡುದನ್ನು ಸೇರಿಸಿ ಮಹಾಭಾರತ ಎಂದು ಹೆಸರಿಟ್ಟು ಶ್ರವಣ ಮಾಡುತ್ತಾನೆ (೮೪೮೩೬ ಶ್ಲೋಕಗಳಿವೆ). ಆ ಬಳಿಕ ಅದನ್ನು ಹರಿವಂಶಕಾರ ಇನ್ನಷ್ಟು ಬೆಳೆಸಿದರೆ ಸರ್ವ ಸಂಗ್ರಹಕಾರ ಈಗಿನ ಉಪಲಬ್ಧವಿರುವ ೧೦೭೩೯೦ ಶ್ಲೋಕಗಳ ಗ್ರಂಥವಾಗಿ ಮಾರ್ಪಡಿಸಿರುತ್ತಾನೆ. ಸಾಕಷ್ಟು ಸಂಶೋಧನಕಾರರು ಇದಕ್ಕೆ ಸಹಮತಿಯನಿತ್ತಿದ್ದಾರೆ. ಒಟ್ಟಿನಲ್ಲಿ ವ್ಯಕ್ತಿ ಮತ್ತು ಹೆಸರಿನಲ್ಲಿ ಭಿನ್ನಾಭಿಪ್ರಾಯವಿದ್ದರೂ ಕಾಲಾಂತರದಲ್ಲಿ ಮಹಾಭಾರತ ಬೆಳೆಯುತ್ತಾ ಹೋದುದು ನಿಸ್ಸಂಶಯ. ಕ್ರಿಪೂರ್ವದಿಂದ ಕ್ರಿಶಕದ ತನಕವೂ ಇದು ನಡೆಯಿತು ಎನ್ನುವುದು ನಿರ್ವಿವಾದ[೨] ಎಂದಿದ್ದಾರೆ. ಉಪಲಬ್ಧವಿರುವ ಭಾರತ ಸ್ವಲ್ಪವೇ ಸ್ವಲ್ಪ; ಅನುಪಲಬ್ಧವಾದದ್ದೇ ಹೆಚ್ಚು ಎನ್ನುವ ಮಂಡನೆಯೂ[೩] ಇದೆ.

ಭಾರತದರ್ಶನದವರ ಮಹಾಭಾರತದ ಮುನ್ನುಡಿಯಲ್ಲಿ 'ವ್ಯಾಸರು ಬರೆದಿರುವ ೬೦ ಲಕ್ಷ ಶ್ಲೋಕಗಳಲ್ಲಿ ಒಂದು ಲಕ್ಷ ಮನುಷ್ಯಲೋಕದಲ್ಲಿ ವೈಶಂಪಾಯನರಿಂದ ಮನುಷ್ಯರಿಗೆ ಹೇಳಲ್ಪಟ್ಟರೆ, ಹದಿನಾಳ್ಕು ಲಕ್ಷ ಶ್ಲೋಕಗಳು ಶುಕರಿಂದ ಯಕ್ಷಲೋಕದಲ್ಲಿ ಯಕ್ಷರಾಕ್ಷಸರಿಗೂ, ಹದಿನೈದು ಲಕ್ಷಶ್ಲೋಕಗಳು ಅಸಿತದೇವಲರಿಂದ ಪಿತೃಲೋಕದಲ್ಲಿ ಯಕ್ಷರಾಕ್ಷಸರಿಗೂ ಮೂವತ್ತು ಲಕ್ಷ ಶ್ಲೋಕ ನಾರದರಿಂದ ದೇವತೆಗಳಿಗೂ ಹೇಳಲ್ಪಟ್ಟಿತೆನ್ನಲಾಗಿದೆ.'

'ವೈಶಂಪಾಯನ ಜನಮೇಜಯನಿಗೆ ಹೇಳಿದ' ಎನ್ನುವುದನ್ನು 'ಸೂತಶೌನಕನಿಗೆ ಹೇಳಿದ' ಎಂದು ಹೇಳುವಾಗಲೇ ಅದನ್ನು ಯಾರೋ ಇನ್ನೊಬ್ಬ ನಮಗೆ ಹೇಳುತ್ತಿದ್ದಾನೆ ಎನ್ನುವುದು ಸ್ಪಷ್ಟವಾಗುತ್ತದೆ. ಅಲ್ಲದೆ ವ್ಯಾಸರು 'ಹೀಗೆ ಮಾಡಿದರು ಹಾಗೆ ಮಾಡಿದರು' ಎಂಬ ಉಲ್ಲೇಖ ಇರಬೇಕಾದರೆ ಮೂರನೆಯ ವ್ಯಕ್ತಿ (ಉತ್ತಮಪುರುಷ)ಯ ಬಾಯಿಯಿಂದ ಆ ಮಾತು ಬಂದಿರಬೇಕು. 'ವ್ಯಾಸರು ತಾನು ಹೀಗೆ ಮಾಡಿದೆ', ಅಂದರೆ ಪ್ರಥಮ ಪುರುಷನಾಗಿ ಹೇಳಿಯಾರಲ್ಲದೆ ತಾವಾಗಿಯೇ 'ವ್ಯಾಸರು ಹೀಗೆ ಮಾಡಿದರು' ಎಂದು ಬರೆಯಲಾರರು (ಉತ್ತಮ ಪುರುಷದ ಪ್ರಯೋಗ ಮಾಡಲಿಕ್ಕಿಲ್ಲ) ಎಂಬ ವಾದವೂ ಇದೆ.

ಅನೇಕ ಪಾಶ್ಚಾತ್ಯ ಹಾಗೂ ಪೌರ್ವಾತ್ಯ ವಿದ್ವಾಂಸರು ಮಹಾಭಾರತವನ್ನು ಹಲವಾರು ದೃಷ್ಟಿಕೋನಗಳಿಂದ ಅಧ್ಯಯನ ಮಾಡಿದ್ದಾರೆ. ಬಹುತೇಕ ವಿದ್ವಾಂಸರು ಮಹಾಭಾರತ ಗ್ರಂಥ ಏಕಕರ್ತೃಕವಲ್ಲವೆಂದೂ ಮೂರು ಮುಖ್ಯವಾದ ಹಂತಗಳಲ್ಲಿ ಅದು ಅನೇಕ ಪ್ರಕ್ಷೇಪಗಳಿಂದೊಡಗೂಡಿ ಬೆಳೆದು ಬಂದಿದೆ ಎಂದೂ ಮೂಲತಃ ಕಾವ್ಯವು ಕೌರವರ ಶೌರ್ಯಸದ್ಗುಣಗಳನ್ನು ಪ್ರಶಂಸಿಸುವುದಾಗಿದ್ದು ಮತ್ತೆ ಪಾಂಡವರ ಪ್ರಶಂಸೆ ಮಾಡತೊಡಗಿರಬೇಕೆಂದೂ ಮೊದಲು ಲೌಕಿಕವಾಗಿದ್ದುದು ಮತ್ತೆ ಧರ್ಮನೀತಿ ಮತೀಯ ವಿಷಯಗಳನ್ನೊಳಗೊಂಡು ಧಾರ್ಮಿಕ ಕಾವ್ಯವಾಯಿತ್ತೆಂದೂ ಅಭಿಪ್ರಾಯಪಟ್ಟಿರುವುದನ್ನು ಕಾಣಬಹುದು. ಕರ್ತೃ ಹಾಗೂ ಕಾವ್ಯ ವ್ಯಾಪ್ತಿಯನ್ನು ಕುರಿತ ಪಾಶ್ಚಾತ್ಯ ಮತ್ತು ಪೌರ್ವಾತ್ಯ ವಿದ್ವಾಂಸರು ಅಭಿಪ್ರಾಯಗಳನ್ನು ಹೀಗೆ ಕ್ರೋಡೀಕರಿಸಬಹುದು[೪]:

**ಬೋಪ್ (Boop)** ಎಂಬ ಜರ್ಮನ್ ವಿದ್ವಾಂಸ 'ಮಹಾಭಾರತದ ಎಲ್ಲ ಭಾಗಗಳೂ ಒಂದೇ ಕಾಲದಲ್ಲಿ ಮತ್ತು ಕರ್ತೃವಿನಿಂದಲೇ ರಚಿತವಾದುವಲ್ಲ' ಎಂದು ಅಭಿಪ್ರಾಯ ಪಟ್ಟಿದ್ದಾನೆ.

ಸಿ. **ಲಾಸೆನ್ (C. Lassen)** ಎಂಬಾತ 'ವೈಶಂಪಾಯ ಜನಮೇಜಯನಿಗೆ ಹೇಳಿದ್ದು 'ಭಾರತ', ಸೌತಿಯು ಶೌನಕನಿಗೆ ಹೇಳಿದ್ದು 'ಮಹಾಭಾರತ', ಈಗಿರುವುದು ತೃತೀಯ ವಿಸ್ತೃತರೂಪ. ಆ ಕಾವ್ಯ ಮೂಲತಃ ಧರ್ಮಾತೀತವೂ ಕೌರವ ಪ್ರಧಾನವೂ ಆಗಿದ್ದು ಆನಂತರ ಕೃಷ್ಣ–ಪಾಂಡವ ಪ್ರಧಾನವೂ ಧರ್ಮ ಬೋಧಕವೂ ಆಯಿತು' ಎಂದಿದ್ದಾನೆ.

**ವೇಬರ್ (Weaber)** ಪ್ರಕಾರ 'ಮೊದಲಿಗೆ ೮,೮೦೦ ಶ್ಲೋಕಗಳಿಂದ ಕೂಡಿದ್ದ ಮಹಾಭಾರತ ಕ್ರಮೇಣ ಒಂದು ಲಕ್ಷ ಶ್ಲೋಕವಾಗಿ ಬೆಳೆಯಿತು. ಯುದ್ಧಕ್ಕೆ ಸಂಬಂಧಿಸಿದ ಕಥಾ ಭಾಗವೇ ಮೂಲ ಭಾರತವಾಗಿದ್ದು ಋಗ್ವೇದದಲ್ಲಿರುವ 'ನಾರಾಂಶಂಸೀ ಗಾಥೆಗಳ ಮಾದರಿ'ಯಲ್ಲಿ ಅನೇಕ ಶತಮಾನಗಳ ಕಾಲ ಜನರ ಬಾಯಲ್ಲಿದ್ದು ಯಾವನೋ ಒಬ್ಬನಿಂದ ವೀರಕಾವ್ಯವಾಗಿ ರಚಿತವಾಗಿರಬೇಕು, ಅನಂತರ ಅನೇಕರ ಕೈವಾಡದಿಂದ ಅದು ವಿಸ್ತೃತವಾಗಿರಬೇಕು ಎಂದು' ಊಹಿಸುತ್ತಾನೆ.

**ಮ್ಯಾಕ್ಸ್‌ಮುಲರ್ (MaxMuller)** ಎಂಬ ಜರ್ಮನಿಯ ಭಾಷಾ ವಿಜ್ಞಾನಿ 'ಮೂಲದಲ್ಲಿ ಲೌಕಿಕ ಕಾವ್ಯವೆನಿಸಿ ಕೌರವರ ವೀರಗಾಥೆಯಾಗಿದ್ದು, ಅನಂತರ ವೈದಿಕರು ಅದನ್ನು ಪರಿಷ್ಕರಿಸಿ, ಧರ್ಮ, ನೀತಿ, ಆಚಾರಗಳನ್ನು ಸೇರಿಸಿ ಧಾರ್ಮಿಕ ಕಾವ್ಯವನ್ನಾಗಿಸಿದರು' ಎಂದು ಅಭಿಪ್ರಾಯಪಟ್ಟಿದ್ದಾನೆ.

**ಸೊರೆನ್‌ಸೇನ್ (Sorensen)** ಎಂಬ ಸ್ಕಾಂಡಿನೇವಿಯದ ವಿದ್ವಾಂಸ 'ಮಹಾಭಾರತವನ್ನು ಮೂಲತಃ ಏಕಕರ್ತೃಕವೆಂದು' ಒಪ್ಪಿಕೊಂಡು ಪ್ರಕ್ಷಿಪ್ತಗಳನ್ನು ಬಿಡಿಸಿ ತೆಗೆಯಲು ಯತ್ನಿಸಿದ್ದಾನೆ.

**ಲ್ಯುಡ್‌ವಿಗ್ (Ludwig)** ಎಂಬ ವಿದ್ವಾಂಸನೂ ಸೊರೆನ್‌ಸೇನ್‌ನಂತೆಯೇ ಅಭಿಪ್ರಾಯ ಪಟ್ಟು 'ಮಹಾಭಾರತ' ಋತು ಪರಿವರ್ತನೆಗಳ ಒಂದು ರೂಪಕವೆಂದು ವೇದಗಳಿಗೂ ಅದಕ್ಕೂ ಸಂಬಂಧವನ್ನು ಕಲ್ಪಿಸಿದ್ದಾನೆ.

**ಹಾಜ್‌ಮನ್ (Holtzman)** 'ಮೂಲತಃ ಕೌರವರನ್ನು ಪ್ರಶಂಸಿಸುವ ವೀರಗಾಥೆಯಾಗಿತ್ತೆಂದೂ ಅನಂತರ ಬೌದ್ಧರ ಕೈವಾಡಕ್ಕೊಳಗಾಯಿತ್ತೆಂದೂ ಮತ್ತೆ ಮುಂದೆ ಹಿಂದೂ ಕಾವ್ಯವಾಯಿತ್ತೆಂದೂ ಪಾಂಡವ ಪ್ರಶಂಸೆ ಕೃಷ್ಣ ಪ್ರಾಧಾನ್ಯಗಳು ಕ್ರಮೇಣ ತಲೆಹಾಕಿದುವೆಂದೂ' ಊಹಿಸುತ್ತಾನೆ.

**ಮ್ಯಾಕ್‌ಡೊನೆಲ್ (Macdonnel)** 'ಕುರುಪಾಂಚಾಲರ ವೀರಗಾಥೆಗಳನ್ನು ಯಾರೋ ಸಂಕಲನ ಮಾಡಿ ವೀರಕಾವ್ಯ ರಚಿಸಿದನೆಂದೂ ಕೌರವ ಪ್ರಧಾನವಾಗಿದ್ದುದು ಅನಂತರ ಪಾಂಡವ ಪ್ರಧಾನವಾಯಿತ್ತೆಂದೂ' ಭಾವಿಸಿದ್ದಾನೆ.

**ಶ್ರೋಡರ್ (Schroeder)** ಎಂಬ ವಿದ್ವಾಂಸ ಸಹ ಸ್ವಲ್ಪ ಹೆಚ್ಚು ಕಡಿಮೆ ಹಾಜ್‌ಮನ್ನನನ್ನೇ ಅನುಮೋದಿಸುತ್ತಾನೆ.

**ಹಾಪ್‌ಕಿನ್ಸ್ (Hopkins)** ಎಂಬ ಅಮೆರಿಕೆಯ ವಿದ್ವಾಂಸ 'ಮಹಾಭಾರತವನ್ನು 'ಗ್ರಂಥವೇ ಅಲ್ಲದ ಗ್ರಂಥ' ಎಂದು ಹಾಸ್ಯಮಾಡಿ, ಕೌರವ ಪರವಾಗಿದ್ದ ಕಾವ್ಯ ಬರಬರುತ್ತಾ ಕೃಷ್ಣಪಾರಮ್ಯವನ್ನೊಳಗೊಂಡು, ಪಾಂಡವ ಪ್ರಧಾನವಾಗಿ, ಧರ್ಮ, ನೀತಿ ಇತ್ಯಾದಿಗಳನ್ನೊಳಗೊಂಡ ಇನ್ನೂ ಬೆಳೆಯುತ್ತಲೇ ಇದೆ' ಎಂದಿದ್ದಾನೆ.

**ವಿಂಟರ್‌ನಿಟ್ಸ್ (Winternitz)** ಎಂಬ ವಿದ್ವಾಸ 'Indeed, in certain sense the Mahabharatha is not one poetic production at all but rather a whole

literature'[೫] ಎಂದಿದ್ದಾನೆ. ಕೌರವ ಪಾಂಡವರ ಯುದ್ಧ ಐತಿಹಾಸಿಕ ಘಟನೆಯೆಂದೂ ಅದು ಮೊದಲು ವೀರಗಾಥಾರೂಪದಲ್ಲಿದ್ದು ಕಾಲಕ್ರಮದಲ್ಲಿ ಅದರೊಡನೆ ಧರ್ಮನೀತಿ ಸಂಪ್ರದಾಯಗಳ ಉಪದೇಶ, ದೇವತೆಗಳ ಕಥೆಗಳು ಮತೀಯ ವಿಷಯಗಳು ಸೇರಿಕೊಂಡವೆಂದೂ ಹೇಳುತ್ತಾನೆ. ಇಷ್ಟೊಂದು ವಿಸ್ತೃತವಾದ ಮತ್ತು ಅನೇಕ ಕಡೆಗಳಲ್ಲಿ ಪರಸ್ಪರ ವಿರುದ್ಧಾಭಿಪ್ರಾಯಗಳನ್ನೊಳಗೊಂಡ ಈ ಗ್ರಂಥ ಈಗಿರುವ ರೂಪದಲ್ಲೇ ಏಕಕರ್ತೃಕವೆನ್ನುವುದಾದರೆ ಆ ಕರ್ತನು ಏಕಕಾಲದಲ್ಲಿಯೇ ಅತಿ ಮೂರ್ಖನೂ ಅತಿ ಬುದ್ಧಿವಂತನೂ ಆಗಿರುವನೆಂದು ಹೇಳಬೇಕಾಗುತ್ತದೆ; ಆದುದರಿಂದ ಈ ಗ್ರಂಥ ಶತಮಾನಗಳವರೆಗೆ ಬೆಳೆದುಬಂದ ಅನೇಕರ ಕೃತಿಯಾಗಿದೆ, ಇದೊಂದು ಸಾಹಿತ್ಯದೈತ್ಯ ಎಂದಿದ್ದಾನೆ.

**ಡಾಲ್‌ಮನ್ (Dollman)** ಎಂಬ ಜರ್ಮನ್ ವಿದ್ವಾಂಸ 'ಮಹಾಭಾರತದಲ್ಲಿ ಧಾರ್ಮಿಕ ಮತ್ತು ನೈತಿಕ ಭಾವನೆಗಳೇ ಪ್ರಧಾನವೆಂದೂ ಅವುಗಳ ವಿವರಣೆಗಾಗಿಯೇ ಕೌರವ ಪಾಂಡವರ ಕಥೆ, ಇತರ ಘಟನೆಗಳು ಉಪಕಥೆಗಳು ಬಂದಿವೆಯೆಂದೂ' ಅಭಿಪ್ರಾಯಪಟ್ಟಿದ್ದಾನೆ.

**ರಮೇಶ್‌ಚಂದ್ರ ದತ್ತ** ಎಂಬ ಬಂಗಾಳದ ವಿದ್ವಾಸ ಪಾಶ್ಚಾತ್ಯರ ಅಭಿಪ್ರಾಯಗಳನ್ನೇ ಒಂದು ರೀತಿಯಿಂದ ಅನುಮೋದಿಸಿದ್ದಾರೆ.

**ಸಿ.ವಿ. ವೈದ್ಯರು** ೮,೮೦೦, ೧,೦೦,೦೦೦ ಎಂಬ ಸಂಖ್ಯೆಗಳನ್ನು ಗಮನಿಸಿ, ಮನ್ವಾದಿ, ಆಸ್ತಿಕಾದಿ, ಉಪರಿಚರಾದಿ ಎಂಬುದರ ಆಧಾರದ ಮೇಲೆ ಮಹಾಭಾರತವು ಮೂರು ಆವೃತ್ತಿಯುಳ್ಳದ್ದೆಂದು ಪ್ರತಿಪಾದಿಸಿದ್ದಾರೆ.

**ಅರವಿಂದಘೋಷ್ ಮತ್ತು ಸುಕ್ತಂಕರ** ರವರು ಪಾಶ್ಚಾತ್ಯ ವಿದ್ವಾಂಸರ ವಾದಸರಣಿಯಿಂದೆದ್ದಿರುವ ಸಂಶಯಗಳನ್ನೆಲ್ಲಾ ನಿವಾರಿಸಿ, ಒಟ್ಟಿನಲ್ಲಿ 'ಮಹಾಭಾರತ' ಭಾರತೀಯ ಸಂಪ್ರದಾಯಕ್ಕನುಗುಣವಾಗಿ, ಒಬ್ಬರಿಂದಲೇ ರಚಿತವಾದ ಮಹಾಕಾವ್ಯವೆಂದು ಸಮರ್ಥಿಸಿದ್ದಾರೆ. ಆದರೆ ಕಾವ್ಯದ ತುಂಬ ಅಲ್ಲಲ್ಲಿ ಪ್ರಕ್ಷೇಪಗಳು ನುಸುಳಿಕೊಳ್ಳುತ್ತಾ ಅದು ವರ್ಧಿಸುತ್ತಾ ಹೋಗಿರುವುದು ಸತ್ಯ.

## ಮಹಾಭಾರತ ಕಾಲನಿರ್ಣಯದ ಬಗ್ಗೆ ನಡೆದಿರುವ ಜಿಜ್ಞಾಸೆಗಳು

ಮಹಾಭಾರತದ ಕರ್ತೃತ್ವ ಹಾಗೂ ವ್ಯಾಪ್ತಿಯನ್ನು ಕುರಿತು ಜಿಜ್ಞಾಸೆಗಳು ನಡೆದಿರುವಂತೆಯೇ ಅದರ ಕಾಲವನ್ನೂ, ಅದು ನಿಜವಾಗಿ ನಡೆದಿತ್ತೆ ಎಂಬುವುದರ ಬಗ್ಗೆಯೂ ಅನೇಕ ಚರ್ಚೆಗಳು ನಡೆದಿವೆ. ಐತಿಹಾಸಿಕ ದೃಷ್ಟಿಯಿಂದಲೂ ಮಹಾಭಾರತವನ್ನು ಅಧ್ಯಯನ ಮಾಡಲಾಗಿದೆ. ಮಹಾಭಾರತ ಗ್ರಂಥ ಒಳಗೊಂಡಿರುವ ವಾಸ್ತಾವ ಅಂಶಗಳನ್ನು ಆ ಐತಿಹಾಸಿಕ ಚೌಕಟ್ಟಿನ, ಮಿತಿಗೆ ಸೀಮಿತಗೊಳಿಸಿ, ಉಳಿದ ಅಂಶಗಳನ್ನು ಅಸತ್ಯವೆಂದು ಬಗೆಯುವ ತೀರ್ಮಾನಕ್ಕೆ ಬರದಂತೆ ಎಚ್ಚರ ವಹಿಸಬೇಕಾಗುತ್ತದೆ. ಕಾಲಮಾನಗಳ ಬಗ್ಗೆ ಅಸ್ಪಷ್ಟತೆ ಗೊಂದಲಗಳಿರುವುದರಿಂದ ಹಲವು ಬಾರಿ ಅತಿಮಾನವತೆಯತ್ತ ದುಂಬಾಲು ಬೀಳಬೇಕಾಗುತ್ತದೆ.

ಹಾಪ್‌ಕಿನ್ಸ್ ಎಂಬ ವಿದ್ವಾಂಸ ಮಹಾಭಾರತದ ಬೆಳವಣಿಗೆಯ ವಿವಿಧ ಘಟ್ಟಗಳನ್ನು ಹೀಗೆ ಗುರುತಿಸಿದ್ದಾರೆ:[೬]

೧. ಭಾರತ ಹುಟ್ಟಿದು (ಕ್ರಿ.ಪೂ ೪೦೦).
೨. ಪಾಂಡವರು ಮಹಾಭಾರತದ ವೀರರಾದದ್ದು ಕ್ರಿ.ಪೂ ೪೦೦-೨೦೦.
೩. ನೀತಿಗೆ ಸಂಬಂಧ ಪಟ್ಟ ಪ್ರಕ್ಷಿಪ್ತಗಳು ಕ್ರಿ.ಪೂ. ೨೦೦- ಕ್ರಿ.ಶ. ೨೦೦.
೪. ಅನಂತರದ ಹೆಚ್ಚಿಕೆಗಳು ಕ್ರಿ.ಶ. ೨೦೦-೪೦೦.
೫. ಸಂದರ್ಭೋಚಿತ ವಿಸ್ತಾರಗಳು ಕ್ರಿ.ಶ. ೪೦೦ರ ಅನಂತರ.

ಮಹಾಭಾರತ ಗ್ರಂಥದಲ್ಲಿ ಉಲ್ಲೇಖಗೋಂಡಿರುವ ಜ್ಯೋತಿಷ್ಯಾಂಶ ಆಧಾರದ ಮೇಲೆ ಗಣಿತ ವಿಜ್ಞಾನಿಗಳು, ಋಗ್ವೇದಶಾಸ್ತ್ರಜ್ಞರು ಮಹಾಭಾರತದ ಕಾಲನಿರ್ಣಯವನ್ನು ಮಾಡಿರುವುದನ್ನು ಅವಲೋಕಿಸುವುದು ಉಚಿತವೆನ್ನಿಸುತ್ತದೆ. ಪ್ರಸಿದ್ಧ ಗಣತ ವಿಜ್ಞಾನಿಯಾದ ಕೆ.ಶ್ರೀನಿವಾಸರಾಘವನ್‌ರವರು ನಿರ್ಣಯಿಸಿರುವ ವಿವರಗಳನ್ನು ಕೆ.ಎಸ್.ನಾರಾಯಣಾಚಾರ್ಯ ಎಂಬ ವಿದ್ವಾಂಸರು 'ಶ್ರೀಮಹಾಭಾರತ ಕಾಲ ನಿರ್ಣಯ ಮತ್ತು ಇತರ ಲೇಖನಗಳು'[2] ಎಂಬ ಗ್ರಂಥದಲ್ಲಿ ಹೀಗೆ ವಿವರಿಸಿದ್ದಾರೆ:

೧. ಮಹಾಭಾರತ ಯುದ್ಧಾರಂಭ ದಿನ-೨೨ನೆಯ ನವೆಂಬರ್, ಶುಕ್ರವಾರ, ಕ್ರಿ.ಪೂ. ೩೦೬೭ನೇ ಇಸವಿ.
೨. ಮಹಾಭಾರತ ಯುದ್ಧಕ್ಕೆ ಕೆಲವು ದಿನಗಳ ಮುಂಚೆ, ೧೩ ದಿನಗಳ ಪಕ್ಷದಲ್ಲಿ ನಡೆದ ಚಂದ್ರ, ಸೂರ್ಯ ಗ್ರಹಣಗಳ ಕಾಲ, ಕ್ರಿ.ಪೂ ೩೦೬೭ಕ್ಕೆ ಸರಿಯಾಗಿ ಪಾಶ್ಚಾತ್ಯ ಪೌರ್ವಾತ್ಯ

ಪುರಾಣಗಳ ಮೂಲಕವೂ ದೃಢಪಡುತ್ತದೆ. ಇದನ್ನು ವ್ಯಾಸಮಹರ್ಷಿಗಳೇ ತಮ್ಮ ಗ್ರಂಥದಲ್ಲಿ ಹೀಗೆ ಉಲ್ಲೇಖಿಸಿದ್ದಾರೆ:

**ಚತುರ್ದಶೀಂ ಪಂಚದಶೀಂ ಭೂತಪೂರ್ವಾಂ ಚತುರ್ದಶೀಂ**
**ಇದೂಂತು ನಾಭಿಜಾನೆ ನಾಹಂ ಅಮಾವಾಸ್ಯಾಂ ತ್ರಯೋದಶೀಂ**
**ಚಂದ್ರಸೂರ್ಯಾವು ಭೌಗ್ರಸ್ತಾ ಏಕಮಾಸೀಂತ್ರಯೋದಶೀಂ**
**ಅಪರ್ವಣಿ ಚಗ್ರಹೇಣೇತೌ ಪ್ರಜಾಃ ಸಂಕ್ಷಪಯಿಷ್ಯತಃ**

೩. ಶ್ರೀಕೃಷ್ಣಾವತಾರ. ಕ್ರಿ.ಪೂ. ೩೧೧೨ನೇ ಜುಲೈ ೨೭, ಶುಕ್ರವಾರ, ರಾತ್ರಿ ೧೧.೪೦ಕ್ಕೆ.

೪. ಯುಧಿಷ್ಠಿರ ಜನನ– ಕ್ರಿ.ಪೂ. ೩೧೧೪ನೆಯ ಆಗಸ್ಟ್ ೩೧, ಮಂಗಳವಾರ ಶುಕ್ಲಪಂಚಮಿ ಜೇಷ್ಠಾ ನಕ್ಷತ್ರ.

೫. ದ್ರೌಪದೀಸ್ವಯಂವರ– ಕ್ರಿ.ಪೂ. ೩೦೯೧ ಏಪ್ರಿಲ್.

೬. ರಾಜಸೂಯಯಾಗ– ಕ್ರಿ.ಪೂ. ೩೦೮೩ ನವೆಂಬರ್‌ನಿಂದ ೩೦೮೨ ಅಕ್ಟೋಬರ್ ೨೬, ಗುರುವಾರತನಕ.

೭. ಯಾದವೀಕಲಹ– ಕ್ರಿ.ಪೂ. ೩೦೩೧, ಏಪ್ರಿಲ್ ೧೩ ಶುಕ್ರವಾರ.

೮. ಪಾಂಡವ ಮಹಾಪ್ರಸ್ಥಾನ– ಕ್ರಿ.ಪೂ. ೩೦೩೧ ನವೆಂಬರ್.

ನವರತ್ನ ರಾಜಾರಾಂ ಅವರು 'Vedic Aryans and the origins of civilization' ಎಂಬ ಗ್ರಂಥದಲ್ಲಿ 'ಅಲೆಗ್ಸಾಂಡರನ ಕಾಲದ ಗ್ರೀಕ್ ಇತಿಹಾಸಕಾರರಿಗೆ ಮಹಾಭಾರತ, ಕೃಷ್ಣ ಮುಂತಾದ ಕಾಲ ಪರಿಜ್ಞಾನವಿದ್ದಂತೆ ಗಮನಿಸಿ ಪ್ಲೀನಿಯು 'ಕೃಷ್ಣ' (ಹರಿಕೃಷ್ಣ)ನನ್ನು 'ಹೆರಾಕ್ಲಿಸ್' ಎಂದು ಕರೆದು, ಈ ದೇವತೆಯು 'ಶೌರಸೇನಿ' ಜನಾಂಗಕ್ಕೆ ತುಂಬಾ ಗೌರವಾಸ್ಪದವಾಗಿದ್ದುದಾಗಿಯೂ ಅವರು ಮೇಥೂರಾ (ಮಥುರಾ) ಪ್ರಾಂತದಲ್ಲಿದ್ದುದಾಗಿಯೂ ಬರೆದಿದ್ದಾನೆ. ಅಲೆಗ್ಸಾಂಡರ್ 'ಸಂದ್ರಕೋಟಸ್' (ಚಂದ್ರಗುಪ್ತ)ರಿಗಿಂತ ಈ ಹೆರಾಕ್ಲಿಸನು ೧೩೮ ತಲೆಮಾರಿನಷ್ಟು ಹಿಂದಿನವನೆಂದೂ ಈ ಪ್ಲೀನಿ ಕ್ರಿ.ಪೂ. ೩೨೫ರಲ್ಲಿ (ಚಾಣುಕ್ಯನ ಕಾಲದಲ್ಲಿ) ಬರೆದಿದ್ದಾನೆ. ಒಂದು ತಲೆಮಾರಿಗೆ ೨೦ ವರ್ಷವೆಂದು ಲೆಕ್ಕಹಾಕಿದರೂ ಇದು ೨೭೬ ವರ್ಷ ಆಗಿ + ೩೨೫ ಕೂಡಿಸಿದರೆ ಮತ್ತೇ ೩೧೦೨ನೇ ವರ್ಷಕ್ಕೆ ಬರುತ್ತದೆ[೬] ಎಂದಿದ್ದಾರೆ.

ಮಹಾಭಾರತ ಗ್ರಂಥದಲ್ಲಿ ದೊರೆಯುವ ಒಂದೆರಡು ಉಲ್ಲೇಖಗಳಿಂದ ಪಾಂಡವರ ಜನನಗಳನ್ನು, ಅವರ ಜೀವನ ಘಟನೆಗಳನ್ನು ಹೀಗೆ ಲೆಕ್ಕಹಾಕಲಾಗಿದೆ: ಸುಮಾರು ೧೬ರವರೆಗೆ ವಿದ್ಯಾಭ್ಯಾಸ, ಬಳಿಕ ಒಂದೆರಡು ವರ್ಷಗಳಲ್ಲಿ ಯುವರಾಜಪಟ್ಟ, ಬಳಿಕ ಒಂದೆರಡು ವರ್ಷಗಳಲ್ಲಿ

ವಿವಾಹ ಪುತ್ರ ಜನನ (ಅಪವಾದಗಳಿಲ್ಲವೆಂದಲ್ಲ), ಪಾಂಡವರು ಇಂದ್ರಪ್ರಸ್ಥದಲ್ಲಿ ೧೬ ವರ್ಷ (ಕೆಲವು ಗ್ರಂಥಗಳಲ್ಲಿ ೨೮ ವರ್ಷ ಎಂದಿದೆ), ಬಳಿಕ ೧೩ ವರ್ಷ ವನವಾಸ, ಅಜ್ಞಾತವಾಸ, ಯುದ್ಧಾನಂತರ ೩೬ ವರ್ಷ ರಾಜ್ಯಭಾರ, ಒಟ್ಟಿನಲ್ಲಿ ಸುಮಾರು ಎಪ್ಪತ್ತು ವರ್ಷಗಳು. ಅದೇ ಪರೀಕ್ಷಿತ ಎರಡೋ ನಾಲ್ಕು ವರ್ಷ ರಾಜ್ಯವಾಳಿರಬಹುದು. ಈ ವೈಪರೀತ್ಯದ ಬದಲಿಗೆ ನೈಸರ್ಗಿಕ ಮಾನದಂಡ ಉಪಯೋಗಿಸಿದಲ್ಲಿ (ಒಂದೆರಡು ವರ್ಷಗಳ ವ್ಯತ್ಯಾಸ ಒಪ್ಪಿಕೊಂಡರೂ) ವೈಪರೀತ್ಯ ಅಧಿಕವಾಗದು.

ಮೃಗಯಾವ್ಯಸನದಲ್ಲಿ ಕಾಲಕಳೆಯುತ್ತಿದ್ದ ಶಂತನು ಚಿಕ್ಕ ವಯಸ್ಸಿನಲ್ಲಿ ವಿವಾಹವಾಗಿರುವುದಿಲ್ಲವಾದ್ದರಿಂದ ೨೦ ವರ್ಷಗಳನ್ನು ತುಸು ಹಿಗ್ಗಿಸಿ ೨೫ ವರ್ಷಗಳೆಂದಿಟ್ಟುಕೊಂಡರೂ (೩೫ ವರ್ಷ ಎಂದೂ ಉಲ್ಲೇಖವಿದೆ) ಎಂಟನೆಯ ಮಗು ದೇವವ್ರತ ಹುಟ್ಟುವಾಗ ೩೩-೩೪ ವರ್ಷಗಳು. ೧೬ ವರ್ಷಗಳ ದೇವವ್ರತ ಹಿಂತಿರುಗುವಾಗ ಶಂತನುವಿಗೆ ೫೦ ವರ್ಷಗಳು. ಯುವರಾಜ ದೇವವ್ರತ ೨೦ ವರ್ಷದವನಾಗುವಾಗ ಶಂತನುವಿಗೆ ೫೪ ವರ್ಷಗಳು. ಸತ್ಯವತಿಗೆ ೧೨-೧೩ ವರ್ಷಕ್ಕೆ ಪರಾಶರನಿಂದ ವ್ಯಾಸ ಹುಟ್ಟಿದ ಎಂದರೂ ಅವನು ಆರೇಳು ವರ್ಷದವನಾದಾಗ (ಕೆ.ಎಂ.ಮುನ್ಸಿ-ಕೃಷ್ಣವತಾರ) ಅವಳಿಗೆ ೧೮-೧೯ ವರ್ಷಗಳು. ಆಗ ಶಂತನು ಅವಳನ್ನು ವರಿಸುತ್ತಾನೆ.

ವ್ಯಾಸ ಭೀಷ್ಮನಿಗಿಂತ ಸುಮಾರು ೧೪ ವರ್ಷಕ್ಕೆ ಚಿಕ್ಕವನು ಎಂದಾಗುತ್ತದೆ. ಚಿತ್ರಾಂಗದ ವಿಚಿತ್ರವೀರ್ಯರಿಗೆ ೫-೬ ವರ್ಷಗಳಿರುವಾಗ ಶಂತನು ಸತ್ತ ಎಂದಾದಲ್ಲಿ ಅವನಿಗೆ ಸುಮಾರು ೬೦ ವರ್ಷಗಳು. ಭೀಷ್ಮನಿಗೆ ಸುಮಾರು ೨೬ ವರ್ಷಗಳು. ವಿಚಿತ್ರವೀರ್ಯ ತನ್ನ ೨೦ನೆಯ ವಯಸ್ಸಿನಲ್ಲಿ ಮದುವೆ ಆಗಿ ಒಂದೆರಡು ವರ್ಷಗಳಲ್ಲಿ ಸತ್ತ ಎಂದಿಟ್ಟುಕೊಂಡರೂ ಆಗ ಭೀಷ್ಮನಿಗೆ ಸುಮಾರು ೪೨ ವರ್ಷಗಳು. ಭೀಷ್ಮನಿಗಿಂತ ಸುಮಾರು ೧೪ ವರ್ಷಗಳಿಗಿಂತ ಕಿರಿಯನಾದ ವ್ಯಾಸ, ಅಂಬಿಕೆ, ಅಂಬಾಲಿಕೆಯನ್ನು ಸೇರುವಾಗ ೨೮, ೩೦ ವರ್ಷಗಳಿರಬಹುದು (ವಿಚಿತ್ರವೀರ್ಯ ಸತ್ತು, ತುಸು ಕಾಲದ ಬಳಿಕ ನಿಯೋಗ ನಡೆಯಿತು ಎಂದಿಟ್ಟುಕೊಂಡರೂ). ಪಾಂಡು ಹುಟ್ಟುವ ಕಾಲಕ್ಕೆ ಏನಿಲ್ಲವೆಂದರೂ ಭೀಷ್ಮನಿಗೆ ೪೪-೪೫ ವರ್ಷಗಳಾಗಿರಬಹುದು. ಪಾಂಡುವಿಗೆ ಇಪ್ಪತ್ತು ವರ್ಷಕ್ಕೆ ವಿವಾಹವಾಯಿತ್ತೆಂದು ಇಟ್ಟುಕೊಂಡಲ್ಲಿ ಭೀಷ್ಮನಿಗೆ ಆ ಸಮಯದಲ್ಲಿ ೬೫ ವರ್ಷಗಳಾದರೆ ವ್ಯಾಸನಿಗೆ ೫೦ ವರ್ಷ ದಾಟಿರಬೇಕು. ಮುಂದೆ ಪಾಂಡುವಿನ ದಿಗ್ವಿಜಯ, ಕಾಡಿನಲ್ಲಿ ಕಳೆದ ದಿನಗಳು, ಯುಧಿಷ್ಠಿರನ ಜನನ ಇವೆಲ್ಲಕ್ಕೂ ಏನಿಲ್ಲವೆಂದರೂ ೩-೫ ವರ್ಷಗಳು ಬೇಕಾಗುತ್ತದೆ. ಆಗ ಭೀಷ್ಮರ ವಯಸ್ಸು ೭೦ ವರ್ಷಗಳು.

ಅನಂತರ ಪಾಂಡು ಸತ್ತು ಪಾಂಡವರು ಹಸ್ತಿನಾವತಿ ಪ್ರವೇಶ ಮಾಡುವ ಸಮಯದಲ್ಲಿ ಯುಧಿಷ್ಠಿರನಿಗೆ ೧೬ ವರ್ಷಗಳು ಎಂದಿವೆ. ಕ್ರಮವಾಗಿ ಉಳಿದವರಿಗೆ ಒಂದೊಂದು ವರ್ಷ ಕಡಿಮೆಯಾದರೆ ಭೀಷ್ಮರಿಗೆ ೮೬ ವರ್ಷಗಳಿರಬೇಕು, ವ್ಯಾಸರಿಗೆ ೭೨ ವರ್ಷಗಳಾಗುತ್ತದೆ. ಮುಂದೆ ೮ ವರ್ಷಗಳು ವಿದ್ಯಾಭ್ಯಾಸ ಎಂದಿದೆ, ೨ ವರ್ಷಗಳು ವಾರಣಾವತ ಮತ್ತು ದ್ರೌಪದಿ ಸ್ವಯಂವರದ ಸಮಯ ಕಳೆದುದು. ಅಲ್ಲಿಂದ ಮುಂದೆ ೧೬ ವರ್ಷ ಇಂದ್ರಪ್ರಸ್ಥದಲ್ಲಿ ಆಡಳಿತ, ಬಳಿಕ ೧೩ ವರ್ಷ ವನವಾಸ, ಅಜ್ಞಾತವಾಸ, ಅಂದರೆ ಒಟ್ಟಿನಲ್ಲಿ ೩೯ ವರ್ಷಗಳೇ ಸಂದಿರುತ್ತವೆ. ಹಾಗಾಗಿ ಯುದ್ಧ ಸಮಯದಲ್ಲಿ ಭೀಷರಿಗೆ ೮೬+೩೯=೧೨೫ ವರ್ಷಗಳು, ವ್ಯಾಸರಿಗೆ ೧೧೪ ವರ್ಷಗಳು, ಯುಧಿಷ್ಠಿರನಿಗೆ ೧೬+೩೯=೫೫ ವರ್ಷಗಳು.

೩೬ ವರ್ಷಗಳ ರಾಜ್ಯಾಭಾರ ನಡೆಸಿ ಸ್ವರ್ಗಾರೋಹಣ ಮಾಡುವಾಗ ಯುಧಿಷ್ಠಿರನಿಗೆ ೫೫+೩೬=೯೧ ವರ್ಷಗಳು (ಒಂದೆರಡು ವರ್ಷಗಳ ವ್ಯತ್ಯಯ ಗಣತಿಯಲ್ಲಿ ನಡೆದಿರಬಹುದು ಎಂದಾದರೂ ಶತಾಯುಷ್ಯದ ಸಮೀಪ ಎನ್ನಬಹುದು). ಆ ಸಮಯ ವ್ಯಾಸರಿಗೆ ೧೫೦ ವರ್ಷಗಳಾಗುತ್ತವೆ.

ಮೇಲಿನ ಲೆಕ್ಕಾಚಾರಗಳು ತುಸು ಅಸಹಜವಾಗಿ ಕಂಡುಬಂದರೂ ಅಸಂಭವ ಎಂದು ಸಾರಸಗಟಾಗಿ ತಿರಸ್ಕರಿಸುವುದು ಸುಲಭವಲ್ಲ. ಇತ್ತೀಚೆಗೆ ನ್ಯಾಷನಲ್ ಜಿಯೋಗ್ರಫಿಯಲ್ಲಿ ಬಿತ್ತರಿಸಿದ ೧೪೦ ವಯಸ್ಸಿನ ಚೀನೀ ವೃದ್ಧ ಬೆಟ್ಟದ ಇಳಿಜಾರಿನಲ್ಲಿ ನೀರು ಹೊರುತ್ತಿದ್ದ ದೃಶ್ಯ ಕುತೂಹಲ ಕಾರಿಯಾಗಿದೆ. ಇಷ್ಟೊಂದು ದೀರ್ಘಗಣತಿ ಸಮಂಜಸವೇ ಎಂದು ಕೆಲವು ಬಾರಿ ಅನುಮಾನ ಮೂಡಿ 'ವ್ಯಾಸ' ಎನ್ನುವುದು ಒಂದು ಪೀಠ, ವಸಿಷ್ಠ ಎನ್ನುವುದೂ ಅಂತೆಯೇ ಪರಶುರಾಮ ಎನ್ನುವುದೊಂದು ಗುರುಕುಲ ಸಂಸ್ಥೆ ಎನ್ನುವ ಸಂದೇಹ ಉಂಟಾದರೂ, ಈ ಒಂದು ಸಂಭಾವ್ಯತೆ ಅಸಾಧ್ಯ ಅಲ್ಲವೆನ್ನುವುದೂ ಗೋಚರವಾಗುತ್ತದೆ.

ಬೌಧಾಯನ, ಆಶ್ವಲಾಯನ ಸೂತ್ರಗಳಲ್ಲೂ ಇದಕ್ಕೆ ಸಮರ್ಥನೆಯನ್ನೊದಗಿಸುವುದರಿಂದ ಹೀಗೆ ಗ್ರಹಿಸಬಹುದು:

೧. ವೇದಗಳ ಕಾಲ – ಕ್ರಿ.ಪೂ. ೩೧೦೦ ವರ್ಷಗಳಷ್ಟು ಹಿಂದೆ.

೨. ಮಹಾಭಾರತ ಕಾಲ – ಕ್ರಿ.ಪೂ. ೩೧೦೧-೨ ಆಸುಪಾಸು (ಯುದ್ಧ ಕಾಲ)

೩. ಸರಸ್ವತೀ ನದಿ ಜೀವಂತ ಇದ್ದು ಪ್ರಸಿದ್ಧವಾದ ಕಾಲ ಕ್ರಿ.ಪೂ. ೩೦೦೦ರಿಂದ ಕ್ರಿ.ಪೂ. ೨೦೦೦ದಷ್ಟು ಅಂತರದಲ್ಲಿ.

೪. ಈ ಮಹಾನದಿ ಬತ್ತಿದ್ದು ಕ್ರಿ.ಪೂ. ೨೦೦೦ದಿಂದ ೧೯೦೦ ಕಾಲದಲ್ಲಿ.

ಮಹಾಭಾರತ ಕಾಲಗಣನೆಯ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದ್ದರೂ, ಸಾಮಾನ್ಯವಾಗಿ ಪ್ರಾಚೀನರು ಕ್ರಿ.ಪೂ. ೩೦೬೭ ಎಂದೂ ಈಚಿನವರು ೩೧೦೧ ಎಂದು ಅಭಿಪ್ರಾಯಪಟ್ಟಿದ್ದಾರೆ.

**ಮಹಾಭಾರತ ಗ್ರಂಥದ ಉದ್ದೇಶ:**

ಮಹಾಭಾರತದಲ್ಲಿ ಪ್ರಾರಂಭದಿಂದ ಕೊನೆಯವರೆಗೂ ಯುಧಿಷ್ಠಿರ ಮೊದಲಾದ ಮಹಾವ್ಯಕ್ತಿಗಳ ಜೀವನ ಚರಿತ್ರೆ ವರ್ಣಿತವಾಗಿದೆ ಎಂಬುದನ್ನು ಹಿಂದೆಯೇ ಹೇಳಲಾಗಿದೆ. ಇದರ ಜೊತೆಗೆ ಪಾಂಡವರ ಪ್ರತಿಸ್ಪರ್ಧಿಗಳಾದ ಕೌರವರ ಚರಿತ್ರೆಯೂ ಆದಿಯಿಂದ ಗದಾಪರ್ವದ ತನಕ ಸಮಾನವಾಗಿ ಬಂದಿದೆ. ಆದರೆ ಆದಿಯಿಂದ ತುದಿಯವರೆಗೂ ಪಾಂಡವರ ವಿಷಯವೇ ವಿಶೇಷವಾಗಿ ಬಂದಿರುವುದರಿಂದ ಮಹಾಪುರುಷರೂ ಸತ್ಯಸಂಧರೂ ಕರ್ತವ್ಯನಿಷ್ಠರೂ ನ್ಯಾಯ ಮತ್ತು ಧರ್ಮವನ್ನು ಕೊನೆ ಉಸುರಿನ ತನಕ ರಕ್ಷಿಸಿಕೊಂಡು ಬಂದ ಈ ಪಾಂಡವರ ಆದರ್ಶ ಜೀವನದ ಚರಿತ್ರೆಯನ್ನು ಓದಿ, ತಿಳಿದು ಜನರು ತಮ್ಮ ನಡೆ-ನುಡಿ, ಆಚಾರ-ವಿಚಾರ ಹಾಗೂ ಜೀವನಕ್ರಮವನ್ನು ರೂಪಿಸಿಕೊಳ್ಳಬೇಕೆಂಬ ಸದುದ್ದೇಶದಿಂದ ವ್ಯಾಸರು ಮಹಾಭಾರತವನ್ನು ಬರೆದರೆಂಬುದು ಸ್ಪಷ್ಟವಾಗುತ್ತದೆ. ಇಂತಹ ಉದ್ದೇಶದಿಂದ ಋಷಿ ಪ್ರಣೀತವಾದ ಗ್ರಂಥ ರಚನಾ ದೃಷ್ಟಿಯಿಂದ ಒಂದು ಮಹಾಕಾವ್ಯವಾಗಿದ್ದರೂ ಕಥಾನಕದ ದೃಷ್ಟಿಯಿಂದ ಒಂದು ಇತಿಹಾಸವೇ ಆಗಿದ್ದರೂ ಧರ್ಮ ಪ್ರಧಾನವಾದ ಭಾರತ ದೇಶದ ಜನತೆ ಇದನ್ನೊಂದು 'ಧಾರ್ಮಿಕ ಗ್ರಂಥ' ಎಂದು ಅಂದಿನಿಂದ ಇಂದಿನವರೆಗೂ ನಂಬಿಕೊಂಡು ಬಂದುದರಲ್ಲಿ ಆಶ್ಚರ್ಯವೇನಿಲ್ಲ.

ಪಾಂಡವರು ಧರ್ಮ ಮಾರ್ಗಾವಲಂಬಿಗಳೂ ಪರಮಾತ್ಮನ (ಶ್ರೀಕೃಷ್ಣ) ಪರಮ ಭಕ್ತರೂ ಆಗಿದ್ದುದರಿಂದ ಮಧ್ಯದಲ್ಲಿ ಸ್ವಲ್ಪ ಕಷ್ಟವನ್ನು ಅನುಭವಿಸಿದರೂ ಪರಿಣಾಮದಲ್ಲಿ ಐತಿಹಾಸಿಕವಾಗಿಯೂ ಸಾರ್ವತ್ರಿಕವಾಗಿಯೂ ಶ್ರೇಯಸ್ಸನ್ನೇ ಹೊಂದಿದರೆಂಬುದನ್ನು ತಿಳಿಸುವುದರ ಮೂಲಕ ಸನ್ಮಾರ್ಗದಲ್ಲಿರುವವರಿಗೆ ಕೆಡಕಾಗುವುದಿಲ್ಲ ಎಂಬುದನ್ನು ವರ್ಣಿಸುತ್ತಾ ಇದರ ಸ್ಪಷ್ಟತೆಗಾಗಿ ಧೃತರಾಷ್ಟ್ರ ಪುತ್ರರಾದ ದುರ್ಯೋಧನ, ಯುಯುತ್ಸು, ದುಶ್ಯಾಸನ ಎಂದು ಮೊದಲ್ಗೊಂಡು ಚಿತ್ರಜ, ಆಸನ, ಚಿತ್ರಕ ಎಂಬ ಹೆಸರಿನಿಂದ ಕೊನೆಗೊಳ್ಳುವ ನೂರೊಂದು ಜನ ಕೌರವರ ಚರಿತ್ರೆಯೂ ಸಹ ವರ್ಣಿಸಲ್ಪಟ್ಟಿದೆ.

ನೀತಿ ಮಾರ್ಗವನ್ನು ಬಿಟ್ಟು ಸದಾ ಪರಪೀಡನೆಯಲ್ಲಿಯೇ ನಿರತರಾಗಿ ಸತ್ಯಧರ್ಮದ ಅವಹೇಳನದಲ್ಲಿಯೇ ಉದ್ಯುಕ್ತರಾಗಿರುವವರು ಮೊದಲು ಸ್ವಲ್ಪ ಸುಖವುಳ್ಳವರಾಗಿ ತೋರಿದರೂ ಪರ್ಯವಸಾನದಲ್ಲಿ ಅವರ ಸರ್ವನಾಶ ಖಂಡಿತ ಎಂಬುದನ್ನು ತೋರಿಸುವುದೇ ಈ ವ್ಯಕ್ತಿಗಳ ಚರಿತ್ರೆ-ವರ್ಣನೆಯ ಉದ್ದೇಶ.

ಹೀಗೆ ಸತ್ಪ್ರವೃತ್ತಿ ಮತ್ತು ದುಷ್ಪ್ರವೃತ್ತಿಗಳ ಸಂಘರ್ಷದ ಮಧ್ಯೆ ಮಹಾಭಾರತದಲ್ಲಿ ಇನ್ನೊಂದು ಭಾಗವತ ತತ್ವವನ್ನವಲಂಬಿಸಿದ ಭಾವನಾಪರಂಪರೆಯೂ ಬೆಳೆದು ಬಂದಿದೆ. ಅದು ಪರಮಾತ್ಮ ಅವತಾರವಾದ ಶ್ರೀಕೃಷ್ಣನ ಚರಿತ್ರೆ ಮತ್ತು ಮಹಾತ್ಮೆ. ಪಾಂಡವರು ಪರಮ ಭಾಗವತರಾದುದರಿಂದ ಈಶ್ವರನ ಅನುಗ್ರಹದಿಂದಲೇ ಅವರ ಸಮಸ್ತ ಕಾರ್ಯಗಳೂ ಸಿದ್ಧಿಸಿದವು ಎಂಬುದನ್ನು ತೋರಿಸುವುದಲ್ಲದೆ, ಆ ಅಪಾರ ಮಹಿಮನ ಇಚ್ಛೆ ಅಥವಾ ಪ್ರೇರಣೆಯಿಂದಲೇ ಈ ಲೋಕದ ಪ್ರತಿಯೊಂದು ವ್ಯಾಪಾರವೂ ನಡೆಯುತ್ತದೆಂಬ ಚರಿತ್ರೆಯ ವರ್ಣನೆಯ ಏಕಮಾತ್ರ ಉದ್ದೇಶ.

**ಕಥಾವಸ್ತು:**

ಮಹಾಭಾರತದ ಆದಿಪರ್ವದಲ್ಲಿ ಕಾವ್ಯದ ಪ್ರಧಾನ ನಾಯಕರಾದ ಯುಧಿಷ್ಠಿರಾದಿಗಳ ಜನ್ಮವನ್ನು ಹೇಳಲು ಚಂದ್ರವಂಶದ ಉತ್ಪತ್ತಿಯೂ ಅದರಲ್ಲಿ ಹುಟ್ಟಿದ ಮಹಾಮಹಿಮರಾದ ರಾಜರುಗಳ ಚರಿತ್ರೆಯೂ ವರ್ಣಿತವಾಗಿದೆ. ಮನುಪುತ್ರಿಯಾದ ಇಳೆಯಲ್ಲಿ ಚಂದ್ರನ ಮಗನಾದ ಬುಧನಿಂದ ಪುರೂರವಸ್ಸು ಹುಟ್ಟಿದನು. ಇವನ ಮಗನಾದ ಆಯಸ್ಸು ಎಂಬವನ ಪುತ್ರ ನಹುಷ ಹೀಗೆ ಅನುಕ್ರಮವಾಗಿ ಬಂದ ಈ ಸಂತತಿಯಲ್ಲಿ ಇಲಿಲ ಎಂಬವನು ಪ್ರಸಿದ್ಧನಾದ ದುಷ್ಯಂತನ ತಂದೆ. ಈ ದುಷ್ಯಂತನ ಮಗನಾದ ಭರತನಿಂದ ಮುಂದಿನ ಭರತವಂಶವಾಯ್ತು. ಅದರಲ್ಲಿ ಹುಟ್ಟಿದವರು ಭಾರತರಾದರು. ಅವನಾಳಿದ ದೇಶ ಭಾರತ ದೇಶವಾಯಿತು.

ಈ ಪೂರ್ವೋಕ್ತ ವಂಶಕ್ರಮದಲ್ಲಿ ಪುರು ಎಂಬ ರಾಜನೂ ಇದ್ದುದರಿಂದ ಈ ವಂಶಕ್ಕೆ ಪೌರವ ವಂಶವೆಂದೂ ಕುರುವಂಶವೆಂದೂ ಹೇಳುವುದುಂಟು. ಮುಂದೆ ಈ ವಂಶದಲ್ಲಿಯೇ ಯುಧಿಷ್ಠಿರಾದಿಗಳೂ ಮತ್ತು ದುರ್ಯೋಧನಾದಿಗಳೂ ಹುಟ್ಟಿದ್ದರೂ ಪಾಂಡವರನ್ನು ಭಾರತರೆಂದೂ ದುರ್ಯೋಧನಾದಿಗಳನ್ನು ಕೌರವರೆಂದೂ ಕರೆಯುವ ವ್ಯವಹಾರ ನಡೆದು ಬಂದಿದೆ. ಕಥಾ ನಾಯಕರಾದ ಪಾಂಡವರ ಜೀವನಕ್ಕೆ ಮುಖ್ಯವಾಗಿ ಸಂಬಂಧಪಟ್ಟ ದ್ರೋಣ, ಅಶ್ವತ್ಥಾಮ, ಭೀಷ್ಮ

ಮೊದಲಾದವರ ಜನನವು ವರ್ಣಿತವಾಗಿದೆಯಲ್ಲದೆ, ಮಹಾಭಾರತ ಕಥಾಶ್ರವಣೋತ್ಸುಕ ಜನಮೇಜಯನ ಚರಿತ್ರೆಯೂ ಆತನ ತಂದೆಯಾದ ಪರೀಕ್ಷಿತನ ವಿಚಾರವೂ ಸರ್ಪಯಾಗ ಸಂದರ್ಭವೂ ಆಸ್ತೀಕ ಚರಿತ್ರೆಯೂ ಆದಿಪರ್ವದಲ್ಲಿ ಅಡಕವಾಗಿವೆ.

ಹೀಗೆ ಈ ಇತಿಹಾಸದಲ್ಲಿ ನೂರಾರು ಪಾತ್ರಗಳ ಸಮನ್ವಯವಿದ್ದರೂ ಹತ್ತಾರು ವ್ಯಕ್ತಿಗಳ ವರ್ಣನೆಯು ಪ್ರಧಾನವಾಗಿ ನಡೆದಿದ್ದರೂ ಯುಧಿಷ್ಠಿರನೊಬ್ಬನೇ ಮುಖ್ಯ ನಾಯಕನೆಂಬುದಾಗಿ ತಿಳಿದುಬರುತ್ತದೆ. ಇತಿಹಾಸದಲ್ಲಿ ಅಥವಾ ಕಾವ್ಯದಲ್ಲಿ ಪ್ರಧಾನ ನಾಯಕನ ಲಕ್ಷಣಗಳೇನಿರಬೇಕೆಂದು ಲಾಕ್ಷಣಿಕರು ಹೇಳಿದ್ದರೋ ಅವುಗಳು ಪೂರ್ಣರೂಪೇಣ ಅನ್ವಯಿಸುವುದು ಯುಧಿಷ್ಠಿರನೊಬ್ಬನಲ್ಲಿ ಮಾತ್ರ. ಆತನ ವಂಶಾನುಚರಿತದಿಂದಲೇ ಪ್ರಾರಂಭವಾಗಿ ಮಧ್ಯೆ ಹಲವಾರು ವ್ಯಕ್ತಿಗಳ ಚಿತ್ರಣಗಳನ್ನೊಳಗೊಂಡಿದ್ದರೂ ಅವುಗಳು ಕೇಂದ್ರಬಿಂದುವಿನಂತಿರುವ ಯುಧಿಷ್ಠಿರನ ಚರಿತ್ರೆಗೆ ಪೋಷಕವಾಗಿದ್ದು ಹದಿನೆಂಟು ಪರ್ವಗಳೂ ಪ್ರತ್ಯಕ್ಷವಾಗಿಯಾಗಲೀ ಪರೋಕ್ಷವಾಗಿಯಾಗಲೀ ಯುಧಿಷ್ಠಿರನಿಗೆ ಸಂಬಂಧಪಟ್ಟಿದ್ದು, ಸಮಾಪ್ತಿಯಲ್ಲೂ ಆತನ ಸ್ವರ್ಗಾರೋಹಣವನ್ನೇ ಹೇಳಿ ಗ್ರಂಥವು ಕೊನೆಗೊಳ್ಳುತ್ತದೆ. ಆತನ ಸಹೋದರರಾದ ಭೀಮಾದಿಗಳ ಮತ್ತು ಪತ್ನಿಯಾದ ಪಾಂಚಾಲಿಯ ಚರಿತ್ರೆಯು ಕಥಾಭಾಗದಲ್ಲಿ ಸಂಭವಿಸುವ ಘಟನೆಗಳ ನಿರ್ಮಾಣದ ದೃಷ್ಟಿಯಿಂದ ಹೆಚ್ಚಿನ ಮಹತ್ವವುಳ್ಳದ್ದಾಗಿದ್ದರೂ ಮಹಾಪ್ರಸ್ಥಾನ ಪರ್ವದಲ್ಲಿಯೇ ಅವೆಲ್ಲ ಕೊನೆಗೊಳ್ಳುವುದರಿಂದ ಯುಧಿಷ್ಠಿರನ ಚರಿತ್ರೆಗಿಂತ ಇವರ ಚರಿತ್ರೆ ನ್ಯೂನವಾಗಿದೆಯೆಂದೇ ಹೇಳಬೇಕು. ಇದರಿಂದ ಮಹಾಭಾರತದ ಪ್ರಧಾನ ನಾಯಕ ಧರ್ಮಪುತ್ರನಾದ ಯುಧಿಷ್ಠಿರನೆಂದು ನಿಸ್ಸಂಶಯವಾಗಿ ಹೇಳಬಹುದು. ಇಂತಹ ಚಾರಿತ್ರಿಕ ಪುರುಷನೂ ಉದಾತ್ತನೂ ಆದ ನಾಯಕನ ಸಮಗ್ರ ಜೀವನದ ಚಿತ್ರಣವಿರುವುದರಿಂದ ಇದನ್ನು ಇತಿಹಾಸವೆಂದೂ ಮಹಾಕಾವ್ಯವೆಂದೂ ಹೇಳುವುದು ಪ್ರತೀತಿ.

**ಕಾವ್ಯದ ಸಾರಾಂಶ:**

ಮಹಾಭಾರತದ ೧೮ ಪರ್ವಗಳಲ್ಲಿ ಬರುವ ಕಥಾಸಾರಾಂಶ ಇಷ್ಟು: ವರ್ಣನೀಯವಾದ ನಾಯಕರುಗಳ ವಂಶಕಥನ, ಜನನ ಮತ್ತು ಬಾಲ್ಯ (೧ ಆದಿಪರ್ವ); ಪ್ರಧಾನ ನಾಯಕನಾದ ಯುಧಿಷ್ಠಿರನು ರಾಜ್ಯಭಾರ ಮಾಡುತ್ತಾ ರಾಜಸೂಯವನ್ನು ಮಾಡುತ್ತಾನೆ. ಅಲ್ಲಿಂದ ದ್ಯೂತ ಪ್ರಸಂಗ (೨ ಸಭಾಪರ್ವ)ದಲ್ಲಿ ಸೋತು ಸೋದರರು ಮತ್ತು ಪತ್ನಿಯೊಂದಿಗೆ ಅರಣ್ಯವಾಸವನ್ನು ಅನುಭವಿಸಲೋಸುಗ ಕಾಡಿಗೆ ಹೋಗಿ ೧೨ ವರ್ಷಗಳನ್ನು ಕಳೆಯುತ್ತಾನೆ (೩ ವನಪರ್ವ); ಅಲ್ಲಿಂದ ೧ ವರ್ಷದ ಅಜ್ಞಾತವಾಸಕ್ಕಾಗಿ ವಿರಾಟನಗರವನ್ನು ಸೇರುತ್ತಾನೆ (೪ ವಿರಾಟಪರ್ವ); ಹದಿಮೂರು

ವರ್ಷದ ಅವಧಿ ಮುಗಿದುದರಿಂದ ರಾಜ್ಯವನ್ನು ಪುನಃ ಪಡೆಯಲು ಸಾಮ, ದಾನ ಮತ್ತು ಭೇದೋಪಾಯಗಳನ್ನು ಬಳಸಿ ವಿಫಲವಾದ ಮೇಲೆ ನಾಲ್ಕನೆಯ ಉಪಾಯದ ಪ್ರಯೋಗಕ್ಕಾಗಿ ಯುದ್ಧ ಸನ್ನಾಹವಾಗುತ್ತದೆ (೫ ಉದ್ಯೋಗಪರ್ವ); ಎರಡೂ ತಂಡದವರೂ ಕಾಳಗಕ್ಕೆ ಸಿದ್ಧರಾಗುತ್ತಾರೆ. ಹತ್ತು ದಿನಗಳ ಪರ್ಯಂತ ಭೀಷ್ಮನ ಸೇನಾಪತ್ಯದಲ್ಲಿ ಯುದ್ಧ ನಡೆಯುತ್ತದೆ (೬ ಭೀಷ್ಮಪರ್ವ); ಮುಂದಿನ ೫ ದಿನಗಳ ಯುದ್ಧದಲ್ಲಿ ದ್ರೋಣ ಸೇನಾನಾಯಕನಾಗುತ್ತಾನೆ (೭ ದ್ರೋಣಪರ್ವ); ಆಮೇಲೆ ಕರ್ಣನ ಸೇನಾಪತ್ಯದಲ್ಲಿ ಎರಡು ದಿನಗಳ ಯುದ್ಧ ನಡೆಯುತ್ತದೆ (೮ ಕರ್ಣಪರ್ವ); ಕರ್ಣಾವಸಾನವಾದನಂತರ ಭಾರತ ಯುದ್ಧದ ಹದಿನೆಂಟನೆಯ ದಿನದ ಸೇನಾಧಿಪತಿ ಶಲ್ಯನಾಗುತ್ತಾನೆ (೯ ಶಲ್ಯಪರ್ವ); ಇಲ್ಲಿಗೆ ಭಾರತದ ಮಹಾ ಸಂಗ್ರಾಮ ಮುಗಿಯುತ್ತದೆ. ಅಲ್ಲಿಂದ ಪಾಂಡವರು ನಿದ್ದೆಯಲ್ಲಿದ್ದಾಗ ಅಶ್ವತ್ಥಾಮನು ಅವರ ಮಕ್ಕಳನ್ನು ಕೊಲ್ಲುತ್ತಾನೆ (೧೦ ಸೌಪ್ತಿಕಪರ್ವ); ಯುದ್ಧದಲ್ಲಿ ಮೃತರಾದವರ ಸಂಬಂಧಿಗಳಾದ ಸ್ತ್ರೀಯರ ಪ್ರಲಾಪ (೧೧ ಸ್ತ್ರೀಪರ್ವ); ಇಲ್ಲಿಂದ ಮುಂದೆ, ನಿರಪರಾಧಿಗಳಾಗಿದ್ದು ಯುದ್ಧದಲ್ಲಿ ಮರಣಹೊಂದಿದ ಅನೇಕ ರಾಜರುಗಳ ಮತ್ತು ಸೇನಗಳ ವಿಷಯವಾಗಿ ದುಃಖಪಟ್ಟು ನಿರ್ವಿಣ್ಣನಾದ ಯುಧಿಷ್ಠಿರನಿಗೆ ಭೀಷ್ಮ ಮೋಕ್ಷಧರ್ಮೋಪದೇಶ ಮಾಡಿ ಅವನ ಮನಸ್ಸಿಗೆ ಶಾಂತಿ ಬರುವಂತೆ ಮಾಡುತ್ತಾನೆ (೧೨ ಶಾಂತಿಪರ್ವ); ಮಹಾಭಾರತದಲ್ಲೆಲ್ಲಾ ಈ ಪರ್ವವೇ ಬಹಳ ದೊಡ್ಡದು. ಸುಮಾರು ೧೫,೦೦೦ದಷ್ಟು ಶ್ಲೋಕಗಳುಳ್ಳ ಈ ಪರ್ವದಲ್ಲೆಲ್ಲಾ ತಾತ್ವಿಕ ವಿಚಾರಗಳೇ ಇವೆ. ಮುಂದಿನ ಪರ್ವದಲ್ಲಿಯೂ ಸಹ ಹೀಗೆಯೇ ಕರ್ಮ, ಭಕ್ತಿ, ಜ್ಞಾನವೆಂಬ ಭಗವತ್ಪ್ರಾಪ್ತಿಯ ಸಾಧನೆಗಳ ಸವಿಸ್ತಾರವಾದ ವರ್ಣನೆಯಿದೆ (೧೩ ಆನು ಶಾಸನಿಕಪರ್ವ); ಈ ರೀತಿ ಭೀಷ್ಮನಿಂದ ಸಮಸ್ತ ವಿಚಾರಗಳ ಉಪದೇಶ ಪಡೆದ ಯುಧಿಷ್ಠಿರನು ಪಾಪವನ್ನು ಹೋಗಲಾಡಿಸಿಕೊಳ್ಳಲೋಸುಗ ಅಶ್ವಮೇಧ ಯಾಗವನ್ನು ಮಾಡುತ್ತಾನೆ (೧೪ ಅಶ್ವಮೇಧ ಯಾಗ); ಇದಾದ ಮೇಲೆ ಧೃತರಾಷ್ಟ್ರ, ಗಾಂಧಾರೀ, ಕುಂತೀ ಮೊದಲಾದವರು ವಾನಪ್ರಸ್ಥಾಶ್ರಮವನ್ನು ಕೈಗೊಳ್ಳುತ್ತಾರೆ (೧೫ ಆಶ್ರಮವಾಸಪರ್ವ); ಇತ್ತ ಯಾದವರಲ್ಲಿ ಪರಸ್ಪರ ಕಲಹವಾಗಿ ಮುಸಲದಿಂದ ಅವರೆಲ್ಲರೂ ನಾಶ ಹೊಂದುತ್ತಾರೆ (೧೬ ಮೌಸಲಪರ್ವ); ಈ ಯಾದವರಲ್ಲಿ ಸೇರಿದ, ಭಗವಂತನ ಅವತಾರವಾದ ಶ್ರೀಕೃಷ್ಣನು ತನ್ನ ಲೀಲಾಶರೀರವನ್ನು ಬಿಡುತ್ತಾನೆ. ಇದನ್ನು ಕೇಳಿದ ಪಾಂಡವರು ತಮ್ಮ ಜೀವನಾಧಾರನಾದ ಕೃಷ್ಣನ ನಿರ್ವಾಣದಿಂದ ಅತೀವ ದುಃಖಿತರಾಗಿ ಜೀವನದಲ್ಲಿಯೇ ಜಿಗುಪ್ಸೆ ಹೊಂದುತ್ತಾರೆ. ಯುಧಿಷ್ಠಿರನು ತನ್ನ ಸಹೋದರರು ಮತ್ತು ಪತ್ನಿಯೊಡನೆ ಮಹಾಪ್ರಸ್ಥಾನ ಕೈಗೊಳ್ಳುತ್ತಾನೆ (೧೭ ಮಹಾಪ್ರಸ್ಥಾನಪರ್ವ); ಆದರೆ ಬೇರೆ ಎಲ್ಲರೂ ಮಾರ್ಗಮಧ್ಯದಲ್ಲಿಯೇ ಮೃತರಾದರಿಂದ ಯುಧಿಷ್ಠಿರನು ಮಾತ್ರ ಇಂದ್ರರಥದಲ್ಲಿ ಕುಳಿತು ಸಶರೀರನಾಗಿ ಸ್ವರ್ಗವನ್ನು ಸೇರುತ್ತಾನೆ (೧೮ ಸ್ವರ್ಗಾರೋಹಣಪರ್ವ)–

ಇದಿಷ್ಟು ಹದಿನೆಂಟು ಪರ್ವಗಳಲ್ಲಿರುವ ಮಹಾಭಾರತಕಥೆಯ ಸಾರಾಂಶ; ಮಹಾಭಾರತದಲ್ಲಿ ಪ್ರಧಾನವಾದ ಕಥಾನಕ ಅಥವಾ ಆಖ್ಯಾನ. ಈ ಮುಖ್ಯವಾದ ಆಖ್ಯಾನವೇ ಅನೇಕ ಉಪಾಖ್ಯಾನಗಳನ್ನೊಳಗೊಂಡು ಒಂದು ಬೃಹತ್ಕಥೆ ಅಥವಾ ಕಥಾಮಂಜರಿಯೇ ಆಗಿದೆ. ಒಂದು ಮಟ್ಟದ ಜನರ ದೃಷ್ಟಿಯಿಂದ ಮಹಾಭಾರತದ ಈ ಕಥಾಭಾಗಕ್ಕೆ ಪ್ರಾಧಾನ್ಯ. ಈ ಚಿತ್ರ ವಿಚಿತ್ರವಾದ ಕಥಾಶ್ರವಣದಿಂದ ಸಿಗುವ ರಸವೇ ಆಸ್ವಾದ. ಭಾರತ ಯುದ್ಧವೇ ಈ ಕಥಾನಕದ ಉದ್ದೇಶ.

ಈ ಯುದ್ಧ ಪ್ರಧಾನವಾದ ಕಥಾಭಾಗವನ್ನೇ ಇಟ್ಟುಕೊಂಡು M.Winternitz, A.Macdonell ಮೊದಲಾದ ಪಾಶ್ಚಾತ್ಯ ವಿದ್ವಾಂಸರು ಮಹಾಭಾರತವೆಂದರೆ ಕುರುಪಾಂಡವರ ಯುದ್ಧ ಎಂದು ಅಭಿಪ್ರಾಯಪಡುತ್ತಾರೆ. ಮಹಾಭಾರತದ ಶಬ್ದಾರ್ಥವೂ ಈ ಯುದ್ಧವೇ ಎಂಬುದಾಗಿ ಅವರ ಅಭಿಪ್ರಾಯ. (Mahabharatha means 'The great narrative of the battle of the Bharathas'. The Epic kernel of the Mahabharatha or 'The great battle of the decendants of Bharatha' consisting of 20,000 slokas describes 18 days fight.)[೯]

ಇದೇ ಅಭಿಪ್ರಾಯದ ಹಿನ್ನಲೆಯಿಂದ ಮಹಾಭಾರತದ ಮುಖ್ಯ ಆಖ್ಯಾನ ಮಾತ್ರ ವ್ಯಾಸಕೃತವೆಂದೂ ಇತರ ಉಪಾಖ್ಯಾನಗಳೆಲ್ಲವೂ ಹಿಂದಿನಿಂದ ಕಾಲಕ್ರಮೇಣ ಸೇರಿಸಲ್ಪಟ್ಟವುಗಳೆಂದೂ ಪಾಶ್ಚಾತ್ಯ ವಿದ್ವಾಂಸರ ಮತ್ತು ತದನುಯಾಯಿಗಳ ವಿಚಾರ ಸರಣಿಯೊಂದು ರೂಢಿಗತವಾಗಿ ಬೆಳೆದು ಬಂದಿದೆ. 'We further find in book the direct statement the poem at one time contained 24,000 slokas before episodes (Upakhyana) were added.'[೧೦]

ಚತುರ್ವಿಂಶಂತಿ ಸಾಹಸ್ರಂಚಾತ್ರ ಭಾರತ ಸಂಜ್ಞಿತಮ್।
ಉಪಾಖ್ಯಾನೈರ್ವಿನಾ ತಾವತ್ ಭಾರತಂ ಪ್ರೋಚ್ಯತೇ ಬುಧೈಃ॥
(ಆದಿಪರ್ವ, ಅ. ೬೫)

ಎಂಬ ಶ್ಲೋಕದ ಆಧಾರದ ಮೇಲೆ ವಿದ್ವಾಂಸರು ಈ ಅಭಿಪ್ರಾಯಕ್ಕೆ ಬಂದಿರಬೇಕೆಂದು ಕಾಣುತ್ತದೆ. ಅದೇ ಪರ್ವದಲ್ಲಿ ಬರುವ,

ಇದಂ ಶತಸಹಸ್ರಾಖ್ಯಂ ಶ್ಲೋಕಾನಾಂ ಪುಣ್ಯಕರ್ಮಣಾಮ್
ಮಪಾಖ್ಯಾನೈಃ ಸಹಜ್ಞೇಯಂ ಶ್ರಾವ್ಯಂ ಭಾರತ ಮುತ್ತಮಮ್

ಎಂಬ ಶ್ಲೋಕವನ್ನು ಅವಲೋಕಿಸಿದರೆ ಸಾಮಾನ್ಯವಾಗಿ ಭಾರತವು ಬೇರೆ ಉಪಾಖ್ಯಾನಗಳು ಬೇರೆ ಎಂದು ಕಾಣುತ್ತದೆ. ಆದರೆ ವಿಮರ್ಶೆಮಾಡಿ ನೋಡಿದರೆ ಭಾರತವು ಮಾತ್ರ ಮೊದಲಿತ್ತು. ಆ ಮೇಲೆ ಉಪಾಖ್ಯಾನಗಳು ಸೇರಿಸಲ್ಪಟ್ಟವು ಎಂಬ ಸಿದ್ಧಾಂತಕ್ಕೆ ಬರಲಾಗುವುದಿಲ್ಲ. ಈ ಉಪಾಖ್ಯಾನಗಳು ಪ್ರತಿ ಪರ್ವಗಳ ನಡುವೆ ಕಂಡುಬರುತ್ತವೆ. ಇವುಗಳು ಮಹಾಭಾರತದ ಕಥೆಯಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿವೆ. ಇವುಗಳನ್ನು ಹೀಗೆ ಸೇರಿಸಿದ್ದರೆ ಅವುಗಳನ್ನು ಪ್ರತ್ಯೇಕಿಸಿದರೆ ಭಾರತದ ಕಥಾ ಭಾಗಕ್ಕೆ ಭಂಗಬಾರದಿತು. ಆದರೆ ಈ ಉಪಾಖ್ಯಾನಗಳನ್ನು ಬೇರ್ಪಡಿಸಿದರೆ ಭಾರತ ಕಥೆಯು ಪರಸ್ಪರ ಹೊಂದುವುದಿಲ್ಲ. ಈ ಉಪಾಖ್ಯಾನಗಳಿಗೂ ಭಾರತಾಖ್ಯಾನಕ್ಕೂ ಪರಸ್ಪರ ಹೊಂದಿಸಿಕೊಂಡೇ ಅರ್ಥಮಾಡಬೇಕಾಗಿದೆ. ಆದ್ದರಿಂದ ಎಲ್ಲವನ್ನೂ ಒಂದೇ ಕಾಲದಲ್ಲಿ ಒಬ್ಬನೇ ಬರೆದಿದ್ದಾನೆಂಬುದರಲ್ಲಿ ಸಂದೇಹವಿಲ್ಲ. ಹೀಗಿರುವಾಗ ಬರೇ ಊಹೆಗಳ ಆಧಾರದ ಮೇಲೆ ಮಹಾಭಾರತ ಒಬ್ಬನ ಅಥವಾ ಒಂದೇ ಕಾಲದ ಕೃತಿಯಲ್ಲ ಎಂಬ ಅಭಿಪ್ರಾಯ ಎಷ್ಟರ ಮಟ್ಟಿಗೆ ಸತ್ಯವೆಂಬುದು ಅರಿಯದು. ಹೇಗಿದ್ದರೂ ಮಹಾಭಾರತವೆಂದರೆ ಯುದ್ಧ; ಯುದ್ಧವರ್ಣನೆಯೇ ಗ್ರಂಥದ ಜೀವಾಳ ಎಂಬ ಹೇಳಿಕೆಯೂ ಸತ್ಯಕ್ಕೆ ದೂರವಾದದ್ದು.

**ಮಹತ್ವಾತ್ ಭಾರತತ್ವಾಚ್ಚ ಮಹಾಭಾರತ ಮುಚ್ಯತೇ!**
**ನಿರುಕ್ತಮಸ್ಯಯೋ ವೇದಸರ್ವ ಪಾಪೈಃ ಪ್ರಮುಚ್ಯತೇ॥**
**(ಅನುಕ್ರಮಣಿಕಾಪರ್ವ, ಶ್ಲೋಕ ೨೫೪-೫೫)**

ಎಂಬ ಪದ್ಯವನ್ನು ನೋಡಿದರೆ ಗ್ರಂಥ ಸಂಖ್ಯೆಯು ಅಧಿಕವಾದುದರಿಂದ 'ಮಹಾ' ಎಂದೂ, ಭರತವಂಶದ ರಾಜರ ಜೀವನ ಚರಿತ್ರೆಯನ್ನು ವರ್ಣಿಸಿರುವುದರಿಂದ ಭಾರತವೆಂದೂ ಒಟ್ಟಿಗೆ ಸೇರಿ 'ಮಹಾಭಾರತ'ವಾಯಿತ್ತೆಂದೂ ತೋರುತ್ತದೆ.

'ಭಾರತ ವ್ಯಪದೇಶೇನ ಆಮ್ನಾಯಾರ್ಥಶ್ಚದರ್ಶಿತಃ' (ಭಾ.ಸ್ಕಂ.೧-ಅ.೪) ಎಂಬ ಭಾಗವತದ ಮಾತಿನಿಂದ ವೇದಾರ್ಥದ ವಿವರಣೆಯೇ ಮಹಾಭಾರತ ಕಥಾನಕದ ಉದ್ದೇಶವೆಂದು ಸ್ಪಷ್ಟವಾಗುತ್ತದೆ. 'ಇತಿಹಾಸ ಪುರಾಣಾಭ್ಯಾಂವೇದಂ ಸಮುಪಬೃಂಹಯೇತ್' ಎಂಬ ಮಾತಿನಂತೆ ನಿಗೂಢವಾದ ವೇದಾರ್ಥವು ಮಹಾಭಾರತದಲ್ಲಿ ಜನಸಾಮಾನ್ಯರಿಗೂ ತಿಳಿಯುವಂತೆ ವರ್ಣಿತವಾಗಿದೆ. ಆದ್ದರಿಂದಲೇ ಇದನ್ನೇ ಆಕರವಾಗಿಟ್ಟುಕೊಂಡು ಭಾರತದ ನಾನಾ ಭಾಷೆಯ ಕವಿಗಳು ತಮ್ಮ ತಮ್ಮ ಅಭಿರುಚಿಗನುಗುಣವಾಗಿ ಇದರ ಕಥಾಭಾಗಗಳನ್ನೂ ಉಪಾಖ್ಯಾನಗಳನ್ನೂ ಆರಿಸಿಕೊಂಡು ತಮ್ಮ ಪ್ರತಿಭಾಶಕ್ತಿಯಿಂದ ನಾನಾ ಪ್ರಕಾರವಾದ ಸಾಹಿತ್ಯವನ್ನು ರಚಿಸಿದ್ದಾರೆ.

**ಪ್ರಕ್ಷಿಪ್ತ ವಿಚಾರಗಳು:**

ಬೃಹತ್ ಗಾತ್ರದ ಮಹಾಭಾರತ ವೇದವ್ಯಾಸರೊಬ್ಬರಿಂದ ರಚನೆಗೊಂಡಿತೋ ಅಥವಾ ಅನೇಕರಿಂದ ರಚನೆಗೊಂಡಿತೋ ಎಂಬ ಸಂದೇಹ ಮೊದಲಿಗೆ ಪಾಶ್ಚಾತ್ಯರಿಗೆ ಮೂಡಲಾರಂಭಿಸಿತ್ತೆನ್ನಬಹುದು. ಬೃಹತ್ತಿನಲ್ಲಾಗಲಿ ಮಹತ್ತಿನಲ್ಲಾಗಲಿ ಅದಕ್ಕೆ ಸರಿದೂಗುವ ಗ್ರಂಥ ಪ್ರಪಂಚದಲ್ಲೇ ಮತ್ತೊಂದಿಲ್ಲ. 'ಇಲಿಯಡ್', 'ಒಡಿಸ್ಸಿ'ಗಳಂತಹ ಪಾಶ್ಚಿಮಾತ್ಯರ ಸುಪ್ರಸಿದ್ಧ ಕಾವ್ಯಗಳೂ ಅದರಲ್ಲಿ ಬರುವ ಉಪಕಥೆಗಳಿಗೆ ಸಮಾನವಾಗುತ್ತವೆ. ಒಂದು ಲಕ್ಷ ಶ್ಲೋಕಗಳಿಂದ ಕೂಡಿದ ಅದರ ಬೃಹತ್ತನ್ನು ಗಮನಿಸಿದರೆ ಅದು 'ಇಲಿಯಡ್', 'ಒಡಿಸ್ಸಿ'ಗಳ ಒಟ್ಟು ಪ್ರಮಾಣದ ಎಂಟರಷ್ಟು, ಇಡೀ ಬೈಬಲಿನ ಮೂರೂವರೆಯಷ್ಟಾಗುತ್ತದೆ. ಇಂತಹ ಬೃಹತ್ತಾದ ಕಾವ್ಯ ಏಕವ್ಯಕ್ತಿಯೊಬ್ಬರಿಂದ ರಚಿಸಲಾಗುವುದಿಲ್ಲವೆಂಬ ತೀರ್ಮಾನಕ್ಕೆ ಬಂದ ಪಾಶ್ಚಾತ್ಯರು ಅದನ್ನು ಇದೇ ಹೆಸರಿನ ಹಲವರು ಹಿಂದೋ ಮುಂದೋ ಹುಟ್ಟಿ ಈ ಗ್ರಂಥವನ್ನು ಪರಂಪರೆಯಿಂದ ಬೃಹತ್ತಾಗಿಸಿರಬಹುದೆಂಬ ಒಂದು ವಾದವನ್ನು ಹುಟ್ಟು ಹಾಕಿದರು. ಹಾಗಾಗಿ 'ವ್ಯಾಸ' ಎಂಬುದು ಒಬ್ಬರ ಹೆಸರಲ್ಲದೆ, ಒಂದು 'ಸಮಿತಿ'ಯ ಹೆಸರಾಗಿರಬೇಕೆಂಬ ಒಂದು ಸಿದ್ಧಾಂತವೂ ಬೆಳೆಯಲಾರಂಭಿಸಿತು.

ಕೌರವ ಪಾಂಡವರ ಇತಿಹಾಸದ ಜೊತೆಗೆ ಭೃಗು ವಂಶದವರ ಚರಿತ್ರೆಯನ್ನೂ ಕೃಷ್ಣ ಮಹಾತ್ಮೆಯನ್ನೂ ಸೇರಿಸಿ ಹೆಣೆದಿರುವುದು ಮಹಾಭಾರತದ ಬೃಹತ್ ಗಾತ್ರಕ್ಕೆ ಮತ್ತೊಂದು ಪ್ರಬಲ ಕಾರಣವೆನಿಸಿದೆ. ಪ್ರಾಚೀನ ಕಾಲದಲ್ಲಿ ಇಂತಹ ಕಾವ್ಯಗಳನ್ನು ಓದಿ ಓದಿ ಒಂದು ಬಗೆಯಿಂದ ಕಂಠಪಾಠ ಮಾಡುತ್ತಿದ್ದುದರಿಂದ ಅನುಷ್ಟುಪ್ ಶ್ಲೋಕದ ಧಾಟಿ ಚೆನ್ನಾಗಿ ಹೃದ್ಗತವಾಗಿ ಶಬ್ದ ಸಂಪತ್ತಿರುತ್ತಿತ್ತು. ಕಾವ್ಯವನ್ನು ಪ್ರತಿ ಮಾಡಿಕೊಳ್ಳುತ್ತಾ ಹೋಗುವಾಗ ಇಲ್ಲೇನೋ ಕೊರತೆಯಿದೆಯೆಂದು ತೋರಿದೆಡೆ ಎರಡು ಶ್ಲೋಕಗಳಿಂದ ಆ ಕೊರತೆಯನ್ನು ತುಂಬಿ, ಇಲ್ಲಿ ವರ್ಣನೆ ಸಾಲದೆಂಬ ಕಡೆ ನಾಲ್ಕು ವರ್ಣನೆಯ ಪದ್ಯಗಳನ್ನು ರಚಿಸಿ ಮುಂದುವರಿಯುತ್ತಿದ್ದ ಪರಿಪಾಠವಿತ್ತು. ಜೊತೆಗೆ ಕಥನಕಾರರು ಕಥೆಗಳಲ್ಲಿ ಆ ಕಥೆಯನ್ನು ಹೇಳುವಾಗ ತಮಗೆ ಪ್ರಿಯವಾದ ಒಂದೊಂದು ಪಾತ್ರವನ್ನು, ಸನ್ನಿವೇಶವನ್ನು ಪ್ರಶಂಸಿಸುತ್ತಾ ಹೋಗುವಾಗ ಕಾವ್ಯವನ್ನು ಬೆಳೆಸುತ್ತಿದ್ದರೆಂದೂ ಊಹಿಸಬಹುದು.

ಮಹಾಭಾರತದಲ್ಲಿ ಪ್ರಕ್ಷಿಪ್ತ ಭಾಗಗಳು ಈ ರೀತಿ ಬೆಳೆಯುತ್ತಾ ಹೋದುದನ್ನು ಕುರಿತು ರಮೇಶ್‌ಚಂದ್ರದತ್ತರು 'ಮಹಾಭಾರತವು ಎಷ್ಟು ಜನಪ್ರಿಯವಾಯಿತ್ತೆಂದರೆ ಶತಶತಮಾನಗಳು ಕಳೆದಂತೆಲ್ಲ ಅದರ ಗಾತ್ರವೂ ಬೆಳೆಯುತ್ತಾ ಹೋಯಿತು. ಪ್ರತಿಯೊಂದು ತಲೆಮಾರಿನ ಕವಿಗಳೂ ಕಾವ್ಯದಲ್ಲಿ ಏನಾದರೊಂದನ್ನು ಸೇರಿಸುತ್ತಾ ಹೋದರು. ಉತ್ತರ ಭಾರತದ ದೂರ ದೂರದ

ರಾಷ್ಟ್ರಗಳವರೂ (ಪಾಂತ್ಯ) ಮಹಭಾರತ ಯುದ್ಧದ ಪ್ರಸಂಗದಲ್ಲಿ ತಮ್ಮ ತಮ್ಮ ರಾಷ್ಟ್ರಗಳ ಚಟುವಟಿಕೆಗಳನ್ನು ಸೇರಿಸಬಯಸಿದರು. ಪ್ರತಿಯೊಬ್ಬ ಮತ ಸ್ಥಾಪಕನೂ ತಾನು ಉಪದೇಶಿಸಿದ ತತ್ವಗಳಿಗೆ ಆಧಾರವನ್ನು ಆ ಮಹಾಕಾವ್ಯದಲ್ಲಿ ತೋರಿಸಬಯಸಿದ ಶುಷ್ಕವಾದ ಧಾರ್ಮಿಕ ಮತ್ತು ನೈತಿಕ ತತ್ವಗಳೂ ಜನಗಳಿಗೆ ಹೆಚ್ಚು ಆಕರ್ಷಣೀಯವಾಗಿ ಕಾಣುತ್ತವೆಂಬ ಕಾರಣದಿಂದ ಮಹಾಕಾವ್ಯದ ನಡುವೆ ಸೇರಿಸಲ್ಪಟ್ಟುವು. ಜನಜನಿತವಾಗಿದ್ದ ವದಂತಿಗಳು, ದಂತಕಥೆಗಳು, ಕಥೆಗಳು, ಸಂಪ್ರದಾಯಗಳು ಈ ಅದ್ಭುತ ಕಾವ್ಯದ ವಿಶಾಲ ವೃಕ್ಷಗಳ ನೆರಳಿನಲ್ಲಿ ಆಶ್ರಯ ಪಡೆದವು. ಬೌದ್ಧಧರ್ಮ ಅವನತಿಹೊಂದಿ ಭಾರತದಲ್ಲಿ ವೈಷ್ಣವ ಧರ್ಮ ತಲೆದೋರಿದಾಗ ಪ್ರಚಲಿತವಾಗಿದ್ದ ಕೃಷ್ಣಭಕ್ತಿಯೂ ಅದರಲ್ಲಿ ಸೇರಿ, ಕೃಷ್ಣ ಪಾರಮ್ಯವೇ ಅದರಲ್ಲಿ ಬರುವ ಪ್ರಮುಖ ಧಾರ್ಮಿಕಭಾವನೆಯಾಗಿ ಮಹಾಭಾರತಕ್ಕೆ ಇಂದಿನ ಸ್ವರೂಪ ಬಂತು'[೧೧] ಎಂದಿದ್ದಾರೆ.

ಎ.ಆರ್.ಕೃಷ್ಣಶಾಸ್ತ್ರಿಯವರು 'ವಚನಭಾರತ' ಗ್ರಂಥದ ಪೀಠಿಕೆಯಲ್ಲಿ '... ಸುಮಾರು ೮೦೦ ವರ್ಷಗಳ ಕಾಲ ಪ್ರಕ್ಷೇಪಗಳು ಸೇರುತ್ತಾ ಹೋಗಿ, ಈಗ್ಗೆ ಸುಮಾರು ೧೫೦೦ ವರ್ಷಗಳ ಹಿಂದೆಯೇ ಮಹಾಭಾರತ ಇಂದಿನ ಸ್ವರೂಪವನ್ನು ತಾಳಿತ್ತು' ಎಂದಿದ್ದಾರೆ. ಆದರೆ ಈಗ ಅದರ ಮೂಲಸ್ವರೂಪ ಹೇಗಿತ್ತು? ಪ್ರಕ್ಷಿಪ್ತ ಭಾಗಗಳಾವುವು? ಆ ಪ್ರಕ್ಷಿಪ್ತ ಭಾಗಗಳಿಂದ ಮೂಲ ಸಾಮಗ್ರಿಯನ್ನು ಬೇರ್ಪಡಿಸುವ ವಿಧಾನ ಹೇಗೆ ಎನ್ನುವುದನ್ನು ತಿಳಿಯುವುದೇ ತೊಡಕಾಗಿದೆ.

**ಮೂಲ ಪ್ರತಿಯ ಅನ್ವೇಷಣೆ ಹಾಗೂ ಪ್ರಕ್ಷಿಪ್ತಗಳ ವಿಶ್ಲೇಷಣೆ:**

ವೈದಿಕ ವಾಙ್ಮಯದ ವಿದ್ವಾಂಸರಾದ ಲ್ಯುಡ್‌ವಿಗ್‌ರವರು ಹೇಳುವುದು ಹೀಗೆ: 'ವಿಮರ್ಶಕರು ಸೂಕ್ಷ್ಮವಾಗಿ ಪರಿಶೀಲನೆ ನಡೆಸಿ, ಎಲ್ಲಿ ಅಸಂಬದ್ಧವಾದ ಕಥೆಯ ಕೊಂಡಿಗಳಿವೆಯೋ, ಎಲ್ಲಿ ಅತಿ ಬೇಸರ ಹುಟ್ಟಿಸುವ ಸಂಗತಿ ಬರುತ್ತದೋ, ಎಲ್ಲಿ ಹೇಳಿರುವುದು ತೀರ ಅನಗತ್ಯವೆನಿಸುತ್ತದೋ, ಎಲ್ಲಿ ವಿಷಯ ಅನವಶ್ಯಕವಾಗಿ ಪುನರಾವರ್ತಿತವಾಗಿರುತ್ತದೋ, ಎಲ್ಲಿ ಹೇಳತೊಡಗಿರುವ ವಿಷಯಕ್ಕೂ ಹೇಳಿರುವ ವಿಷಯಕ್ಕೂ ಅಸಮಂಜಸವಿದೆಯೋ ಎಂಬುದನ್ನು ಕಂಡುಕೊಂಡರೆ ಅಂತಹ ಭಾಗಗಳನ್ನು ಸಾಮಾನ್ಯವಾಗಿ ಪ್ರಕ್ಷಿಪ್ತಭಾಗಗಳೆಂದು ಗುರುತಿಸಬಹುದು. ಅಷ್ಟೇ ಅಲ್ಲದೆ ವಿಮರ್ಶಕ ಇನ್ನೂ ಮುಂದುವರಿದು ಛಂದಸ್ಸು, ಭಾಷೆ ಮತ್ತು ಶೈಲಿಗಳನ್ನು ಕೂಲಂಕಷವಾಗಿ ಪರಿಶೀಲಿಸಬೇಕಾಗುತ್ತದೆ. ಅವುಗಳಲ್ಲಿ ಇದಕ್ಕಿದ್ದಂತೆ ಬದಲಾವಣೆಗಳು ಕಂಡುಬಂದಲ್ಲಿ ಅಂತಹ ಭಾಗಗಳೂ ಸಂಶಯಕ್ಕೆಡೆಕೊಡುತ್ತವೆ. ಅಂಥವನ್ನೂ ವಿಶೇಷ ರೀತಿಯಿಂದ ಪರ್ಯಾವಲೋಚಿಸಬೇಕಾಗುತ್ತದೆ. ಈ

ತತ್ವಗಳ ಆಧಾರದ ಮೇಲೆ ಸಾಮಾನ್ಯವಾಗಿ ಒಂದು ಕಾವ್ಯವನ್ನು ವಿಂಗಡಿಸಿ ವಿಶ್ಲೇಷಣೆ ಮಾಡಿ ಮೂಲಭಾಗವಾವುದು, ಪ್ರಕ್ಷಿಪ್ತ ಭಾಗವಾವುದು ಎಂದು ನಿರ್ದೇಶಿಸಬಹುದು. ಅನೇಕ ವಿಮರ್ಶಕರು ಶ್ರಮವಹಿಸಿ ಮಹಾಭಾರತದಲ್ಲಿ ಪ್ರಕ್ಷಿಪ್ತ ಭಾಗಗಳನ್ನು ಬೇರ್ಪಡಿಸಲು ಯತ್ನಿಸಿದ್ದಾರೆ. ಆದರೆ ಮಹಾಭಾರತದ ವಿಷಯದಲ್ಲಿ ಪ್ರಕ್ಷಿಪ್ತ ಭಾಗಗಳ ಸಮಸ್ಯೆ ಎಷ್ಟು ಜಟಿಲವಾಗಿದೆಯೆಂದರೆ, ಸಮ್ಮಿಶ್ರವಲ್ಲದ ಮೂಲಕಾವ್ಯ ಇದೇ ಎಂದು ಕಂಡುಹಿಡಿಯುವುದಕ್ಕೆ ಸಾಧ್ಯವಿಲ್ಲ'[೧೨] ಹೆಚ್ಚು ಹೆಚ್ಚು ಆಳವಾಗಿ ವಿಶ್ಲೇಷಣೆ ಮಾಡುತ್ತಾ ಹೋದಂತೆಲ್ಲ ಒಂದೇ ಮೂಲವೆನಿಸದೆ ಹಲವಾರು ಮೂಲಗಳಿರುವಂತೆ ತೋರುತ್ತದೆ.

ಪುಣೆಯ ಭಂಡಾರ್ಕರ್ ಪ್ರಾಚ್ಯಸಂಶೋಧನ ಸಂಸ್ಥೆಯು ಕಾಶ್ಮೀರದಿಂದ ಕನ್ಯಾಕುಮಾರಿಯವರಗೆ, ಮುಂಬಯಿಯಿಂದ ಕೋಲ್ಕತ್ತವರೆಗೆ ಕ್ಷೇತ್ರ ಕಾರ್ಯ ನಡೆಸಿ ಮಹಾಭಾರತದ ಹಸ್ತಪ್ರತಿಗಳನ್ನು ಸಂಗ್ರಹಿಸಿ, ವಿಶ್ಲೇಷಿಸಿ ಒಂದೊಂದು ಭಾಗವಾಗಿ ಪ್ರಕಟಿಸಿದೆ. ಅದರಿಂದ ಫಲಿತವಾಗುವ ಅಂಶವೆನೆಂದರೆ, ಮಹಾಭಾರತದಲ್ಲಿ ಔತ್ತರೇಯ ಮತ್ತು ದಾಕ್ಷಿಣಾತ್ಯ ಎಂಬ ಎರಡು ಪ್ರಾಂತಭೇದಗಳಿವೆ. ಅಲ್ಲದೆ ಒಂದೇ ಪ್ರಾಂತ್ಯದ ನಾನಾ ಪ್ರತಿಗಳಲ್ಲೂ ಪರಸ್ಪರ ವ್ಯತ್ಯಾಸಗಳಿವೆ. ಇದಕ್ಕೆ ಕಾರಣ ಮಹಾಭಾರತವು ಮೊದಲಿನಿಂದಲೂ ಅಮೂರ್ತರೂಪದಲ್ಲಿರುವುದೇ ಆಗಿದೆ.[೧೩]

ಔತ್ತರೇಯ ವಿಭಾಗದ ಕಾಶ್ಮೀರದಲ್ಲಿ ದೊರೆಯುವ ಪಾಠ ನಿರ್ವಿವಾದವಾಗಿ ವಿಶ್ವಾಸಕ್ಕೆ ಅರ್ಹವಾದದು; ಹಾಗಿಯೇ ದಾಕ್ಷಿಣಾತ್ಯ ವಿಭಾಗದಲ್ಲಿ ಕೇರಳದ ಪಾಠ ಹೆಚ್ಚು ವಿಶ್ವಾಸಕ್ಕೆ ಅರ್ಹವಾದುದ್ದಾಗಿದೆ. ಔತ್ತರೇಯ ವಿಭಾಗಕ್ಕೆ ಶಾರದಾ ಅಥವಾ ಕಾಶ್ಮೀರಿ, ನೇಪಾಳಿ, ಮೈಥಿಲಿ, ಬಂಗಾಳಿ ಮತ್ತು ದೇವನಾಗರೀ ಆವೃತ್ತಗಳು ಸೇರುತ್ತವೆ.[೧೪] ಔತ್ತರೇಯ ಪಾಠದಲ್ಲಿ ಸತ್ಯವತಿಯ ತಂದೆ ಯಮುನಾ ನದಿಯ ತೀರದಲ್ಲಿ ಮೀನು ಹಿಡಿದು ಜೀವಿಸುತ್ತಿದ್ದ ಅನಾಮಧೇಯ ರಾಜನಾಗಿದ್ದರೆ, ದಾಕ್ಷಿಣಾತ್ಯ ಪಾಠದಲ್ಲಿ ಉಚ್ಚೈಶ್ರವಸ್ ಎಂಬ ಹೆಸರಿನ ಗಣ್ಯವ್ಯಕ್ತಿಯಾಗಿದ್ದಾನೆ. ಔತ್ತರೇಯ ಪಾಠದಲ್ಲಿ ಪಾಂಡು ಶತಶೃಂಗ ಪರ್ವತದಲ್ಲಿದ್ದಾಗ, ಯುಧಿಷ್ಠಿರಾದಿ ಐವರು ಮಕ್ಕಳು ಜನಿಸಿದ ಸಂದರ್ಭದಲ್ಲಿ ಯಾದವರು ಅಲ್ಲಿಗೆ ತಮ್ಮ ಪುರೋಹಿತನನ್ನು ಕಳಿಸಿಕೊಡುವ ಪ್ರಸಂಗವೇ ಇಲ್ಲ. ಆದರೆ ದಾಕ್ಷಿಣಾತ್ಯ ಪಾಠದಲ್ಲಿ ಕಾಶ್ಯಪ ಎಂಬ ಪುರೋಹಿತನನ್ನು ಕಳಿಸಿ ಯುಧಿಷ್ಠಿರಾದಿಗಳಿಗೆ ಜಾತಕರ್ಮವೇ ಮೊದಲಾದ ಸಂಸ್ಕಾರಗಳನ್ನು ನಡೆಸುತ್ತಾನೆ. ಪಾಂಡುವಿನ ಮರಣದ ಅನಂತರ ಕುಂತಿಯೊಡನೆ ಮಕ್ಕಳು ಧೃತರಾಷ್ಟ್ರನ ಆಸ್ಥಾನಕ್ಕೆ ಬಂದಾಗ ಯುಧಿಷ್ಠಿರನಿಗೆ ೧೬ ವರ್ಷ, ಭೀಮನಿಗೆ ೧೫ ವರ್ಷ, ಅರ್ಜುನನಿಗೆ ೧೪ ವರ್ಷ, ನಕುಲ ಸಹದೇವರಿಗೆ ೧೩ ವರ್ಷ ಎನ್ನುವ, ಕೌರವನ ಆಸ್ಥಾನದಲ್ಲಿ, ಅರಗಿನ ಅರಮನೆಯಲ್ಲಿ, ಏಕಚಕ್ರನಗರದಲ್ಲಿ, ಪಾಂಚಾಲನಾಸ್ಥಾನದಲ್ಲಿ, ಮತ್ತೆ ಕೌರವನ ಬಳಿ, ಇಂದ್ರಪ್ರಸ್ಥದಲ್ಲಿ

ಪಾಂಡವರು ಎಷ್ಟೆಷ್ಟು ದಿನಗಳಿದ್ದರೆನ್ನುವ, ಯುಧಿಷ್ಠಿರ ಪಕ್ವವಾದ ೧೦೮ನೇ ವರ್ಷದಲ್ಲಿ ಸತ್ತನೆನ್ನುವ, ಅರ್ಜುನ ಕೃಷ್ಣನಿಗಿಂತ ಮೂರು ತಿಂಗಳಷ್ಟು ಚಿಕ್ಕವನೆನ್ನುವ ಸೂಕ್ಷ್ಮ ವಿವರಗಳೂ ಅಂಕಿ ಅಂಶಗಳೂ ದಾಕ್ಷಿಣಾತ್ಯ ಪಾಠದಲ್ಲಿ ದೊರೆಯುತ್ತವೆ.

ಔತ್ತರೇಯ ಪಾಠದ ಅನೇಕ ಕಡೆಗಳಲ್ಲಿ ಬರುವ ಕಥೆ ಕೇವಲ ಇತಿವೃತ್ತದಂತೆ ಜಾಳಾಗಿ ಬಂದರೆ, ದಾಕ್ಷಿಣಾತ್ಯ ಪಾಠದಲ್ಲಿ ವಿಶದವಾಗಿಯೂ ಅಲಂಕಾರಾತಿಶಯದಿಂದ ಕೂಡಿಯೂ ಬರುತ್ತದೆ. ಶಾಕುಂತಲೋಪಾಖ್ಯಾನ, ಅಂಬೆಯಕಥೆ, ಪಾಂಡುವಿನ ಮರಣ ಮತ್ತು ಆ ಸಂದರ್ಭದಲ್ಲಿ ಎಲ್ಲರಿಂದ ನಡೆವ ಭಾಷಣಗಳು, ದ್ರುಪದನನ್ನು ಹಿಡಿದು ತರುವಾಗ ಕೌರವ ಪಾಂಚಾಲರ ನಡುವೆ ನಡೆವ ಯುದ್ಧ, ದ್ರೌಪದಿ ದೃಷ್ಟದ್ಯುಮ್ನರ ಜನನ ವೃತ್ತಾಂತ ಮುಂತಾದ ಅನೇಕ ಪ್ರಸಂಗಗಳು ನೂರಾರು ಸಾಲುಗಳಷ್ಟು ವಿಸ್ತಾರಗೊಂಡಿವೆ. ಮುಂದೆ ಎಲ್ಲೋ ನಡೆಯುವ ಘಟನೆಗೆ ಹಿನ್ನಲೆಯ ರೂಪದ ಕಥೆಗಳು– ನಾರಾಯಣಿಯ ಕಥೆ, ಭೌಮಾಶ್ವಿಯಕಥೆ, ಐವರು ಇಂದ್ರರ ಕಥೆ ಇಂಥವು ಸೃಷ್ಟಿಯಾಗಿವೆ. ಭರತನ ಜನನ, ಪುರುವಿನ ಜನನ, ಅಭಿಮನ್ಯುವಿನ ಜನನಗಳು ನ್ಯಾಯಾಬಾಹಿರವೆನಿಸದಿರಲೆಂದು ದಾಕ್ಷಿಣಾತ್ಯ ಪಾಠದಲ್ಲಿ ದುಷ್ಯಂತ–ಶಕುಂತಲೆಯರಿಗೆ, ಯಯಾತಿ–ಶರ್ಮಿಷ್ಠೆಯರಿಗೆ ಮತ್ತು ಅರ್ಜುನ–ಸುಭದ್ರೆಯರಿಗೆ ರಹಸ್ಯವಾಗಿ ಮೊದಲೇ ವಿವಾಹ ಜರುಗುತ್ತದೆ. ಕೆಲವು ಘಟನೆಗಳ, ಯುದ್ಧಗಳ ಪುನರುಕ್ತಿ ಕಂಡು ಬರುತ್ತದೆ.

ಹೀಗೆ ದಾಕ್ಷಿಣಾತ್ಯ ಪಾಠದಲ್ಲಿ ಮೂಲದಲ್ಲಿದ್ದುದನ್ನು ವಿಸ್ತಾರಗೊಳಿಸುವ ಕೈವಾಡ ಕಂಡುಬರುತ್ತದೆ. ಕಾಶ್ಮೀರದ ಶಾರದಾ ಪ್ರತಿಯಂತೆ ಆದಿಪರ್ವ ೭೯೮೪ ಶ್ಲೋಕಗಳಿಂದ ಕೂಡಿದ್ದರೆ ಸಿ.ಎ.ವೈದ್ಯರ ಪ್ರತಿಯಲ್ಲಿ ೮೪೬೬ ಶ್ಲೋಕಗಳೂ, ಲೆಲೆಯವರ ಪ್ರತಿಯಲ್ಲಿ ೮೬೨೧ ಶ್ಲೋಕಗಳೂ, ಪಿ.ಪಿಎಸ್.ಶಾಸ್ತ್ರಿಗಳಿಂದ ಸಂಪಾದಿಸಲ್ಪಟ್ಟ ಪ್ರತಿಯಲ್ಲಿ ೯೯೮೪ ಶ್ಲೋಕಗಳೂ ಕುಂಭಕೋಣದ ಪ್ರತಿಯಲ್ಲಿ ೧೦,೮೮೯ ಶ್ಲೋಕಗಳೂ ಇವೆ. ಗ್ರಂಥದ ಯಾವ ಭಾಗದಲ್ಲಿ ಇಂತಹ ಕೈವಾಡ ಕಾಣುವುದಿಲ್ಲವೋ ಅಂತಹ ಭಾಗವನ್ನು ನಿರ್ದಿಷ್ಟವಾದುದೆಂದೂ ಅಭಾದಿತವಾದುದೆಂದೂ ಔತ್ತರೇಯ ಪಾಠಕ್ಕಿಂತ ಹೆಚ್ಚು ಪ್ರಾಚೀನವಾದುದೆಂದೂ ಪರಿಗಣಿಸಬಹುದು.

ಆದರೆ ಔತ್ತರೇಯ ಮತ್ತು ದಾಕ್ಷಿಣಾತ್ಯ ಪಾಠಗಳಲ್ಲಿ ಅಸಂಖ್ಯಾತ ವ್ಯತ್ಯಾಸಗಳಿದ್ದು ಅವುಗಳನ್ನು ಗುರುತಿಸುವ ಪ್ರಯತ್ನ ಅಪೂರ್ಣವಾಗಿದೆ. ಹಾಗೆಯೇ ಔತ್ತರೇಯ ಪಾಠದಲ್ಲೂ ಪ್ರಕ್ಷಿಪ್ತಭಾಗಗಳಲ್ಲಿದಿಲ್ಲ.

ದಾಕ್ಷಿಣಾತ್ಯ ಪಾಠದಲ್ಲಿಲ್ಲದ ಹಲಕೆಲವು ಹೊಸ ಸಂಗತಿಗಳು ಅಲ್ಲೂ ನುಸುಳಿಕೊಂಡಿವೆ. ಶ್ವೇತಕಿ ಯಜ್ಞ ಮಾಡುವ ಪ್ರಸಂಗವನ್ನು ನೋಡಬಹುದು.

ದಕ್ಷಿಣ ಪ್ರಾಂತ್ಯದ ಕನ್ನಡ ಕವಿಗಳಾದ ಪಂಪ, ನಾರಣಪ್ಪನವರಿಗೆ ದಾಕ್ಷಿಣಾತ್ಯ ಪಾಠವೇ ಆಕರವಾಗಿರುವುದು ಸಹಜವೇ ಆಗಿದೆ. ಆದರೆ ನಿರ್ದಿಷ್ಟವಾಗಿ ಅವರಿಗೆ ದೊರೆತಿದ್ದ ಮೂಲ ಸ್ವರೂಪ ಹೇಗಿತ್ತೆಂಬುದನ್ನು ಹೇಳುವುದು ಕಷ್ಟ. ಹನ್ನೊಂದನೆಯ ಶತಮಾನದಲ್ಲಿದ್ದ ದಾಕ್ಷಿಣಾತ್ಯ ಪಾಠದ ಸ್ವರೂಪ ಹೇಗಿತ್ತೆನ್ನುವುದನ್ನು ತಿಳಿಯಲು ಪೂರ್ವ ಚಾಳುಕ್ಯರಾಜ ವಿಷ್ಣುವರ್ಧನನ (೧೦೨೨-೬೬) ಆಸ್ಥಾನದಲ್ಲಿ ಕವಿಯಾಗಿದ್ದ ನನ್ನಯ್ಯಭಟ್ಟನು ರಚಿಸಿದ 'ಆಂಧ್ರ ಭಾರತಮು'[೧೫] ಬಹಳ ಸಾಧಕವಾಗಿದೆ. 'ಆಂಧ್ರ ಭಾರತಮು' ಮೂಲಭಾರತದ ಸಂಕ್ಷಿಪ್ತರೂಪವೇ ಎನ್ನುಬಹುದು. ಅದರಲ್ಲೂ ನನ್ನಯ್ಯಭಟ್ಟ ತನ್ನ ಕಾವ್ಯದಲ್ಲಿ 'ಪರ್ವಸಂಗ್ರಹ'ದ ಭಾಗವನ್ನು ತದ್ವತ್ತಾಗಿ ಇಳಿಸಿ, ಮಹಾಭಾರತದ ಪ್ರತಿಯೊಂದು ಪರ್ವದಲ್ಲಿರುವ ಶ್ಲೋಕಗಳ ಸಂಖ್ಯೆಯನ್ನೂ ಕೊಡುವುದರಿಂದ ಅದು ಹೆಚ್ಚು ವಿಶ್ವಸನೀಯವಾಗಿದೆ ಎನ್ನಬಹುದು. ಜೊತೆಗೆ ಕವಿಯ ಸ್ವತಂತ್ರ ಪ್ರವೃತ್ತಿಗೆ ವಿಶೇಷ ಎಡೆಕೊಡದೆ ಮೂಲವನ್ನೇ ನಿಕಟವಾಗಿ ಅವಲಂಬಿಸಿರುವುದನ್ನು ಕಾಣಬಹುದು.

ಎ.ಆರ್.ಕೃಷ್ಣಶಾಸ್ತ್ರೀ ಅವರು 'ವಚನಭಾರತ'ದ ಎರಡನೆಯ ಮುದ್ರಣದ ಪೀಠಿಕೆಯಲ್ಲಿ ನಾರಾಣಪ್ಪನ ಕಾವ್ಯಕ್ಕೆ ಮೂಲವಾಗಿದ್ದ ಸಂಸ್ಕೃತ ಭಾರತ ಪಾಠವಾವುದು, ಅವನ ಕಾಲಕ್ಕೆ ಅದರ ಸ್ವರೂಪ ಹೇಗಿತ್ತು ಎಂಬ ವಿಷಯವನ್ನು ಕುರಿತು ನಾರಾಣಪ್ಪನ ಕನ್ನಡ ಭಾರತವು, ಕ್ಷೇಮೇಂದ್ರನ ಮಂಜರಿಯಂತೆ, ಶಲ್ಯಪರ್ವಗದಾಪರ್ವ ವಿಭಾಗವನ್ನು ಇಟ್ಟುಕೊಂಡಿದೆ (ಅಲ್ಬೇರೂನಿಯಾ ತನ್ನ 'ಇಂಡಿಕ' ಗ್ರಂಥದಲ್ಲಿ ಗದಾಪರ್ವವನ್ನು ಹೇಳುತ್ತಾನೆ). 'ಶಲ್ಯನವಸಾನದಲ್ಲಿ ಕೌರವಮಲ್ಲ ದಳಪತಿ'ಯಾಗುತ್ತಾನೆ (ಇದಕ್ಕೆ ಪಾಠಾಂತರವೂ ಇದೆ). ಗದಾಪರ್ವದ ಕಥೆಯು ದುರ್ಯೋಧನನ ಸಾವಿನಲ್ಲಿಯೇ ನಿಲ್ಲದೆ ಶಾಂತಿ ಪರ್ವದಲ್ಲಿ ಧರ್ಮರಾಜನ ಪಟ್ಟಾಭಿಷೇಕದವರೆಗೂ ಹೋಗುತ್ತದೆ. ಅನುಶಾಸನಪರ್ವವನ್ನು ಪ್ರತ್ಯೇಕವಾಗಿ ಎಣಿಸಿದಂತಿಲ್ಲ (ಅಲ್ಬೇರೂನಿಯೂ ಅನುಶಾಸನ ಪರ್ವವನ್ನು ಹೇಳುವುದಿಲ್ಲ). ಅಶ್ವಮೇಧಾದಿ ಮುಂದಿನ ಆರು ಪರ್ವಗಳ ಪ್ರಸ್ತಾಪವೇ ಇಲ್ಲ. ಮೌಸಲಪರ್ವ ಸೂಚಕವಾಗಿ ಗಾಂಧಾರಿಯು ಕೃಷ್ಣನಿಗೆ ಕೊಟ್ಟ ಶಾಪವಿಲ್ಲ. ಒಂದೆರಡು ಹಸ್ತಪ್ರತಿಗಳಲ್ಲಿ ಈಚೆಗೆ ಸೇರಿದೆ; ಇವುಗಳನ್ನು ನಾರಾಯಣಪ್ಪನು ಬೇಕೆಂದು ಬಿಟ್ಟಿರಲಾರನು. ವಿಘ್ನ ಬಂದು ಗ್ರಂಥ ಅಷ್ಟಕ್ಕೆ ನಿಂತು ಹೋಯಿತು ಎಂದೂ ಹೇಳುವಂತಿಲ್ಲ; ಏಕೆಂದರೆ ಕೃಷ್ಣನು ಕೃತಕೃತ್ಯನಾಗಿ ತಮ್ಮೂರಿಗೆ ಹೊರಟು ಹೋದನೆಂದೂ ಸರ್ಪಯಾಗದ ಕರ್ಮ ಹರಿಯಿತ್ತೆಂದೂ ಹೇಳಿ ಗ್ರಂಥ ಮುಗಿಯುತ್ತದೆ. ಮೂಲ

ಸಂಸ್ಕೃತ ಭಾರತದಲ್ಲಿ ಇದ್ದದ್ದು ಮೊದಲ ಹನ್ನೊಂದು ಪರ್ವಗಳೇ ಎಂಬ ಅಭಿಪ್ರಾಯವೂ ಇದೆ (ವೆಂಕಟಾಚಲಂ ಅಯ್ಯರ್, ಪುಟ ೮೪). ಆದ್ದರಿಂದ ಕುಮಾರವ್ಯಾಸನ ಗ್ರಂಥಕ್ಕೆ ಮೂಲವಾಗಿದ್ದ ಸಂಸ್ಕೃತ ಭಾರತ ಪಾಠಯಾವುದು? ಅದರ ಸ್ವರೂಪ ಅವನ ಕಾಲಕ್ಕೆ ಹೇಗಿತ್ತು? ಎಂಬ ವಿಷಯ ವಿಚಾರಯೋಗ್ಯವಾಗಿದೆ.

'... ಹೀಗೆ ಕುಮಾರವ್ಯಾಸನು ಆದಿಪರ್ವದಲ್ಲಿ ಶಂತನುವರೆಗಿನ ಪೀಠಿಕಾಭಾಗವನ್ನು ಇಪ್ಪತ್ತು ಪದ್ಯಗಳಲ್ಲಿ ಮುಗಿಸಿದ್ದಾನೆ. ಇದಕ್ಕೆ ಏನು ಕಾರಣ? ಮೂಲವಿದ್ದದ್ದೇ ಸ್ವಲ್ಪವೇ? ಇಲ್ಲಿ, ಅವನು ಇಷ್ಟೊಂದು ಸಂಗ್ರಹ ಮಾಡಿದನ್ನೂ ಅಲ್ಬೇರೂನಿಯ ಭಾರತದಲ್ಲಿ ಆದಿಪರ್ವವನ್ನೇ ಹೇಳುವುದಿಲ್ಲ. ಅದರ ಬಹುಭಾಗ ಈಚಿನದಾಗಿರಬೇಕು. ನಾರಣಪ್ಪ ಮೂರು ಮಂಗಳಗಳಲ್ಲಿ ಸೂತಪುರಾಣಿಕನ ಮಂಗಳವನ್ನು ಮಾತ್ರ ಹೇಳುತ್ತಾನೆ. ಪರ್ವಸಂಗ್ರಹ ವಿಚಾರವನ್ನೇ ಎತ್ತುವುದಿಲ್ಲ. ಅಂಬೆಯು ಸಾಲ್ವನನ್ನು ವರಿಸಿದ್ದಳೆಂದು ಹೇಳುವುದಿಲ್ಲ. 'ದುಷ್ಯಂತ' ಎಂಬ ಪ್ರಾಚೀನ ರೂಪವನ್ನು ಬಳಸುತ್ತಾನೆ. ವ್ಯಾಸನು ಅಂಬಿಕೆ, ಅಂಬಾಲಿಕೆಯರನ್ನು ಕಂಡ ಸಂದರ್ಭವನ್ನು ಸ್ವಲ್ಪ ವ್ಯತ್ಯಾಸವಾಗಿ ಹೇಳುತ್ತಾನೆ. ಜನಮೇಜಯನು ಭಾರತವನ್ನು ಕೇಳಿದ್ದು ಸರ್ಪಯಾಗವನ್ನು ಮಾಡಿದ್ದರಿಂದ ಬಂದ ಪಾಪವನ್ನು ಕಳೆದುಕೊಳ್ಳುವುದಕ್ಕೆ'[೧೬] ಎಂಬುದನ್ನು ಗಮನಿಸಿದರೆ ಅಂದಿನ ಮೂಲ ಭಾರತ ಇಂದಿನಂತೆ ವಿಸ್ತಾರವಾದುದಾಗಿರಲಿಲ್ಲವೆಂದು ತಿಳಿಯುತ್ತದೆ. ಪರ್ವಗಳ ಗಣನೆಗೆ ಹೋಗದೆ, ತನಗೆ ಬೇಕಾದ ಮುಖ್ಯ ಘಟನೆಗಳನ್ನು ಮಾತ್ರ ಆಯ್ದುಕೊಂಡು ನಿರೂಪಿಸಿ ಹೋದ ಪಂಪ, ಸ್ವೇಚ್ಛೆಯಾಗಿ ಉಳಿದ ವಿವರಗಳನ್ನು ಬಿಟ್ಟಿರಬಹುದೆಂದು ವಾದಿಸಬಹುದಾದರೂ ಅವನ ಕಾಲಕ್ಕೂ ಮಹಾಭಾರತ ಇಂದಿನಷ್ಟು ವಿಸ್ತಾರವಾಗಿರಲು ಸಾಧ್ಯವಿಲ್ಲ. ಪಂಪ ಹಾಗೂ ನಾರಣಪ್ಪನಿಗೂ ದೊರೆತ ಮೂಲ ಪಾಠ ಸ್ವಲ್ಪ ಹೆಚ್ಚುಕಡಿಮೆ ಒಂದೇ ರೀತಿಯದಾಗಿರಬಹುದೆಂದು ಇವರ ಕಥಾಧಾರೆಯನ್ನೂ ಹೋಲಿಸಿ ನೋಡಿದರೆ ಮನದಟ್ಟಾಗದೇ ಇರದು. ಇವರಿಬ್ಬರ ನಡುವೆ ಬಂದ ನನ್ನಯ್ಯಭಟ್ಟನ ಮೂಲವೂ ಅದೇ ಆಗಿರಬೇಕು. ಎ.ಆರ್.ಕೃಷ್ಣಶಾಸ್ತ್ರೀಯವರು ಹೇಳುವ 'ತೆಲಗು ಭಾರತದ ಮೊದಲ ಭಾಗವನ್ನು ಬರೆದ ನನ್ನಯ್ಯಭಟ್ಟನಿಗೆ ಆಧಾರವಾಗಿದ್ದ ಸಂಸ್ಕೃತ ಭಾರತ ಇಂದಿನ ಭಾರತದಂತೆಯೇ ಇರಲಿಲ್ಲ ಎಂದು ಊಹಿಸಲು ಕಾರಣವಿದೆ' ಎಂಬ ಮಾತು ಅದಕ್ಕೆ ಸಮರ್ಥಿಸುವಂತಿದೆ.

ಪ್ರಸ್ತುತದ ಅಧ್ಯಯನದಲ್ಲಿ ಪಂಪ-ನಾರಣಪ್ಪರಲ್ಲಿ ಬರುವ ಪಾಠಾಂತರಗಳನ್ನು ಪರೀಶೀಲಿಸುವಾಗ ಸಂಸ್ಕೃತ ಮಹಾಭಾರತದ ವಿಸ್ತೃತ ದಾಕ್ಷಿಣಾತ್ಯ ಪಾಠವನ್ನೇ ಆಧಾರವಾಗಿ ಸ್ವೀಕರಿಸಲಾಗಿದೆ. ಮಹಾಭಾರತ ಕಥೆ ವಿಸ್ತಾರವಾಗಿರುವುದರಿಂದ ಪಂಪ, ನಾರಣಪ್ಪರಿಬ್ಬರಿಗೂ ಕಥಾ

ವಸ್ತುವಿನಲ್ಲಿ ಮಾಡಿಕೊಂಡಿರುವ ವ್ಯತ್ಯಾಸಗಳನ್ನು ಸೂಕ್ಷ್ಮವಾಗಿ ಗುರುತಿಸುವುದಕೋಸ್ಕರವಾಗಿ ಕಥೆಯ ವ್ಯಾಪ್ತಿಯನ್ನು ಉದ್ಯೋಗಪರ್ವವರೆಗೆ ಮಾತ್ರ ಮಿತಿಗೊಳಿಸಲಾಗಿದೆ.

**ಜನಪದ ಮಹಾಭಾರತ ರೂಪುಗೊಂಡ ಬಗೆ**

ಭಾರತೀಯ ಮಹಾಕಾವ್ಯಗಳ ಮಾಲಿಕೆಯಲ್ಲಿ ಶ್ರೇಷ್ಠವೆನಿಸಿರುವ ಮಹಾಭಾರತ ಜನಸಾಮಾನ್ಯರ ಜೀವನದ ಮೇಲೆ ತನ್ನದೇ ಆದ ಪ್ರಭಾವವನ್ನು ಬೀರುತ್ತಾ ಬಂದಿದೆ. ಇದು ಆಯಾ ಸಮಕಾಲೀನ ಸಂದರ್ಭಕ್ಕೆ ಅನುಗುಣವಾಗಿ ಮಾರ್ಪಾಡಾಗುತ್ತಾ ಜನಪದರ ನಾಲಿಗೆಯ ಮೂಲಕ ಬರುತ್ತಿದ್ದು ವಿಭಿನ್ನ ನಂಬಿಕೆ, ಸಂಪ್ರದಾಯ, ಆಚರಣೆಗಳಲ್ಲಿ ಪ್ರವಹಿಸುತ್ತಾ ಬರುತ್ತಿದೆ. ಜನಪದರು ತಮ್ಮ ಪರಿಸರ ಹಾಗೂ ಮನೋಭಿಲಾಷೆಗನುಗುಣವಾಗಿ ತಮ್ಮ ನೋವು–ನಲಿವುಗಳನ್ನು, ಇಷ್ಟಾನಿಷ್ಟಗಳನ್ನು ಮಹಾಭಾರತದೊಂದಿಗೆ ಸೇರಿಸಿಕೊಂಡಿದ್ದಾರೆ. ಹೀಗೆ ಜನಪದರ ನಾಲಿಗೆಯಲ್ಲಿ ಅವರ ಆಶಯಕ್ಕನುಗುಣವಾಗಿ ಪರಿಷ್ಕಾರಗೊಂಡು ಜನಪದ ಮಹಾಭಾರತ ಮಹತ್ತಿನಲ್ಲಿ ಹಾಗೂ ಬೃಹತ್ತಿನಲ್ಲಿ ಮಹಾಕಾವ್ಯವಾಗಿ ರೂಪುಗೊಂಡಿದೆ.

ರಾಮಾಯಣ ಮಹಾಭಾರತಗಳು ಅವುಗಳ ಕರ್ತೃಗಳನ್ನು ಮರೆಸುವಷ್ಟರ ಮಟ್ಟಿಗೆ ಬೆಳೆದಿವೆಯಾದರೂ ಜನಸಾಮಾನ್ಯರಿಗೆ ವಾಲ್ಮೀಕಿ, ವ್ಯಾಸರು ಗೊತ್ತಿಲ್ಲದಿದ್ದರೂ ಅವರ ಕಥೆಗಳು ತಿಳಿದಿವೆಯೆಂಬುದು ಒಂದು ವಾದವಾದರೆ, ಜನಪದ ಮೂಲದಿಂದಲೇ ಶಿಷ್ಟಕವಿಗಳು ಕಥಾವಸ್ತುಗಳನ್ನು ಪಡೆದುಕೊಂಡು ತಮ್ಮ ಬುದ್ದಿ ಸಾಮಾರ್ಥ್ಯ, ಪ್ರತಿಭಾಶಕ್ತಿ ಮನೋಧರ್ಮಗಳಿಗೆ ತಕ್ಕಂತೆ ಒಂದು ಸ್ಪಷ್ಟ ರೂಪವನ್ನು ಕೊಟ್ಟಿದ್ದಾರೆನ್ನುವುದು ಇನ್ನೊಂದು ವಾದ. ಈ ಎರಡೂ ವಾದಗಳು ಪರಸ್ಪರ ಪೂರಕವಾಗಿದ್ದು, ಎರಡನ್ನು ಸುಲಭವಾಗಿ ತಳ್ಳಿಹಾಕುವಂತಿಲ್ಲ. ಅಲ್ಲದೆ ಜನಪದ ಮತ್ತು ಶಿಷ್ಟಸಾಹಿತ್ಯಗಳು ಪರಸ್ಪರ ಸ್ಪರ್ಶಿಸುವಂತೆಯೇ ಘರ್ಷಿಸುತ್ತಿರುತ್ತವೆ. ಈ ಸ್ಪರ್ಶಘರ್ಷಗಳ ಪರಸ್ಪರ ಕೊಳುಕೊಡೆಯಿಂದಾಗಿ ಎರಡು ಪ್ರಕಾರಗಳೂ ನಿರಂತರವಾಗಿ ಬೆಳೆಯುತ್ತಿವೆ. ಈ ಕಾರಣದಿಂದಲೇ ಲಿಖಿತರೂಪಕ್ಕಿಳಿದ ಮೇಲೂ ರಾಮಾಯಣ ಮಹಾಭಾರತಗಳು ಪ್ರಕ್ಷೇಪಗಳಿಂದ ಬೆಳೆಯುತ್ತ ವಿಕಾಸಶೀಲ ಮಹಾಕಾವ್ಯಗಳು ಎಂಬ ಪ್ರಕಾರಕ್ಕೆ ಸೇರ್ಪಡೆಯಾಗಿವೆ.

ಜನಪದ ಮಹಾಕಾವ್ಯಗಳು ಚೆಲ್ಲಾಪಿಲ್ಲಿಯಾಗಿರುವುದನ್ನು ಗುರುತಿಸಿ ಇವುಗಳ ಒಂದು ಸುಸಂಬದ್ಧರೂಪದಲ್ಲಿ ಉಳಿಯಬೇಕೆಂದು ಶ್ರಮಿಸಿದ ಒಂದು ಪರಂಪರೆಯನ್ನು ಸಂಸ್ಕೃತದಲ್ಲಿ 'ವ್ಯಾಸಪರಂಪರೆ' ಎಂದು ಕರೆಯುವುದನ್ನು ಗಮನಿಸಿದರೆ ಕಂಠಸ್ಥ ಸಂಪ್ರದಾಯದಲ್ಲಿ ಹಾಡಲಾಗುತ್ತಿದ್ದ ಮಹಾಭಾರತದ ಕಥೆ, ಅಷ್ಟಾದಶ ಮಹಾಪುರಾಣಗಳು, ಅಷ್ಟಾದಶ ಉಪಪುರಾಣಗಳು, ನೂರಾರು ಉಪಪುರಾಣಗಳನ್ನೆಲ್ಲ ಸಂಗ್ರಹಿಸಿ ಸಂಪಾದಿಸಿದ ವ್ಯಾಸರು ಸಂಸ್ಕೃತ ಜನಪದದ ಮೊದಲ ಸಂಗ್ರಹಕಾರರೆನಿಸುತ್ತಾರೆ. ಅಂದಿನಿಂದ ತಲೆಮಾರಿನಿಂದ ತಲೆಮಾರಿಗೆ ಸಾಗಿಬರುತ್ತಿರುವ ಈ ಕಥಾಸಾಮಗ್ರಿ ಆಗಾಗ ಹಿಗ್ಗುತ್ತ, ಕುಗ್ಗುತ್ತ ಕೆಲವೊಮ್ಮೆ ಸ್ಮೃತಿಯಿಂದ ಜಾರಿಹೋದ ಭಾಗಗಳಿಗೆ ಬದಲಾಗಿ ಪುನರ್‌ಸೃಷ್ಟಿಗೊಳ್ಳುತ್ತಾ ಅಂತೆಯೇ ವ್ಯಕ್ತಿಯಿಂದ ವ್ಯಕ್ತಿಗೆ, ಊರಿನಿಂದ ಊರಿಗೆ, ಭಾಷೆಯಿಂದ ಭಾಷೆಗೆ ಅನೇಕ ಪಾಠಾಂತರಗಳನ್ನು ಹೊಂದುತ್ತಾ ಹೋಗಿ ಕಥೆಯಾಗುತ್ತದೆ. ಶಿಷ್ಟ ಕವಿಗಳ ವೈದಿಕ, ಬೌದ್ಧ, ಜೈನ ಸಂಪ್ರದಾಯಗಳಲ್ಲೇ ಅನೇಕ ಬಗೆಯ ಕಥಾಭೇದಗಳನ್ನು ಹೇಳುವ ರಾಮಾಯಣ ಮಹಾಭಾರತಗಳಿವೆ.

ಅದರಲ್ಲೂ ಬಹುಭಾಷಾದೇಶ ಭಾರತದಲ್ಲಿ ಲಿಪಿಯಿಲ್ಲದ ಅನೇಕ ಭಾಷೆಗಳಿವೆ. ಅವುಗಳಲ್ಲೆಲ್ಲ ರಾಮಾಯಣ ಮಹಾಭಾರತಗಳಿದ್ದು ಅವುಗಳು ಶಿಷ್ಟ ಪರಂಪರೆಯಿಂದ ಬಂದ ಕಥಾವಸ್ತುಗಳಿಗಿಂತ ಭಿನ್ನಸ್ವರೂಪದವುಗಳಾಗಿವೆ. ಇಂಥ ಸ್ವತಂತ್ರ ಕಾವ್ಯಗಳು ಅನಕ್ಷರಸ್ಥ ಅನಾಮಧೇಯ ಕವಿಗಳ ನಾಲಿಗೆಯಲ್ಲಿ ಉಳಿದು ಬಂದಿವೆ. ಅಜ್ಞಾತ ಕವಿಗಳ ಈ ಬೃಹದ್ಗಾತ್ರದ ಮಹತ್ವಪೂರ್ಣ ಕಾವ್ಯಗಳೇ ಜನಪದ ಮಹಾಕಾವ್ಯಗಳಾಗಿವೆ.

ವ್ಯಾಸ ಮಹರ್ಷಿಗಳ ಕಥಾಚೌಕಟ್ಟಿಗೆ ಬದ್ಧರಾದ ಅಕ್ಷರಸ್ಥರನ್ನು ಅನುಲಕ್ಷಿಸದೆ ಬೆಳೆದ ಜನಪದ ಮಹಾಭಾರತ ಭಾರತದಾದ್ಯಂತ ಇರುವ ಎಲ್ಲಾ ಭಾಷೆಗಳ್ಲೂ ಸಾವಿರಾರು ಪಾಠಾಂತರಗಳಿಂದ ಲಭ್ಯವಾಗುತ್ತಿವೆ, ಕರ್ನಾಟಕದಲ್ಲೇ ದೊರೆಯುವ ಪಾಠಾಂತರಗಳಲ್ಲೇ ಕಥಾವಸ್ತು, ಘಟನಾವಳಿ, ಭಾಷೆ, ಛಂದಸ್ಸುಗಳು ವೈವಿಧ್ಯಮಯವಾಗಿರುವುದನ್ನು ಕಾಣಬಹುದು. ಮಹಾಭಾರತ ಕಥೆಯೋ, ಪಾತ್ರವೋ ಜನಪದರ ಬದುಕಿಗೆ ಆದರ್ಶವನ್ನೋ ನೀತಿಯನ್ನೋ ಇನ್ನಿತರ ತಿಳುವಳಿಕೆಯನ್ನೋ ಹೇಳುವುದರ ದ್ಯೋತಕವಾಗಿ ವ್ಯಕ್ತಿನಾಮ, ಸ್ಥಳನಾಮ, ನಂಬಿಕೆ, ಆಚಾರಣೆ, ಬೈಗುಳ, ಗಾದೆ, ಒಗಟು, ನುಡಿಗಟ್ಟು, ವಿವರಣಾತ್ಮಕ ಕಥೆ, ಜನಪದ ನಿರುಕ್ತಿ, ಹರಿಕಥೆ, ಯಕ್ಷಗಾನ ಬಯಲಾಟಗಳಲ್ಲೆಲ್ಲ ಅವು ಹಾಸುಹೊಕ್ಕಾಗಿವೆ. ಹೀಗೆ ಭಾರತೀಯ ಜನಜೀವನದ ಮೇಲೆ ಈ ಮಹಾಕಾವ್ಯ ಬೀರಿರುವ ಗಾಢವಾದ ಪರಿಣಾಮ ಬಹುಶಃ ಬೇರೆ ಯಾವ ಕಾವ್ಯಗಳೂ ಬೀರಿಲ್ಲವೆನ್ನಬಹುದು. ಹೀಗೆ ಜನಪದದ ವಿವಿಧ

ಪ್ರಕಾರಗಳಲ್ಲೆಲ್ಲ ಲಭ್ಯವಾಗುವ ಮಾಹಿತಿಗಳನ್ನೆಲ್ಲ ಸಂಗ್ರಹಿಸಿಕೊಂಡು ಈ ಕಾವ್ಯವನ್ನು ಅಧ್ಯಯನ ಮಾಡಬೇಕಾದ ಅಗತ್ಯವೂ ಇದೆ.

ಹೀಗೆ ನಮ್ಮ ಜನಪದರ ಜೀವನದ ತುಂಬೆಲ್ಲ ಬೆರೆತುಕೊಂಡಿರುವ ಮಹಾಭಾರತವನ್ನು ಕುರಿತು ಜನಪದಗಾಯಕರು ಬಿಡಿಹಾಡುಗಳಲ್ಲದೆ ಸಮಗ್ರ ಕಾವ್ಯಗಳನ್ನು ಹಾಡಿ ಮನರಂಜನೆಯ ಜೊತೆಗೆ ಜೀವನ ಪಾಠಗಳನ್ನು ಬೋಧಿಸಿ ನೈತಿಕ ನೆಲೆಗಟ್ಟನ್ನು ಭದ್ರಗೊಳಿಸುತ್ತಾ ಬಂದಿದ್ದಾರೆ.

ದಕ್ಷಿಣ ಕರ್ನಾಟಕದ ಮಟ್ಟಿಗೆ ಹೇಳುವುದಾರರೆ ಕುಂತಿ ಪೂಜೆಯೇ ಮಹಾಭಾರತದ ಕಥೆ ದಟ್ಟವಾಗಿ ಬೆಳೆಯಲು ಕಾರಣವಾಗಿದೆ ಎಂದರೆ ತಪ್ಪಾಗಲಾರದು. ಮೈಸೂರು, ಮಂಡ್ಯ, ಕೊಡಗು ಜಿಲ್ಲೆಗಳ ಪ್ರದೇಶವನ್ನು 'ಕುಂತಲರಾಜ್ಯ'ವೆಂದು ಭಾವಿಸಿರುವ ಜನಪದರು ಕುಂತಿಯ ತಂದೆ ಕುಂತೀಭೋಜನ ರಾಜ್ಯವೇ ಈ ಕುಂತಲ ರಾಜ್ಯವೆಂದೂ ಕುಂತಿ 'ಫಲದೇವತೆ'ಯೆಂದೂ ಭಾವಿಸಿ ಅವರೆಗಿಡ ಹೂ ಬಿಡುವ ಸಂಕ್ರಾಂತಿ ತಿಂಗಳಲ್ಲಿ 'ಕುಂತಿ ಪೂಜೆ' ಮಾಡುವುದುಂಟು. ಕುಂತಿಗುಡಿಯಲ್ಲಿ ಪ್ರತಿದಿನ ಕುಂತಿಗೆ ಸಂಬಂಧಿಸಿದ ಬಿಡಿ ಹಾಡುಗಳನ್ನು ಹೇಳುವುದಲ್ಲದೆ ಅರ್ಜುನ ಜೋಗಿಯ ಹಾಡನ್ನು ಹಾಡಲಾಗುತ್ತದೆ. ಅರ್ಜುನ ಜೋಗಿಯ ಹಾಡು ಅತ್ಯಂತ ಜನಪ್ರಿಯ ಕಾವ್ಯವಾದ್ದರಿಂದ ಕೆಲವರು ಈ ಜನಪದ ಕಾವ್ಯಕ್ಕೆ ಸುಸಂಬದ್ಧರೂಪವನ್ನು ಕೊಟ್ಟಿರುವುದುಂಟು.

ಜೋಗಿಯ ಹಾಡು ಚಿತ್ರಾಂಗದೆ ಕುಸುಮಾಲೆಯರು ತಮ್ಮನ್ನು ಪ್ರೀತಿಸಿ ಹೋದ ಅರ್ಜುನ ಮತ್ತೆ ಬರಲಿಲ್ಲವೆಂದು ವಿರಹತಾಪದಿಂದ ನೋಯುತ್ತಿರುವಾಗ ಈಶ್ವರ ಪಾರ್ವತಿಯರಿಗೆ ಅವರ ವಿರಹಯಾತನೆ ಅರಿವಾಗಿ ಇದನ್ನು ಪರಿಹರಿಸುವ ಉದ್ದೇಶದಿಂದ ಎರಡು ಗಿಳಿಗಳನ್ನು ಅರ್ಜುನನಲ್ಲಿಗೆ ಕಳುಹಿಸಿಕೊಡುತ್ತಾರೆ. ಆ ಗಿಳಿಗಳು ಹೇಳಿದ ವೃತ್ತಾಂತದಿಂದ ಅರ್ಜುನನಿಗೆ ತನ್ನ ಪ್ರಿಯತಮೆಯರ ನೆನಪಾಗುತ್ತದೆ. ತಾನು ಅವರಲ್ಲಿಗೆ ಹೋಗಿಬರುವುದಾಗಿ ದ್ರೌಪದಿಗೆ ತಿಳಿಸಿದಾಗ ಅವಳು ಸವತೀ ಮಾತ್ಸರ್ಯದಿಂದ ಕುದಿಯುತ್ತಾಳೆ. ಅವನನ್ನು ಹೇಗಾದರೂ ಮಾಡಿ ಹೋಗದಂತೆ ತಡೆಯಲು ಪಗಡೆಯಾಟಕ್ಕೆ ಆಹ್ವಾನಿಸುತ್ತಾಳೆ. ಆಟದಲ್ಲಿ ಅರ್ಜುನನೇನಾದರೂ ಸೋತರೆ ರಾಜಕುಮಾರನಂತೆ ಹೋಗದೆ ಜೋಗಿಯ ವೇಷದಲ್ಲಿ ಹೋಗಬೇಕೆಂದು ಹೇಳುತ್ತಾಳೆ. ತಾನೇ ಆಟದಲ್ಲಿ ಗೆಲ್ಲಬೇಕೆಂದು ಶ್ರೀಕೃಷ್ಣನಲ್ಲಿ ಮೊರೆಯಿಟ್ಟದ್ದರಿಂದ ಆಟವನ್ನು ಗೆದ್ದುಕೊಳ್ಳುತ್ತಾಳೆ. ಕೊಟ್ಟ ಮಾತಿನಂತೆ ಅರ್ಜುನ 'ಜೋಗಿ ವೇಷ'ವನ್ನು ಹಾಕಿಕೊಂಡು ಪರ್ಯಟನೆ ಮಾಡಿದ ಅನೇಕ ಸನ್ನಿವೇಶಗಳನೊಳಗೊಂಡ ಈ ಜೋಗಿ ಹಾಡು ಒಂದು ರೀತಿಯಲ್ಲಿ ಸಂಕ್ಷಿಪ್ತ ಮಹಾಭಾರತದಂತಿದೆ. ಇದರ ಹಾಡುವಿಕೆಯೇ

ಚಿತ್ತಾಕರ್ಷಕವಾಗಿರುವುದರಿಂದ ಇದೊಂದು ಜನಪ್ರಿಯ ಕಾವ್ಯವಾಗಿ ದಕ್ಷಿಣ ಕರ್ನಾಟಕದಾದ್ಯಂತ ಉಳಿದುಬಂದಿದೆ. ಕಿನ್ನರಿ ಜೋಗಿಗಳು ಎಂಬ ವೃತ್ತಿ ಗಾಯಕರು ಜೋಗಿಹಾಡನ್ನೇ ಪ್ರಧಾನ ಕಾವ್ಯವನ್ನಾಗಿ ಹಾಡುತ್ತಾರಾದರೂ ಈ ಸಂಪ್ರದಾಯದ ಮಹಾಭಾರತವೊಂದು ಬೆಟ್ಟದಬೀಡಿನ ಸಿದ್ದಶೆಟ್ಟಿಯವರಿಂದ ರೂಪಪಡೆದು ಪ್ರಕಟಗೊಂಡಿರುವುದು ಸಂತಸದ ಸಂಗತಿ.

ಮಹಾಭಾರತಕ್ಕೆ ಸಂಬಂಧಿಸಿದ ತ್ರಿಪದಿ ಕಾವ್ಯಗಳನ್ನು ಮೊದಲಿಗೆ ಕ.ರಾ.ಕೃ. ಅವರು ಪ್ರಕಟಿಸಿದರು. ೧೯೬೩ರಲ್ಲಿ ಪ್ರಕಟವಾದ 'ಜನಪದ ಗೀತೆಗಳಲ್ಲಿ ಮಹಾಭಾರತ' ಎಂಬ ಸಂಕಲನ ಬಿಡಿಕಥನಗಳ ಚಿತ್ರಣದಿಂದ ಕೂಡಿದ್ದು ಮಹಾಭಾರತದ ಕಥೆಗೆ ಬೇಕಾದ ಕೆಲವು ಘಟನಾವಳಿಗಳನ್ನು ಮಾತ್ರ ಒಳಗೊಂಡಿದೆ. ಇದೇ ಹೊತ್ತಿಗೆ ಪ್ರಕಟವಾದ ಬಿ.ಎಸ್.ಗದಗೀಮಠ ಅವರ ಪಿಎಚ್.ಡಿ. ಮಹಾಪ್ರಬಂಧ 'ಕನ್ನಡ ಜನಪದ ಗೀತೆಗಳು' (೧೯೬೩) ಗ್ರಂಥದ ಅನುಬಂಧದಲ್ಲಿರುವ 'ಜೋಗಿ ಹಾಡು' ಉತ್ತರ ಕರ್ನಾಟಕದ ಕಡೆಯ ಪಾಠವಾಗಿದ್ದು ಛಂದೋಬಂಧದಲ್ಲಿಯೊ ದಕ್ಷಿಣ ಪಾಠಕ್ಕಿಂತ ಭಿನ್ನವಾಗಿದೆ. ಸುಮಾರು ೭೫೫ ತ್ರಿಪದಿಗಳಲ್ಲಿರುವ ಈ ಹಾಡು ಕಥೆಗಿಂತಲೂ ವರ್ಣನೆಗಳೇ ದೀರ್ಘವಾಗಿದ್ದು ಓದುಗರ ಸಹನೆಯನ್ನು ನಿರೀಕ್ಷಿಸುತ್ತದೆ.

ಅನಂತರ ಕ.ರಾ.ಕೃ. ಅವರೇ 'ಹಣತಿ ಉರಿಯುತ್ತಿದೆ' (೧೯೬೩) ಸಂಕಲನದಲ್ಲಿ ಮಹಾಭಾರತಕ್ಕೆ ಸಂಬಂಧಿಸಿದ ಆರು ಕಥನ ಗೀತೆಗಳನ್ನು ಪ್ರಕಟಿಸಿದ್ದಾರೆ. ಅವರ ಜನಪದ ಗೀತೆಗಳಲ್ಲಿ ಮಹಾಭಾರತ ಹಾಗೂ ಈ ಸಂಗ್ರಹಗಳೆರಡನ್ನೂ ಸೇರಿಸಿದರೆ ಕ.ರಾ.ಕೃ. ಅವರ ಸಂಗ್ರಹ ಬೃಹತ್ ಗಾತ್ರವಾಗಿದ್ದು, ಅಧ್ಯಯನಕ್ಕೆ ಮಾಹಿತಿಗಳನ್ನೊದಗಿಸುತ್ತದೆ. 'ಕೊಂತಿ ಪೂಜೆ'ಯನ್ನು ಸವಿಸ್ತಾರವಾಗಿ ಅಧ್ಯಯನ ಮಾಡಿರುವ ಡಿ.ಲಿಂಗಯ್ಯನವರು (೧೯೬೭) ಹಾಗೂ ಕ್ಯಾತನಹಳ್ಳಿ ರಾಮಣ್ಣ (೧೯೮೫)ನವರು ಕೊಂತಿ ಪೂಜೆ ಸಂಪ್ರದಾಯದ ವಿವರಗಳೊಂದಿಗೆ ಅನೇಕ ಉಪಯುಕ್ತ ಕಥಾಭಾಗಗಳನ್ನು ತಮ್ಮ ಕೃತಿಗಳಲ್ಲಿ ಸೇರಿಸಿದ್ದಾರೆ.

ಗುಂಡ್ಮಿ ಚಂದ್ರಶೇಖರ ಐತಾಳರ 'ಕೈಯಲ್ಲಿ ಕರೆದ ನೊರೆ ಹಾಲು' (೧೯೭೦) ಸಂಕಲನದಲ್ಲಿ ಮಹಾಭಾರತಕ್ಕೆ ಸಂಬಂಧಿಸಿದ ನಾಲ್ಕು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಕುಂತಿ ಕರ್ಣನನ್ನು ಪಡೆದ ಕಥೆ, ಎರಡನೆಯದರಲ್ಲಿ ದ್ರೌಪದಿ ದೇವಿಯ ಕಥೆ, ಮೂರನೆಯದರಲ್ಲಿ ದ್ರೌಪದಿಯನ್ನು ಕಣ್ಣುಕಟ್ಟಿ ಕಾಡಿಗೆ ಬಿಟ್ಟ ಪ್ರಸಂಗ, ನಾಲ್ಕನೆಯದರಲ್ಲಿ ಸೌಭದ್ರಿ ಹಾಡು ಎಂಬುದಾಗಿ ವಿಂಗಡಿಸಲಾಗಿದೆ.

ಎಲ್.ಆರ್.ಹೆಗಡೆ ಅವರು ಸಂಗ್ರಹಿಸಿರುವ 'ಬೆಳ್ಳಿಯಮ್ಮ ಹಾಡುಗಳು' (೧೯೭೩) ಸಂಕಲನದಲ್ಲಿ ಕನಕಾಂಗಿ ಕಲ್ಯಾಣಕ್ಕೆ ಸಂಬಂಧಿಸಿದ ಒಂದು ಕಾವ್ಯವಿದ್ದು ಅದರಲ್ಲಿ ಅಭಿಮನ್ಯು ಕನಕಾಂಗಿಯನ್ನು ಮದುವೆಯಾದ ವಿಷಯವನ್ನು ೬೬ ದ್ವಿಪದಿಗಳಲ್ಲಿ ವಿವರಿಸಲಾಗಿದೆ. ನಿಂಗಣ್ಣ ಸಣ್ಣಕ್ಕಿಯವರ 'ಬಾಳಗೋಪಾಳನ ಲಾವಣೀಗಳು' (೧೯೭೪) ಸಂಕಲನದಲ್ಲಿ 'ದ್ರೌಪದಿ ವಸ್ತ್ರಾಪಹರಣ' ಮತ್ತು 'ಭೀಷ್ಮ ಪ್ರತಿಜ್ಞೆ' ಎಂಬ ಎರಡು ಲಾವಣಿಗಳಿವೆ. ಶಿಷ್ಟ ಕಾವ್ಯದ ಜಾಡಿನಲ್ಲೆ ಹರಿಯುವ ಕಥಾ ವಸ್ತು ಲಾವಣಿಗಳ ಛಂದಸ್ಸಿನಲ್ಲಿದೆ.

ಸೋಮಶೇಖರ ಇಮ್ರಾಪೂರ ಅವರು ಪ್ರಕಟಿಸಿರುವ 'ಜನಪದ ಮಹಾಭಾರತ' (೧೯೭೬) ಎಂಬ ಗ್ರಂಥದಲ್ಲಿ ಆದಿಪರ್ವ ಹಾಗೂ ಸಭಾಪರ್ವಗಳನ್ನು ಕುರಿತ ೨೩೦ ಚೌಪದಿಗಳಿವೆ. ಶಿಷ್ಟಭಾರತದ ಪಾಠವನ್ನೇ ಅನುಸರಿಸುವ ಇಲ್ಲಿನ ಕಥೆ ಹಾಗೂ ಭಾಷೆ ಎರಡೂ ಜನಪದರಿಂದ ದೂರ ಸರಿಯುತ್ತವೆ ಎಂದರೆ ತಪ್ಪಾಗಲಾರದು.

'ಕಾವ್ಯಜೀವಿ'ಯವರ 'ಹಾಡ್ಹೇಳೆ ತಂಗಿ ದನಿಯೆತ್ತಿ' (೧೯೭೯) ಎಂಬ ಸಂಕಲನದಲ್ಲಿ 'ಸೋಬದ್ರೆಯ ಬವಕೆ ಹಾಡು' ಹಾಗೂ 'ದ್ರೌಪದಿ ಕಥೆ ಹಾಡು'ಗಳಲ್ಲಿ ದ್ರೌಪದಿ ಕಥೆ ಹಾಡು ಈ ಹಿಂದೆ ಪ್ರಸ್ತಾಪಿಸಿದಂತೆ ಮದುವೆಗೆ ಮುಂಚೆ ಮೈನೆರದ ದ್ರೌಪದಿಯನ್ನು ಕಣ್ಣುಕಟ್ಟಿ ಕಾಡಿಗೆ ಬಿಟ್ಟ ಪ್ರಸಂಗವನ್ನು ಹೇಳಲಾಗಿದೆ.

ಬಸವನಗೌಡ ಪಾಟೀಲರ 'ತೂಕಮಾಡಿ ಹೇಳತೇನಿನ್ಯಾಯ' (೧೯೮೦) ಸಂಕಲನದಲ್ಲೂ 'ವೀರ ಅಭಿಮನ್ಯು ಪದ'ವಿದೆ. ವೀರ ಅಭಿಮನ್ಯು ಕರ್ಣಾದಿಗಳ ಕುತಂತ್ರದಿಂದ ಮಡಿಯುವ ಪ್ರಸಂಗ ರೋಚಕವಾಗಿ ಮೂಡಿಬಂದಿದೆ. ಸುಶೀಲಾ ಸೊಂಡೂರ್ ಅವರ 'ಸುವ್ವಿ ಸುವ್ವಮ್ಮ ಲಾಲಿ ಸುವ್ವ ಲಾಲಿ" (೧೯೮೧) ಸಂಕಲನದಲ್ಲಿ 'ಪಾಂಡವರು ಕೌರವರು ಜೂಜಾಡಿದ್ದು' ಎಂಬ ಕಥಾ ಭಾಗವಿದ್ದು ಇದರಲ್ಲಿ ದ್ರೌಪದಿ ತನ್ನ ಗಂಡಂದಿರು ಸೋತಿದ್ದ ರಾಜ್ಯವನ್ನೆಲ್ಲ ಪಗಡೆಯಾಡಿ ಗೆಲ್ಲುವ ಪ್ರಸಂಗವಿದೆ.

ಜಿ.ಬಿ.ಖಾಡೆಯವರು ಸಂಗ್ರಹಿಸಿರುವ 'ಹಳ್ಳಿ ಹಬ್ಬಿಸಿದಹೂಬಳ್ಳಿ' (೧೯೮೧) ಎಂಬ ಗ್ರಂಥದಲ್ಲಿ 'ಪಾಂಡವರ ಲೀಲಾ ಚಕ್ರಬಿಂಬದ ಕ್ವಾಟಿ' ಅಭಿಮನ್ಯು ಜನಿಸಿದ್ದು, 'ಕೀಚನ ಸಂಹಾಸ', ಕನ್ಯಾನಿಶ್ಚಯ', ಆರೋಜನಿಗೆ ದಿವ್ಯ ಅಸ್ತ್ರ ಸಿಕ್ಕಿದ್ದು, 'ಪಾರ್ವತಿ ನೋಡ್ಯಾಳ ಅರಜೂನನ ಬೆನ್ನು, ಜರಾಸಂಧನ ಹುಟ್ಟಿದ ಕತಿ' ಎಂಬ ಏಳು ಕಥಾಭಾಗಗಳು ಈ ಸಂಕಲನದಲ್ಲಿವೆ.

ಎಂ.ಬಿ.ನಳಿನಿ ಅವರ 'ಕಾಡುಮಲ್ಲಿಗೆ' (೧೯೮೭) ಸಂಕಲನದಲ್ಲಿ, ಶ್ರೀಕಂಠಕೂಡಿಗೆಯವರ 'ಅಂಟಿಕೆ ಪಂಟಿಕೆ ಪದಗಳು' ಸಂಕಲನದಲ್ಲಿ ಹಾಗೂ ಎಂ.ಹಿರಿಯಣ್ಣನವರ 'ತೀರ್ಥಹಳ್ಳಿಸುತ್ತಿನ ಲಾವಣಿಗಳು' ಸಂಕಲನದಲ್ಲಿ ಅರ್ಜುನ ಸ್ವಾಮಿಯ ಕಥೆಯನ್ನು ಕುರಿತ ಕಾವ್ಯವಿದ್ದು, ಈ ಮೂರೂ ಒಂದೇ ಕಾವ್ಯದ ಭಿನ್ನಪಾಠಗಳಾಗಿವೆ. ಬಿ.ಎಸ್.ಸ್ವಾಮಿಯವರ 'ಜನಪದ ಝೇಂಕಾರ' (೧೯೮೭) ಸಂಕಲನದಲ್ಲಿ ಪಾಂಡವರ ಕಥೆ ಜೋಗಿ ಹಾಡಿನ ಮತ್ತೊಂದು ಪಾಠವಾಗಿದೆ. ಜೋಗಿ ಹಾಡಿನ ಪಾಠಗಳು ಸ.ಚ.ಮಹಾದೇವನಾಯಕರ 'ಸಂಪಿಗೆ ಅರಳಿವೆ' (೧೯೬೧) ಸಂಕಲನ ಹಾಗೂ ಜೀ.ಶಂ.ಪ. ಅವರ 'ಜನಪದ ಖಂಡ ಕಾವ್ಯಗಳು (೧೯೬೮) ಸಂಕಲನಗಳಲ್ಲೂ ಇವೆ. ಜೋಗಿ ಹಾಡಿನ ಅತ್ಯಂತ ವಿಸ್ತಾರವಾದ ಪಾಠ ಜೀ.ಶಂ.ಪ ಅವರ 'ಕನ್ನಡ ವೃತ್ತಿಗಾಯಕರ ಕಾವ್ಯಗಳು' (೧೯೮೨) ಸಂಗ್ರಹದಲ್ಲಿದೆ.

ವಾಗೀಶ್ವರಿ ಶಾಸ್ತ್ರೀಯವರು ಸಂಗ್ರಹಿಸಿರುವ 'ಹೃದಯ ಸಂಪುಟ' (೧೯೮೫)ದಲ್ಲಿ ಜೈಮಿನಿ ಭಾರತದ ಕಥೆಯನ್ನೇ ಆಧರಿಸಿರುವಂತೆ ಕಾಣುವ ಅದರಲ್ಲೂ ಅಲ್ಲಲ್ಲಿ ಹೆಚ್ಚಿನ ವಿವರಗಳನ್ನೊಳಗೊಂಡ ೫೮ ಪುಟ್ಟ ಪುಟ್ಟ ಅಧ್ಯಾಯಗಳ ೬೯ ಪುಟಗಳಷ್ಟು ದೀರ್ಘವಾದ ಸಾಹಿತ್ಯವಿದೆ. ಕೃಷ್ಣಮೂರ್ತಿ ಹನೂರುರವರ 'ಜನಪದ ವೀರ ಗೀತೆಗಳು' (೧೯೮೭) ಎಂಬ ಸಂಗ್ರಹದಲ್ಲಿ 'ವೀರ ಅಭಿಮನ್ಯು' ಎಂಬ ಕಾವ್ಯಭಾಗವೊಂದಿದ್ದು ಇದರಲ್ಲಿ ಮಹಾದೇವಿ ಎಂಬ ಹೆಣ್ಣಿಗಾಗಿ ಅಭಿಮನ್ಯು ಯುದ್ದಕ್ಕೆ ನಿಲ್ಲುತ್ತಾನೆ. ತನಗೆ ಯುದ್ಧದಲ್ಲಿ ಜಯ ಸಿಗುತ್ತದೋ ಇಲ್ಲವೋ ಎಂಬ ಅನುಮಾನ ಬಂದಾಗ ಅವನು ಆ ರಾತ್ರಿ ವಡ್ಡರ ಹೆಣ್ಣು ಮಗಳೊಬ್ಬಳ ಸಂಬಂಧ ಮಾಡಿ ಯುದ್ಧಕ್ಕೆ ಹೋಗುತ್ತಾನೆ. ಅಲ್ಲದೆ ಯುದ್ಧದಲ್ಲಿ ಮಡಿಯುತ್ತಾನೆ. 'ಇದು ಶಶೀರೇಖಾ ಪರಿಣಯ' (ಮಾಯಾಬಜಾರ್)ದ ಕಥೆಯ ಭಿನ್ನ ಪಾಠದಂತೆ ಕಾಣುತ್ತದೆ.

ಎನ್.ಆರ್.ನಾಯಕ್ ಅವರ 'ಗಾಮೊಕ್ಕಲ ಮಹಾಭಾರತ' ಅತ್ಯಂತ ದೀಘವಾಗಿದ್ದು, ೨೮೪ ಪುಟಗಳ ಹರವಿದೆ. ಈ ಸಂಕಲನದಲ್ಲಿ ಧರ್ಮರು, ಗೀಜುಗ, ಸುಭದ್ರೆ, ಲಕ್ಷಣ, ಅರ್ಜುನ, ಕುಸುಮಾಲಿ, ನಾಲ್ವರು ಹೆಂಡಿರು, ಕನಕಾಂಗಿ ಕಲ್ಯಾಣ, ಅಭಿಮನ್ಯು, ಸಾವಿತ್ರಿ ಎಂಬ ಹತ್ತು ಭಾಗಗಳಿವೆ. ಈ ಹಿಂದೆ ಹೇಳಿರುವ ಕ.ರಾ.ಕೃ ಅವರ ಸಂಕಲನಗಳಲ್ಲಿರುವಂತೆ ಇಲ್ಲಿನ ಪ್ರತಿಯೊಂದು ಭಾಗವೂ ಪ್ರತ್ಯೇಕ ಪ್ರತ್ಯೇಕವಾಗಿಯೇ ನಿಲ್ಲುತ್ತದೆ. ಅಲ್ಲದೆ ಆದಿಯಿಂದ ಅಂತ್ಯದವರೆಗೆ ಒಂದು ಕಡೆಯಿಂದ ಮಹಾಭಾರತದ ಕಥೆಯನ್ನು ಹೇಳಿಕೊಂಡು ಬರಲಾಗಿಲ್ಲ. ಹೀಗಾಗಿ ಇದು ಕೂಡ ಜನಪದ ಮಹಾಭಾರತಕ್ಕೆ ಸಂಬಂಧಿಸಿದ ಕೆಲವು ಕಥಾಭಾಗಗಳನ್ನು ಒಳಗೊಂಡಿವೆ ಎನ್ನಬಹುದು.

ಬಿ.ಎನ್.ಸ್ವಾಮಿಯವರ ಜನಪದ ಮಹಾಭಾರತ ಒಂದು ಸಮೀಕ್ಷೆ (೨೦೦೬)ಯಲ್ಲಿ ಮಹಾಭಾರತ ಕೆಲವು ಪ್ರಸಂಗಗಳನ್ನು ವಿಶ್ಲೇಷಣೆಗೊಳಪಡಿಸಲಾಗಿದೆ.

ಇಲ್ಲಿ ಪ್ರಸ್ತಾಪಿಸಿರುವ ಸಂಗ್ರಹಗಳಲ್ಲದೆ ಈ ಅಧ್ಯಯನದ ಸಂದರ್ಭದಲ್ಲಿ ಸಂಶೋಧಕಿಗೆ ಅಲಭ್ಯವಾಗಿರಬಹುದಾದ ಹಲವು ಸಂಗ್ರಹಗಳಿರಬಹುದು ಎಂಬ ಮಾತನ್ನು ವಿನಮ್ರತೆಯಿಂದ ಹೇಳಲಾಗಿದೆ.

**ಜನಪದ ಮಹಾಭಾರತದ ಕರ್ತೃ, ಮಹಾಗಾಯಕ ಬೆಟ್ಟದಬೀಡು ಸಿದ್ದಶೆಟ್ಟರು**

ಮೈಸೂರು ಜಿಲ್ಲೆಯ ನಂಜನಗೂಡು ತಾಲ್ಲೂಕಿನ ಹೊರಳ್ಳಿ ಗ್ರಾಮದ ಗುಂಡು ಮಾದಯ್ಯ ಹಾಗೂ ಸಿದ್ಧಮ್ಮ ದಂಪತಿಗಳ ಪುತ್ರರಾಗಿ ಸಿದ್ದಶೆಟ್ಟರು ಜನಿಸಿದರು. ಕುಂಬಾರ ಸಮುದಾಯಕ್ಕೆ ಸೇರಿದ ಈ ದಂಪತಿಗಳು ಚಿಕ್ಕ ಹಲಗೂರು 'ಸಿದ್ದಪ್ಪಾಜಿ'ಯವರ ವರಪ್ರಸಾದದಿಂದ ಜನಿಸಿದ ಮಗುವಿಗೆ 'ಸಿದ್ದಶೆಟ್ಟಿ' ಎಂದೇ ನಾಮಕರಣ ಮಾಡಿದರು. ಬಾಲಕ ಸಿದ್ದಶೆಟ್ಟಿಯವರು ತಂದೆ ತಾಯಿಗಳ ಅಕ್ಕರೆಯಲ್ಲಿ ಬೆಳೆಯುತ್ತಿರುವಾಗಲೇ ತಂದೆಯನ್ನು ಕಳೆದುಕೊಂಡು ತಾಯಿಯ ಪೋಷಣೆಯಲ್ಲಿ ಬೆಳೆಯಲಾರಂಬಿಸಿದರು. ವಿಧವೆಯಾದ ಸಿದ್ಧಮ್ಮ ತನ್ನ ಮಗನನ್ನು ವಿದ್ಯಾವಂತನನ್ನಾಗಿ ಮಾಡಲು ಕೂಲಿನಾಲಿ ಮಾಡುತ್ತಾ 'ಕೂಲಿಮಠ'ಕ್ಕೆ ಸೇರಿಸಲಾಯಿತ್ತಾದರೂ ಸಿದ್ದಶೆಟ್ಟಿ ಎರಡನೆಯ ತರಗತಿಯವರೆಗೆ ಮಾತ್ರ ವ್ಯಾಸಂಗ ಮಾಡಿ ಶಾಲೆಯನ್ನು ತ್ಯಜಿಸಿದರು.

ತಮ್ಮ ದೊಡ್ಡಪ್ಪನಾದ ದೊಡ್ಡಮಾದಯ್ಯನವರು ನೀಲಗಾರರಾಗಿದ್ದು, ತತ್ವಪದಗಳು, ಪುರಾಣ ಕಥೆಗಳು, ಭಜನೆ ಮುಂತಾದ ಜನಪದ ಪ್ರಕಾರಗಳನ್ನು ಬಲ್ಲವರಾಗಿದ್ದರು. ಬಾಲಕನಾದ ಸಿದ್ದಶೆಟ್ಟರು ತಮ್ಮ ದೊಡ್ಡಪ್ಪನವರಿಂದ ಹಾಡುವುದನ್ನೂ ತಂಬೂರಿ ನುಡಿಸುವುದನ್ನೂ ಆಸಕ್ತಿಯಿಂದ ಕಲಿತುಕೊಂಡರು. ಅನಂತರ ಉದ್ದೂರಿನ ದೇವರಗುಡ್ಡ ಮಾದಪ್ಪ ಶೆಟ್ಟಿಯವರ ಬಳಿ ಶಿಷ್ಯ ವೃತ್ತಿಯನ್ನು ಕೈಗೊಂಡು ಅವರಿಂದ ಮಾದೇಶ್ವರನ ಹಾಡುಗಳನ್ನು ಮತ್ತಷ್ಟು ಕರಗತ ಮಾಡಿಕೊಂಡರು. ಇತ್ತ ತಾಯಿ ಸಿದ್ದಮ್ಮ ತನ್ನ ಮಗ ಸಿದ್ಧಪ್ಪಾಜಿ ವರದಲ್ಲಿ ಹುಟ್ಟಿರುವವನು ಎಲ್ಲಿ ಮಾದೇಶ್ವರನ ಗುಡ್ಡನಾಗುತಾನೋ ಎಂಬ ಭಯದಿಂದ 'ನೀಲಗಾರ ದೀಕ್ಷೆ'ಯನ್ನು ಕೊಡಿಸಿದರು. ಸಿದ್ದಶೆಟ್ಟಿಯವರು ಶಾಸ್ತ್ರೋಕ್ತವಾಗಿ ನೀಲಗಾರರೇ ಆದರೂ ತಾನು ನಂಬಿದ್ದ ಮಾದೇಶ್ವರನ ದೇವರಗುಡ್ಡರ ಸಂಪ್ರದಾಯಗಳನ್ನೂ ರೂಢಿಸಿಕೊಂಡರು. ಹೀಗೆ 'ದೇವರ ಗುಡ್ಡರ' ಹಾಗೂ 'ನೀಲಗಾರರ' ಅವಳೀ ಸಂಪ್ರದಾಯಗಳನ್ನು

ಪಾಲಿಸುತ್ತಾ ಮಂಟೇಸ್ವಾಮಿ ವಚನ ಹಾಗೂ ಮಾದೇಶ್ವರನ ಕಥೆಗಳನ್ನು ಕಲಿತು 'ಸವ್ಯಸಾಚಿ'ಯಂತಾದರು.

ಸುಮಾರು ೧೬ ವರ್ಷದವರಿರುವಾಗಲೇ ಸಿದ್ಧಶೆಟ್ಟರು ತಾವೊಬ್ಬರೇ ಕಥೆ ಮಾಡುವ ಪರಿಣತಿಯನ್ನು ಪಡೆದುಕೊಂಡರು. ಈ ಅವಧಿಯಲ್ಲಿ 'ಧರಿಗೆ ದೊಡ್ಡವರ ಕಥೆ', ಮಲೆಯ ಮಾದೇಶ್ವರನ ಕಥೆ, ಬಸವಪುರಾಣದ ಕಥೆ, ಚಾಮುಂಡಿ ಕಥೆ, ಪಿರಿಯಾಪಟ್ಟಣದ ವೀರಾಜನ ಕಥೆ, ಘನಪತಿರಾಜನ ಕಥೆ, ಬಂಜೆ ಹೊನ್ನಮ್ಮನ ಕಥೆ, ಬಾಲನಾಗಮ್ಮನ ಕಥೆ, ಚನ್ನಿಗರಾಯನ ಕಥೆ, ಮೈದಾಳ ರಾಮನ ಕಥೆಗಳನ್ನು ಕರತಲಾಮಲಕ ಮಾಡಿಕೊಂಡಿದ್ದರು.

ಅನಂತರ ಮಧುವನಹಳ್ಳಿ ನಂಜಪ್ಪಶೆಟ್ಟರು ಎಂಬ ಮಹಾಗಾಯಕರಲ್ಲಿ ಶಿಷ್ಯವೃತ್ತಿಯನ್ನು ಮಾಡುತ್ತಾ ನೂರಾರು ಊರುಗಳನ್ನು ತಿರುಗಿದರು. ನಂಜಪ್ಪ ಶೆಟ್ಟರಿಂದ ರಾಮಾಯಣ, ಮಹಾಭಾರತ, ಎಲ್ಲಮ್ಮನ ಕಥೆ ಮುಂತಾದವುಗಳನ್ನು ಕಲಿತರಲ್ಲದೆ, ಗಾದೆ, ಒಗಟು, ತತ್ವಪದ, ಜನಪದಲೆಕ್ಕಗಳು, ಪುರಾಣ ಕಥೆಗಳು, ಐತಿಹ್ಯಗಳು, ತಮ್ಮಲ್ಲಿ ಕರಗತ ಮಾಡಿಕೊಳ್ಳಲಾರಂಭಿಸಿದರು. ಮೈಸೂರು, ಮಂಡ್ಯ, ಕೊಡಗು ಜಿಲ್ಲೆಗಳಲ್ಲೆಲ್ಲ ತಿರುಗಿ ಕಥೆಮಾಡಿ 'ಸೈ' ಎನ್ನಿಸಿಕೊಳ್ಳತೊಡಗಿದರು. ಹೀಗೆ ಕಥೆ ಮಾಡುತ್ತಾ ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆ ತಾಲ್ಲೂಕಿನ ಬೆಟ್ಟದ ಬೀಡು ಗ್ರಾಮಕ್ಕೆ ಬಂದು ಕಥೆ ಮಾಡಿ ಅಲ್ಲಿನ ಗ್ರಾಮಸ್ಥರ ಮನಸ್ಸನ್ನು ಗೆದ್ದುದರ ಪರಿಣಾಮವಾಗಿ ಒಕ್ಕಲಿಗ ಸಮುದಾಯದವರ ಸಹಕಾರದಿಂದ ಅಲ್ಲೆ ನೆಲೆನಿಂತರು.

ಅನಂತರ ಬೆಟ್ಟದ ಬೀಡು ಗ್ರಾಮದ ನಂಜಯ್ಯಶೆಟ್ಟರ ಕಿರಿಮಗಳು ಸುಬ್ಬಮ್ಮನವರೊಂದಿಗೆ ಗ್ರಾಮದ ಮುಖಂಡರ ನೇತೃತ್ವದಲ್ಲಿ ವಿವಾಹವಾಗಿ ಎರಡು ಗಂಡು ಮಕ್ಕಳ (ಸಿದ್ದಶೆಟ್ಟಿ, ಮಾದಶೆಟ್ಟಿ) ಹಾಗೂ ಮೂರು ಹೆಣ್ಣು ಮಕ್ಕಳ (ಮಾದಮ್ಮ, ಸಿದ್ದಮ್ಮ, ಸುಬ್ಬಮ್ಮ) ತಂದೆಯಾದರು. ಸಿದ್ದಶೆಟ್ಟರು ಜನಪದ ಗಾಯಕರಾಗಿ ಮಾತ್ರವಲ್ಲದೆ, ಜನಪದ ವೈದ್ಯರಾಗಿಯೂ ಪ್ರಸಿದ್ಧರಾಗಿದ್ದರು.

ಸಿದ್ಧಶೆಟ್ಟಿಯವರು ಸುಮಾರು ಮೂವತ್ತು ವರ್ಷ ವಯಸ್ಸಿನವರಾಗಿದ್ದಾಗ ಮೈಸೂರು ಅರಮನೆಯಲ್ಲೂ ಬೊಪ್ಪಗೌಡನಪುರದ ಮಠದಲ್ಲೂ ತಮ್ಮ ಸುಶ್ರಾವ್ಯ ಕಂಠದಿಂದ ಜನಮನವನ್ನು ತಣಿಸಿ ಸನ್ಮಾನಿತರಾಗಿದ್ದರು. ಅನಂತರ ಸಿದ್ಧಶೆಟ್ಟರು ೧೯೮೮ರಲ್ಲಿ ತಮ್ಮ ಪತ್ನಿ ನಿಧನರಾದ ಮೇಲೆ ಮೈಸೂರಿನ ತೊಣಚಿಕೊಪ್ಪಲಿನಲ್ಲಿ ತಮ್ಮ ಮಗನೊಂದಿಗೆ ವಾಸಿಸತೊಡಗಿದರು. ಸುಮಾರು ಆರೇಳು

ದಶಕಗಳ ಕಾಲ ಊರೂರುಗಳನ್ನು ಸುತ್ತಿ ಗಾನಸುಧೆಯನ್ನು ಉಣಬಡಿಸಿದ್ದ ಸಿದ್ಧಶೆಟ್ಟರು ತಮ್ಮ ಇಳಿವಯಸ್ಸಿನಲ್ಲಿ ಅನಾರೋಗ್ಯಕ್ಕೆ ಈಡಾಗಿ ೧೯೮೯ರಲ್ಲಿ ಬೆಟ್ಟದ ಬೀಡು ಗ್ರಾಮದಲ್ಲಿ ವಿಧಿವಶರಾದರು.

೧೯೭೨ರಲ್ಲಿ ಮೈಸೂರಿನ ಜೋಪಡಿ ಮಾದಯ್ಯ ಎಂಬ ಗಾಯಕರಿಂದ ಪಿ.ಕೆ.ರಾಜಶೇಖರ ಅವರಿಗೆ ಸಿದ್ಧಶೆಟ್ಟಿಯವರ ಪರಿಚಯವಾಯಿತಂತೆ. ಅನಂತರ '೧೯೭೨ರಿಂದ ೧೯೭೬ರವರೆಗೆ ಜನಪದ ಮಹಾಭಾರತದ ಒಂದೊಂದು ಕಥಾಭಾಗವನ್ನು ಒಂದೊಂದು ಪರ್ವವೆಂದು ಕರೆದು ಆಯಾಯ ದಿನದಲ್ಲಿ ಹಾಡಿ ಹೋಗುತ್ತಿದ್ದರೆಂದು' ಪಿ.ಕೆ.ರಾಜಶೇಖರ ಅವರೇ ಜನಪದ ಮಹಾಭಾರತದ ಪ್ರಸ್ತಾವನೆಯಲ್ಲಿ[೧೨] ಉಲ್ಲೇಖಿಸಿದ್ದಾರೆ.

**ಜನಪದ ಮಹಾಭಾರತದ ಕಥಾ ಸಾರಾಂಶ**

ವ್ಯಾಸರು ಹಾಡಿದ ಮಹಾಭಾರತವನ್ನು ಗಣಪತಿ ಬರೆದುಕೊಂಡಂತೆ ಬೆಟ್ಟದಬೀಡು ಸಿದ್ದಶೆಟ್ಟಿ ಹಾಡಿರುವ ಜನಪದ ಮಹಾಭಾರತವನ್ನು ಪಿ.ಕೆ.ರಾಜಶೇಖರ ಅವರು ಬರೆದುಕೊಂಡಿದ್ದಾರೆ. ಜನಪದ ಮಹಾಭಾರತವು 'ಪ್ರಾರ್ಥನೆಯಪರ್ವ'ದೊಂದಿಗೆ ಪ್ರಾರಂಭವಾಗುತ್ತದೆ. ಗಾಯಕ/ಕವಿ 'ಗಣಪತಿಯನ್ನು ಸೊಂಡಲದ ಇಗ್ನೇಸ, ಸರಸ್ವತಿ, ಮಾದೇಶ್ವರ, ಮಂಟೇದಲಿಂಗಯ್ಯ, ಕಪ್ಪಡಿ ರಾಚಪ್ಪ, ಚಿಕ್ಕಲ್ಲೂರು ಸಿದ್ದಪ್ಪಾಜಿಯ ಸ್ಮರಣೆಯೊಂದಿಗೆ, ಮಹಾಭಾರತದ ಕರ್ತೃ ವ್ಯಾಸನಿಗೂ ವಂದಿಸಿದ್ದಾನೆ. ಪ್ರಾರ್ಥನಾಪರ್ವ, ಗಣಪತಿಪರ್ವ, ಶಿವಗಂಗೆ ಪರ್ವದವರೆಗೂ ದೇವಾದಿದೇವತೆಗಳ ಸ್ಮರಣೆ, ವಂಶಾವಳಿಗಳ ವಿಚಾರಗಳನ್ನು ಹೇಳಲಾಗಿದೆ. ಗಂಗಾಪುತ್ರಪರ್ವದಿಂದ ಮಹಾಭಾರತದ ಕಥೆಯನ್ನೂ ನಿರೂಪಿಸಲಾಗಿದೆ. ಹಸ್ತಿನಾಪುರದಲ್ಲಿ ಚಂದ್ರವಂಶದ ರಾಜನಾಗಿ ಸಾಕ್ಷತ್ ಪರಮೇಶ್ವರನೇ ಶಾಂತರಾಜನಾಗಿ ಜನಿಸಿ ಗಂಗೆಯನ್ನು ಮಡದಿಯಾಗಿಟ್ಟುಕೊಂಡು ರಾಜ್ಯಭಾರ ಮಾಡುತ್ತಿದ್ದಾನೆ.

ಸುಖದಾಂಪತ್ಯದಿಂದ ಸಂಸಾರ ಮಾಡುತ್ತಿದ್ದ ಶಾಂತ–ಗಂಗಾ ದಂಪತಿಗಳಿಗೆ ಏಳು ಮಕ್ಕಳಾದರೂ ಅವುಗಳನೆಲ್ಲಾ ಗಂಗೆ ಹತ್ಯೆ ಮಾಡತೊಡಗುತ್ತಾಳೆ. ಎಂಟನೆಯ ಸಂತಾನವನ್ನು ಹಾಗೆ ಮಾಡಲು ಹೋದಾಗ 'ಅಪ್ಪನ ಆಸೆಗೆ ನನ್ನ ಉಳಿಸು' ಎಂದ ಮಗುವನ್ನು ಮುದ್ದಾಡುವಳು. ಅನಂತರ 'ನಾನು ನೀರಾಗಿ ಹೋಗ್ತಿನಿ ಏನು ಭಾಗ್ಯ ಬೇಕು ಕೇಳಿಕೋ' ಕಂದ ಎಂದಾಗ 'ಇಚ್ಚಾ ಮರಣ'ವೆನ್ನುತ್ತಾನೆ. ಆ ಮಗು ಬ್ರಹ್ಮಚಾರಿಯಾಗಿ ಬೆಳೆದು 'ಗಂಗಾಪುತ್ರ'ನೆಂದು ಹೆಸರಾಗುತ್ತಾನೆ. ಇತ್ತ ಶಾಂತ ಚಕ್ರವರ್ತ ರಾಜ್ಯಭಾರ ಮಾಡುತ್ತಿರುತ್ತಾನೆ.

ಗಂಧರ್ವರಾಜನ ಮಗಳಾದ ಮೋಹಿನಿದೇವಿಯೂ ತಪಸ್ಸು ಮಾಡುತ್ತಿದ್ದ ಮಚ್ಚೇಂದ್ರನಾಥರ ಮೇಲೆ ಮೋಹಗೊಂಡು ಅವರನ್ನು ಎಚ್ಚರಿಸಲು ಕೊಳೆತು ನಾರುವ ಸರ್ಪವೊಂದನ್ನು ಅವರ ಕೊರಳಿಗೆ ಸುತ್ತುವಳು. ಎಚ್ಚರಗೊಂಡ ಮುನಿಗಳು ಮೋಹಿನಿದೇವಿಗೆ 'ಮೀನಿನ ಹೊಟ್ಟೆಯಲ್ಲಿ ಹುಟ್ಟಿ ದುರ್ಗಂಧದಿಂದ ಕೂಡಿ ನೀನು ದುರ್ಗಂಧಾದೇವಿಯಾಗಿ ಹುಟ್ಟು' ಎಂದು ಶಾಪ ಕೊಟ್ಟಾಗ ಅವಳಿಗೆ ತನ್ನ ತಪ್ಪಿನ ಅರಿವಾಗಿ 'ಕ್ಷಮಿಸಿ ನನ್ನ ಕಾಪಾಡಿ ಸ್ವಾಮಿ' ಎಂದು ಕಣ್ಣೀರಿಟ್ಟಳು. ಅವರು ಕರುಣೆತೋರಿ 'ನನ್ನಂಥ ಮುನಿಯು ನಿನ್ನ ಬಯಸಿ ಬಂದಾಗ ನಿನಗೆ ಶಾಪ ವಿಮೋಚನೆ ಆಗುತ್ತದೆ ಹೋಗು ಭೂಮಿಗಂತ ಕಳಿಸಿಕೊಟ್ಟರು'. ಆಗ ಅವಳು ಬೆಸ್ತರ ದಾಸರಾಜನಿಗೆ ಮೀನಿನ ಹೊಟ್ಟೆಯಲ್ಲಿ ಸಿಕ್ಕಿ ದುರ್ಗಂಧಾದೇವಿಯಾಗುತ್ತಾಳೆ. ತನ್ನ ತಂದೆಯ ಕುಲಕಸುಬಾದ ದೋಣಿ ನಡೆಸೋ ಕೆಲಸವನ್ನು ಮಾಡುತ್ತಿರುತ್ತಾಳೆ.

ಲೋಕ ಸಂಚಾರ ಮಾಡುತ್ತಾ ಪರಾದಿ ಮುನಿಗಳು ಭೂಲೋಕಕ್ಕೆ ಬಂದಾಗ ದುರ್ಗಂಧದೇವಿಯನ್ನು ಕಂಡು ಅವಳ ರೂಪಲಾವಣ್ಯಕ್ಕೆ ಮನಸೋತ ಪರಾದಿ ಮುನಿಗಳು ಅವಳ ಮೇಲೆ ತೀರ್ಥಸುರಿಯಲು ಸುಗಂಧದೇವಿಯಾಗಿ ಬದಲಾಗುತ್ತಾಳೆ. ನಂತರ ಸುಗಂಧದೇವಿಯೊಂದಿಗೆ ರತಿಕ್ರೀಡೆಯಲ್ಲಿ ತೊಡಗಿ ಸಂತೋಷ ಪಡುತ್ತಾರೆ. ಅನಂತರ ಅವಳು ಗರ್ಭಿಣಿಯಾಗಿ ವೇದವ್ಯಾಸರಿಗೆ ಜನ್ಮ ನೀಡುತ್ತಾಳೆ.

ಇತ್ತ ಶಾಂತರಾಜ ಬೇಟೆಯಾಡುತ್ತಾ ಬಂದು ಸುಗಂಧದೇವಿಯ ಶರೀರದ ಪರಿಮಳಕ್ಕೆ ಮನಸೋತನಲ್ಲದೆ ಬೆಳೆದು ನಿಂತ ಮಗನ ಬಿಟ್ಟು ಅವಳನ್ನು ಮದುವೆಯಾಗಲು ಬಯಸುತ್ತಾನೆ. ಆಗ ಶಾಂತ ಚಕ್ರವರ್ತಿಯ ಪುತ್ರ ಗಂಗಾ ಪುತ್ರನೇ ಬಂದು ತನ್ನ ತಂದೆಗೆ 'ಮಗಳನ್ನು ಕೊಟ್ಟು ವಿವಾಹ ಮಾಡಿಕೊಡಿ' ಎಂದು ದಾಸರಾಜನನ್ನು ಕೇಳಿದ. ಅದಕ್ಕೆ ಆತ 'ನನ್ನ ಮಗಳಲ್ಲಿ ಹುಟ್ಟಿದ ಮಕ್ಕಳಿಗೆ ರಾಜ್ಯಕೊಡಬೇಕು' ಎಂದಾಗ 'ಆಗಲೀ' ಎಂದು ಒಪ್ಪಿ, ತಾನು ಬ್ರಹ್ಮಚಾರಿಯಾಗಿಯೇ ಉಳಿಯುತ್ತೇನೆಂದು ಆಣೆ ಮಾಡಿ ಹೇಳಿದ. ಹಾಗೆ ಆಣೆ ಮಾಡುವಾಗ ಕಾಮದೇವ ಪ್ರತ್ಯಕ್ಷನಾಗಿ 'ಬೇಡ ಬೇಡವೋ ಗಂಗಾ ಪುತ್ರ ನಿನ್ನ ಸುಖವ ನೀನು ಹಾಳ್ಮಾಡ್ಕೋಬ್ಯಾಡ' ಎಂದಾಗ ಕೋಪದಿಂದ ಕಾಮದೇವನನ್ನು ನೋಡಿದಾಗ ಆತ ಸುಟ್ಟು ಭಸ್ಮವಾದ. ಆ ಭಸ್ಮವನ್ನು ಗಂಗಾಪುತ್ರ ಹಣೆಗೆ ಇಟ್ಟುಕೊಂಡಿದ್ದರಿಂದ 'ಭೀಷ್ಮ' ಎಂದು ಹೆಸರಾದ.

ಅನಂತರ ದಾಸರಾಜ ತನ್ನ ಮಗಳನ್ನು ಶಾಂತರಾಜನಿಗೆ ವಿವಾಹ ಮಾಡಿಕೊಟ್ಟ. ಈ ದಂಪತಿಗಳಿಗೆ ಚಿತ್ರವೀರ, ವಿಚಿತ್ರವೀರ ಎಂಬ ಇಬ್ಬರು ಗಂಡು ಮಕ್ಕಳು ಜನಿಸಿದ ಮೇಲೆ ಶಾಂತರಾಜ ಕಾಲವಾದ. ಭೀಷ್ಮ ಕೌಶಿಕರಾಜನ ಮೂವರು ಪುತ್ರಿಯರನ್ನು ಸ್ವಯಂವರದಲ್ಲಿ ಜಯಿಸಿ ಚಿತ್ರವೀರ, ವಿಚಿತ್ರವೀರರನ್ನು ಮದುವೆ ಆಗಿ ಎಂದ. ಆ ಮೂವರೇ ಅಂಬೆ, ಅಂಬಿಕೆ, ಅಂಬಾಲಿಕೆಯರು.

ಅಂಬೆ 'ಗೆದ್ದು ತಂದೋನೆ ನನ್ನ ಗಂಡ' ಎಂದಾಗ ಅದಕ್ಕೆ ಭೀಷ್ಮರು ಒಪ್ಪುವುದಿಲ್ಲ. ಆಕೆ ಪರಶುರಾಮರ ಹತ್ತಿರ ಹೋಗಿ 'ನನಗೆ ನ್ಯಾಯ ಕೊಡಿಸಿ' ಎಂದು ಕೇಳಿದಳು. ಅವರು ಭೀಷ್ಮರಿಗೆ ಹೇಳಿದರೂ ಒಪ್ಪದೇ ಇದುದ್ದರಿಂದ ಯುದ್ಧಕ್ಕೆ ನಿಲ್ಲು ಎಂದರು. ಯಾರೂ ಸೋಲಲಿಲ್ಲ, ಯಾರೂ ಗೆಲ್ಲಲಿಲ್ಲ. ಹತಾಶಳಾದ ಅಂಬೆ 'ಮುಂದಿನ ಜನ್ಮದಲ್ಲಾದರೂ ನಾನು ಸೇಡು ತೀರಿಸಿಕೊಳ್ಳುವೆ' ಎಂದು ಶಪಥ ಮಾಡುತ್ತಾ ಕೊಂಡಕ್ಕೆ ಬಿದ್ದು ಬೂದಿಯಾದಳು.

ಚಿತ್ರವೀರ ಗಂಧರ್ವ ರಾಜರೊಡನೆ ಯುದ್ಧಮಾಡಿ ಮಡಿದ. ಆಗ ವಿಚಿತ್ರವೀರನಿಗೆ ರಾಜ್ಯದ ಪಟ್ಟಕಟ್ಟಿದರು. ತಾಯಿ ಸುಗಂಧಾದೇವಿ ಬೆಟ್ಟಕೋಟೆಯ ನಾರಾಯಣಸ್ವಾಮಿ ಪೂಜೆ ಮಾಡಿ ಪುರಾಣ ಓದುತ್ತ ಮಗನ ದುಃಖ ಮರೆತಳು. ಭೀಷ್ಮನ ಮೇಲೆ ತಾಯಿ ಹಾಗೂ ನಾದಿನಿಯರ ಮೇಲೆ ಅನುಮಾನಗೊಂಡ ವಿಚಿತ್ರವೀರನು ಅವರನ್ನು ಪರೀಕ್ಷಿಸಿ ಕೊನೆಗೆ ತನ್ನ ತಪ್ಪಿನ ಅರಿವಾಗಿ ಆತ್ಮಹತ್ಯೆ ಮಾಡಿಕೊಂಡ.

ಗಂಡ, ಮಕ್ಕಳನ್ನು ಕಳೆದುಕೊಂಡ ಸುಗಂಧಾದೇವಿ 'ಭೀಷ್ಮನನ್ನು ರಾಜ್ಯಭಾರ ಮಾಡು ಎಂದು ಹೇಳಿದಾಗ' ಅದು ಈ ಜನ್ಮದಲ್ಲಿ ಸಾಧ್ಯವಿಲ್ಲ, ರಾಜ್ಯ, ಪಟ್ಟ ಪದವಿಗಳಿಲ್ಲ ಎಂದ. ನಾದಿನಿಯರಿಗೆ ಗಂಡನಾಗಿ ಮಕ್ಕಳಕೊಡು, ಎಂದಾಗ 'ನಾನು ತಾಯಿಗಂಡ ಆಗ್ತೀನಮ್ಮ ನಾನು ಎಲ್ಲರಿಗೂ ಮಗನೇ ಹೊರ್ತು ಗಂಡ ಆಗದಿಲ್ಲಮ್ಮ' ಎಂದು ಹೇಳಿದ. ಆಗ ಸುಗಂಧಾದೇವಿ ತನಗೆ ಪರಾದಿ ಮುನಿಗಳಿಂದ ಹುಟ್ಟಿದ ವೇದವ್ಯಾಸರಿಂದ ತನ್ನ ವಂಶ ಬೆಳೆಸಿಕೊಳ್ಳಲು ಅನುಮತಿ ಕೇಳಿದಾಗ ಭೀಷ್ಮ ಒಪ್ಪಿದ. ವ್ಯಾಸರನ್ನು ಕರೆದು 'ನನ್ನ ವಂಶ ಉದ್ದಾರ ಮಾಡಬೇಕು' ಎಂದಾಗ 'ಗಂಗಾನದಿ ತೀರದಲ್ಲಿ ನನ್ನ ಆಶ್ರಮವಿದೆ, ಅಲ್ಲಿಗೆ ಒಬ್ಬೊಬ್ಬರಾಗಿ ನಿನ್ನ ಸೊಸೆಯರನ್ನು ಕಳುಹಿಸು' ಎಂದ. ಆಕೆ ಸೊಸೆಯರ ಜೊತೆಗೆ ದಾಸಿಯೊಬ್ಬಳನ್ನೂ ಕಳುಹಿಸಿದಳು. ಅಂಬಿಕೆ ಬಂದಾಗ ಗಡ್ಡದ ಗೊರವಯ್ಯ ತಬ್ಬಲು ಆತನ ವಿಕಾರ ರೂಪನೋಡಿ ಕಣ್ಮುಚ್ಚಿಕೊಂಡು ಗರ್ಭವತಿಯಾದರೆ, ಅಂಬಾಲಿಕೆ ಆತನ ನೋಡಿ ಬಿಳುಚಿಕೊಂಡು ಗರ್ಭವತಿಯಾದಳು. ಅಂಬಿಕೆಗೆ ಧೃತರಾಷ್ಟ್ರ ಎಂಬ ಹುಟ್ಟು ಕುರುಡ ಜನಿಸಿದರೆ,

ಅಂಬಾಲಿಕೆಗೆ ತೊನ್ನು ಶರೀರದ ಪಾಂಡು ಜನಿಸಿದ. ದಾಸಿಗೆ ಜ್ಞಾನಿಯಾದ ವಿದುರ ಎಂಬ ಮಗ ಜನಿಸಿದ. ವ್ಯಾಸರು ಎಲ್ಲರನ್ನು ಹಸ್ತಿನಾವತಿಗೆ ಕಳುಹಿಸಿಕೊಟ್ಟರು.

ಭೋಜರಾಜ ಭೂಮಿ ಪೂಜಿಸಿ ಉಳುವಾಗ ಭೂಮಿತಾಯಿ ಮೇಲೆದ್ದು ಬಂದು ಧನಲಕ್ಷ್ಮಿ, ಸಂತಾನಲಕ್ಷ್ಮಿ ಎನ್ನುವ ಐದು ಮಕ್ಕಳ ಪೆಟ್ಟಿಗೆ ಕೊಟ್ಟಳು. ಧಾನ್ಯಲಕ್ಷ್ಮಿಯಾದ ಕುಂತಿದೇವಿ, ಭೋಜರಾಜನ ಮಗಳಾದಳು. ಇವಳಿಂದಲೇ ರಾಜ್ಯಕ್ಕೆ 'ಕುಂತಲ' ಎಂದೂ 'ಆ ಕುಂತಿಯೇ ನಮಗೆ ಕೊಂತಮ್ಮ ಆದಳು'. ಕುಂತಿ ಪಡೆದ ಮೇಲೆ ಭೋಜರಾಜನಿಗೆ ಮತ್ತೊಂದು ಹೆಣ್ಣು ಮಗು ಆಯಿತು. ಅವಳೇ ಮಾದ್ರಿ.

ಕುಂತಿ ದೂರ್ವಾಸರಿಂದ ಪಡೆದ ವರವನ್ನು ಪರೀಕ್ಷಿಸುತ್ತಾ ಸೂರ್ಯನಿಂದ ಮಗುವೊದನ್ನು ಪಡೆದಳು. ಅನಂತರ ತನ್ನ ತಪ್ಪಿನ ಅರಿವಾಗಿ ಅದನ್ನು ಅಂಬಿಗರ ಚೌಡಯ್ಯನಿಗೆ ಕೊಟ್ಟಳು. ಅವನು ಆ ಮಗುವಿಗೆ 'ಕರಣ' ಎಂದು ಹೆಸರಿಟ್ಟು ಬೆಳೆಸಲಾರಂಭಿಸಿದ. ಗಾಂಧಾರ ರಾಜನನ್ನು, ಹುಟ್ಟು ಕುರುಡ ಧೃತರಾಷ್ಟ್ರನಿಗೆ ಭೀಷ್ಮ ಅರ್ಧ ರಾಜ್ಯ ಕೊಡಿಸ್ತೀನಿ ಎಂದು ಮದುವೆಗೊಪ್ಪಿಸುತ್ತಾನೆ. ಭೀಷ್ಮರ ಮಾತು ಕೇಳಿ ಗಾಂಧಾರರಾಜನು ಮಗಳ ಕೊಡೋದಕ್ಕೆ ಒಪ್ಪಿಕೊಂಡ. ಅಲ್ಲಿಂದ ಭೀಷ್ಮರು ಭೋಜರಾಜನ ಕುಂತಲ ನಾಡಿಗೆ ಬಂದು ಕುಂತಿಯನ್ನು ಪಾಂಡುರಾಜನಿಗೆ ತರಲು ಕೇಳಿದಾಗ 'ನನ್ಗೆ ಇಬ್ಬರೆಣ್ಣು ಮಕ್ಕಳು ಒಬ್ಬಾಳ ಬುಟ್ಟು ಇನ್ನೊಬ್ಬಳು ಇರಲ್ಲೊಳ್ಳು ಈ ಇಬ್ಬರು ಮಕ್ಕಳ್ಲೂ ನಿಮ್ಮ ಮನೆಗೆ ಸೇರುಸ್ಕೊಳ್ಳಿ' ಎಂದಾಗ ಪಾಂಡು ರಾಜನಿಗೆ ಕೊಂತಿ ಹಾಗೂ ಮಾದ್ರಿಯನ್ನು ಮದುವೆ ಮಾಡಿಸಿದರು.

ಪಾಂಡುರಾಜ ಬೇಟೆಯಾಡುತ್ತಾ ಬರುವಾಗ ಶಿವ-ಪಾರ್ವತಿಯರು ಜಿಂಕೆಗಳಾಗಿ ರತಿ ಕ್ರೀಡೆಯಲ್ಲಿ ತೊಡಗಿರುತ್ತಾರೆ. ಆಗ ಪಾಂಡು ಬಾಣ ಹೊಡೆದಾಗ ಗಂಡು ಜಿಂಕೆ ಪ್ರಾಣ ಬಿಟ್ಟಿತು. ಹೆಣ್ಣು ಜಿಂಕೆ 'ನೀನೂ ಹೆಂಡತಿ ಕೂಡಿದಾಗ ನಿನಗೆ ಸಾವಾಗಲಿ' ಎಂದು ಶಾಪ ನೀಡಿತು.

ವ್ಯಾಸರು ಧೃತರಾಷ್ಟ್ರನಿಗೆ 'ನಾನು ಕೊಡುವ ಪಿಂಡ ಪ್ರಸಾದವನ್ನು ಸೇವಿಸಿದರೆ ಗಾಂಧಾರಿಗೆ ಮಕ್ಕಳಾಗುತ್ತದೆ' ಎಂದು ಕೊಟ್ಟರು. ಈ ವಿಷಯ ತಿಳಿದ ಗಾಂಧಾರಿ ತನ್ನ ಮಕ್ಕಳಿಗೆ ರಾಜ್ಯ ದೊರೆಯುತ್ತದೆಂದು ಸಂತೋಷಪಟ್ಟಳು. ಇತ್ತ ಪಾಂಡುರಾಜ ಮಕ್ಕಳಿಲ್ಲವೆಂದು ಚಿಂತೆ ಮಾಡುವಾಗ ಕುಂತಿ ದೂರ್ವಾಸರ ವರದ ವಿಚಾರವನ್ನು ಹೇಳಿ ಯಮಧರ್ಮನ ನೆನೆದು ವೈಢೂರ್ಯವನ್ನು ಮುಗಿಲಿಗೆಸೆದಳು ಯಮಧರ್ಮ ಮಗು ಕರುಣಿಸಿದ. ಆ ಮಗುವಿಗೆ ಧರ್ಮರಾಜನೆಂದು ಹೆಸರಿಟ್ಟರು.

ಗಾಂಧಾರಿ ಹೊಟ್ಟೆಯಲ್ಲಿ ನೂರೊಂದು ಜಾತಿಯ ಹಾವುಗಳು ಹರಿದಾಡಿದಂತಾಗಿ ಚಿಟ್ಟನೆ ಚೀರಿ ಬಾಯಿ ಬಾಯಿ ಬಡ್ಕೊಳ್ತಾ ಹೊಟ್ಟೆ ಗುದ್ದುಕೊಂಡ್ಲು. ಆಗ ಗರ್ಭದಲ್ಲಿದ್ದ ಭ್ರೂಣ ನೂರೊಂದು ಚೂರಾಗಿ ನೆಲಕ್ಕೆ ಬಿದ್ದವು ರಕ್ಷಿಸಿದ ಆ ಚೂರುಗಳಿಂದ ೯೯ ಗಂಡು ಒಂದು ಹೆಣ್ಣು ಮಕ್ಕಳಾದವು. ಇತ್ತ ಕುಂತಿಗೆ ವಾಯುದೇವರಿಂದ ಭೀಮ, ದೇವೇಂದ್ರನಿಂದ ಅರ್ಜುನು, ಅಶ್ವಿನಿದೇವರಿಂದ ನಕುಲ-ಸಹದೇವರೆಂಬ ಅವಳಿ ಮಕ್ಕಳು ಮಾದ್ರಿಗೆ ಜನಿಸಿದರು. ಇತ್ತ ಪಾಂಡುರಾಜ ಜಿಂಕೆಯ ಶಾಪದಂತೆ ಮಾದ್ರಿಯೊಡನೆ ಸಂಭೋಗ ಮಾಡುವಾಗ ನಿಧನನಾದ.

ಡಂಬಕಾಸುರನ ಸಹಸ್ರ ಕವಚಗಳಲ್ಲಿ ಕೊನೆಯ ಕವಚದೊಡನೆ ಕರ್ಣ ಕುಂತಿಯ ಮಗನಾಗಿ ಹುಟ್ಟಿದರೂ ಅಂಬಿಗರ ಚೌಡಯ್ಯನ ಬಳಿ ಬೆಳೆಯುತ್ತಿರುತ್ತಾನೆ. ಕರ್ಣನಿಗೆ ಬಿಲ್ಲು ವಿದ್ಯೆ ಕಲಿಯುವಾಸೆ. ಆದರೆ ಆತನ ಸಾಕು ತಂದೆ ಅಂಬಿಗರ ಚೌಡಯ್ಯನಿಗೆ ತನ್ನ ಕುಲ ಕಸುಬು ಮಾಡಿಸಬೇಕೆಂಬ ಆಸೆ. ಎಷ್ಟೇ ಆದರೂ ಕರ್ಣ ಕ್ಷತೀಯ ವಂಶಸ್ಥನಲ್ಲವೇ? ಕರ್ಣನ ಮೈಗೆ ಅಂಟಿರುವ ಕವಚವನ್ನು ಇಂದ್ರ ಬ್ರಾಹ್ಮಣನ ವೇಷದಲ್ಲಿ ಬಂದು ಕೇಳಿದಾಗ ಕರ್ಣನಿಗೆ ಅರಿವಾಗುತ್ತದೆ. ನನ್ನ ಈ ಕವಚವನ್ನು ಯಾರೂ ಅರಿಯರು ನೀನು ಮಾನವನಲ್ಲ ಎಂದು ಹರಿದು ಕೊಡುವಾಗ ಇಂದ್ರ ಪ್ರತ್ಯಕ್ಷನಾಗಿ 'ನಿನ್ನ ಕೀರ್ತಿ ಹೆಚ್ಚಲಿ ದಾನ ಶೂರ' ಎಂದು ಹರಸಿಹೋದ.

ಪರಶುರಾಮರು ಬ್ರಾಹ್ಮಣರಿಗೆ ಮಾತ್ರ ಬಿಲ್ವಿದ್ಯೆ ಕಲಿಸುತ್ತಾರೆಂದು ತಿಳಿದ ಕರ್ಣ ಬ್ರಾಹ್ಮಣರ ವೇಷದಲ್ಲಿ ಬಂದು ಬಿಲ್ವಿದ್ಯೆ ಕಲಿಯುತ್ತಿರುತ್ತಾನೆ. ಒಮ್ಮೆ ಪಯಣದಲ್ಲಿರುವಾಗ ಪರಶುರಾಮರು ಕರ್ಣನ ತೊಡೆಯ ಮೇಲೆ ಮಲಗಿದರು. ಆಗ ಇಂದ್ರ ದುಂಬಿಯಾಗಿ ಬಂದು ಕರ್ಣನ ತೊಡೆಯನ್ನು ಕೊರೆದು ರಕ್ತ ಬಂದರೂ ಎದೆಗುಂದದೆ ನೋವನ್ನು ಸಹಿಸಿಕೊಂಡ. ರಕ್ತದ ವಾಸನೆಯಿಂದ ಎಚ್ಚರಗೊಂಡ ಪರಶುರಾಮರು 'ನೀನು ಬ್ರಾಹ್ಮಣನಲ್ಲ ಕ್ಷತ್ರಿಯನೇ ಇರಬೇಕು. ನೀನು ಸುಳ್ಳು ಹೇಳಿದ್ದೀಯಾ, ನಾನು ಕಲಿಸಿದ ವಿದ್ಯೆ ನಿನ್ನ ಆಪತ್ಕಾಲದಲ್ಲಿ ಹಾಳಾಗಲಿ' ಎಂದು ಶಪಿಸಿ ಹೊರಟು ಹೋದರು. ಕರ್ಣನು ದುಃಖದಿಂದ ಮನೆಗೆ ಮರಳಿದಾಗ ಸಿರಿದೇವಮ್ಮ ಹಾಗೂ ಅಂಬಿಗರ ಚೌಡಯ್ಯನವರಿಗೆ ಸಂತೋಷವಾಯಿತು.

ದ್ರುಪದರಾಜ ದ್ರೋಣನ ಮಿತ್ರ. ಒಂದೇ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡಿದವರು. ಒಮ್ಮೆ ದ್ರುಪದರಾಜ ನೀರಿನಲ್ಲಿ ಮುಳುಗಿ ಹೋಗುತ್ತಿರುವಾಗ ದ್ರೋಣ ಅವನನ್ನು ಬದುಕಿಸಿದ. ಆಗ ದ್ರುಪದ 'ನಾನು ರಾಜನಾದಾಗ ನಿನಗೆ ಅರ್ಧರಾಜ್ಯವನ್ನು ಕೊಡುತ್ತೇನೆ' ಎಂದು ವಚನಕೊಟ್ಟು ಹೋದ.

ದ್ರೋಣ ಬಡತನದಲ್ಲಿರುವಾಗ ದ್ರುಪದರಾಜನ ನೆನಪಾಗಿ ಆತನ ಅರಮನೆಗೆ ಬಂದಾಗ 'ನೀನಾರು? ಹೋಗು?' ಎಂದು ಅಪಮಾನಿಸಿ ಹೊರಗೆ ಕಳುಹಿಸಿದ. ದ್ರೋಣ 'ನಿನಗೆ ಪ್ರತೀಕಾರ ತೀರಿಸಿಕೊಳ್ಳದಿದ್ದರೆ ನಾನು ಬ್ರಾಹ್ಮಣನೇ ಅಲ್ಲವೆಂದು' ಪ್ರತಿಜ್ಞೆ ಮಾಡಿ ಹೊರಟುಹೋದ. ದ್ರೋಣ ಪರಶುರಾಮರಲ್ಲಿ ಹೋಗಿ ಸಹಾಯ ಕೇಳಿದಾಗ 'ನನ್ನಲ್ಲಿ ಈ ಶಸ್ತ್ರಗಳಿವೆ ತೆಗೆದುಕೊಂಡು ಹೋಗು' ಎಂದು ಆಶೀರ್ವಾದಿಸಿ ಕಳುಹಿಸಿಕೊಟ್ಟರು.

ಭೀಷ್ಮರು ದ್ರೋಣನಿಗೆ ತಮ್ಮ ಮೊಮ್ಮಕ್ಕಳಾದ ಪಾಂಡವರು, ಕೌರವರಿಗೆ ಬಿಲ್ವಿದ್ಯೆ ಕಲಿಸಲು ಹೇಳಿದರು. ದ್ರೋಣ ಪಾರ್ಥನಿಗೆ 'ಕಾಶೀತೀರ್ಥ ತಂದರೆ ವಿದ್ಯೆ ಹೇಳಿಕೊಡುವೆ' ಎಂದಾಗ ಪಾರ್ಥನು ಹಾರೋ ಚಾಪೆಯಲ್ಲಿ ಹೋಗಿ ತಂದುಕೊಡುತ್ತಾನೆ. ದುರ್ಯೋಧನನಿಗೆ ಹೇಳಿಕೊಡುವ ಬಿಲ್ವಿದ್ಯೆಯನ್ನು ಅರ್ಜುನ ನೋಡಿಯೇ ಪ್ರಯೋಗಿಸುತ್ತಾನೆ. 'ಬೆರಳು ತೋರಿಸಿದರೆ ಹಸ್ತವನ್ನು ನುಂಗುವಂತೆ' ಅರ್ಜುನ ಬಿಲ್ವಿದ್ಯೆಯಲ್ಲಿ ಪಾರಂಗತನಾಗುತ್ತಾನೆ.

ದುರ್ಯೋಧನನ ರಥದ ಕಡಾಣಿ ಕಳಚಿದಾಗ ಕರ್ಣ ಬಾಣದಿಂದ ಕಡಾಣಿ ಮಾಡಿ ರಕ್ಷಿಸಿದ. ಇದರಿಂದ ಸಂಪ್ರೀತನಾದ ದುರ್ಯೋಧನ ಕರ್ಣನನ್ನು ಹಸ್ತಿನಾಪುರಕ್ಕೆ ಸೇರಿಸಿಕೊಂಡ. ಕೌರವಾದಿಗಳಿಗೆ ದ್ರೋಣರು ಗುರು ಕಾಣಿಕೆ ಕೇಳಿದಾಗ, ಅವರು ಏನು ಬೇಕೆಂದು ಕೇಳಿದರು. 'ದ್ರುಪದ ರಾಜನ ಗೆದ್ದು ನನ್ನ ಮಂಚದ ಕಾಲಿಗೆ ಆತನನ್ನು ಕಟ್ಟಬೇಕು' ಎಂದರು. ಆದರೆ ಕೌರವನಿಂದ ಆ ಕಾರ್ಯ ಆಗದಿರಲು ಅರ್ಜುನನಿಗೆ ಹೇಳಿದರು. ಆತ ದ್ರುಪದನನ್ನು ಗೆದ್ದು ಬಂಧಿಸಿ ತಂದು ಗುರುಗಳ ಮಂಚದ ಕಾಲಿಗೆ ಕಟ್ಟಿದಾಗ ದ್ರೋಣರು ಸಂತೋಷಗೊಂಡರು. ದ್ರುಪದ ತನಗಾದ ಅವಮಾನ ಸಹಿಸದೆ ತಪಸುಮಾಡಿ ಶಿವನ್ನು ವರಕೇಳಿದ: 'ಅರ್ಜುನ ಅಳಿಯನಾಗಬೇಕು, ದ್ರೋಣನ ಕೊಲ್ಲುವ ಮಗ ಹುಟ್ಟಬೇಕು, ಅರ್ಜುನನಿಗೆ ಕೊಡುವಂತ ಮಗಳು ಬೇಕು' ಎನ್ನಲು ಬೆಂಕಿಯ ಕೊಂಡದಿಂದ ಪಾರ್ವತಿದೇವಿ ಶುದ್ಧಳಾಗಿ ದ್ರುಪದರಾಜನ ಮಗಳಾಗಿ ಎದ್ದು ಬಂದಳು.

ಗಾಂಧಾರಿ ವ್ಯಾಸರನ್ನು ಕುರಿತು 'ನನ್ನ ಮಕ್ಕಳು ವಜ್ರಕಾಯರಾಗಿರಬೇಕು' ಎಂದು ಕೇಳಿದಳು. ಆಗ 'ನೀನು ಗಜಗೌರಿ ವ್ರತಮಾಡು' ಎಂದರು. ಗಾಂಧಾರಿ ಈ ವ್ರತಕ್ಕೆ ಕುಂತಿ ಹಾಗೂ ಅವಳ ಮಕ್ಕಳನ್ನು ಕರೆಯದಿರಲು ನಿರ್ಧರಿಸಿದ್ದಳು. ಹದಿನಾರು ಸಾವಿರ ಬ್ರಾಹ್ಮಣರಿಗೆ ಗೋದಾನ ಮಾಡಿ, ಮುತ್ತೈದೆಯರಿಗೆ ಬಾಗಿನ ಕೊಟ್ಟಳು. ಗಾಂಧಾರಿ ಮಗ ಸುಯೋಧನನ್ನು 'ಸ್ನಾನ ಮಾಡಿ ಹುಟ್ಟಿದ ನಿರ್ವಾಣದಲ್ಲಿ ಬಾ ಆಶೀರ್ವಾದ ಮಾಡ್ತೀನಿ' ಎಂದಾಗ ಆತ ಹಾಗೆಯೇ ಬರುವಾಗ ಅಲ್ಲಿಗೆ ಕೃಷ್ಣ

ಬಂದು 'ಈ ಥರ ಹೋಗ್ತೀಯಲ್ಲ ನಿನ್ನ ಮರ್ಮಸ್ಥಾನ ಮುಚ್ಚಿಕೋ' ಎಂದು ಬಟ್ಟೆ ಕೊಟ್ಟಾಗ ಅದರಿಂದ ಮಾನ ಮುಚ್ಚಿಕೊಂಡು ಬಂದ. ಗಾಂಧಾರಿ ಮಗನ ಸೊಂಟಕ್ಕೆ ಕೈ ಹಾಕಿದಾಗ ಬಟ್ಟೆ ಇರುವುದನ್ನು ಗಮನಿಸಿ ಕೆಟ್ಟೆ ಮಗನೆ, ನಿನ್ನ ತೊಡೆಸಂದು ಮರ್ಮಸ್ಥಾನ ವಜ್ರವಾಗಲಿಲ್ಲ, ಎಂಥ ಕೆಲಸ ಮಾಡಿದೆ ಎಂದು ಕಣ್ಣೀರು ಹಾಕುತ್ತಾ ಅರಮನೆಗೆ ಹೋದಳು.

ಕುಂತಿಗೂ ಗಜಗೌರಿವ್ರತ ಮಾಡಲು ಆಸೆಯಾಯಿತು. ಅರ್ಜುನ ತಾಯಿಗೆ 'ನಿನ್ನ ಗಜನೋಂಪಿಗೆ ನಾನು ಇಂದ್ರಲೋಕದ ಐರಾವತವನ್ನು ತರ್ತೀನೆ' ಎಂದು ಇಂದ್ರನಿಗೆ ಓಲೆ ಬರೆದು ಬಾಣದ ಮೂಲಕ ಇಂದ್ರಲೋಕಕ್ಕೆ ಕಳುಹಿಸಿದ. ಪತ್ರ ನೋಡಿ ಸಿಟ್ಟಾದ ಇಂದ್ರನನ್ನು ನಾರದರು ಸಮಾಧಾನಿಸಿ 'ಆತ ನಿನ್ನ ಮಗನಲ್ಲವೆ? ನಿನ್ನ ವರದಿಂದ ಹುಟ್ಟಿದವ' ಎಂದು ಜ್ಞಾಪಿಸುತ್ತಾರೆ. ಆಗ ಆತ ಬೇಕಾದುದನ್ನು ತೆಗೆದು ಕೊಂಡು ಹೋಗಿ ಎಂದು ಓಲೆ ಬರೆದ. 'ನಮ್ಮ ಒಡಲಿಗೆ ಒಡೆಯನ್ನೇ ಬಕುತರ ಪೊರೆವನೆ ಉಡುಪಿಯ ಕೃಷ್ಣನೆ ಕಾಪಾಡು' ಎಂದು ಅರ್ಜುನ ಐರಾವತ ಇಳಿಸಲು ಬಾಣಬಿಟ್ಟ, ದಶಕೋಟಿ ಶತಕೋಟಿ ಸಹಸ್ರಕೋಟಿಯಾಗಿ ಒಂದಕ್ಕೊಂದು ಸೇರಿ ಸೋಪಾನವಾಯ್ತು, ಪಟ್ಟಾದಾನೆ ಬರುವಾಗ ಪಟಪಟ ಎನಲು, ಅರ್ಜುನ ಪರಮಾತ್ಮನ ನೆನೆದ. ಭೀಮ ಹೆಗಲುಕೊಟ್ಟು, ಸೋಪಾನ ನಿಲ್ಲಿಸಿದ. ಇಲ್ಲಿ ವೀರರಸ ಚಿಮ್ಮಿರುವುದನ್ನು ಕಾಣಬಹುದು.

ಗಜನೋಂಪಿ ವ್ರತಕ್ಕೆ ಗಾಂಧಾರಿ-ಧೃತರಾಷ್ಟ್ರರ ಕರೆಯಲು ನಿರಾಕರಿಸಿದ ಕುಂತಿಯನ್ನು ಕುರಿತು ಕೃಷ್ಣನು ಸಮಾಧಾನಿಸಿದನು.

ಶಕುನಿ ಅರಗಿನ ಮನೆ ಕಟ್ಟಿಸಿ ಪಾಂಡವರ ಸುಟ್ಟರೆ ರಾಜ್ಯ ನಿನಗಾಗುತ್ತದೆಂದು ದುರ್ಯೋಧನನಿಗೆ ಹೇಳಿದಾಗ ಹಾಗೆಯೆ ಮಾಡಿಸುತ್ತಾನೆ. ಆದರೆ ಕೃಷ್ಣನ ದಯೆಯಿಂದ ಪಾಂಡವರು ಅಲ್ಲಿಂದ ಪಾರಾಗಿ ಏಕಚಕ್ರಪುರವನ್ನು ಸೇರಿದರು.

ಏಕಚತ್ರಪುರದಲ್ಲಿ ಬಕಾಸುರನೆಂಬ ರಾಕ್ಷಸನನ್ನು ಭೀಮ ಸಂಹರಿಸಿದಾಗ ಊರಿನವರಿಗೆಲ್ಲಾ ಸಂತೋಷವಾಗಿ ಭೀಮನಿಗೆ ಬಹುಮಾನ ಕೊಟ್ಟರು. ಪಾಂಚಾಲ ದೇಶದ ದೊರೆ 'ತೊಂದರೆ ಕೊಡುತ್ತಿದ್ದ ಮಾರೀಚಕಾಗೆಯನ್ನು ಕೊಂದ ಮಾನ್ಯರಿಗೆ ದ್ರೌಪದಿ ಕೊಟ್ಟು ವಿವಾಹ ಮಾಡ್ತೀನಿ' ಅಂತ ಡಂಗುರ ಸಾರಿಸಿದಾಗ ಬ್ರಾಹ್ಮಣ ವೇಷದಲ್ಲಿ ಅರ್ಜುನನೂ ಬರುತ್ತಾನೆ. ವಿಷ್ಣುಕೊಂದ ಹಿರಣ್ಯಾಕ್ಷನ

ಒಂದು ತೊಟ್ಟು ರಕ್ತ ಮಾರೀಚ ಕಾಗೆಯಾಗಿ ಭಕ್ತರ ತಪಕೆಡಿಸುತ್ತಿರುತ್ತದೆ. ಅದು ಯಾರ ಕಣ್ಣಿಗೂ ಕಾಣದು. ಶಬ್ಧವೇಧಿ ತಿಳಿದವ ಮಾತ್ರ ಹೊಡೆದು ಹಾಕಬಲ್ಲ.

ಅರ್ಜುನ ದ್ರೌಪದಿ ಸ್ವಯಂವರದಲ್ಲಿ ಮಾರೀಚ ಕಾಗೆಗೆ ಬಾಣ ಹೊಡೆದಾಗ ಕಾಗೆ ಸತ್ತಿತ್ತು. ದ್ರೌಪದಿ ಅರ್ಜುನನಿಗೆ ಮಾಲೆ ಹಾಕಿದಳು. ಅರ್ಜುನ ತಾಯಿ ಕುಂತಿಗೆ 'ಹೆಣ್ಣು ತಂದಿದ್ದೀನಿ' ಎಂದಾಗ 'ನೀವು ತಂದುದ ಐದು ಜನ ಸಮಪಾಲು ಮಾಡಿಕೊಳ್ಳಿ' ಎಂದಳು. ಆತ 'ಹಣ್ಣಲ್ಲ ಹೆಣ್ಣು' ಎಂದರೂ 'ನೀವು ತಂದುದ ಐದು ಜನರು ಹಂಚಿಕೊಳ್ಳಿ ನನ್ನ ಮೇಲಾಣೆ' ಎಂದಳು. ಅದರಂತೆ ಪಾಂಡವರು ದ್ರೌಪದಿಯನ್ನು ವಿವಾಹವಾದರು.

ಧರ್ಮರಾಜ ಐವರಿಗೂ ಒಬ್ಬಳೇ ಹೆಂಡತಿ ಮಾಡಿದುದಕ್ಕೆ ಬೇಜಾರು ಮಾಡಿಕೊಂಡು ನಾರದರಿಗೆ ಹೇಳುತ್ತಾನೆ. ಅವರು 'ಇದು ವಿಧಿ ಬರಹ. ಇದರಿಂದ ಏನೂ ದೋಷವಿಲ್ಲ. ನೀವು ಮಾನವನ ರೂಪನಲ್ಲಿರೋ ಶಿವನ ಅಂಶಗಳು ದ್ರೌಪದಿ ಪಾರ್ವತಿ'. ಶಿವನನ್ನು ಕುರಿತು ಪಾರ್ವತಿ ತಪಸ್ಸು ಮಾಡುತ್ತಿರುವಾಗ ಬ್ರಹ್ಮ ವಿಷ್ಣು, ಈಕೆಯ ಮೊರೆ ಕೇಳಲು 'ಪಾರ್ವತಿ ಐದು ಸಲ ಪತಿ ಭಿಕ್ಷಾಂದೇಹಿ' ಎಂದು ಕೇಳಿಕೊಂಡಾಗ, ಪರಮೇಶ್ವರನು ತನ್ನ ಅಂಶದ ಐವರನ್ನು ಭೂಮಿಗೆ ಕಳುಹಿಸುತ್ತಾನೆ. ಅವರೇ ವಾಯು, ಯಮ, ಇಂದ್ರ, ಅಶ್ವಿನೀ ದೇವತೆಗಳು. ತಾಮ್ರಕೇಶಿ ಪಾರ್ವತಿ ಮುಟ್ಟಿ ಮೈಲಿಗೆ ಮಾಡಿದುದಕ್ಕೆ ಪಾರ್ವತಿ ಅಗ್ನಿಸ್ನಾನ ಮಾಡಿ ಜನನವಾಗಿದ್ದಾಳೆ. ಆದ್ದರಿಂದ ನೀವು ಇದರಲ್ಲಿ ದೋಷವೆಣಿಸಬೇಡಿ. ಒಂದೊಂದು ವರ್ಷದ ಅವಧಿಗೆ ಒಬ್ಬೊಬ್ಬ ಗಂಡನಾಗಿ ದ್ರೌಪದಿಯನ್ನು ಸಂತೋಷ ಪಡಿಸಬೇಕು, ಕಟ್ಟಿ ಆಳಬೇಕು ಎಂದರು. ಅದರಂತೆ ದ್ರೌಪದಿ ಪಾಂಡವರು ನಡೆದುಕೊಳ್ಳತೊಡಗಿದರು. ಈ ವ್ಯವಸ್ಥೆಯ ಬಗ್ಗೆ ಜನಪದ ಕವಿ ಹೆಣದಿರುವ ಕಲ್ಪನೆ ನೂತನವಾಗಿದ್ದು ಅವನ ಪ್ರತಿಭೆಗೆ ನಿದರ್ಶನವಾಗಿತ್ತದೆ. ಈ ಕಥೆ ರೇಣುಕಾ ಕಥೆಯನ್ನು ಹೋಲುತ್ತದೆ.

ಪಾಂಡುರಾಜ ಸ್ವರ್ಗಸಿಗಲಿಲ್ಲ ಎಂದು ದುಃಖ ಪಡುವ ವಿಷಯವನ್ನು ನಾರದರು ಹೇಳಿದರು. ಆತ ಏನೂ ಪುಣ್ಯಕೆಲಸವನ್ನು ಮಾಡಲಿಲ್ಲ. ಸಂಸರ್ಗದಲ್ಲಿದ್ದ ಜಿಂಕೆ ಸಾಯಿಸಿದ್ದರಿಂದ ಅದರ ಶಾಪದಿಂದ ನರಕಪ್ರಾಪ್ತಿಯಾಗಿದೆ. ರಾಜಸೂಯಯಾಗ ಮಾಡಿ ಎಂದು ನಾರದರು ಪಾಂಡವರಿಗೆ ಹೇಳಿದರು. ಅದರಂತೆ ಪಾಂಡವರು ರಾಜಸೂಯಯಾಗವನ್ನು ಮಾಡಿದಾಗ ಅಗ್ರ ಪೂಜೆ ಸಲ್ಲಿಸಲು ಭೀಷ್ಮರನ್ನು ಕರೆಸಿದರು. ಅವರು ಇದು ಕೃಷ್ಣನಿಗೆ ಸಲ್ಲಬೇಕು ಎಂದರು. ಆಗ ಅದನ್ನು ವಿರೋಧಿಸಿ ಶಿಶುಪಾಲನು ಕೃಷ್ಣನನ್ನು ನಿಂದಿಸತೊಡಗಿದ. ನೂರು ತಪ್ಪಾಗುವವರೆಗೂ ಕೃಷ್ಣ ಸುಮ್ಮನಿದ್ದು ಅನಂತರ

ಆತನ ಶಿರಚ್ಛೇದನ ಮಾಡಿದ. ಆಗ ಆತ 'ನಿನ್ನಿಂದ ಮುಕ್ತಿ ಪಡೆದೆ. ನಾವು ಜಯವಿಜಯರು, ಸನಕ ಸನಂದ ಋಷಿಗಳನ್ನು ತಡೆದ ತಪ್ಪಿಗೆ ಈ ಜನ್ಮದಲ್ಲಿ ಶಿಶುಪಾಲಕರಾಗಿದ್ದೋ' ಎಂದು ವೈಕುಂಠಕ್ಕೆ ತೆರಳಿದರು. ರಾಜಸೂಯಯಾಗದಲ್ಲಿ ದಾನಧರ್ಮವಾಯಿತು. ಶ್ರೀಕೃಷ್ಣನಿಗೆ ಅಗ್ರ ಪೂಜೆಯು ಸಂದಿತು. ಬ್ರಾಹ್ಮಣರು ನಿಮ್ಮ ತಂದೆಗೆ ಸ್ವರ್ಗವಾಗಲಿ' ಎಂದು ಹರಸಿದರು. 'ನಾಲಿಗೆ ಇಲ್ಲದ ಬೆಳ್ಳಿಗಂಟೆ ಕಟ್ಟಿ, ಅದು ನಾದ ಮಾಡಿದರೆ ಸ್ವರ್ಗ ಪ್ರಾಪ್ತಿಯಾಯ್ತು ಅಂತ ತಿಳಿದುಕೊಳ್ಳಿ' ಎಂದ ಕೃಷ್ಣ ಗಂಟಾನಾದವಾಯಿತು, ಪಾಂಡುರಾಜನಿಗೆ ಸ್ವರ್ಗಪ್ರಾಪ್ತಿ ಆಯಿತು.

ಬಲರಾಮನು ಸುಭದ್ರೆಯನ್ನು ದುರ್ಯೋಧನನಿಗೆ ವಿವಾಹ ಮಾಡಿಕೊಡುವ ವಿಷಯ ತಿಳಿದ ಕೃಷ್ಣನು ಅವಳನ್ನು ಅರ್ಜುನನ ಜೊತೆಯಲ್ಲಿ ವಿವಾಹ ಮಾಡಿಸಿದನು. ಸುಭದ್ರೆ ಬರದೆ ಹೋಗಲು ಗಾಂಧಾರಿ ದೊಡ್ಡಪ್ಪನ ಮಗ ಕಾಳಿಂಗಾರಾಯನ ಮಗಳು ಭಾನುಮತಿಯೊಂದಿಗೆ ದುರ್ಯೋಧನನ ಕಲ್ಯಾಣವಾಯಿತು. ಕೃಷ್ಣ ಪಾಂಡವರಿಗೆ 'ಐದು ತಲೆಯಲ್ಲಿ ಯಾರಾದ್ರೂ ಒಂದು ತೊಟ್ಟು ರಕ್ತ ಬೀಳುವುದಕ್ಕೂ ಅವಕಾಶ ಕೊಟ್ರೆ ನನ್ನ ತಲೆ ಸಹಸ್ರ ಹೋಳು ಅಂತ ಅಭಯ ಕೊಟ್ಟಿದ್ದೇನೆ' ಎಂದು ಕೇಳುತ್ತಾನೆ.

ಪಾಂಡವರ ಅರಮನೆಗೆ ಕೃಷ್ಣ ಬಂದಾಗ ಭೋಜನ ಮಾಡಿಸಿ ಮಾವಿನ ಹಣ್ಣು ನೀಡಿದಾಗ ಕೃಷ್ಣ ಅದನ್ನು ಕತ್ತರಿಸುವಾಗ ಬೆರಳಿಗೆ ತಗುಲಿ ರಕ್ತ ಬರಲಾರಂಬಿಸಿತು. ಆಗ ದ್ರೌಪದಿ ತನ್ನ ಸೀರೆಯ ಸೆರಗನ್ನು ಹರಿದು ಕಟ್ಟುವಳು ಪರಮಾತ್ಮ 'ನಿನ್ನ ಸೀರೆ ಅಕ್ಷಯವಾಗಲಿ' ಎಂದನಲ್ಲದೆ,

**ಕೆಟ್ಟ ಮನಸ್ಸಿನಲ್ಲಿ ನಿನ್ನ ವಸ್ತ್ರಾಕ್ಕೆ**
**ಕೈ ಇಟ್ಟರೆ ಪಾಪಿಗಳು**
**ಮುಟ್ಟಿದ ಆ ದುಷ್ಟರ ಹುಟ್ಟಡಗಿ ಹೋಗಲಿ**[೧೮]

ಎಂಬ ವರ ಕೊಟ್ಟ. ದ್ರೌಪದಿ ತನ್ನ ಉಟ್ಟ ಸೀರೆಯನ್ನು ಹರಿದು ಕೊಡುವ ಪ್ರಸಂಗ ಕೃಷ್ಣ ದ್ರೌಪದಿಯರ ಪವಿತ್ರ ಪ್ರೀತಿಯ ದ್ಯೋತಕವಾಗಿದೆ. ಇದು ಜನಪದ ಮಹಾಭಾರತದಲ್ಲಿ ಮಾತ್ರ ಕಂಡುಬರುವಂಥದು. ಕೃಷ್ಣ ಕೊಟ್ಟ ವರ ಭವಿಷ್ಯದ ಸೂಚನೋ ಎಂಬಂತೆ ಜನಪದ ಕವಿ ಕಲ್ಪಿಸಿಕೊಂಡಿರುವುದು ಅರ್ಥಗರ್ಭಿತವಾಗಿದೆ.

ದ್ರೌಪದಿ ಜೊತೆ ಅರ್ಜುನ ಪಗಡೆ ಆಡುವಾಗ ಸೋತ. ಆಗ ದ್ರೌಪದಿ 'ಜೋಗಿವೇಷ ತಾಳಿಕೊಂಡು ಅಲಿಯಲಿಕ್ಕೆ ನೀನು ಲಾಯಕ್ಕು' ಎನ್ನುತ್ತಾಳೆ. ಆಗ ಅರ್ಜುನ ಜೋಗಿ ದೀಕ್ಷೆ ಪಡೆದು ಊರೂರು ತಿರುಗುವಾಗ ಎಲ್ಲರೂ ಈತನ ಹಾಡು ನೃತ್ಯಕ್ಕೆ ಮಾರು ಹೋಗಿ, ಆಕರ್ಷಿತಾಗುತ್ತಾರೆ. 'ಲಕ್ಷ ನಕ್ಷತ್ರಗಳು ಚಂದಿರನ ಮುತ್ತಿದಂತೆ ಜೋಗಿಯನ್ನು ವೇಶ್ಯೆಯರು ಮುತ್ತಿದರು' ಎನ್ನುವಲ್ಲಿ ಉಪಮಾಲಂಕಾರವಿರುವುದನ್ನು ಗಮನಿಸಬಹುದು.

ಕೊಮ್ಮಟಿಗ ಸ್ತ್ರೀಯರು, ಮುಸಲ್ಮಾನ ಹೆಂಗಸರು, ತಮಿಳು, ತೆಲುಗು ಎಲ್ಲಾ ಜಾತಿಯ ಸ್ತ್ರೀಯರು ಅರ್ಜುನ ಜೋಗಿಯ ಹಿಂದೆ ಬೀಳುತ್ತಾರೆ. ಅವರೆಲ್ಲರಿಗೂ ಅರ್ಜುನ ಅವರವರ ಭಾಷೆಯಲ್ಲೆ 'ನಾನು ನಿಮ್ಮ ಕಂದನ ಸಮಾನ' ಎಂದು ಉತ್ತರಿಸಿ ಮುಂದೆ ನಡೆಯುತ್ತಾನೆ. ಜನಪದ ಗಾಯಕನ ಬಹುಭಾಷಾ ಪ್ರಾವಿಣ್ಯತೆಯನ್ನು ಇಲ್ಲಿ ಗುರುತಿಸಬಹುದು.

ಅನಂತ ಅರ್ಜುನ ಮುಡುಕತೊರೆ, ನಂಜನಗೂಡು, ಮಧುರೆ ಮುಂತಾದ ಯಾತ್ರಾ ಸ್ಥಳಗಳನ್ನು ಸುತ್ತಿ ಗೋಕರ್ಣ, ಚುಂಚನಗಿರಿ, ಕಾಶಿಗ್ಹೋಗಿ ಪೂಜೆ ಮಾಡಿ ಬಂದೆ ಎಂದು ಹೇಳುತ್ತಾನೆ.



ಅರ್ಜುನ ಕುಂತಿಯನ್ನು ನೋಡಿದನಾದರೂ ಆಕೆಗೆ ತನ್ನ ಮಗನೆಂದು ಗೊತ್ತಾಗಲಿಲ್ಲ. ಕುಂತಿ-ಜೋಗಿಯ ನಡುವೆ ನಡೆಯುವ ಸಂಭಾಷಣೆ ಸುಧೀರ್ಘವಾಗಿ ಕಾವ್ಯದಲ್ಲಿ ಮೂಡಿಬಂದಿದೆ. ಅರ್ಜುನ ನಾಗರಾಜನ ಮಕ್ಕಳಾದ ಚಿತ್ರ ಕುಸುಮಾಲೆಯರನ್ನು ನೋಡಲು ಅರಮನೆಗೆ ನಡೆದು, ಆರು ತಿಂಗಳ ಕಾಲ ಚಿತ್ರ ಕುಸುಮಾಲೆಯರ ಜೊತೆಯಲ್ಲಿದ್ದು ಅನಂತರ ಮಣಿಪುರಕ್ಕೆ ಹೊರಟ. ಮಣಿಪುರದಲ್ಲಿ ಚಿತ್ರಾಂಗಿಯನ್ನು ವಿವಾಹವಾಗಿ 'ಬಬ್ರುವಾಹನ' ಎಂಬ ಮಗನನ್ನೂ ಉಲೂಪಿಯನ್ನು ವಿವಾಹವಾಗಿ 'ನಾಗಾರ್ಜುನ' ಎಂಬ ಮಗನನ್ನು ಪಡೆಯುತ್ತಾನೆ.

ಶಕುನಿಯ ತಂತ್ರದಂತೆ ದುರ್ಯೋಧನ ಧರ್ಮರಾಜನನನ್ನು ಪಗಡೆ ಜೂಜಿಗೆ ಕರೆದು ತಂದ. ಪಗಡೆಯಾಡಿದ ಧರ್ಮರಾಜ ರಾಜ್ಯಕೋಶಗಳನ್ನು ಸೋತನಲ್ಲದೆ ತನ್ನನ್ನು ತಮ್ಮಂದಿರನ್ನು ಕೊನೆಗೆ ದ್ರೌಪದಿಯನ್ನು ಪಣಕ್ಕಿಟ್ಟು ಸೋತ. ದುರ್ಯೋಧನ ದ್ರೌಪದಿ ಸೀರೆ ಸೆಳೆಸಬೇಕೆಂದು ಶಕುನಿಯಲ್ಲಿ ಹೇಳಿದಾಗ ಅವನು 'ಇಂಥ ಮನಸ್ಯಾಕಪ್ಪಾ ನಿನಗೆ?' ಎಂದ. ಇಲ್ಲಿನ ಸನ್ನಿವೇಶದಲ್ಲಿ ಶಕುನಿಯ ಪಾತ್ರವನ್ನು ಜನಪದ ಕವಿ ಔನತ್ಯಕ್ಕೆರೀಸಿದ್ದಾನೆ. ದ್ರೌಪದಿಯನ್ನು ಕರೆತರುವಂತೆ ದುಶ್ಯಾಸನನಿಗೆ

ಹೇಳಿಕಳುಹಿಸಿದ ಆಗ ಆಕೆ 'ಏಕೆ?' ಎಂದು ಕೇಳಲು, ಧರ್ಮರಾಜ ನಿನ್ನನ್ನು ಕಟ್ಟಿ ಜೂಜಿನಲ್ಲಿ ಸೋತಿದ್ದಾನೆ ಎಂದಾಗ 'ನನ್ನನ್ನು ಜೂಜಿಗೆ ಕಟ್ಟಲು ಯಾರಿಗೂ ಅಧಿಕಾರವಿಲ್ಲ' ಎಂದಳು. ಇಲ್ಲಿ ಜನಪದರು ಸ್ತ್ರೀಯರಿಗೆ ಅನ್ಯಾಯವನ್ನು ಪ್ರತಿಭಟಿಸುವ ಸ್ವಾತಂತ್ರ್ಯ ಕೊಟ್ಟಿರುವುದನ್ನು ಗಮನಿಸಬಹುದು. ಆದರೂ ದುಶ್ಯಾಸನ ಬಲವಂತದಿಂದ ಎಳೆದು ತುಂಬಿದ ಸಭೆಯಲ್ಲಿ ಸೀರೆ ಸೆಳೆದಾಗ ಎಲ್ಲರೂ ಕಣ್ಣುಮುಚ್ಚಿದರು. ದ್ರೌಪದಿ ಕೃಷ್ಣನನ್ನು ನೆನೆಯಲು ಅಕ್ಷಯ ವಸ್ತ್ರ ಕರುಣಿಸಿದ. ದ್ರೌಪದಿ ಸಭೆಯಲ್ಲಿದ್ದವರನ್ನು ಉದ್ದೇಶಿಸಿ, 'ಗುರುಗಳೇ, ಹಿರಿಯರೇ, ದುಷ್ಟಾತ್ಮನು ನನ್ನ ಸೀರೆ ಸೆಳೆಯುತ್ತಿದ್ದರೂ ನಿಮ್ಮಗಳಿಗೆ ಕರುಣೆ ಬರಲಿಲ್ಲವೇ? ಗಂಡಂದಿರೇ ನೀವು ವೀರರೇ?' ಎನ್ನುತ್ತಾಳೆ. ಈ ಪ್ರಸಂಗದಲ್ಲಿ ಕುಮಾರವ್ಯಾಸನ ಕಾವ್ಯದ ಪ್ರಭಾವವನ್ನು ಕಾಣಬಹುದು.

ಶಕುನಿಗೆ ದ್ರೌಪದಿ ಸಾಕ್ಷಾತ್ ಆದಿಶಕ್ತಿ ಅನ್ನುವುದು ಗೊತ್ತಿರುವುದಿಲ್ಲ. ದ್ರೌಪದಿ ಪಗಡೆಯಾಡಿ ಗೆದ್ದಳು. ಕೌರವ ಮತ್ತೊಂದು ಪಂಥಕಟ್ಟಿದ. ಇದರಲ್ಲಿ ಸೋತರೆ ದ್ರೌಪದಿ ಸಮೇತ ೧೨ ವರ್ಷ ವನವಾಸ, ಒಂದು ವರ್ಷ ಮರೆವಾಸ ಅನುಭವಿಸಬೇಕು ಎಂದ. ಧರ್ಮರಾಜ ಇದರಲ್ಲೂ ಸೋತು ವನವಾಸಕ್ಕೆ ಹೊರಟರು. ಅವರು ವನವಾಸದಲ್ಲಿ ಪಡುವ ಪಾಡನ್ನು ನೋಡಿ ಸಂತೋಷ ಪಡಲು ಕೌರವೇಂದ್ರ ಕಾಡಿಗೆ ಬಂದಾಗ ಗಂಧರ್ವನಿಂದ ಬಂಧಿನಾದನು. ಬಂಧಿತನಾದ ಕೌರವನನ್ನು ಬಿಡಿಸು ಎಂದು ಧರ್ಮರಾಜ ಅರ್ಜುನನಿಗೆ ಹೇಳಿದಾಗ, ಅವನ ಬಾಣಗಳ ಬಿಟ್ಟು ತೊಟ್ಟಿಲು ಮಾಡಿ ಆತನನ್ನು ಇಳಿಸಿಕೊಂಡ. ಕಟ್ಟುಗಳ ಬಿಚ್ಚಲು ನನಗಾಗುವುದಿಲ್ಲ ಪತಿವ್ರತೆ ಪಾದ ಸೋಕಿದರೆ ಬಿಡುತೆ ಎಂದ. ಭಾನುಮತಿ ದ್ರೌಪದಿನ್ನು ಬೇಡುತ್ತಾಳೆ. ಆಗ ದ್ರೌಪದಿ ಕೌರವನನ್ನು ಒದೆಯಲು ಕಟ್ಟುಗಳು ಬಿಚ್ಚಿಕೊಳ್ಳುತ್ತವೆ. ಭಾನುಮತಿ ದ್ರೌಪದಿಗೆ ನಮಸ್ಕರಿಸುತ್ತಾಳೆ.

ದುರ್ಯೋಧನನ ಭಾವ ಸೈಂಧವ ದ್ರೌಪದಿಯನ್ನು ಹೊತ್ತುಕೊಂಡು ಬರುತ್ತಿರಲು ಕೃಷ್ಣ ಮಂತ್ರದ ಹುಲ್ಲುಕಟ್ಟಿ ಚಾವಟಿಯಿಂದ ಹೊಡೆಯಲು ಆತ ಬಾಯಿ ಬಡಿದ. ಆತನನ್ನು 'ಕೊಲ್ತೀವಿ' ಎಂದಾಗ ಭೀಮ ಅವನಿಗೆ 'ದುಶ್ಯಲೆ ಮುಂಡೆಯಾಗುತ್ತಾಳೆ ಬೇಡ, ವಿಕಾರರೂಪ ಮಾಡಿ ಕಳುಹಿಸಿ' ಎಂದ. ಆಗ ಆತನಿಗೆ ಪಟ್ಟಕೂದಲು ತೆಗೆದು ಮುಖಕ್ಕೆ ಮಣ್ಣು ಪಟ್ಟಿಮಾಡಿ, ಕುಂಡಿಗೆ ಬರೆ ಹಾಕಿ ಹಸ್ತಿನಾಪುರಕ್ಕೆ ಚಾವಟಿಯಲ್ಲಿ ಹೊಡೆಯುತ್ತಾ ಓಡಿಸಿಕೊಂಡು ಹೋದರು.

ಇಂದ್ರಕೀಲ ಪರ್ವತದಲ್ಲಿ ಅರ್ಜುನ ತಪಸ್ಸು ಮಾಡುತ್ತಿದ್ದಾನೆ. ಅವನ ಉಗ್ರ ತಪ್ಪಸ್ಸಿನ ಜ್ವಾಲೆ ಮರಗಿಡಗಳನ್ನು ಸುಟ್ಟು ಕರಕಾಗಿ, ಪ್ರಾಣಿ ಪಕ್ಷಿಗಳು ಶೋಕಿಸುತ್ತಿರಲು ಕಿರಾತನ ವೇಷದಲ್ಲಿ ಬಂದ ಶಿವ 'ಮರನ' ಎಂಬ ರಾಕ್ಷಸನಿಗೆ ಬಾಣ ಹೊಡೆಯಲು ಹಂದಿಯಾಗಿ ಬೀಳುತ್ತಾನೆ. ಹಂದಿ ನೋಡಿ ಗಾಂಡೀವ ತೆಗೆದು ಬಾಣದಿಂದ ಅರ್ಜುನ ಹೊಡೆದ. ಅತ್ತ ಈಶ್ವರನು ಬಾಣ ಬಿಟ್ಟ. ಇಬ್ಬರು ಏಟೂ ಒಂದೇ ಸಾರಿ ಹಂದಿಗೆ ಬಿತ್ತು. ಇಬ್ಬರೂ ನಾನು ಕೊಂದೆ ಎಂದೂ ಮಾತಿಗೆ ಮಾತು ಬೆಳೆಸಿದರು. 'ನೀನಾರು?' ಎಂದಾಗ 'ನಾನು ಅರ್ಜುನ' ಎಂದ. ಅರ್ಜುನ ಕಿರಿತಾನ ಮೇಲೆ ಬಾಣ ಬಿಟ್ಟರೂ ತಗಲುವುದಿಲ್ಲ. ಬಾಣಗಳು ಹೂಮಳೆ ಸುರಿದಂತೆ ಸುರಿಯುವುವು. ಶರಣಾಗತನಾಗು ಹಂದಿ ಕೊಡುತ್ತೇನೆಂದು ಕಿರಾತನು ನುಡಿದ. ಅರ್ಜುನ ಶಿವನ ಪೂಜೆ ಮಾಡಿ ಕಿರಾತನ ಗೆಲ್ಲುವ ಶಕ್ತಿಕೊಡು ಎಂದು ಬೇಡಿಕೊಂಡ. ಲಿಂಗಕ್ಕೆ ಇಟ್ಟ ಹೂವು ಕಿರಾತನ ಮುಡಿಗೆ ಅಲಂಕಾರವಾಯ್ತು. ಮಲ್ಲಯುದ್ಧದಲ್ಲಿ ಅರ್ಜುನ ಶಿವನನ್ನು ಕೆಡವಿ ಎದೆ ಮೇಲೆ ಕುಳಿತು ಕುತ್ತಿಗೆ ಅದುಮುವಾಗ ಪಾರ್ವತಿ ಅರ್ಜುನನ ಬೆನ್ನ ನೋಡಿದಳು. ಬೆನ್ನು ಎದೆ ಎರಡೂ ಒಂದೇ ರೀತಿ ಇರುವುದನ್ನು ಕಂಡಳು. ಕಿರಾತನು ಅರ್ಜುನನಿಗೆ ಶಿವನಾಗಿ ಪ್ರತ್ಯಕ್ಷನಾಗುತ್ತಾನೆ. ಆಗ ಪಾರ್ಥ ಕಣ್ಣೀರುಸುರಿಸಿ. 'ತಪ್ಪಾಯ್ತು ಕ್ಷಮಿಸು' ಎಂದು ಕ್ಷಮೆಯಾಚಿಸುತ್ತಾನೆ.

ಕಾಳಕೇತ ಚೂಡ ಎಂಬ ರಾಕ್ಷಸನ ಕಿರುಕುಳದ ಬಗ್ಗೆ ಗಂಧರ್ವರು ಅರ್ಜುನನಿಗೆ ಹೇಳಿದಾಗ 'ನಾನು ಸಂಹಾರ ಮಾಡುತ್ತೇನೆ' ಎಂದು ಹೊರಟ. ಊರ್ವಶಿ ನೃತ್ಯ ನೋಡಿ ತಾನು ಕಲಿತು ಭೂಲೋಕದಲ್ಲಿ ಪ್ರಚುರಪಡಿಸಬೇಕೆಂದು ಆಸೆ ಪಟ್ಟ. ದೇವೇಂದ್ರ ಇವನನ್ನು ನೋಡಿ ಊರ್ವಶಿಯ ಮೇಲೆ ಆಸೆ ಇರಬೇಕೆಂದು ಆಕೆಯನ್ನು ಆತನ ಮಲಗುವ ಕೋಣೆಗೆ ಕಳುಹಿಸುತ್ತಾನೆ. ಆಕೆ ಆತನನ್ನು ಮುಟ್ಟಲು 'ನೀನು ತಾಯಿ, ತಾಯಿ ಮಗನ ಪ್ರೇಮ ನಮ್ಮದಾಗಲಿ' ಎನ್ನುತ್ತಾನೆ. ಆಗ 'ನೀನು ನಪುಂಸಕನಾಗಿ ಹೋಗು' ಎಂದು ಶಾಪಕೊಟ್ಟಳು. ಆಗ ಇಂದ್ರ 'ಈ ರೀತಿ ಶಾಪ ಹಾಕಬಹುದಾ? ಶಾಪ ಹಿಂದಕ್ಕೆ ತೆಗೆ' ಎನ್ನುತ್ತಾನೆ ಅದಕ್ಕವಳು,

**ಕೊಟ್ಟ ಶಾಪವೂ ಒಂದೇ**
**ಬಿಟ್ಟ ಬಾಣವೂ ಒಂದೇ**
**ಹಿಂದಕ್ಕೆ ಬರೋದಿಲ್ಲ**ʼʼ – ಎಂದಳು.

'ಹಾಗಾದ ಮೇಲೆ ಒಂದು ವರ್ಷಕಾದ್ರೂ ಅವ ನಪುಂಸಕನಾಗಿರಲಿ' ಎಂದು ಇಂದ್ರನೂ ಹೇಳಿದ. ಅನಂತರ ಅರ್ಜುನ ಇಂದ್ರನಿಂದ ಶಸ್ತ್ರಾಸ್ತ್ರಗಳನ್ನು ಪಡೆದು ಸ್ವರ್ಗಲೋಕದಿಂದ ಮುತ್ತಿನ ಪಲ್ಲಕ್ಕಿಯಲ್ಲಿ ಭೂಲೋಕಕ್ಕೆ ಬಂದ.

ಶಕುನಿ ಮಲೆಯಾಳದ ಮಂತ್ರವಾದಿ ಕೊನ್ನಗಯ್ಯನನ್ನು ಕರೆಸಿ ಪಾಂಡವರನ್ನು ನಾಶ ಮಾಡಲು ಕೌರವನಿಗೆ ಹೇಳುತ್ತಾನೆ. ಈ ವಿಷಯವನ್ನು ತಿಳಿದ ಪರಮಾತ್ಮ ಯಮದೇವರ ಕರೆದು ಪಾಂಡವರ ಕಾಪಾಡಬೇಕೆಂದ.

ಧರ್ಮರಾಯನಿಗೆ ಬಾಯಾರಿಕೆಯಾಗಿ ನೀರು ಕುಡಿಯಲು ಕೊಳಕ್ಕೆ ಹೋಗಿ ನೀರು ತರಲು ಸಹದೇವನಿಗೆ ಆತ ಹೇಳಿದ. ಆತ ಕೊಳಕ್ಕೆ ಹೋಗಲು 'ಕುಡಿಯಬೇಡ ಸಾಯ್ತೀಯಾ' ಎಂದು ಆಕಾಶವಾಣಿ ಆಯ್ತು. 'ನೀನ್ಯಾರು?' ಹೇಳು ಎಂದ. ಮಾತಾಡದಿರಲು ಸಹದೇವ ನೀರು ಕುಡಿದು ಸತ್ತ. ನಕುಲ ಬಂದು ನೋಡಿದ ಅಣ್ಣ ಮಲಗಿರಬೇಕು ಎಂದು ತಿಳಿದ. ಆತನಿಗೂ ಬಾಯಾರಿಕೆ ಯಾಯಿತು. ಕುಡಿಯಲು ಹೋದಾಗ ಆಕಾಶವಾಣಿ ಆಯಿತು. ಆತನೂ ಲೆಕ್ಕಸದೆ ನೀರು ಕುಡಿದುದ್ದರಿಂದ ಮರಣ ಹೊಂದಿದ. ಅರ್ಜುನ, ಭೀಮ ಎಲ್ಲರೂ ಮರಣ ಹೊಂದುವರು.

ಧರ್ಮರಾಯ ಬಂದು 'ನನ್ನ ತಮ್ಮಂದಿರ ಸಾಯಿಸಿದವರಾರು?' ಎಂದು ಕೇಳಿದ. ನಿಮ್ಮ ತಮ್ಮಂದಿರು ನನ್ನ ಮಾತು ಕೇಳದೆ ಕುಡಿದು ಸತ್ತಿದ್ದಾರೆ ನನ್ನ ಪ್ರಶ್ನೆಗೆ ಉತ್ತರ ಹೇಳು ಎಂದ.

**ಭೂಮಿಗಿಂತ ದೊಡ್ಡ ವಸ್ತು ಯಾವುದು?**<br>
**ತಾಯಿ**<br>
**ಆಕಾಶಕ್ಕಿಂತ ಉನ್ನತ ವಸ್ತು?**<br>
**ತಂದೆ**<br>
**ಸ್ವರ್ಗಕ್ಕೆ ದಾರಿ ಯಾವುದು?**<br>
**ತಂದೆ ಋಣಕ್ಕೆ ಆಸೆ ಪಡೆದೆ ಇರುವುದೇ ಸ್ವರ್ಗಕ್ಕೆ ಬಾಗಿಲು**<br>
**ಶುದ್ಧ ಮನಷ್ಯ ಯಾರು?**<br>
**ಪರಸತಿಯನ್ನು ತಾಯಿಯಂತೆ ಕಾಣುವವನು**<br>
**ಬದುಕಿದ್ದರೂ ಸತ್ತವರು ಯಾರು?**<br>
**ಧರ್ಮಾತ್ಮ**<br>
**ವಿಷರೂಪಿ ಯಾರು?**<br>
**ಮಿತ್ರದ್ರೋಹಿ.**<br>
**ಹೆಂಬೇಡಿ ಯಾರು?**

**ಯುದ್ಧದಲ್ಲಿ ಬೆನ್ನ ತೋರಿಸುವವ**
**ಕಕ್ಕುಟ್ಟೆ ಕಹಿ ಯಾವುದು?**
**ಸತ್ಯ**
**ಸಿಕ್ಕಟ್ಟೆ ಸೀ ಯಾವುದು?**
**ಸುಳ್ಳು**
**ಬ್ರಹ್ಮಕ್ಕಿಂತಲೂ ದೊಡ್ಡದ್ಯಾವುದು?**
**ಆಸೆ**
**ಎಲ್ಲಕ್ಕೂ ಆಶ್ಚರ್ಯ ಯಾವುದು?**
**ಸಾಯದೇ ಇಲ್ಲ ಅನ್ನುವಂಗೆ ಮನೆ-ಮಠ, ಆಸ್ತಿ-ಪಾಸ್ತಿ,**
**ಹೆಂಡತಿ-ಮಕ್ಕಳು, ಬಂಧು-ಬಳಗ ಎಂದು ಹಾತೊರೆವುದು.**[೨೦]

ಹೀಗೆ ಹಲವಾರು ಸ್ವಾರಸ್ಯಕರ ಪ್ರಶ್ನೋತ್ತರಗಳು ಕಾವ್ಯದಲ್ಲಿ ಕವಿ ಚಿತ್ರಿಸಿರುವುದು ಆತನ ಚಿಕಿತ್ಸಕ ಬುದ್ಧಿಯನ್ನು ಎತ್ತಿ ತೋರುತ್ತದೆ. ಹಾಗಿಯೇ ಗಾಯಕನ ನಾಟಕೀಯತೆಯನ್ನೂ ಮೆರೆದಿರುವುದನ್ನು ಗುರುತಿಸಬಹುದು.

ಪೆಡಂಭೂತ ಧರ್ಮರನ್ನು ಕಂಡು ಇವರನ್ನು ನಾನು ಮುಟ್ಟುವಂತಿಲ್ಲ ಅಂತ, ತನ್ನ ಹಸಿವೆಗೆ ಯಾರು ಸಿಕ್ತಾರೆ ಅಂತ ಓಡಿ ಬಂದು ಹಸ್ತಿನಾಪುರದ ಕೊನಗಯ್ಯನ ಕತ್ತನ್ನು ಕಚ್ಚಿ ರಕ್ತ ಹೀರಿತು. ಭೂತ ದುರ್ಯೋಧನನ ಹೆಗಲೇರಿತು. ಆತ ಬಾಯಿ ಬಡಿಯಲಾರಂಭಿಸಿದ. ಆಗ ವಿದುರ 'ಮಾಡಬಾರದುದನ್ನು ಮಾಡಿದರೆ ಆಗಬಾರದುದಾಗುತ್ತದೆ, ಈ ಮಾತು ಸುಳ್ಳಲ್ಲ' ಎಂದ.

ಆಗ ಭೀಷ್ಮರು 'ಈ ಭೂತ ಬಿಡಿಸಲು ಯಾರಿಂದ ಸಾಧ್ಯ' ಎನ್ನಲು 'ಧರ್ಮರಾಜನಿಂದ ಸಾಧ್ಯ' ಎನ್ನುತ್ತಾರೆ. ಧರ್ಮರಾಜನ ಕರೆತರಲು ಭೀಷ್ಮ, ದ್ರೋಣ, ಕೃಪ ಎಲ್ಲರೂ ಬಂದರು. ಭೀಷ್ಮರ ಮಾತು ಮೀರದೆ ಧರ್ಮರಾಜ ಒಪ್ಪಿ ಆ ಪೆಡಂಭೂತ ಒದ್ದಾಗ ಆಕಾಶದೆತ್ತರಕ್ಕೆ ಕೌರವ ತೂರಿಹೋದ.

ಆಕಾಶದಲ್ಲಿ ಭೂತ ಮರೆಯಾಗಿ ದುರ್ಯೋಧನ ಹಸ್ತಿನಾವತಿ ದಿಡ್ಡಿಬಾಗಿಲಲ್ಲಿ ಬಿದ್ದ. ಆತನನ್ನು ಅರಮನೆಗೆ ಸಾಗಿಸಿದರು.

ಕೌರವ ಶಕುನಿಗೆ 'ಅವಮಾನವಾಯಿತು' ಎಂದಾಗ ಶಕುನಿ 'ಈಗ್ಲೂ ಗೂಢಾಚಾರ್ಯರ ಬಿಟ್ಟು ಪಾಂಡವರ ಹುಡುಕಿಸು, ಅವರು ಮತ್ತೆ ಹನ್ನೆರಡು ವರ್ಷ ವನವಾಸ ಹೋಗಬೇಕಾಗುತ್ತದೆ' ಎಂದು ಸಲಹೆ ನೀಡಿದ. ಇದು ಕೃಷ್ಣನಿಗೆ ತಿಳಿದು ಯಮನನ್ನು ಕರೆಸಿ 'ಪಾಂಡವರು ಉಳಿದಿರುವ ಜಾಗ ತಪ್ಪಿಸಿ ಅವರಿಗೆ ಸರಿಯಾದ ದಾರಿ ತೋರಿಸಿ' ಎಂದ. ಯಮ ಹುಲ್ಲೇಕರುವಾಗಿ ಪಾಂಡವರು ತೊಳೆದ

ಅಕ್ಷಯಪಾತ್ರೆಯನ್ನು ಕಚ್ಚಿಕೊಂಡು ಓಡತೊಡಗಿದಾಗ ದ್ರೌಪದಿ ಸಮೇತ ಐವರು ಪಾಂಡವರು ಓಡಿದರು. ಅದು ಪಾಳು ಹುತ್ತದಲ್ಲಿ ಸೇರಿಕೊಂಡಿತು. ಅನಂತರ ಯಮಧರ್ಮರಾಜ ಪ್ರತ್ಯಕ್ಷನಾಗಿ. ದುರ್ಯೋಧನ ಗೂಢಾಚಾರ್ಯರನ್ನು ಬಿಟ್ಟಿದ್ದಾನೆ. ನೀವು ಸಿಕ್ಕರೆ ಮತ್ತೆ ವನವಾಸ ಪಡಬೇಕಾಗುತ್ತದೆ. ನೀವು ವಿರಾಟ ರಾಜನ ಪಟ್ಟಣ ಸೇರಿ ಮರೆವಾಸ ಮುಗಿಸಿ. ಇನ್ನು ಈ ಆಕ್ಷಯ ಪಾತ್ರೆಯನ್ನು ಸೂರ್ಯದೇವನಿಗೆ ಅರ್ಪಿಸಬೇಕು ಎಂದು ಮರೆಯಾದ. ಪಾಂಡವರು ವಿರಾಟನ ಪಟ್ಟಣಕ್ಕೆ ಬಂದರು.

ದುರ್ಗಂಧ ದೇವಿಯ ತಮ್ಮನಾದ ಸುರಾಟನ ಮಗ ವಿರಾಟನ ಪಟ್ಟಣಕ್ಕೆ ಬಂದರು. ಬನ್ನಿ ಮರದ ತುದಿಗೆ ಶಸ್ತ್ರಾಸ್ತ್ರ ಕಟ್ಟಿದರು. ದ್ರೌಪದಿ ಸೂರೇಂದ್ರಿ ಹೆಸರಲ್ಲಿ ಅಲಂಕಾರಕ್ಕೆ, ಧರ್ಮರಾಜ ಕನಕಭಟ್ಟನಾಗಿ, ಭೀಮ ಬಾಣಸಿಗನಾಗಿ, ಅರ್ಜುನ ನಾಟ್ಯಸಾನಿಯಾಗಿ, ನಕುಲ ಸಹದೇವರು ಪಶುಪಾಲಕರಾಗಿ, ಕೆಲಸ ಮಾಡತೊಡಗಿದರು.

ಸುದೀಷ್ಣೆಯ ತಮ್ಮ ಕೀಚಕ ಒಂದು ದಿನ ದ್ರೌಪದಿ ನೋಡಿ ಬೆರಗಾಗುತ್ತಾನೆ. ಅಕ್ಕನನ್ನು 'ಆ ಸುಂದರಿ ಯಾರು?' ಎಂದು ಕೇಳಿದ. 'ಪರರ ಹೆಂಡಿರ ನೋಡಬಾರದು' ಎಂದು ಎಚ್ಚರಿಕೆ ನೀಡುತ್ತಾಳೆ. ಅದಕ್ಕೆ ಕೀಚಕ ಅವಳನ್ನು ಗರುಡಿ ಮನೆಗೆ ಕಳುಹಿಸು. ಇಲ್ಲದಿದ್ದರೆ ಗಂಡ-ಹೆಂಡಿರನ್ನು ಸೆರೆಮನೆಗೆ ಹಾಕಿಸಿ ನಾನೇ ರಾಜನಾಗುತ್ತೇನೆ ಎಂದ. ತಮ್ಮನ ಹಿಂಸೆ ತಾಳಲಾರದೆ ದ್ರೌಪದಿಗೆ 'ಮಧು ಪಾನದ ಬಟ್ಟಲನ್ನು ಕೀಚಕನ ಗರುಡಿ ಮನೆಗೆ ಕೊಟ್ಟು ಬಾ' ಎಂದಳು. ದ್ರೌಪದಿ ಎಷ್ಟು ಹೇಳಿದರೂ ಕೇಳಲಿಲ್ಲ. ಕೃಷ್ಣನ ನೆನೆದಳು, ಮತ್ತೆ ಸುದೀಷ್ಣೆ- 'ನೀನು ಕೊಟ್ಟ ಬಾರದೇ ಇದ್ದರೆ ಈ ಗಳಿಗೆ ನನ್ನ ಅರಮನೆಯಲ್ಲಿರಕೂಡದು' ಎಂದು ತಾಕೀತು ಮಾಡಿದಳು. ಮಧುಪಾನದ ಬಟ್ಟಲನ್ನು ಹೊಸ್ತಿಲಲ್ಲಿಟ್ಟು ಹಿಂತಿರುಗಲು ಓಡಿಬಂದು ಅವಳ ಮುಂಸೆರಗನ್ನು ಹಿಡಿದು ನಿಲ್ಲು ಎಂದ. ದ್ರೌಪದಿ ತನ್ನ ಕಾವಲುಗಾರರಾದ ಭೈರವನಿಗೆ ಹೇಳಿದಳು. ಅವರು ಆತನ ಕುಂಡಿಗೆ ಝಾಡಿಸಲು ತನ್ನ ಗರಡಿ ಮನೆಗೆ ಓಟಕಿತ್ತ. ಭೀಮಸೇನನಿಗೆ ನಡೆದ ವಿಚಾರ ತಿಳಿಸಿದಳು. ಭೀಮ ಹೆಣ್ಣಿನ ವೇಷದಿಂದ ಬಂದು ಆತನ ಮುಗಿಸಿದ. ಸುದ್ದಿ ಹಬ್ಬಿತು.

ಕೀಚಕನ ಒಬ್ಬ ತಮ್ಮ ಈ ಸೂರೇಂದ್ರಿಯೇ ನಮ್ಮಣ್ಣನ ಸಾವಿಗೆ ಕಾರಣ ಎಂದು ದ್ರೌಪದಿಯನ್ನು ಎಳೆದುಹೋಗಲು ದ್ರೌಪದಿ ಬಾಯಿ ಬಡಿಯಲು, ಭೀಮ ಎಲ್ಲರ ತಲೆಯನ್ನು ಒನಕೆಯಲ್ಲಿ ಒಡೆದು ಕೊಂದುಹಾಕಿ ಯಾರಿಗೂ ತಿಳಿಯದಂತೆ ತೆಪ್ಪಗೆ ಮಲಗಿದ. ದುರ್ಯೋಧನ ಆತನನ್ನು ಕೊಂದವರು ಪಾಂಡವರೇ ಇರಬೇಕು ಎಂದ. ಶಕುನಿ 'ಜಟ್ಟಿಗಳನ್ನು ಕಳುಹಿಸು ಅವನ

ಮೇಲೆ ಭೀಮ ಎರಗಿದರೆ ಆಗ ಗೊತ್ತಾಗುತ್ತದೆ. ಮತ್ತೆ ವನವಾಸಕ್ಕೆ ಕಳುಹಿಸಬಹುದು' ಎಂದ. ಮೂರು ಜನ ಜಟ್ಟಿಗಳು ಬಂದು 'ನಮ್ಮ ಸೋಲಿಸುವವರು ಯಾರಿದ್ದಾರೆ ನಿನ್ನ ರಾಜ್ಯದಲ್ಲಿ?' ಎಂದು ವಿರಾಟರಾಯನಿಗೆ ಸವಾಲು ಎಸೆದಾಗ ಯಾರೂ ಇಲ್ಲವಲ್ಲ ಎಂದು ಚಿಂತೆಯಾಯಿತು. ಆಗ ಕನಕಭಟ್ಟ 'ನಮ್ಮ ಅಡಿಗೆ ಭಟ್ಟನ ಕೇಳಿ' ಎಂದ. ಆತ ಒಪ್ಪಿದ ಕೃಷ್ಣನ ನೆನೆದು ಜಟ್ಟಿಗಳನ್ನು ಬಟ್ಟೆ ಒಗೆವಂತೆ ಒಗೆದ. ಮೂಳೆಗಳ ಮುರಿದು ಅಪ್ಪಚ್ಚಿ ಮಾಡಿದ.

ಈ ವಿಷಯವನ್ನು ತಿಳಿದ ಶಕುನಿ ಕೌರವನಿಗೆ ಹೀಗೆ ಹೇಳಿದ: ಅವರ ಕೊಂದವ ಭೀಮನೇ, ಐದು ಜನ ಗಂಧರ್ವರು ಯಾರೂ ಅಲ್ಲ ಪಾಂಡವರೇ. ಸುಂದರಿ ದ್ರೌಪದಿ ವಿರಾಟನಗರಕ್ಕೆ ಸೇನೆ ಕಳುಹಿಸಿ ಗೋಗಳ ಹಿಡಿದು ಕರು ಅಗಲಿಸಬೇಕು. ಆಗ ಕರು ಅರಚುವುದನ್ನು ನೋಡಿ ಧರ್ಮರಾಜ ಗೋವು ಬಿಡಿಸಿಕೊಳ್ಳಲು ಬರುತ್ತಾನೆ ಎಂದ. ಎಂಟೂ ಮೂಲೆಗೂ ಸೈನ್ಯ ಹಾಕಿದರು. ಭೀಮನ ಹೊಡೆತಕ್ಕೆ ಸೈನ್ಯ ನಡುಗಿತು. ಕೌರವನ ಸೈನ್ಯವೆಂದು ತಿಳಿಯಿತು. ಉತ್ತರಕುಮಾರ 'ನಾಯಕಸಾನಿ'ಯನ್ನು ಸಾರಥಿಯನ್ನಾಗಿ ಮಾಡಿಕೊಂಡು ಯುದ್ಧಕ್ಕೆ ಬಂದ. ಸೈನ್ಯ ನೋಡಿ ಹೆದರಿ ಓಡುತ್ತಿರಲು ಜುಟ್ಟು ಹಿಡಿದು ತಂದ. ಭೀಷ್ಮ ದ್ರೋಣರು ಅವರ ಅಜ್ಞಾತವಾಸ ಮುಗಿಯಿತು. ಯುದ್ಧ ಮಾಡಬಾರದು ಎಂದರು. ಹಸುವಿನ ಕರುವಿಗೆ ಹುಲ್ಲು ನೀರು ಹಾಲಿಲ್ಲದಾಯ್ತಲ್ಲಾ ಎಂದು ಭೀಷ್ಮರು ಪಶ್ಚಾತ್ತಾಪ ಪಟ್ಟರು.

ಬನ್ನಿಮರದಿಂದ ಶಸ್ತ್ರಾಸ್ತ್ರ ತೆಗೆದುಕೊಂಡು ಉತ್ತರನನ್ನು ಸಾರಥಿಯನ್ನಾಗಿಸಿ ಅರ್ಜುನ ಅವರನ್ನು ಹಿಮ್ಮೆಟ್ಟಿಸಿದ. 'ನೀನೇ ಗೆದ್ದೆ ಎಂದು ಹೇಳು ಉತ್ತರ' ಎಂದು ಅರ್ಜುನ ಹೇಳಿದ. ರಾಜನಿಗೆ ನಿಮ್ಮ ಮಗ ಗೆದ್ದ ಎಂದಾಗ, ರಾಜ ಹಿಗ್ಗಿದ. ಧರ್ಮರಾಜನ ಜೊತೆಯಲ್ಲಿ ಪಗಡೆ ಆಡುವಾಗ ವಿರಾಟರಾಜ ನನ್ನ ಮಗ ಶೂರ ಎಂದ. ಆಗ ಧರ್ಮರಾಜ 'ಗೆದ್ದವನು ಸಾರಥಿ' ಎಂದ. ಕೋಪದಲ್ಲಿ ರಾಜ ಪಗಡೆ ಎಸೆಯಲು ರಕ್ತ ಚಿಮ್ಮಿತು ಧರ್ಮರಾಜನಿಗೆ. ಕೂಡಲೆ ದ್ರೌಪದಿ ಓಡಿಬಂದು ರಕ್ತ ಭೂಮಿಗೆ ಬಿದ್ದರೆ ಕೃಷ್ಣನ ತಲೆ ಸಹಸ್ರ ಹೋಳಾಗುತ್ತದೆ ಎಂದು ತನ್ನ ಸೆರಗನ್ನೊಡ್ಡಿದಳು. ತಲೆಗೆ ಪಟ್ಟಿಯನ್ನು ಕಟ್ಟಿದಳು. ಪಾಂಡವರು ತಮ್ಮ ವೇಷದಲ್ಲಿ ಕಾಣಿಸಿಕೊಂಡರು. ಉತ್ತರ ಎಲ್ಲರನ್ನೂ ಪರಿಚಯ ಮಾಡಿಸಿದ. ಗೆದ್ದವರು ಅರ್ಜುನ, ಭೀಮ ಎಂದ. ವಿರಾಟರಾಜ 'ನಮ್ಮ ರಾಜ್ಯವನ್ನೇ ಆಳಿ' ಎಂದ. 'ನಾವು ನಿಮಗೆ ನೆಂಟರು, ಶಾಂತರಾಜನ ಕಾಲದಿಂದ, ಈ ಪ್ರೀತಿ ನಂಟು ಉಳಿಯಲಿ, ನಮ್ಮ ಮಗಳು ಉತ್ತರೆಯನ್ನು ಅಭಿಮನ್ಯುವಿಗೆ ತಂದುಕೊಳ್ಳಿ' ಎಂದ. ಅವರು ಒಪ್ಪಿಗೆ ಸೂಚಿಸಿದರು. ಕೃಷ್ಣನಿಗೆ ತಿಳಿಸಿ ವಿವಾಹ ಮಾಡಿದರು. ಕೃಷ್ಣ ಆಶೀರ್ವದಿಸಿ ದ್ವಾರಕೆಗೆ ಹೊರಟ.

ಕೃಷ್ಣ ಪಾಂಡವರಿಗೆ ರಾಜ್ಯ ಕೊಡಿಸುವುದಕ್ಕಾಗಿ ರಾಯಾಭಾರಿಯಾಗಿ ಕೌರವನಲ್ಲಿ ಹೊರಟ. ನೇರವಾಗಿ ವಿದುರನ ಮನೆಗೆ ಬಂದ. ವಿದುರ ಉಪಚರಿಸಿದ ಒಂದು ತೊಟ್ಟು ಹಾಲು ಬೀಳಲು ಹಾಲಿನ ಹೊಳೆಯೆ ಹರಿಯಿತು. ಆತ ಪರಮಾತ್ಮನ ಸೇವೆ ಮಾಡಿದ ಇದರಿಂದ ದುರ್ಯೋಧನ ಕೋಪಗೊಂಡು ನಾನು ಭಕ್ಯಭೋಜ್ಯ ಮಾಡಿಸಿದ್ದರೂ ವಿದುರನ ಮನೆಗೆ ಹೋಗಿದ್ದಾನೆ. ಕೃಷ್ಣ ಬಂದಾಗ ಯಾರೂ ನಿಂತುಕೊಳ್ಳಬೇಡಿ ಎಂದ. ಆದರೂ ಎಲ್ಲರೂ ನಿಂತರು. ಕೌರವ ಮಾತ್ರ ನಿಲ್ಲಲಿಲ್ಲ. ಕೃಷ್ಣ ಹೆಬ್ಬೆರಳಿನಿಂದ ನೆಲವನ್ನು ಒತ್ತಲು ಸಿಂಹಾಸನ ಉರುಳಿ ಪರಮಾತ್ಮನ ಪಾದದ ಮೇಲೆ ಬಿದ್ದ. 'ಗೊಲ್ಲನಾದ ನಿನಗೂ ಗೌಡಿಯ ಮಗನಾದ ವಿದುರನಿಗೂ ಲಗತ್ತಾದ ಜೋಡಿ' ಎಂದು ದುರ್ಯೋಧನ ಹೇಳಿದ್ದಾಗ ವಿದುರ ಕೋಪಗೊಂಡ. ಭೀಮಸೇನನು ತೊಡೆಯನ್ನು ಗದೆಯಿಂದ ಹೊಡೆದು ಪುಡಿಮಾಡುವಾಗ ರಕ್ಷಣೆಗೆ ಈ ಬಿಲ್ಲು ಬಾಣ ಇಟ್ಟಿದೆ. ಈಗ ನನ್ನನ್ನು ಹೀಯಾಳಿಸಿದೆ. ನಿನ್ನ ತೊಡೆಯನ್ನು ಭೀಮ ನಜ್ಜು ಮಾಡಲಿ ಎಂದು ತನ್ನ ಬಿಲ್ಲು ಬಾಣಗಳನ್ನು ವಿದುರ ಮುರಿದೆಸೆದ. ಕೃಷ್ಣ ಪಾಂಡವರಿಗೆ ರಾಜ್ಯವನ್ನು ಹಿಂತಿರುಗಿಸು ಎಂದು ಕೌರವನಿಗೆ ಹೇಳಿದ. ಚಿತ್ರಾಂಗದ ನಿನ್ನನ್ನು ಎಡೆ ಮುರಿ ಕಟ್ಟಿ ಎಳೆದೊಯ್ಯುವಾಗ ರಕ್ಷಿಸಿದವರಾರು? ಐದು ಗ್ರಾಮಗಳನ್ನಾದರೂ ಕೊಡು ಎಂದರೂ ಒಪ್ಪದೆ ನಿನ್ನ ನಾಶ ಮಾಡುವೆ ಎಂದ. 'ಈತನನ್ನು ಕಂಬಕ್ಕೆ ಕಟ್ಟಿ ಚಾಟಿಯಿಂದ ಹೊಡೆದು ನೂಕಿ ಬಿಡಿ ನಾಲಿಗೆ ಸೀಳಿರಿ' ಎಂದು ದುರ್ಯೋಧನ ಹೇಳಿದಾಗ ದುಶ್ಯಾಸನನು ಕಟ್ಟಲು ಹೋದಾಗ ನೆಲದಲ್ಲಿ ಕುಸಿದಬಿದ್ದ. ದುರ್ಯೋಧನ ಕತ್ತಿ ಎತ್ತಲು ಕಣ್ಣು ಕತ್ತಲಾಯಿತು. ಪರಮಾತ್ಮ ವಿಶ್ವರೂಪ ತೋರಿದ. ಧೃತರಾಷ್ಟ್ರ, ಗಾಂಧಾರಿ ನೋಡಿದರು. 'ನನ್ನ ಮಗನ ಅಪರಾಧ ಕ್ಷಮಿಸಿ' ಎಂದರು.

ಕುಂತಿಯ ಬಳಿ ಬಂದ ಕೃಷ್ಣ 'ಯುದ್ಧವಾಗುವುದು ಖಚಿತ' ಎಂದ. ಕರ್ಣ ನಿನ್ನ ಮಗ ಎಂಬುದು ತಿಳಿಯದು. ಪಾಂಡವರ ಸಂಹಾರಕ್ಕೆ ಕಾಯುತ್ತಿರುವ ಆತನಿಗೆ ಜನ್ಮರಹಸ್ಯ ತಿಳಿಸಿ ತೊಟ್ಟ ಬಾಣವನ್ನಾದರೂ ತೊಡಬೇಡವೆಂದಾದರೂ ಕೇಳಿಕೋ ಎಂದ. ಅದರಂತೆ ಕುಂತಿ ಕರ್ಣನಿಗೆ 'ನಿನ್ನ ತಾಯಿ ನಾನು ತಂದೆ ಸೂರ್ಯದೇವ' ಎಂದಳು. ಆಗ ಕರ್ಣ ನೆಮ್ಮದಿಯನ್ನು ಕಳೆದುಕೊಂಡ. ಸೂರ್ಯದೇವ ಬಂದು 'ನಿನ್ನ ತಾಯಿ, ಕೃಷ್ಣನ ತಂತ್ರಕ್ಕೆ ಒಳಗಾಗಿ ನಿನ್ನನ್ನು ವಂಚಿಸಲು ಬರುತ್ತಿದ್ದಾಳೆ. ನೀನು ಅವಳ ಮಾತಿಗೆ ಮರುಳಾಗಬೇಡ. ಬುದ್ದಿವಂತಿಕೆಯಿಂದ ನಡೆದುಕೋ' ಎಂದು ಹೇಳಿ ಮರೆಯಾದ. ಕುಂತಿ ಓಡಿ ಬಂದಳು. ತಾಯ ಎದೆ ಹಾಲು ಚಿಮ್ಮಿ ಕರ್ಣತೊಯ್ದುಹೋದ. 'ಅಮ್ಮಾ' ಎಂದು ಪಾದಕ್ಕೆ ಬಿದ್ದ. ಕುಂತಿ ತನ್ನ ಕಥೆಯನ್ನು ವಿವರಿಸಿದಳು. 'ಕೌರವನ ಬಿಟ್ಟು ಬಾ' ಎಂದಳು. 'ಅದೊಂದು ಬಿಟ್ಟು ಏನಾದರೂ ಹೇಳಮ್ಮ, ಅನ್ನವ ಕೊಟ್ಟವ ಆತ. ನಾನು ಸ್ವಾಮಿದ್ರೋಹಿ ಆಗಲಾರೆ' ಎನ್ನಲು, 'ಯುದ್ಧದಲ್ಲಿ ನಿನ್ನ ತಮ್ಮಂದಿರ ಕೊಲ್ಲಬೇಡ' ಎಂದು ಕುಂತಿ ಕೇಳಿಕೊಂಡಳು.

'ಅರ್ಜುನನನ್ನು ಬಿಟ್ಟು ಉಳಿದವರನ್ನು ಕೊಲ್ಲುವುದಿಲ್ಲ, ಆತನ ಕೊಂದರೇ ನನ್ನ ಪ್ರಭುವಿಗೆ ಸಂತೋಷ. ನಾನು ಸತ್ತರೂ ಐವರು ಮಕ್ಕಳು, ಅವನು ಸತ್ತರೂ ಐವರು ಮಕ್ಕಳು' ಎನ್ನಲು ಒಂದು ಭಾಷೆಕೊಡು 'ತೊಟ್ಟ ಬಾಣವನ್ನು ತೊಡುವುದಿಲ್ಲ' ಎಂದು ಕುಂತಿ ಕೇಳಲು ಒಪ್ಪಿದ ಕರ್ಣ 'ಯುದ್ಧದಲ್ಲಿ ನಾನು ಸತ್ತರೆ ಧರ್ಮರಾಯನೇ ಶವಸಂಸ್ಕಾರ ಮಾಡಬೇಕು' ಎಂದ. ತಾಯಿ ಮಗನ ಸಂಭಾಷಣೆಯನ್ನು ಸ್ವಾರಸ್ಯವಾಗಿ ಕವಿ ಚಿತ್ರಿಸಿದ್ದಾನೆ.

ಕೌರವ 'ಸೂಜಿ ಮೊನೆ ಊರುವಷ್ಟು ಭೂಮಿಯನ್ನು ನಾನು ಅವರಿಗೆ ಕೊಡುವುದಿಲ್ಲ ಯುದ್ಧ ಮಾಡಿ ಗೆದ್ದುಕೊಳ್ಳಲಿ' ಎಂದ. ಅದಕ್ಕೆ ಪ್ರತಿಯಾಗಿ ಪಾಂಡವರು 'ಯುದ್ಧ ಮಾಡಿಯೇ ತೆಗೆದುಕೊಳ್ಳುತ್ತೇನೆ' ಎಂದರು.

ಭೀಷ್ಮರಿಗೆ ಸೇನಾಧಿಪಟ್ಟವನ್ನು ಕಟ್ಟಿದರು. ವೀರಾವೇಶದಿಂದ ಭೀಷ್ಮರು ಹೋರಾಡುತ್ತಿರಲು ಪಾಂಡವರ ಸೈನ್ಯ ನಾಶವಾಗುತ್ತಿರುತ್ತದೆ. ಆಗ ಕೃಷ್ಣ ದ್ರೌಪದಿಗೆ ಹೇಳಿಕಳುಹಿಸಿದ. ನೀನು ವಾಲೆ ಭಾಗ್ಯವನ್ನು ಹರಿವಾಣದಲ್ಲಿಟ್ಟು ಭೀಷ್ಮರಿಗೆ ಹೇಳು, 'ನನ್ನ ವಾಲೆ ಭಾಗ್ಯವನ್ನು ಕಾಪಾಡಿ' ಎಂದು. ಆಕೆ ಹೋಗಿ ಕೇಳಲು 'ಅರ್ಜುನ, ಭೀಮ ಬಂದರೆ ಯುದ್ಧ ಮಾಡಲೇಬೇಕು ಆದರೆ ಶಿಖಂಡಿ ಬಂದರೆ ನಿನ್ನ ಮಾತು ನಡೆಯುತ್ತದೆ. ನಾನಾಗ ಸರಳ ಮಂಚ ಏರ್ತೀನಿ' ಎಂದ. ಪರಮಾತ್ಮ ಹಿಡಿಮಣ್ಣು ತೆಗೆದು ಶಿಖಂಡಿ ಮಾಡಿ ರಥದಲ್ಲಿ ಕೂರಿಸಿ ಕಳುಹಿಸಿದ. ಆ ಗೊಂಬೆಯ ದೇಹದೊಳಗೆ ಅಂಬೆಯ ಜೀವ ಕೂಡಿಕೊಂಡು ಕೇಕೆ ಹಾಕಿ ಭೀಷ್ಮನ ಮೇಲೆ ಸೇಡು ತೀರಿಸಿಕೊಳ್ಳುವೆ ಎಂದು ರಣರಂಗಕ್ಕೆ ನಡೆದಳು.

ಭೀಷ್ಮರು ಶಿಖಂಡಿಯೊಂದಿಗೆ ಯುದ್ಧ ಮಾಡುವುದಿಲ್ಲವೆಂದು ಶಸ್ತ್ರವನ್ನು ತ್ಯಜಿಸಿದಾಗ ಶಿಖಂಡಿ ಗೊಂಬೆ ಹರಿತವಾದ ಬಾಣದಿಂದ ಭೀಷ್ಮರ ಎದೆಗೆ ಹೊಡೆಯಿತು. ಬಳಿ ಬಂದ ಅರ್ಜುನನಿಗೆ ಭೀಷ್ಮರು 'ಸರಳ ಮಂಚ ಮಾಡಪ್ಪಾ' ಎಂದಾಗ ಅರ್ಜುನ ಬಿಟ್ಟ ಒಂದು ಬಾಣ ಸಾವಿರಾರು ಬಾಣಗಳಾಗಿ ಸರಳ ಮಂಚವಾಯಿತು. ಭೀಷ್ಮರನ್ನು ಅಲ್ಲಿ ಮಲಗಿಸಿದ. ಅರ್ಜುನ ಬಾಣ ಬಿಟ್ಟಾಗ ಪಾತಾಳದಿಂದ ನೀರು ಚಿಮ್ಮಿ ಅವರ ಬಾಯಿಗೆ ಬಿತ್ತು. 'ನೀನು ಯುದ್ಧದಲ್ಲಿ ಜಯಶೀಲನಾಗಪ್ಪಾ, ಕೀರ್ತಿಶಾಲಿಯಾಗಪ್ಪಾ. ನಾನು ಈ ಉತ್ತರಾಯಣ ಪುಣ್ಯ ಕಾಲದಲ್ಲಿ ಈ ಮಂಚದಲ್ಲೇ ಪ್ರಾಣ ಬಿಡುತ್ತೇನೆ' ಎಂದರು.

ಮುಂದೆ ಶಕುನಿ ದ್ರೋಣರಿಗೆ ಪಟ್ಟಕಟ್ಟಿ ಎಂದ. ಪರಮಾತ್ಮ ಭೀಮ ಅರ್ಜುನರಿಗೆ 'ಎಚ್ಚರವಿರಿ ದ್ರೋಣರು ಬರುತ್ತಿದ್ದಾರೆ ಯುದ್ಧಕ್ಕೆ' ಎಂದ. ಚಿತ್ರಮೂಲೆ ಕ್ವಾಟೆಗೆ ಭೀಮ ಇರುವನು. ನೀನು ಗಾಂಡೀವ ತೆಗೆದುಕೊಂಡು ನಡಿ ನನಗೆ ಕೃಷ್ಣ ಹೇಳವ್ನೆ. ಚಿತ್ರಮೂಲೆ ಕ್ವಾಟೆ ಒಳಗೆ ಹೋಗೋದ್ನ ನಾನೋಡ್ತಿನಿ ಎಂದು ಅಭಿಮನ್ಯು ಹೊರಟ. ಬಾಣದಿಂದ ಚಿತ್ರಮೂಲೆ ಕೋಟೆ ಛಿದ್ರ ಛಿದ್ರ ಆಗುತ್ತಿರಲು ಶಲ್ಯ, ಶಕುನಿ, ಕರ್ಣ, ದುಶ್ಯಾಸನರು ದಿಕ್ಕೆಟ್ಟು ನೋಡಿದರು. ಸೈನ್ಯ ದಿಕ್ಕಾಪಾಲಾಯಿತು. ಕರ್ಣನಿಗೆ ದುಶ್ಯಾಸನ ಹೇಳಿದ ಮಾಯದ ಅಸ್ತ್ರ ಬಿಡು ಎಂದು. ಕರ್ಣಬಿಟ್ಟ. ಒಂದು ಕೈ ಕಡಿಯಿತು. ಇನ್ನೊಂದು ತೋಳು ತೆಗೆದ. ಹಾಗಾದರೂ ಸೆಣಸಾಡಿದ. ಸೈಂದವನಿಗೆ ಸೋತು ಪಾಂಡವರು ಹೊರಗೆ ನಿಂತಿರಲು ಅಭಿಮನ್ಯು ಸತ್ತನೆಂದು ಧರ್ಮರಾಯ ಭೀಮನಿಗೆ ಹೇಳಿದ. ಅರ್ಜುನ ಎಡಭುಜ ಅದುರುತ್ತ. ಸಂಕಟ, ಹೊಟ್ಟೆಯುರಿ ಎಂದು ಪರಮಾತ್ಮನಿಗೆ ಹೇಳಿದನು, ಅಭಿಮನ್ಯು ಸತ್ತ ವಿಷಯ ಅರ್ಜುನ ಕೇಳಿ ಕಣ್ಣೀರ್ಗರಿಯುತ್ತಾನೆ. ಮಗ ಸಾಯುವ ಮುಂಚೆ ಅರ್ಜುನನಿಗಾದ ಅಪಶಕುನಗಳು ನಿಜವಾದುವು. ಅರ್ಜುನ ಸೈಂಧವನನ್ನು ಕೊಲ್ಲುತ್ತೇನೆಂದು ಶಪಥ ಮಾಡಿ ಅದರಂತೆ ಕೊಂದ.

ಕೃಷ್ಣ ಧರ್ಮರಾಯನಿಗೆ 'ದ್ರೋಣರನ್ನು ಗೆಲ್ಲಲಾಗದು ಅದಕ್ಕಾಗಿ ನೀನೊಂದು ಸುಳ್ಳು ಹೇಳಬೇಕು' ಎಂದಾಗ ಧರ್ಮರಾಯ 'ನೀನು ಧರ್ಮ ತಿಳಿದವನು ಹೀಗೆ ಹೇಳಬಹುದೇ?' ಒತ್ತಾಯ ಮಾಡಬೇಡ ಎನ್ನಲು. ಕೃಷ್ಣನ ಮಾಯೆಯಿಂದ ಒಂದು ಆನೆ ಕಿರುಚುತ್ತಾ ಅಶ್ವತ್ಥಕಟ್ಟೆಯಲ್ಲಿ ಸತ್ತು ಬಿದ್ದಿತ್ತು. 'ಅಶ್ವತ್ಥಕಟ್ಟೆ ಆನೆ ಸತ್ತು ಹೋಯ್ತು ಸತ್ತೋಯ್ತು' ಎಂದು ಜೋರಾಗಿ ಹೇಳು ಎಂದರು. ಹಾಗೆನ್ನುವಾಗ ನೂರೆಂದು ನಗಾರಿ ಶಬ್ದ ಮಾಡಿದ ಪರಮಾತ್ಮ. 'ಅಶ್ವತ್ಥಾಮ ಸತ್ತುಹೋದ' ಅಂತ ಹೇಳಿ ದ್ರೋಣರು ಬಿಲ್ಲುಬಾಣ ಎಸೆದರು. ದ್ರುಪದರಾಜನ ಮಗ ದ್ರುಷ್ಟದುಮ್ನನು ರಥದಿಂದ ಕೆಳಗೆ ಧುಮುಕಿ ಚಂದ್ರಾಯುಧರಿಂದ ದ್ರೋಣರ ಕೊರಳ ಕತ್ತರಿಸಿ ತಂದೆಯ ಸೇಡು ತೀರಿಸಿಕೊಂಡ. ಆತ್ಮ ಕೈಲಾಸ, ವೈಕುಂಠ, ಬ್ರಹ್ಮಲೋಕದಲ್ಲಿ ಮಗನನ್ನು ಹುಡುಕಲು ಕಾಣದಿರಲೂ ಧರ್ಮರಾಜ ಸುಳ್ಳು ಹೇಳಿದನಲ್ಲಾ ಆತನ ಮೇಲೆ ಸೇಡು ತೀರಿಸಿಕೊಳ್ಳಬೇಕು ಎಂದು ಚಿಂತಿಸಿ ಒಂದು ನಾಯಿಗೆ ಅವರ ಆತ್ಮ ಸೇರಿತು. ಕೃಷ್ಣ ಅವರ ಮೇಲೆ ಕಮಂಡಲದ ನೀರು ಸುರಿಯಲು ನಾಯಿ ಭಯದಿಂದ ಮಾತಾಡಿತು. 'ನಾನು ದ್ರೋಣ, ಧರ್ಮರಾಯ ಅಶ್ವತ್ಥಾಮ ಸತ್ತು ಹೋದ ಅಂತ ಸುಳ್ಳು ನುಡಿಯಬಹುದೆ?'

'ನೀವು ಘಟದಿಂದ ಆತ್ಮ ಬೇರೆ ಮಾಡಿ ಹೋದುದಕ್ಕೆ ಧರ್ಮರಾಯ ಹೊಣೆಯೇ? ಪಾಂಡವರ ಮೇಲೇಕೆ ನಿಮಗೆ ಸಿಟ್ಟು. ನೀವು ನಾಯಿಯಾಗಿ ಮೋಕ್ಷವಿಲ್ಲದೆ ನರಕ ಸೇರುವಿರಿ.'

'ಪರಮಾತ್ಮ ನಿನ್ನ ರೂಪು ತೋರಿ ಮುಕ್ತಿ ಕರುಣಿಸು' ಎಂದಾಗ ಪರಮಾತ್ಮ ನಿಜರೂಪ ತೋರಿದಾಗ ನಾಯಿಯ ಡಿಂಬದಿಂದ ಬಂದು ದ್ರೋಣರು ಪರಮಾತ್ಮನ ಪಾದ ಸೇರಿದರು.

ದ್ರೋಣರ ಸಾವಿನ ನಂತರ ಕರ್ಣನಿಗೆ ಪಟ್ಟ ಕಟ್ಟಿದರು. ಕರ್ಣ ಘಟೋತ್ಕಜನ ಶಿರಸ್ಸನ್ನು ತೆಗೆದ. ಕರ್ಣನು ಕೌರವನಿಗೆ 'ನಿಮ್ಮ ಮಾವ ಶಲ್ಯ ಸಾರಥಿಯಾದರೆ ಗೆಲುವು' ಎಂದ. ಶಲ್ಯನನ್ನು ಕೇಳಿದಾಗ 'ನಾನು ಸೂತ ಪುತ್ರನಿಗೆ ಸಾರಥಿ ಆಗಬೇಕೆ?' ಎಂದ. ಅದಕ್ಕೆ ಕೌರವ,

**ಆಪತ್ತು ಬಂದಿರೋಗ**
**ಜಾತಿ ಮಾತೇಕೆ?**
**ಶ್ರೀಕೃಷ್ಣ ಪರಮಾತ್ಮ ಜಗತ್ತಿಗ ಸ್ವಾಮಿ**
**ಅನ್ತಾರಲ್ಲವೇ?**[೨೧]

ಯುದ್ಧದ ಸನ್ನಿವೇಶಗಳಲ್ಲಿ ಅದ್ಭುತರಸ, ವೀರರಸ, ಕರುಣಾರಸ, ಭೀಭತ್ಸರಸಗಳು ತುಂಬಿ ತುಳುಕಾಡುತ್ತಿವೆ.

ಭೀಮ ದುಶ್ಯಾಸನನ ಹೊಟ್ಟೆ ಬಗೆದು ಆತನ ರಕ್ತವನ್ನು ಮೂರು ಬೊಗಸೆ ಕುಡಿದು, ದ್ರೌಪದಿ ಬಿಚ್ಚು ಮುಡಿಗೆ ಎಣ್ಣೆಯಾಗಿ ಸವರಿದ, ಆತನ ದವಡೆ ಸಾಲಿನಿಂದ ಬಾಚಿದ, ಅವನ ಕರುಳನ್ನು ಅವಳ ಮುಡಿಗೆ ಮುಡಿಸಿದ. ತಿಗುಳರನ್ನು ಕರೆದು ಅವರು ತಲೆ ಮೇಲೆ ಕರಗ ಹೊತ್ತುಕೊಂಡು ವಾದ್ಯದೊಂದಿಗೆ ಕುಣಿಯುತ್ತಾ ಮನೆಗೆ ಬಂದರು.

ಕರ್ಣ ಸರ್ಪಾಸ್ತ್ರ ಬಿಟ್ಟ. ಆಗ ಪರಮಾತ್ಮ ತನ್ನ ಮಾಯಾಶಕ್ತಿಯಿಂದ ರಥವನ್ನು ನೆಲಕ್ಕೆ ತುಳಿದ. ಅಸ್ತ್ರ ಅರ್ಜುನನ ಕಿರೀಟ ಹಾರಿಸಿತು. ಕರ್ಣನನ್ನು 'ಮತ್ತೆ ಬಾಣ ತೊಡು' ಎಂದ ಶಲ್ಯ. ಅದಕ್ಕೆ ಆತ 'ತೊಟ್ಟ ಬಾಣವನ್ನು ತೊಡುವುದಿಲ್ಲ' ಎಂದ. ಕೂಡಲೇ ರಣರಂಗ ಬಿಟ್ಟು ಹೊರಟ ಶಲ್ಯ, ಕರ್ಣ ಹೇಳಿದ 'ಅರ್ಜುನ ಸ್ವಲ್ಪ ತಾಳು ರಥವನ್ನು ಮೇಲೆತ್ತಿ ಯುದ್ಧಕ್ಕೆ ಬರುವೆ' ಎಂದ. ಇದೇ ಸಮಯವೆಂದು ಪರಮಾತ್ಮ ಕಣ್ಣು ಹುಬ್ಬು ಹಾರಿಸಿದ. ಪರಮಾತ್ಮ ಬಡಬ್ರಾಹ್ಮಣನ ವೇಷದಲ್ಲಿ ಕರ್ಣನ ಹತ್ತಿರ ಬಂದು 'ದಾನ ಮಾಡು' ಎಂದ. ಕರ್ಣ 'ಏನು ಕೊಡಲಿ ಈ ರಣರಂಗದಲ್ಲಿ' ಎನ್ನಲು 'ನಿನ್ನ

ಕರ್ಣ ಕುಂಡಲ ಕೊಡು' ಎನ್ನಲು 'ನನ್ನ ಕರ್ಣ ಕುಂಡಲ ಯಾರ ಕಣ್ಣಿಗೂ ಕಾಣುವುದಿಲ್ಲವಲ್ಲ' ಎಂದು ಕೊಂಡು ಕರ್ಣ ಕುಂಡಲ ತೆಗೆದು ಕೊಟ್ಟ. 'ಜಲದಲ್ಲಿ ಧಾರೆ ಎರೆ' ಎಂದ. 'ಇಲ್ಲಿ ನೀರೆಲ್ಲಿದೆ' ಎಂದ ಕರ್ಣನಿಗೆ 'ನಿನ್ನ ಹೃದಯ ಬಗೆದರೆ ಅಮೃತ ಕಳಶವಿದೆ. ಅದರಿಂದ ಕೊಡು' ಎನ್ನಲು, 'ಪರಮಾತ್ಮ ಏನಿದು ಮಾಯೆ?' ಎಂದು ಬಾಣದಿಂದ ಎದೆ ಸೀಳಿದ. ಆಗ ಪರಮಾತ್ಮ ಪ್ರತ್ಯಕ್ಷನಾಗಿ ಮಾಯವಾದ. ಆಗಲೇ ಆತನ ಆತ್ಮ ಪರಮಾತ್ಮನಲ್ಲಿ ಲೀನವಾಗಿತ್ತು. ಆದರೆ ನೆಪಮಾತ್ರಕ್ಕೆ ಅರ್ಜುನ ಬಾಣ ಹೊಡೆದು ಕೊಂದನೆಂದು ಜಗತ್ತು ಹೇಳುತ್ತಿತ್ತು. ಆತನ ಹೆಂಡತಿ ಸ್ವಯಂಪ್ರಭಾದೇವಿ ಮಗ ರುಷಕೇತು ಗೋಳೆಂದು ಅತ್ತರು. ಕುಂತಿ ಬಿದ್ದು ಒದ್ದಾಡುವಾಗ ಪಾಂಡವರು 'ಕುಂತಿ ಯಾಕೆ ತನ್ನ ಮಗನೆಂದು ಹೇಳಲಿಲ್ಲ' ಎಂದು ಕೇಳುತ್ತಾರೆ. ಇದಕ್ಕೆಲ್ಲಾ ಒಂದೇ ಉತ್ತರ ಪರಮಾತ್ಮನದು 'ಯಾರದೂ ತಪ್ಪಿಲ್ಲ, ಅವರವರ ಹಣೇ ಬರಹದಂತೆ' ಎಂದು ಸಮಾಧಾನಿಸುತ್ತಾನೆ.

ಯುದ್ಧದಲ್ಲಿ ಎಲ್ಲಾ ಸತ್ತು ಉಳಿದವನೊಬ್ಬನೇ ಕೌರವ. ಭೀಷ್ಮರ ಹತ್ತಿರ ಬಂದು, 'ನಾನೊಬ್ಬನೇ ಪಾಂಡವರನ್ನು ಹೇಗೆ ಜಯಿಸಲಿ?' ಎಂದಾಗ 'ಅವರಿಗೆ ಪರಮಾತ್ಮ ಸಹಾಯವಿದೆ. ಬಲರಾಮ ಬರುವವರೆಗೆ ನೀನು ತಲೆಮರೆಸಿಕೊಂಡಿರಬೇಕು. ನೀರಲ್ಲಿ ಮುಳುಗಿ ನಾನು ಹೇಳುವ ಮಂತ್ರ ಜಪಿಸು' ಎಂದ ಜಯಲಕ್ಷ್ಮಿ ಮಂತ್ರದೀಕ್ಷೆ ಪಡೆದು ಸುವರ್ಣ ಸಮುದ್ರದಲ್ಲಿ ಕುಳಿತ ಕೌರವ. ಪರಮಾತ್ಮನಿಗೆ ಇದು ತಿಳಿದು ಕೌರವನನ್ನು ಸುವರ್ಣ ಸಮುದ್ರದಿಂದ ಏಳಿಸಬೇಕು. ಆತ ತಪ ಮಾಡಿದರೆ ಆತನ ಗೆಲಲಾಗದು. ಬಲರಾಮ ಬರುತ್ತಾನೆ, ಹದಿನೆಂಟು ದಿನಕ್ಕೆ ಈ ಯುದ್ಧ ಆಗಬೇಕು. ಪರಮಾತ್ಮ ಲವಣ ಮಾರುಸಿಗಳ ಕರೆದ. 'ಈ ಸಮುದ್ರದ ನೀರನ್ನು ಕುಡಿದು ಬಯಲು ಮಾಡು' ಎಂದ. ಹಾಗೆ ಮಾಡಲು ಕೌರವ ಕಣ್ಬಿಟ್ಟು ಎದ್ದು ಗದೆ ಎತ್ತಿದ. ಬಲರಾಮ ಬಂದು ತಡೆದ. ಕೃಷ್ಣ ನಡೆದ ವಿಷಯಗಳೆಲ್ಲವನ್ನು ತಿಳಿಸಿದ. ಕೌರವ ಈಗಲೂ ರಾಜ್ಯ ಕೊಡುವುದಿಲ್ಲವೆಂದ. ಯುದ್ಧ ಮಾಡಿ ಯಾರು ಗೆಲ್ಲುವರೋ ಅವರಿಗೇ ರಾಜ್ಯ ಎಂದ. ಭೀಮ ಕೌರವ ಇಬ್ಬರಿಗೂ ಗದಾಯುದ್ಧ ನಡೆಯಿತು. ಕೃಷ್ಣ ತೊಡೆಗೆ ಹೊಡೆ ಎಂದು ಸನ್ನೆ ಮಾಡಿದ. ಭೀಮ ಹಾಗೆ ಹೊಡೆಯಲು ದೊಪ್ಪೆಂದು ಬಿದ್ದ ಕೌರವ ಕಿರೀಟ ಒದ್ದ. 'ಕೌರವ ಹಿರಿಯರ ನೆನಸಿ ಸ್ವರ್ಗಕ್ಕೆ ನಡೆಯಪ್ಪಾ' ಎಂದು ನಡೆದ. ಮತ್ತೆ ಕೃಷ್ಣ ಲವಣ ಮಾರುಸಿಗಳೇ ಸಮುದ್ರದ ನೀರು ಬಿಡಿ ಎಂದಾಗ ಬಿಟ್ಟರು. ಆಗ ನೀರು ಉಪ್ಪಾಯಿತು. ಲವಣ ಸಮುದ್ರ ಎಂದು ಹೆಸರಾಯಿತು. ದ್ರೌಪದಿ ಭೀಮನಿಗೆ ಆರತಿ ಬೆಳಗಿದಳು.

ಹದಿನೆಂಟು ದಿನಗಳ ಕುರುಕ್ಷೇತ್ರ ಯುದ್ಧದ ವರ್ಣನೆಗಳಲ್ಲಿ ಭೀಭತ್ಯರಸ ತುಂಬಿದೆ. 'ಪಾಂಡವರ ಕೊಲ್ತೀನಿ, ನನ್ನ ತಂದೆ ಹಾಗೂ ಕೌರವನಿಗೆ ಸಮಾಧಾನ ತರುತ್ತೇನೆ' ಎಂದು ಅಶ್ವತ್ಥಾಮ ಇಂದ್ರಪ್ರಸ್ತಕ್ಕೂ ಬಂದು, ದ್ರೌಪದಿಯ ಐದು ಜನ ಮಕ್ಕಳನ್ನು ಕೊಂದು ಪಾಂಡವರ ಮುಖ ನೋಡು ಎಂದು ಕೌರವನಿಗೆ ಹಿಡಿದನು. ಇದು ಪಾಂಡವರಲ್ಲ ಎಂದ ಕೌರವನಿಗೆ ಅಶ್ವತ್ಥಾಮ 'ನಾನು ಶಿಶುಹತ್ಯೆ ಪಾಪಕ್ಕೆ ಸಿಕ್ಕಿದೆ ತೀರ್ಥ ಯಾತ್ರೆಗೆ ಹೋಗಬೇಕು. ಇದರಲ್ಲಿ ನಿನಗೂ ಪಾಲು ಉಂಟು. ನಿನಗೆ ಸ್ವರ್ಗವಿಲ್ಲ ನೀನು ಪ್ರಾಣ ಬಿಡು' ಎಂದ. ದ್ರೌಪದಿ ಸತ್ತ ಮಕ್ಕಳನ್ನು ನೋಡಿ ಕಣ್ಣಿನಿಂದ ಬೆಂಕಿ ಚೆಂಡು ಹಾರಿಸಿದಳು ಆಗ ಕೃಷ್ಣ ಬಂದು ಶಾಂತಳಾಗು ಎಂದು ಬೆಂಕಿಯನ್ನು ಸಮುದ್ರಕ್ಕೆ ಕಳುಹಿಸಿದ.

ಕೃಷ್ಣನ ಸಮ್ಮುಖದಲ್ಲಿ ಧರ್ಮರಾಜನಿಗೆ ಪಟ್ಟ ಕಟ್ಟಿದರು. ಎಲ್ಲರಿಗೂ ಆರ್ಶಿರ್ವದಿಸಿ ಅವರ ಕಾರ್ಯಗಳನ್ನು ತಿಳಿಸಿ ಕೃಷ್ಣ ದ್ವಾರಕೆಗೆ ಹೊರಟ. 'ಚಿಕ್ಕಮ್ಮನ ಮಕ್ಕಳಾದ ನಕುಲ, ಸಹದೇವರಿಗೆ ಮಂತ್ರಿ ಸೇನಾದಿಪತಿ ಪಟ್ಟ ಕೊಟ್ಟ. ನಮಗೇಕೆ ಹೀಗೆ ಮಾಡಿದ ಪರಮಾತ್ಮ?' ಎಂದು ಭೀಮಾರ್ಜುನರು ಅಣ್ಣನ ಬಳಿ ಕೇಳಿದರು. ಆಗ ಅಲ್ಲಿಗೆ ಬಂದ ನಾರದರು ವಿಷಯವನ್ನೆಲ್ಲಾ ಕೇಳಿ ನ್ಯಾಯಕೊಡಿಸ್ತೀನಿ ಎಂದು ದ್ವಾರಕಿಗೆ ಹೊರಟರು. ನಡೆದ ವಿಷಯವನ್ನು ಪರಮಾತ್ಮನಲ್ಲಿ ತಿಳಿಸಿದಾಗ ಪರಮಾತ್ಮ ಹಸ್ತಿನಾಪುರಕ್ಕೆ ಬಂದ, 'ಕೌರವನ ಕಡೆಯವರು ದೊಂಬಿ ಮಾಡಿದರೆ ನಕುಲ, ಸಹದೇವರ ಕೈಲಾದೀತೇ? ಎಂದು ನಿಮ್ಮನಲ್ಲಿ ಹೆಬ್ಬಾಗಿಲಿಗೆ ನಿಲ್ಲಿಸಿದೆ' ಎಂದ. ಒಬ್ಬೊಬ್ಬರೂ ಯುದ್ಧದ ಜಯಕ್ಕೆ ನಾನು ಕಾರಣ ಎಂದು ಹೇಳಿದಾಗ, ಕೃಷ್ಣ ರಣರಂಗಕ್ಕೆ ಕರೆದೊಯ್ದು ರಣಗಂಬ ಕಾಯುತ್ತಿದ್ದ 'ಭದ್ರಬಾಹು ಕೇಳಿ' ಎಂದ. ಆತ 'ಬ್ರಹ್ಮ, ವಿಷ್ಣು, ದೇವೇಂದ್ರ, ಅಷ್ಟದಿಕ್ಪಾಲಕರು, ಗಂಧರ್ವ, ಕಿನ್ನರ, ಕಿಂಪುರುಷ, ದೇವಾದಿ ದೇವತೆಗಳು ಬಂದು ದ್ರೌಪದಿ ಶರೀರದಲ್ಲಿ ಲಯವಾಗಿ ಆಕೆ ಮಹಾಕಾಳಿ ಆಗಿದ್ದಳು. ಸೈನ್ಯ ನುಂಗಿ ಮಾಯಾವಾಗಿ ಹೋಗ್ತಿತ್ತು ಬೇರೆಯವರು ಯುದ್ಧ ಮಾಡ್ತಿರಲಿಲ್ಲ. ಆದಿಶಕ್ತಿಯೇ ಪಾಂಡವರ ಜೀವವನ್ನು ಉಳಿಸಿದಳು' ಎಂದಾಗ, ಕೃಷ್ಣ 'ನಿಮ್ಮ ಮಗನ ಬಾಯಿಂದಲೇ ಕೇಳಿದಿರಲ್ಲಾ' ಎಂದ. ಹೀಗೆ ಹೇಳಿ ಭದ್ರಬಾಹು ಪ್ರಾಣ ಬಿಟ್ಟ.

ನಾರದರ ಮಾತಿನಂತೆ ಧರ್ಮರಾಯನು ಅಶ್ವಮೇಧಯಾಗ ಮಾಡಿ ಕುದುರೆ ಬಿಡಲು ಅದನ್ನು ರತ್ನಪುರಿ ರಾಜ ಮಯೂರಧ್ವಜನ ಮಗ ತಾಮ್ರಧ್ವಜ ಪಟ್ಟದ ಕುದುರೆಯನ್ನು ಕಟ್ಟಿದ. ಕೃಷ್ಣ-ಅರ್ಜುನ ಬಂದರು. ಮಯೂರಧ್ವಜ ಪಟ್ಟದ ಕುದುರೆಗೆ ಪೂಜೆ ಮಾಡಿ ಕಾಣಿಕೆ ಕೊಟ್ಟು ಕಳುಹಿಸಿದ.

ಚಿತ್ರಾಂಗಿಯ ಮಗ ಬಬ್ರುವಾಹನ ಮಣಿಪುರದಲ್ಲಿ ಕುದುರೆ ಕಟ್ಟಿದ. ಅರ್ಜುನ ಬಂದು ಕುದುರೆ ಬಿಡು ಎಂದ. ಬಿಡದಿರಲು ವಿಷಯ ತಿಳಿದ ತಾಯಿ ಕುದುರೆ ಕಟ್ಟುವುದು ತರವಲ್ಲ, ಕ್ಷಮೆ ಕೇಳಿಕೋ ಅರ್ಜುನ ಸ್ವಾಮಿಯನ್ನು ಗೌರವದಿಂದ ಪುರಕ್ಕೆ ಕರೆದು ತಾ ಎಂದಾಗ ವಾದ್ಯಸಹಿತ ತಂದೆಯ ಕರೆಯಲು ಯಾರು ನಿನ್ನ ತಂದೆ? ಎಂದು ತಾಯಿಯನ್ನು ನಿಂದಿಸಲು ತಾಯಿಯ ನಿಂದನೆ ಮಾಡಿದವನ ಸುಮ್ಮನೆ ಬಿಡುವುದಿಲ್ಲ ಎಂದು ಬಬ್ರುವಾಹನ ಯುದ್ಧಕ್ಕೆ ನಿಂತ. ಯುದ್ಧದಲ್ಲಿ ಬಬ್ರುವಾಹನ ಅರ್ಜುನನ ಶಿರವನ್ನು ಕತ್ತರಿಸಿ ಎಸೆಯಲು ಚಿತ್ರಾಂಗಿ ಉಲೂಪಿಯರು ಬಂದು ನೋಡಿ ಬಾಯಿ ಬಾಯಿ ಬಡಿದರು. 'ಶ್ರೀಕೃಷ್ಣ ಕಾಪಾಡಿ, ಕಾಪಾಡಿ ಧರ್ಮರಾಯ ಕಾಪಾಡಿ' ಎಂದರು. ಕೃಷ್ಣ ಮಣಿಪುರಕ್ಕೆ ಬಂದು ಪಾತಾಳ ಲೋಕದ ನಾಗರಾಜನ ಹತ್ತಿರ ಸಂಜೀವಿನಿ ಮಣಿ ತರಿಸುವಷ್ಟರಲ್ಲಿ ಜಕಾಸುರ ಅರ್ಜುನನ ತಲೆಯನ್ನು ಹೊತ್ತು ಗವಿಗೆ ಸೇರಿದ್ದ. ಕೃಷ್ಣನಿಗೆ ಈ ವಿಷಯ ತಿಳಿದು ಚಕ್ರ ಬಿಡಲು ಅದು ಜಕಾಸುರನ ಶಿರಸ್ಸನ್ನು ಕತ್ತರಿಸಿ, ಅರ್ಜುನನ ಶಿರವನ್ನು ತಂದಿತು. ಅರ್ಜುನ, ರುಷಿಕೇತು ಎಲ್ಲರನ್ನೂ ಬದುಕಿಸಿದ ಕೃಷ್ಣ. ಇನ್ನು ಮುಂದೆ ಇದಕ್ಕೆ ನಾಗಮಂಗಲವಾಗಲಿ ಎಂದ. ಮಣಿಪುರವೆಲ್ಲಿ? ನಾಗಮಂಗಲವೆಲ್ಲಿ ಕವಿಕಲ್ಪನೆ ಲಂಗು ಲಗಾಮಿಲ್ಲವಾಗಿದೆ. ಬಬ್ರುವಾಹನ ಬಾಣ ಹೊಡೆದ. ಸುರಂಗವು ಕಲಿಯುಗದಲ್ಲಿ ಪಾತಾಳ ಬಾವಿಯಾಗಲಿ, ನಾನಿಲ್ಲಿ ಬಂದುದಕ್ಕೆ ನಾಗಕೇಶಿ ವನವಾಗಲಿ ಎಂದು ಹರಸಿ ಅರ್ಜುನ ಮಗನನ್ನು ತಬ್ಬಿಕೊಂಡ. ಅರ್ಜುನ, ಬಬ್ರುವಾಹನ, ರುಷಿಕೇತು ಮುಂತಾದವರೆಲ್ಲಾ ಕುದುರೆ ಸಹಿತ ಕಪ್ಪಕಾಣಿಕೆಯ ವಸೂಲಿ ಮಾಡಿಕೊಂಡು ಹಸ್ತಿನಾವತಿಗೆ ಬಂದರು.

'ಕಲಿಯುಗ ಆರಂಭವಾಗುತ್ತೆ ಅನೇಕ ಅನಾಹುತಗಳಾಗುತ್ತೆ ಅಂತ ಕೃಷ್ಣ ಧರ್ಮರಾಯನಿಗೆ ತೋರಿಸುತ್ತಾ ಬರುತ್ತಾನೆ.'

ಒಂದು ಮಗುವನ್ನು ಒಬ್ಬಳು ನನ್ನದು ಅಂತ, ಇನ್ನೊಬ್ಬಳು ನನ್ನದು ಅಂತ ಜಗಳವಾಡುತ್ತಿರಲು ಧರ್ಮರಾಯನನ್ನು ಕೇಳಿದಳು. ಧರ್ಮರಾಯ ಭೀಮನಿಗೆ ಹೇಳಿದ ಅರ್ಧರ್ಧ ಸೀಳಿ ಕೊಟ್ಟುಬಿಡು ಎಂದ. ಆಗ ಸೀಳಲು ಹೋಗಲು ನಿಜವಾದ ತಾಯಿ ಅವಳೇ ಕಾಪಾಡಲಿ ನನ್ನ ಮಗ ಬದುಕಿದ್ದರೆ ಸಾಕು ಎಂದು ಹೇಳುತ್ತಾಳೆ. ದ್ವಾಪರ ಯುಗ ಮುಗಿಯಿತು, ಕಲಿಗಾಲ ಶುರುವಾಗುತ್ತೆ, ಇದೇ ಕುರುಹು ಎಂದ ಕೃಷ್ಣ. ಧರ್ಮರಾಜ ತಾನು ಕಂಡ ಕನಸನ್ನು ಕೃಷ್ಣನಿಗೆ ಹೇಳಿದ. 'ಮುತ್ತಿನ ಪಲ್ಲಕ್ಕಿ ಹಾರ್‍ತಾ ಹೋಗಿ ಕರಿಸಮುದ್ರಕ್ಕೆ ಮುಳುಗಿಹೋಯ್ತು' ಎಂದ.

ಅದಕ್ಕೆ ಕೃಷ್ಣ ನಿನ್ನಂಥ ಸಾಧುಸಜ್ಜನರು ಬದುಕುವ ಕಾಲವಲ್ಲ ಅಂತ ಹೇಳುತ್ತದೆ. ಹೀಗೆ ಹೇಳುತ್ತಿರುವಾಗ ಪರಮಾತ್ಮ ಕುಳಿತಿದ್ದ ಸಿಂಹಾಸನ ಕೆಳಕ್ಕೆ ಇಳಿಯಿತು. ಎಲ್ಲರೂ ಗಾಬರಿ ಆದರು. ಆಗ ಕೃಷ್ಣ ಒಂದು ಕೋಲು ತೆಗೆದುಕೊಂಡು ಏನೂ ಆಗೋಲ್ಲ ಗಾಬರಿ ಬೇಡ. ಈ ಕೋಲನ್ನು ಹಿಡ್ಕೊತ್ತೀನಿ ಮೇಲೆತ್ತು ಎಂದ. ಭೀಮ ಹಿಡಿದುಕೊಳ್ಳಲು ಅವನ ಆತ್ಮಶಕ್ತಿ ಸರ್‍ರನೆ ಹೀರಿಕೊಂಡಿತು. ಹಾಗೆಯೇ ಮಿಕ್ಕ ನಾಲ್ವರೂ ಮಾಡಿದರು. ಆಗ ದ್ರೌಪದಿಗೆ ಹೇಳಿದ. ಆಕೆ ಹಿಡಿದುಕೊಳ್ಳಲು ಆಕೆ ಆತ್ಮಶಕ್ತಿ ಪರಮಾತ್ಮನಲ್ಲಿ ಸೇರಿಹೋಯ್ತು. ರತ್ನಸಿಂಹಾಸನ ಮೇಲೆ ಬಂತು ಆಗ ಪರಮಾತ್ಮ "ನಮ್ಮ ಕಾಲ ಮುಗೀತು. ಇನ್ನು ಕಲಿಯುಗ ಬರುತ್ತೆ, ನೀವೆಲ್ಲಾ ಸ್ವರ್ಗಾರೋಹಣ ಮಾಡಿ ಎಂದ. ಗಾಂಧಾರಿ, ಧೃತರಾಷ್ಟ್ರ, ಕೊಂತ್ಯಮ್ಮ, ವಿದುರ, ಸಂಜಯರು ಆಶ್ರಮ ಜೀವನ ಬಯಸಿದರು,

ಸೀಲಾ ನದಿ ದಾಟಬೇಕು. ಇದನ್ನು ಹಾದು ದಡ ಮುಟ್ಟಿದರೆ ಸ್ವರ್ಗವೆನ್ನುತ್ತಾ ಕೃಷ್ಣನನ್ನು ನೆನೆದು ಹೊರಟರು. ಪ್ರಯಾಣ ಮಧ್ಯದಲ್ಲೇ ಒಬ್ಬೊಬ್ಬರು ಸಾವಿಗೀಡಾಗಲು ಧರ್ಮರಾಯ ಅವರ ಸಾವಿನ ಕಾರಣವನ್ನು ತಿಳಿಸುತ್ತಾ ಮುನ್ನಡೆಯುತ್ತಿದ್ದನು. ಅಂತಿಮವಾಗಿ ಧರ್ಮರಾಯನನ್ನು ಕರೆದುಕೊಂಡು ಹೋಗಲು ಪುಷ್ಪಕವಿಮಾನ ಬಂತು. ತನ್ನ ಜೊತೆಯಲ್ಲೇ ಬಂದ ನಾಯಿಮರಿಯನ್ನು ಎತ್ತಿಕೊಳ್ಳಲು ಅದನ್ನು ಕರೆತರುವಂತಿಲ್ಲ ಎಂದಾಗ ಅದು ಅವನ ಕಂಕುಳಿಂದ ಇಳಿದು ಯಮಧರ್ಮರಾಯನಾಗಿ ನಿಂತಿತು. ಧರ್ಮರಾಯ ನಾಯಿಗೂ ವಂಚನೆ ಮಾಡಲಿಲ್ಲ. 'ನಾನೇ ಈ ರೂಪ ತಾಳಿ ನಿನ್ನ ಪರೀಕ್ಷಿಸಿದೆ' ಎಂದ ಯಮಧರ್ಮ. ಸ್ವರ್ಗಕ್ಕೆ ಬಂದಾಗ ಕೃಷ್ಣನ ಕೈ ಹಿಡಿದು ಇಳಿಸಿಕೊಂಡ. ಸ್ವಲ್ಪ ನರಕ ನೋಡುವಿರಿ ಬನ್ನಿ ಎಂದು ಕರೆದೊಯ್ದರು. ನರಕದಲ್ಲಿ ಕೌರವನನ್ನು ಕ್ರಿಮಿಕೀಟಗಳು ತಿನ್ನುತ್ತಿದ್ದವು. ಆಗ ಧರ್ಮರಾಯ 'ನನ್ನ ಪುಣ್ಯಧಾರೆ ಎರೆದುಕೊಡುತ್ತೇನೆ ಆತನ ಬಿಡು' ಎಂದಾಗ ಕೌರವ,

**ನಾನು ಅನ್ಯರ ಪುಣ್ಯದಿಂದ ಬರೋನಲ್ಲ**
**ಸ್ವಂತ ಸ್ವಾಧೀನದಲ್ಲಿರೋ ನರಕವೇ ಲೇಸು**

ಹೀಗೆ ಹೇಳುವಾಗ ನರಕದಲ್ಲೂ ಕೌರವ ತನ್ನ ಛಲ ಬಿಡಲಿಲ್ಲ. ನರಕವಾಸದಲ್ಲಿದ್ದ ಕೌರವನಿಗೆ ತನ್ನ ಧರ್ಮವನ್ನೇ ಧಾರೆ ಎರೆದು, ಆತನನ್ನು ನರಕದಿಂದ ಮುಕ್ತಿಗೊಳಿಸುವ ಧರ್ಮರಾಯನ ಪಾತ್ರ ಮೇರುಮಟ್ಟಕ್ಕೆ ಏರುತ್ತದೆ. ಕೌರವನ ನೋವಿಗೆ ಕಣ್ಣೀರ್ಗರೆದ ಧರ್ಮರಾಯ ಕುದಿಯೋ ಎಣ್ಣೆ ಬಾಂಡ್ಲಿಗೆ ಹಾರಿಕೊಂಡಾಗ ಅದು ಪನ್ನೀರಾಯ್ತು. ಪರಮಾತ್ಮ ಹಿಡಿದು ಎತ್ತಿಕೊಂಡ. 'ದುರ್ಯೋಧನ ವೀರ ಸ್ವರ್ಗದಲ್ಲಿದ್ದಾನೆ. ನಿನ್ನ ಪರೀಕ್ಷೆ ಮಾಡಲು ಹೀಗೆ ಮಾಡಿದೆ ಅಷ್ಟೇ' ಎಂದ ಪರಮಾತ್ಮ. ಸ್ವರ್ಗಕ್ಕೆ ಬಂದ

ಧರ್ಮರಾಯ ತಮ್ಮಂದಿರು, ದ್ರೌಪದಿ ಎಲ್ಲರನ್ನು ಕಂಡ. ಸ್ವರ್ಗದಲ್ಲಿ ಎಲ್ಲರೂ ಒಂದಾದರು. ಇಲ್ಲಿಗೆ ಜನಪದ ಮಹಾಭಾರತ ಮಹಾಕಾವ್ಯ ಮುಗಿಯುತ್ತದೆ.

**ವ್ಯಾಸಭಾರತಕ್ಕೂ ಜನಪದ ಮಹಾಭಾರತಕ್ಕೂ ಇರುವ ವ್ಯತ್ಯಾಸಗಳು**

ವ್ಯಾಸಮಹಾಭಾರತದಲ್ಲಿ ಗುರುತಿಸುವ ಮುಖ್ಯ ಅಂಶವೆಂದರೆ ದುರ್ಯೋಧನ ಯುಧಿಷ್ಠಿರರ ನಡುವಿನ ದಾಯಾದಿ ಕಲಹಗಳು. ಇದು ಜನಪದ ಮಹಾಭಾರತಕ್ಕೂ ಅನ್ವಯವಾಗತ್ತದೆ. ಮಹಾಭಾರತ ವೈದಿಕಯುಗದ ಅನಂತರ ಪೌರಾಣಿಕ ಯುಗದಲ್ಲಿ ರಚಿತವಾಗಿದೆ. ಆದರೆ ಜನಪದ ಮಹಾಭಾರತ ಅದಕ್ಕೂ ಪೂರ್ವದಲ್ಲಿ ರಚನೆಗೊಂಡಿರಬೇಕು.

ವ್ಯಾಸಭಾರತದಲ್ಲಿ ಸ್ವಯಂವರ ಸ್ಪರ್ಧೆಗೆ ಮತ್ಸ್ಯ ಯಂತ್ರವಿದ್ದರೆ, ಜನಪದ ಮಹಾಭಾರತದಲ್ಲಿ ಮಾರೀಚ ಕಾಗೆಯನ್ನು ಸಂಹರಿಸುವ ಸ್ಪರ್ಧೆ ಇಡಲಾಗಿದೆ. ಕಾರಣ ಜನಪದ ಕವಿ ಅನಕ್ಷರಸ್ಥ. ಜನಪದ ಮಹಾಭಾರತದಲ್ಲಿ ಶಬ್ದವೇಧಿ ವಿದ್ಯೆ ಬಳಸಿದೆ. ಅರ್ಜುನನಿಗೆ ಶಬ್ದವೇದಿ ವಿದ್ಯೆ ಕರಗತವಾಗಿತ್ತು. ಆತ ಹೂಡಿದ ಬಾಣಕ್ಕೆ ಮಾರೀಚ ಕಾಗೆ ಸತ್ತು ಅದರ ರಕ್ತ ಚಿಮ್ಮಿ ಅಂಗಗೊರಬನನೆತ್ತಿಯ ಮೇಲೆ ಬಿತ್ತು. ಆ ಕಾಗೆ ಅಂಗಗೊರಬನ ಹಿಂದಿನ ರೂಪುತಾಳುವುದು ಅಂಗಗೊರಬ ಕುಂತಿಯ ಪಾದಕ್ಕೆ ಎರಗುವನು. ಶಿಷ್ಟ ಭಾರತದಲ್ಲಿ ಕಾಣದ ಮನ್ಮಥನ ತಮ್ಮ ಚಿನ್ಮಥ ಶಾಪಗ್ರಸ್ತ ಅಂಗಗೊರಬನಾಗಿ ಮಾರೀಚ ಕಾಗೆಯ ಸಂಹಾರದೊಂದಿಗೆ ಶಾಪ ವಿಮೋಚನೆಗೊಳ್ಳುವ ಕಥೆ ಜನಪದಭಾರತದಲ್ಲಿ ಮಾತ್ರ ಕಂಡುಬರುವ ವಿಶೇಷ ಪ್ರಸಂಗವಾಗಿದೆ. ಇದು ಜನಪದ ಕವಿಯ ಪ್ರತಿಭೆಗೆ ನಿದರ್ಶನವಾಗಿದೆ.

ವ್ಯಾಸಭಾರತದಲ್ಲಿ ಅರ್ಜುನ ದ್ರೌಪದಿಯನ್ನು ವಿವಾಹವಾಗಿ ಬಂದು, ಮಾಮೂಲಿನಂತೆ ದಿನವೂ ಭಿಕ್ಷೆತರುತ್ತಿದ್ದು 'ಅಮ್ಮ ಭಿಕ್ಷೆ ತಂದಿದ್ದೇನೆ' ಎಂದು ಹೇಳುತ್ತಾನೆ. ಆಗ ಕುಂತಿ 'ಎಲ್ಲರೂ ತೆಗೆದುಕೊಳ್ಳಿ' ಎಂದು ಹೇಳಿ, ದ್ರೌಪದಿಯನ್ನು ನೋಡುತ್ತಾಳೆ. ಏನೋ ಬಾಯಿತಪ್ಪಿ ಪ್ರಮಾದದಿಂದ 'ಎಲ್ಲರೂ ತೆಗೆದುಕೊಳ್ಳಿ ಎಂದೆ. ಎಲ್ಲೋ ಎಂದಿನಂತೆ ಭಿಕ್ಷೆ ತಂದಿರೆಂದು' ಎಂದು ಹೇಳುತ್ತಾಳೆ.

ಜನಪದ ಮಹಾಭಾರತದಲ್ಲಿ 'ಅಮ್ಮ ಹೆಣ್ಣು ತಂದಿದ್ದೇನೆ' ಎಂಬುದನ್ನು 'ಹಣ್ಣು' ಎಂದು ತಿಳಿದು 'ಎಲ್ಲರೂ ಹಂಚಿಕೊಳ್ಳಿ' ಎನ್ನುತ್ತಾಳೆ. ಮತ್ತೆ ಅರ್ಜುನ ಹೆಣ್ಣು ಎಂದರೂ ಒಪ್ಪದೆ 'ನೀವು ತಂದುದ ಐವರು ಹಂಚಿಕೊಳ್ಳಿ ನನ್ನ ಮೇಲಾಣೆ' ಎನ್ನುತ್ತಾಳೆ. ಆಗ ವಿಧಿಯಿಲ್ಲದೆ ಪಾಂಡವರೈವರು ದ್ರೌಪದಿಯನ್ನು ಹೆಂಡತಿಯಾಗಿ ಸ್ವೀಕರಿಸುತ್ತಾರೆ.

ವ್ಯಾಸಭಾರತದಲ್ಲಿ ದ್ರೌಪದಿ ಸ್ವಯಂವರವಾಗಲು ದ್ರೌಪದಿಯ ಅಣ್ಣ ಧೃಷ್ಟದ್ಯುಮ್ನ 'ಈ ಯಂತ್ರದಲ್ಲಿರುವ ರಂಧ್ರವನ್ನು ಹಾಯಿಸಿಹೋಗುವ ಲಕ್ಷ್ಯವನ್ನು ಭೇದಿಸುವಂತೆ ಈ ಐದು ಬಾಣಗಳನ್ನು ಹೊಡೆಯಬೇಕು, ಅಂಥವರಿಗೆ ನನ್ನ ತಂಗಿಕೊಟ್ಟು ವಿವಾಹ ಮಾಡುವೆ' ಎಂದು ಹೇಳುತ್ತಾನೆ.

ಮೂಲಭಾರತದಲ್ಲಿ ಶಿಖಂಡಿ ಮೊದಲು ಹೆಂಗಸಾಗಿದ್ದು, ಆಮೇಲೆ ಗಂಡಸಾಗುತ್ತಾನೆ. ಈತ ಭೀಷ್ಮನ ಶತ್ರುವಾಗಿದ್ದ. ಹಿಂದೆ ಅರ್ಜುನನು ರಕ್ಷಿಸಿಕೊಂಡಿದ್ದನು.

ಜನಪದ ಮಹಾಭಾರತದಲ್ಲಿ ಶಿಖಂಡಿಯ ಬೊಂಬೆಗೆ ಅಂಬೆ ಜೀವ ತುಂಬಿ ಯುದ್ಧದಲ್ಲಿ ತನ್ನ ಸೇಡನ್ನು ತೀರಿಸಿಕೊಳ್ಳುತ್ತಾಳೆಂಬುದನ್ನು ಗಮನಿಸಬಹುದು.

ಮೂಲಭಾರತದಲ್ಲಿ ಅರ್ಜುನ ಭೀಷ್ಮರೊಡನೆ ಯುದ್ಧ ಮಾಡಲು ಹಿಂದೆಸರಿದಾಗ ಕೃಷ್ಣನೇ ಮುಂದಾಗಿ 'ನಾನೇ ಕೊಲ್ಲುವೆ' ಎಂದು ಹೊರಡಲು ಭೀಷ್ಮ 'ಬಾ ಕೃಷ್ಣ ನೀನು ಹೊಡೆದರೆ ಗೌರವ' ಎನ್ನುತ್ತಾನೆ. ಆಗ ಅರ್ಜುನ ತಡೆದು 'ನಾನು ಯುದ್ಧ ಮಾಡುವೆ' ಎಂದು ಒಪ್ಪಿಕೊಳ್ಳುತ್ತಾನೆ. ಮತ್ತೆ ಸ್ವಲ್ಪ ಹೊತ್ತಿಗೆ 'ತಾತನನ್ನೇ ಹೇಗೆ ಕೊಲ್ಲಲಿ? ಈ ಯುದ್ಧವೇ ಬೇಡ' ಎನ್ನುತ್ತಾನೆ. 'ದೈವ ಸಂಕಲ್ಪ ಶಿಖಂಡಿಯಿಂದ ಕೊಲ್ಲಿಸುವೆ. ನೀನು ಯುದ್ಧ ಮಾಡು. ನೀನು ಶಿಖಂಡಿಯನ್ನು ಹೊಡೆವ ಯೋಧರಿಂದ ರಕ್ಷಿಸು' ಎಂದು ಒಪ್ಪಿಸಿ ಯುದ್ಧಕ್ಕೆ ಸನ್ನದ್ಧನಾಗುವಂತೆ ಮಾಡುತ್ತಾನೆ.

ಜನಪದ ಮಹಾಭಾರತದಲ್ಲಿ ಕೃಷ್ಣ ದ್ರೌಪದಿಗೆ ಭೀಷ್ಮನಲ್ಲಿ 'ನನ್ನ ತಾಳಿಭಾಗ್ಯ ಕಾಪಾಡು' ಎಂದು ಕೇಳು ಎಂದಾಗ, ಆಕೆ ಹಾಗೆಯೇ ಹೋಗಿ ಕೇಳುತ್ತಾಳೆ. ಆಗ ಭೀಷ್ಮ 'ಅರ್ಜುನ ಭೀಮ ಬಂದರೆ ಯುದ್ಧ ಮಾಡಲೇಬೇಕು. ಶಿಖಂಡಿ ಬಂದರೆ ಈ ಮಾತು ನಡೆಯುತ್ತದೆ' ಎಂದು ಹೇಳಿದಾಗ ಪರಮಾತ್ಮ (ಕೃಷ್ಣ) ಮಣ್ಣಿಂದ ಶಿಖಂಡಿ ಮಾಡಿ ರಥದ ಮೇಲೆ ಕುಳ್ಳರಿಸಿ ಕಳುಹಿಸುತ್ತಾನೆ. ಅದಕ್ಕೆ

ಅಂಬೆ ಜೀವಕೂಡಿಕೊಂಡು ಕೇಕೆ ಹಾಕಿ ಭೀಷ್ಮನಲ್ಲಿ ಸೇಡು ತೀರಿಸಿಕೊಳ್ಳವೆ ಎಂದಳು. ಶಿಖಂಡಿಯ ಬಾಣ ಭೀಷ್ಮರ ಎದೆಗೆ ನಾಟುವುದು.

ವ್ಯಾಸಭಾರತದಲ್ಲಿ ಅಜಗರ ಸರ್ಪವು ನಹುಷ ಚಕ್ರವರ್ತಿಯಾಗಿದ್ದು, ಐಶ್ವರ್ಯಮದದಿಂದ ಅಗಸ್ತ್ಯನ ಶಾಪಕ್ಕೆ ಗುರಿಯಾಗಿ ಸರ್ಪವಾಗಿದ್ದ. ಭೀಮನನ್ನು ಕಂಡ ಸರ್ಪ ಅವನನ್ನು ಸುತ್ತಿಕೊಳ್ಳುತ್ತದೆ. ಬಿಡಿಸಲು ಬಂದ ಧರ್ಮರಾಯನನ್ನು ಅದು ತಾನು ಕೇಳುವ ಪ್ರಶ್ನೆಗಳಿಗೆ ಉತ್ತರ ಹೇಳಿದರೆ ಬಿಡುತ್ತೇನೆಂದು ಹೇಳಿತು. ಅದಕ್ಕೆ ಧರ್ಮರಾಯ ಒಪ್ಪಿಕೊಳ್ಳುತ್ತಾನೆ. ಧರ್ಮರಾಯ ಉತ್ತರಿಸಿದ ಅನಂತರ ನಹುಷ ಶಾಪವಿಮುಕ್ತನಾಗಿ ಸ್ವರ್ಗಕ್ಕೆ ಹೋಗುತ್ತಾನೆ. ಆದರೆ ಈ ಪ್ರಸಂಗ ಜನಪದ ಮಹಾಭಾರತದಲ್ಲಿಲ್ಲ.

ಮೂಲಭಾರತದಲ್ಲಿ ನಳ-ದಮಯಂತಿ, ಋಷ್ಯಶೃಂಗ, ಸಾವಿತ್ರಿ, ಋಷಿ-ನಾಯಿಯ ಕಥೆ, ಇಲಿ-ಬೆಕ್ಕಿನ ಕಥೆ, ವಿಶ್ವಾಮಿತ್ರ, ಸತ್ತಮಗುವಿನ ಕಥೆ, ಗೌತಮ, ಶಕುಂತಲೆ, ಕೌಶಿಕ, ಯಯಾತಿ, ರಾಮೋಪಖ್ಯಾನಗಳು ಬರುತ್ತವೆ. ದೇವತೆಗಳ ಕಥೆ, ರಾಕ್ಷಸರು, ವೀರರು, ಪತಿವ್ರತೆಯರು, ಮೃಗ, ಪಕ್ಷಿ, ಹಾವು, ಪ್ರಾಣಿ, ಪುರಾಣ ಪುಣ್ಯಕಥೆ, ನೀತಿಕಥೆ, ಋಷಿಗಳು, ತಪಸ್ವಿಗಳು ತ್ಯಾಗಯೋಗಿ, ಉಪಶಾಂತರ- ಮುಂತಾದ ಉಪಕಥೆಗಳು ಬರುತ್ತವೆ.

ಜನಪದ ಮಹಾಭಾರತದಲ್ಲಿ ಸುವರ್ಣಕೇಶಿ, ಸ್ವೇತುಕೇಶಿ, ತಾಮ್ರಕೇಶಿ, ಮಾರ್ಕಂಡೇಯ, ಶಂಬರಾಸುರ, ಅಂಬಿಗರ ಚೌಡಯ್ಯ, ಡಂಬಕಾಸುರ, ಮಾಣಿಕಸಿದ್ಧಿ, ಕುಂಬಾರಗುಂಡಯ್ಯ, ಮುದ್ದೇಗೌಡ, ಶ್ಯಾನುಭೋಗ ಶ್ರೀನಿವಾಸಯ್ಯನ ಮಗ ವೆಂಕಟೇಶ, ಭದ್ರಬಾಹು, ಕರಗದಕತೆ, ಓತಿಕ್ಯಾತ, ನಾಗರುಸಿ ಕಥೆ; ಮುಂತಾದ ಪಾತ್ರ, ಪ್ರಸಂಗಗಳು ಹೇರಳವಾಗಿ ಕಂಡುಬರುತ್ತವೆ.

ಜಯದ್ರತನನ್ನು ಕೊಲ್ಲುವುದು ಕಷ್ಟವಾದಾಗ ಕೃಷ್ಣ ಸೂರ್ಯನು ಕಾಣದ ಹಾಗೆ ಕತ್ತಲು ಮಾಡುತ್ತಾನೆ. ಅಶ್ವತ್ಥಾಮನು ನಾರಾಯಣಾಸ್ತ್ರ ಬಿಟ್ಟಾಗ ಹಲವು ಶಸ್ತ್ರಗಳ ರೂಪತಾಳಿ ಪಾಂಡವರ ಸೇನೆಯನ್ನು ನಾಶ ಮಡುತ್ತಿತ್ತು. ಇದರ ಗುಟ್ಟನ್ನರಿತ ಕೃಷ್ಣ; ಎಲ್ಲರೂ ಶಸ್ತ್ರಗಳನ್ನು ಕೆಳಕ್ಕೆ ಹಾಕಿ. ಅದಕ್ಕೆ ನಮಸ್ಕಾರ ಮಾಡಿಬಿಡಿ. ಹಾಗಾದರೆ ಅದು ಏನೂ ಮಾಡುವುದಿಲ್ಲ ಎಂಬ ತಂತ್ರವನ್ನು ಉಪಯೋಗಿಸಿ ಶಾಂತ ಮಾಡುತ್ತಾನೆ. ಕೂಡಲೇ ಅಶ್ವತ್ಥಾಮ ನಿರುತ್ಸಾಹವಾಗಿ ಹಿಂತಿರುಗುತ್ತಾನೆ.

ಕರ್ಣನ ರಥ ಹೂತು ಹೋಗಿರಲು ಕರ್ಣ 'ರಥ ಎತ್ತುವವರೆಗೆ ಸ್ವಲ್ಪ ನಿಧಾನಿಸು ಅರ್ಜುನ' ಎಂದು ಹೇಳುತ್ತಾನೆ. ಅರ್ಜುನ ತಡೆಯಲು, ಕೃಷ್ಣ 'ಬಾಣ ಹೊಡೆ' ಎನ್ನಲು ಅರ್ಜುನ ಧರ್ಮದ ಮಾತನಾಡಲು ಕೃಷ್ಣ, ದ್ರೌಪದಿಯ ವಸ್ತ್ರಾಪಹರಣ ಮಾಡಿದಾಗ ಧರ್ಮ ಏಕೆ ಬೇಡವಾಯಿತು? ಭೀಮಸೇನನನ್ನು ವಿಷಸರ್ಪದಿಂದ ಕೊಲ್ಲಿಸಿದುದು, ಮುಂತಾದ ಘಟನೆಗಳನ್ನು ಜ್ಞಾಪಿಸಿ ಕೃಷ್ಣ ಅರ್ಜುನನು ಬಾಣ ಬಿಡುವಂತೆ ಪ್ರೇರೇಪಿಸಿ ಕರ್ಣನ ಶಿರಚ್ಛೇದನ ಮಾಡಿಸುತ್ತಾನೆ.

ಜರಾಸಂಧನನ್ನು ಕೊಲ್ಲಲು ಕೃಷ್ಣ ಭೀಮಾರ್ಜುನರನ್ನು ಸ್ನಾತಕ ಬ್ರಾಹ್ಮಣರ ವೇಷದಲ್ಲಿ ಕರೆದುಕೊಂಡು ಮಗಧರಾಜ್ಯಕ್ಕೆ ಬಂದು ಭೀಮನಿಂದ ಆತನನ್ನು ಕೊಲ್ಲಿಸುವ ತಂತ್ರ ಹೂಡುತ್ತಾನೆ. ಸುಭದ್ರೆಯನ್ನು ಹಾರಿಸಿಕೊಂಡು ಹೋಗುವಂತೆಯೂ ಅರ್ಜುನನಿಗೆ ಸಂಚನ್ನು ಕೃಷ್ಣನ ರೂಪಿಸುತ್ತಾನೆ.

ಗಾಂಧಾರಿ ಧೃತರಾಷ್ಟ್ರನಿಗೆ ಪಾಂಡವರ ಜೊತೆ ಹಗೆ ಸಾಧಿಸುವುದು ಬೇಡವೆನ್ನುತ್ತಾಳೆ. 'ಪ್ರಭೂ ಅಶಿಕ್ಷಿತ ಹುಡುಗನ ಮಾತು ಕೇಳಿ ಕುಲಕ್ಷಯಕ್ಕೆ ಕಾರಣನಾಗಬೇಡ, ಕಟ್ಟಿದ ಸೇತುವೆಯನ್ನು ಯಾರಾದರೂ ಕೆಡವುತ್ತಾರೆಯೇ ಶಾಂತರಾದ ಪಾಂಡವರನ್ನು ಮತ್ತೇ ರೇಗಿಸುವುದು ಯಾರು ಮಾಡುವ ಕೆಲಸ? ಮುದುಕರು ಹುಡುಗ ಬುದ್ಧಿಯನ್ನು ಹಿಡಿದು ಹೋಗಬಾರದು. ಅವರಿಗೆ ಬುದ್ಧಿ ಹೇಳಬೇಕು' ಎಂದು ವಿವೇಕ ಹೇಳುತ್ತಾಳೆ. ಆದರೆ ಧೃತರಾಷ್ಟ್ರ 'ಆದದ್ದಾಗಲಿ, ಹುಡುಗರ ಇಷ್ಟದಂತೆ ಆಗಲಿ' ಎನ್ನುತ್ತಾನೆ. ಮತ್ತೆ ಗಾಂಧಾರಿ ಮಗನಿಗೆ ಬುದ್ಧಿ ಹೇಳುತ್ತಾಳೆ. 'ಪಾಂಡವರ ಸಂಧಾನ ಮಾಡಿ ಸುಖವಾಗಿರಿ' ಎಂದು ಮೂಲಭಾರತದಲ್ಲಿ ಬರುತ್ತದೆ.

ಈ ಪ್ರಸಂಗ ಜನಪದಭಾರತದಲ್ಲಿ ಕಂಡು ಬರುವುದಿಲ್ಲ. ಬದಲಿಗೆ ವ್ಯಾಸಭಾರತದಲ್ಲಿ ಕಾಣದ ಗಜಗೌರಿ ನೋಂಪಿ ಜನಪದ ಭಾರತದಲ್ಲಿ ಕಂಡು ಬರುತ್ತದೆ. ಮೊದಲಿಗೆ ಗಾಂಧಾರಿ ಗಜಗೌರಿವ್ರತ ಮಾಡುವಾಗಲೂ ಕುಂತಿಯನ್ನು ಕರೆಯದೆ ದ್ವೇಷ ಸಾಧಿಸುವುದು ಕಾಣಬಹುದು. ಆಮೇಲೆ ವ್ರತ ಮಾಡಿದ ಕುಂತಿ ಗಾಂಧಾರಿಯನ್ನು ಕರೆಯುವಲ್ಲಿ ಮಾನವ ಸ್ವಭಾವದ ಚಿತ್ರಣವನ್ನು ಜನಪದ ಕವಿ ಗುರುತಿಸಿರುವುದನ್ನು ಕಾಣಬಹುದು. ಹಾಗೆಯೇ ವ್ರತಕ್ಕೆ ಕುಂತಿ ಪಾಂಡುವನ್ನು ಕರೆಸಿಕೋಳ್ಳುವುದು. ಅನಂತರ ಅವನನ್ನು ಹಿಂದಿರುಗಿಸಲು ನಿರಾಕರಿಸಿದಾಗ ಕೃಷ್ಣ ಅವರೆಲ್ಲರ ನೆನಪನ್ನು ಮರೆಯಿಸಿ ಪಾಂಡುವನ್ನು ವಾಪಸ್ಸು ಕಳುಹಿಸುತ್ತಾ ಇನ್ನು ಮುಂದೆ ಸತ್ತವರು ಕಾಗೆ ರೂಪದಲ್ಲಿ ಭೂಲೋಕಕ್ಕೆ ಬರಲಿ ಎನ್ನುವ ಪ್ರಸಂಗ ವ್ಯಾಸಭಾರತದಲ್ಲಿ ಕಾಣದ ಜನಪದ ಭಾರತದಲ್ಲಿ ಮಾತ್ರ

ಕಾಣುವಂಥದ್ದಾಗಿದೆ. ಆ ಮೂಲಕ ಮಾನವ ಲೋಕದ ಸಂಪ್ರದಾಯಗಳಿಗೆ ಪುರಾಣದ ಮಹತ್ವವನ್ನು ಜನಪದ ಕವಿ ಲೇಪಿಸಿರುವುದು ಅವನ ಅಸಾಧಾರಣ ಪ್ರತಿಭೆಗೆ ಸಾಕ್ಷಿಯಾಗಿದೆ.

ವ್ಯಾಸಭಾರತದಲ್ಲಿ ಕಂಡು ಬರದೇ ಜನಪದ ಮಹಾಭಾರತದಲ್ಲಿ ಕಂಡು ಬರುವ ಪ್ರಸಂಗವೆಂದರೆ ಅರ್ಜುನ ಜೋಗಿಯಾಗುವ ಪ್ರಸಂಗ ಮೊದಲಿಗೆ ಜೋಗಿ ಹಾಡೇ ಪ್ರಚಲಿತದಲ್ಲಿದ್ದು ಅದು ವಿಕಾಸಶೀಲವಾಗುತ್ತ ಜನಪದ ಭಾರತಕ್ಕೆ ಮೂಲಾಧಾರವಾಯಿತ್ತೆನ್ನುವ ಮಾತು ವಿದ್ವಾಂಸರ ವಲಯದಲ್ಲಿ ಕೇಳಿಬರುತ್ತದೆ. ಜೋಗಿ ಸಂಪ್ರದಾಯ ಅನಾದಿ ಕಾಲದಿಂದಲೂ ಸಮಾಜದಲ್ಲಿ ಜಾಲ್ತಿಯಲ್ಲಿರುವುದನ್ನು ಕಾಣಬಹುದಾಗಿದೆ. ಅರ್ಜುನ ಜೋಗಿಯಾಗುವ ಪ್ರಸಂಗ ಕನ್ನಡದ ಇತರ ಕವಿಗಳ ಭಾರತದಲ್ಲೂ ಕಂಡುಬರುವುದಿಲ್ಲ.

ಮೂಲಭಾರತದಲ್ಲಿ ದ್ವೈಪಾಯನವೆಂಬ ಸರೋವರದಲ್ಲಿ ದುರ್ಯೋಧನ ಅಡಗಿಕೊಳ್ಳುತ್ತಾನೆ. ಜನಪದ ಮಹಾಭಾರತದಲ್ಲಿ ಸುವರ್ಣಸಮುದ್ರದಲ್ಲಿ ಅಡಗಿಕೊಳ್ಳುತ್ತಾನೆ, ಮುಂದೆ ಸಮುದ್ರದ ನೀರು ಉಪ್ಪಾಗಿರುವುದಕ್ಕೆ ಜನಪದ ಕವಿ ಬೇರೆಯದೇ ಕಥೆ ಹೇಳಿದ್ದಾನೆ. ಸುವರ್ಣಸಮುದ್ರ ಲವಣ ಸಮುದ್ರವಾಯಿತು ಎನ್ನುತ್ತಾನೆ.

ಶಾಂತಿಪರ್ವದಲ್ಲಿ ಯುಧಿಷ್ಠಿರ-ಭೀಮರಿಗೆ ನಡೆದ ಸಂವಾದದಲ್ಲಿ ಭೀಷ್ಮ ರಾಜನೀತಿಯನ್ನು ತನ್ನ ಜೀವನಾನುಭವಗಳನ್ನು ಹಲವಾರು ಉಪಕಥೆಗಳಿಂದ ಪುಷ್ಟೀಕರಿಸಿ ಧರ್ಮರಾಜನಿಗೆ ಬೋಧಿಸುತ್ತಾನೆ. ಭೀಷ್ಮ ತನ್ನ ಕೊನೆಯ ದಿನಗಳಲ್ಲಿ ಧರ್ಮರಾಜನ ಅನೇಕ ಅನುಮಾನಗಳಿಗೆ 'ಅನುಶಾಸನಪರ್ವ'ದಲ್ಲಿ ಉತ್ತರಿಸುತ್ತಾನೆ. ಮೂಲ ಭಾರತದಲ್ಲಿ ದ್ರೌಪದಿಯ ಐದು ಮಕ್ಕಳ ಹೆಸರು ಪ್ರಸ್ತಾಪವಾಗಿದೆ. ಪ್ರತಿವಿಂದ್ಯ, ಸುತಸೋಮ, ಶ್ರುತಕರ್ಮ, ಶತಾನೀಕ, ಶ್ರುತಸೇನ ಎಂಬ ಐದು ಜನ. ಆದರೆ ಜನಪದ ಮಹಾಭಾರತದಲ್ಲಿ ಈ ಮಕ್ಕಳ ಹೆಸರು ಪ್ರಸ್ತಾಪವಾಗುವುದಿಲ್ಲ. ಮೂಲಭಾರತದಲ್ಲಿ ಭೀಷ್ಮನ ಸಾವಿಗೆ ಗಂಗೆ ದುಃಖಿಸುತ್ತಾ ಕಣ್ಣೀರು ಹಾಕುವಾಗ ಕೃಷ್ಣ ಸಮಾಧಾನ ಪಡಿಸುತ್ತಾನೆ. ಆದರೆ ಈ ಪ್ರಸಂಗ ಜನಪದ ಮಹಾಭಾರತದಲ್ಲಿ ಬರುವುದಿಲ್ಲ.

ಧೃತರಾಷ್ಟ್ರ ತನ್ನ ಮಕ್ಕಳ ಹಿಂದಿನ ಕೃತ್ಯಗಳನೆಲ್ಲಾ ಜ್ಞಾಪಿಸಿಕೊಂಡು ಅವರು ಮಾಡಿದುದು ಅಕೃತ್ಯವೆಂದು ಯುಧಿಷ್ಠಿರನಿಗೆ ತಿಳಿಸಿ ತಪ್ಪಸ್ಸು ಮಾಡಲು ಕಾಡಿಗೆ ಹೋಗಲು ನಿರ್ಧರಿಸುತ್ತಾನೆ. ಊಟ ಬಿಟ್ಟು ತನ್ನ ಮಕ್ಕಳ ಪರವಾಗಿ ಕ್ಷಮೆ ಕೇಳುತ್ತಾನೆ. ಪ್ರತಿಯೊಬ್ಬ ಮನುಷ್ಯನೂ ತಾನು ಮಾಡಿದ ತಪ್ಪನ್ನು

ಅರಿತುಕೊಂಡರೆ ಅದೇ ಪ್ರಾಯಶ್ಚಿತ್ತವಾಗುತ್ತದೆ. ಹಾಗೆಯೇ ಧೃತರಾಷ್ಟ್ರನಿಗೂ ಆದುದು ಸಹಜವೇ. ಎಷ್ಟೇ ಅನ್ಯಾಯ ಮಾಡಿದ್ದರೂ ಯುಧಿಷ್ಠಿರ ಧೃತರಾಷ್ಟ್ರನನ್ನು ಬಂದು ನೋಡುತ್ತಾನೆ. ಆದರೆ ಜನಪದ ಮಹಾಭಾರತದಲ್ಲಿ ಈ ಸನ್ನಿವೇಶ ಸ್ವಲ್ಪ ಬದಲಾವಣೆಯೊಂದಿಗೆ ಚಿತ್ರಿತವಾಗಿದೆ.

ಮೂಲ ಭಾರತದಲ್ಲಿ ಧೃತರಾಷ್ಟ್ರ, ಗಾಂಧಾರಿ, ಕುಂತಿ, ಸಂಜಯರು ಗಂಗಾದ್ವಾರದಲ್ಲಿ ಉಗ್ರ ತಪಸ್ಸು ಮಾಡುವಾಗ ಕಾಡ್ಗಿಚ್ಚಿಗೆ ಸಿಲುಕಿಕೊಳ್ಳುತ್ತಾರೆ. ಸಂಜಯ ಪಾರಾಗುತ್ತಾನೆ, ಮಿಕ್ಕವರು ಬೆಂಕಿಯಲ್ಲಿ ಸುಟ್ಟು ಹೋಗುತ್ತಾರೆ ಜನಪದ ಮಹಾಭಾರತದಲ್ಲಿ ಈ ಪ್ರಸಂಗ ಅವರು ಆಶ್ರಮ ಜೀವನ ಬಯಸುವುದರೋದಿಗೆ ಮುಕ್ತಾಯವಾಗಿದೆ.

ಮೂಲಭಾರತದಲ್ಲಿ ಶ್ರೀಕೃಷ್ಣನ ಅಂತ್ಯ ಹೀಗಿದೆ: ಕೃಷ್ಣ ನೆರಳಲ್ಲಿ ಮಲಗಿ ವಿಶ್ರಮಿಸಿಕೊಳ್ಳುವಾಗ ಜರನೆಂಬ ವ್ಯಾಧ ಯಾವುದೋ ಮೃಗವೆಂದು ತಿಳಿದು ಬಾಣ ಬಿಡಲು ಕೃಷ್ಣ ಸ್ವರ್ಗಸ್ಥನಾಗುವನು. ದ್ವಾರಕೆ ಸಮುದ್ರದಲ್ಲಿ ಮುಳುಗುತ್ತದೆ. ಯುಯುತ್ಸುವಿಗೆ ಪಟ್ಟಕಟ್ಟಿ ಧರ್ಮರಾಜ ಪಾಂಡವರೆಲ್ಲಾ ಕಾಡಿಗೆ ತೆರಳುತ್ತಾರೆ. ಜನಪದ ಮಹಾಭಾರತದಲ್ಲಿ ಈ ಪ್ರಸಂಗವನ್ನು ರಾಮಾಯಣದ ವಾಲಿ ಹತ್ಯೆಗೆ ತಳುಕು ಹಾಕಲಾಗಿದೆ. ಹಿಂದಿನ ಜನ್ಮದ ವಾಲಿಯೇ ಈ ಜನ್ಮದಲ್ಲಿ ಬೇಡನಾಗಿ ಕೃಷ್ಣನ ಸಾವಿಗೆ ಕಾರಣನಾಗುತ್ತಾನೆಂಬುದು ಜನಪದ ಕವಿಯ ನಂಬಿಕೆಯಾಗಿದೆ.

ಸ್ವರ್ಗಾರೋಹಣದಲ್ಲಿ ಯುಧಿಷ್ಠಿರ ದುರ್ಯೋಧನ ಇರುವ ಲೋಕ ಬೇಡ ತನ್ನ ತಮ್ಮಂದಿರು, ದ್ರೌಪದಿ ಎಲ್ಲಿ? ಎಂದು ಕೇಳುತ್ತಾನೆ. ನಾರದರು 'ಯುದ್ಧ ಮಾಡಿ ದುರ್ಯೋಧನ ವೀರ ಸ್ವರ್ಗವನ್ನಪ್ಪಿದ್ದಾನೆ. ಸ್ವರ್ಗದಲ್ಲಿ ವೈರವಿಲ್ಲ' ಎನ್ನುತ್ತಾನೆ. 'ಅವರಿರುವ ಸ್ಥಳವೇ ಸ್ವರ್ಗ ಇದು ಸ್ವರ್ಗವಲ್ಲ' ಎಂದು ಧರ್ಮರಾಯ ಹೇಳುತ್ತಾನೆ. 'ಇಂದ್ರ ಮುಂತಾದ ದೇವತೆಗಳು ಬಂದು ಇದೆಲ್ಲ ಇಂದ್ರ ತೋರಿದ ಮಾಯೇ. ಈ ಯಾತನೆಯನ್ನು ಒಂದು ಗಳಿಗೆ ಅನುಭವಿಸಬೇಕಾಯಿತು' ಎನ್ನುತ್ತಾನೆ. ಧರ್ಮರಾಜ ಗಂಗೆ ಸ್ನಾನ ಮಾಡಿದ ಕೂಡಲೇ ಮನುಷ್ಯ ದೇಹ ಹೋಗಿ ದಿವ್ಯದೇಹ ಬಂತು, ವೈರ ತೊಲಗಿತು, ಸಂತಾಪವೆಲ್ಲಾ ಹೋಯಿತು. ಆಗ ಭೀಷ್ಮ, ದ್ರೋಣ, ಪಾಂಡು, ಕುಂತಿ, ನಕುಲ, ಸಹದೇವ, ಅಭಿಮನ್ಯು ಮುಂತಾದವರನ್ನು ತೋರಿಸಿದರು. ಸ್ವರ್ಗಸುಖವನ್ನು ಅನುಭವಿಸಿದ ಮೇಲೆ ತಾವು ಯಾರ ಯಾರ ಅಂಶದಲ್ಲಿ ಹುಟ್ಟಿ ಬಂದರೋ, ಎಲ್ಲಿಂದ ಬಂದರೋ ಅಲ್ಲಲ್ಲಿ ಐಕ್ಯ ಹೊಂದುವರು. ಭೀಷ್ಮ ವಸುಗಳಲ್ಲಿ, ದ್ರೋಣ ಬೃಹಸ್ಪತಿಯಲ್ಲಿ, ಕೃತಧರ್ಮ ಮರತ್ತುಗಳಲ್ಲಿ, ಪ್ರದ್ಯುಮ್ನ ಸನತ್ಕುಮಾರನಲ್ಲಿ ಐಕ್ಯರಾದರು. ಧೃತರಾಷ್ಟ್ರ, ಗಾಂಧಾರಿ, ಕುಬೇರಲೋಕಕ್ಕೆ ಹೋದರು. ಪಾಂಡು,

ಕುಂತಿ, ಮಾದ್ರಿಯರು ಇಂದ್ರಲೋಕಕ್ಕೆ, ವಿರಾಟ, ದ್ರುಪದ, ಧೃಷ್ಟಕೇತು, ಅಕ್ರೂರ, ಸಾಂಬ, ಭೂರಿಶ್ರವ, ಉತ್ತರ ಮುಂತಾದವರು ವಿಶ್ವೇದೇವತೆಗಳಲ್ಲಿ ಕರ್ಣ ಸೂರ್ಯನಲ್ಲಿ, ಶಕುನಿ ದ್ವಾರನಲ್ಲಿ, ಧೃಷ್ಟದ್ಯುಮ್ನ ಅಗ್ನಿಯಲ್ಲಿ ಯುಧಿಷ್ಠರ ಧರ್ಮನಲ್ಲಿ ಐಕ್ಯರಾದರು. ಇಲ್ಲಿಗೆ ಕೌರವ-ಪಾಂಡವರ ಕಥೆ ಅಂತ್ಯಗೊಳ್ಳುತ್ತದೆ. ಜನಪದ ಮಹಾಭಾರತದಲ್ಲಿ ಈ ರೀತಿಯ ಪ್ರಸ್ತಾಪ ಬರುವುದಿಲ್ಲ.

ಯಜ್ಞ ಮಧ್ಯದಲ್ಲಿ ವೈಷಂಪಾಯನನಿಂದ ಜನಮೇಜಯ ರಾಜನು ಇದನು ಕೇಳಿ ವಿಸ್ಮಿತನಾದ. ಯಜ್ಞ ಅಂತ್ಯವಾಗಿ ಹಾವುಗಳಿಗೆ ಬಿಡುಗಡೆಯಾಯಿತು. ಆಸ್ತೀಕನಿಗೊ ಸಂತೋಷವಾಯಿತು. ಜನಮೇಜಯನಿಗೂ ಸಂತೋಷವಾಗಿ ತಕ್ಷಶಿಲೆಯನ್ನು ಬಿಟ್ಟು ಹಸ್ತಿನಾಪುರಕ್ಕೆ ಬಂದು ಸುಖವಾಗಿ ಅಲ್ಲಿ ಅಧಿಕಾರ ನಡೆಸುತ್ತಾನೆ. ಇಲ್ಲಿಗೆ ಮಹಾಭಾರತದ ಕಥೆ ಮುಕ್ತಾಯವಾಗುತ್ತದೆ.

ಸ್ವರ್ಗದಲ್ಲಿ ಎಲ್ಲರೂ ಒಂದಾಗುವುದರೊಂದಿಗೆ ಜನಪದ ಮಹಾಕಾವ್ಯ ಕೊನೆಗೊಳ್ಳುತ್ತದೆ. ಗಣಪತಿಯನ್ನು ನೆನದು ಕಾವ್ಯವನ್ನು ಜನಪದಕವಿ ಅಂತ್ಯಗೊಳಿಸುತ್ತಾನೆ.

ಏಕವ್ಯಕ್ತಿಯೊಬ್ಬ ಇಷ್ಟೊಂದು ಬೃಹತ್ ಗಾತ್ರದ ಜನಪದ ಮಹಾಕಾವ್ಯವನ್ನು ಹಾಡಿರುವುದು ಶ್ಲಾಘನೀಯವಾಗಿದೆ. ನೂರಾರು ಹೆಸರುಗಳನ್ನು ಸ್ಥಳನಾಮಗಳನ್ನು ನೆನಪಿನಲ್ಲಿಟ್ಟುಕೊಳ್ಳುತ್ತಾನೆಂದರೆ ಎಂಥವರೂ ಬೆರಗುಗೊಳ್ಳುವಂತಾಗುತ್ತದೆ. ಸಾಹಿತ್ಯ ಸಂಗೀತ ಬೆರಸಿ ಕೇಳುಗರಿಗೆ, ಪ್ರೇಕ್ಷಕರಿಗೆ ಕಲಾವಿದ ಉಣಬಡಿಸಿದ್ದಾನೆ. ಈತ ತಾನು ಕೇಳಿದ, ನೋಡಿದ, ಜೀವನಾನುಭವಗಳ ಸಾರಸವಿಯನ್ನು ಕಾವ್ಯದಲ್ಲಿ ಬೆರಸಿ ಹೊಸ ಸೃಷ್ಟಿ ಮಾಡಿರುವುದು ಅವನ ಕಲ್ಪನೆಯ ಕಲೆಗಾರಿಕೆಗೆ ನಿದರ್ಶನವಾಗಿದೆ.

ಪಿ.ಕೆ.ರಾಜಶೇಖರ ಅವರು ಉಲ್ಲೇಖಿಸಿರುವಂತೆ 'ಇದೊಂದು ಅದ್ಭುತ ಸೃಷ್ಟಿ. ಶಿಷ್ಟ ನೆಲೆಯಲ್ಲಿ ಹಲವಾರು ರೂಪಾಂತರ ಹೊಂದುತ್ತಾ ಹೊಸ ಆಯಾಮ ನೀಡುತ್ತದೆ. ಜನಪದ ಆವರಣಕ್ಕೆ ಶಿಷ್ಟ ಹಾಗೂ ಜನಪದ ಮಹಾಭಾರತಗಳನ್ನು ಆಹ್ವಾನಿಸಿಕೊಳ್ಳುವ ತನ್ನ ಜೀವನ ಧೋರಣೆಯನ್ನು ಅಲ್ಲಿನ ಜೀವದ್ರವ್ಯಕ್ಕೆ ಮುಖಾಮುಖಿಯಾಗಿಸುವ ಈ ಕಾವ್ಯ ಒಂದು ವಿಶಿಷ್ಟ ಸಂರಚನೆಯಾಗಿದೆ'[೨೨] ಎಂದಿರುವುದು ಔಚಿತ್ಯಪೂರ್ಣವಾಗಿದೆ.

ಮಹಾಭಾರತ ಮಹಾಕಾವ್ಯ ವಿಕಾಸಶೀಲವಾದದು. ಇದರ ಕಾಲವನ್ನು ಕ್ರಿ.ಪೂ. ೪೦೦ ರಿಂದ ಕ್ರಿ.ಶ. ೪೦೦ ಎಂಬ ಅಭಿಪ್ರಾಯ ವಿದ್ವಾಂಸರುಗಳದು. ಹಿಂದಿನ ಸಾಮಾಜಿಕ ಮತ್ತು ರಾಜಕೀಯ ವ್ಯವಸೆಯ ಮೇಲೆ ಇದು ಬೆಳಕು ಚೆಲ್ಲುತ್ತದೆ. ವ್ಯಾಸ ಭಾರತವು ಜನಪದ ಮಹಾಭಾರತದಿಂದ ಸಿದ್ಧವಾಗಿದೆ ಎಂಬ ಅಭಿಪ್ರಾಯವೂ ಇದೆ. ವೇದವ್ಯಾಸ, ಪಂಪ, ಕುಮಾರವ್ಯಾಸರ ಮಹಾಭಾರತಗಳಿಂದ ಈ ಜನಪದ ಮಹಾಕಾವ್ಯ ಭಿನ್ನವಾಗಿದೆ. ಶಿಷ್ಟ ಕಾವ್ಯಗಳಿಗೂ ಜನಪದ ಮಹಾಕಾವ್ಯಗಳಿಗೂ ಹೇಗೆ ಭಿನ್ನ, ವಿಶಿಷ್ಟ ಎಂದು ಗುರುತಿಸಬಹುದು.

ಶಿವರಾಮ ಕಾಡನಕುಪ್ಪೆ ಅವರು ಹೇಳುವಂತೆ 'ಮೂಲಕಥಾ ವಸ್ತುವಿಗೆ ಕಾವ್ಯದುದಕ್ಕೂ ಜನಪದ ತುಡಿಯುವ ಸಾಮಾನ್ಯ ಬದುಕು ಸಮಾನಾಂತರವಾಗಿ ಪ್ರತಿಕ್ರಿಯಿಸುವ ರೀತಿ, ಪುರಾಣ ಪಾತ್ರಗಳಿಗೆ, ಘಟನೆಗಳಿಗೆ ವರ್ತಮಾನದಲ್ಲಿ ನಿಂತು ವ್ಯಾಖ್ಯಾನಿಸುವ ಜನಪದ ಬದುಕಿನ ಮನೋಧರ್ಮ, ಕಾರ್ಯಕಾರಣ ಸಂಬಂಧದ ನೆಲೆಯಾಗಿದೆ. ಈ ನೆಲೆಯಲ್ಲಿ ಜನಪದ ಬದುಕು ಪುರಾಣವನ್ನು ಮತ್ತು ಅದರ ಆಶಯವನ್ನು ವಿಭಿನ್ನವಾಗಿ ಅರ್ಥೈಸಿಕೊಳ್ಳುತ್ತದೆ, ವ್ಯಾಖ್ಯಾನ ಮಾಡುತ್ತದೆ'[೨೩] ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಜನಪದ ಮಹಾಭಾರತ ಗ್ರಂಥವನ್ನು ಕುರಿತು ಸುಪ್ರಸಿದ್ಧ ಜಾನಪದ ವಿದ್ವಾಂಸರಾದ ರಾ.ಗೌ. ಅವರು ಹೇಳಿರುವ ಮಾತುಗಳು ಅದರ ಮಹತ್ವವನ್ನು ತಿಳಿಸುವಂಥವಾಗಿದೆ. 'ಕನ್ನಡ ಜಾನಪದ ಕ್ಷೇತ್ರದ ಎಲ್ಲಾ ಸಾಧನೆಗಳನ್ನು ಮೀರಿ ನಿಲ್ಲುವ ಸತ್ವ ಮತ್ತು ಮಹತ್ವ ಈ ಮಹಾಕಾವ್ಯಕ್ಕಿದೆ. ಜನಪದ ಮಹಾಭಾರತದ ಅಧಿಕೃತ ಪಾಠವೊಂದರ ಅಗತ್ಯವಿತ್ತು, ಇದು ತುಂಬಿಕೊಟ್ಟಿದೆ. ವಸ್ತು ವಿನ್ಯಾಸ ಮತ್ತು ರಚನಾ ಮಾದರಿಯನ್ನು ನೋಡಿದರೆ ಕೃತಿ ಪ್ರಾಚೀನ ಮತ್ತು ಮಧ್ಯಕಾಲೀನ ಬೆಳೆವಣಿಗೆಯಿಂದಾದುದೆಂದು ಹೇಳಬಹುದು. ಮಹಾಭಾರತದ ಚೌಕಟ್ಟಿದ್ದರೂ ಅನೇಕ ಏರು ಪೇರುಗಳಲ್ಲಿ ಇದು ಭಿನ್ನ ಮಾದರಿ'[೨೪] ಎಂದಿದ್ದಾರೆ.

ಜನಪದ ಮಹಾಭಾರತದಲ್ಲಿ ಪುರಾಣ ಹಾಗೂ ಸಮಕಾಲೀನ ಪ್ರಜ್ಞೆಯ ಸ್ಪರ್ಶವಿರುವುದನ್ನು ಕಾಣಬಹುದು ಪ್ರಸಿದ್ಧ ವಿಮರ್ಶಕರಾದ ಸಿ.ಪಿ.ಕೆಯವರು ವ್ಯಾಸಭಾರತಕ್ಕೂ ಜನಪದ ಮಹಾಭಾರತಕ್ಕೂ ಇರುವ ಭಿನ್ನತೆ ವಿಶಿಷ್ಟತೆಗಳನ್ನು ಹೀಗೆ ಗುರುತಿಸಿದ್ದಾರೆ: 'ವ್ಯಾಸಭಾರತ ೧೮ ಪರ್ವಗಳ ಕಟ್ಟಡ. ಜನಪದ ಮಹಾಕಾವ್ಯ ಅನೇಕ ಪರ್ವಸೃಷ್ಟಿ. ಬಹುಶಾಖಾ ಸಮನ್ವಿರ ವಟವೃಕ್ಷ, ಅಶ್ವತ್ಥ, ಹಲವು ದೃಷ್ಟಿಕೋನಗಳಿಂದ ಲಾಭದಾಯಕಾ ಲೌಕಿಕ ಲಾಭವಲ್ಲ, ಅಧ್ಯಯನಕ್ಕೆ ತನ್ನನ್ನು ತಾನು ಒಡ್ಡಿಕೊಳ್ಳುವ

ಈ ದೊಡ್ಡ ಕಾವ್ಯ ಕಲಿಯದವರ ಕಾಮಧೇನು' ಎಂದರೆ, ಎಚ್.ಲಕ್ಕಪ್ಪಗೌಡ ಅವರು 'ಭಾರತದ ಬೇರೆ ಬೇರೆ ಭಾಷೆಗಳಲ್ಲಿ ಜನಪದ ಮಾನಸಲೋಕದ ಸಮೃದ್ಧ ಜೀವನಪ್ರಜ್ಞ ಹಾಗೂ ಅನುಪಮ, ಸೃಜನಶೀಲತೆಗಳ ಸಂಗಮದ ಫಲದ ರೂಪವಾಗಿ ಇದು ಆವಿರ್ಭವಿಸಿತ್ತೆಂಬುದು ನಿರ್ವಿವಾದ. ಕಲ್ಪನಾ ಶಕ್ತಿಗಳು ಇಲ್ಲಿ ಕಂಡಕಂಡಲ್ಲಿ ಮೈಮುರಿದು ಹೇಳುತ್ತದೆ. ಮೂಲ ಮಹಾಭಾರತದಲ್ಲಿ ಉತ್ತರ ಸಿಗದಿದ್ದ ನೂರಾರು ಪ್ರಶ್ನೆಗಳಿಗೆ ಸೃಜನಶೀಲ ಹಾಗೂ ಲೌಕಿಕ ಉತ್ತರಗಳು ಇಲ್ಲಿ ದೊರೆಯುತ್ತವೆ'[೨೫] ಎಂಬ ಮಾತುಗಳು ಜನಪದ ಮಹಾಭಾರತದ ಮೌಲ್ಯವನ್ನು ತಿಳಿಸುತ್ತವೆ.

ಜನಪದ ಮಹಾಕಾವ್ಯವು ಪುರಾಣ, ಇತಿಹಾಸ, ಐತಿಹ್ಯ, ದಂತ ಕಥೆ ಸಮಕಾಲೀನ ಕಥೆಗಳ ಮಿಶ್ರಣದ ಬಹುರೂಪಿ ಕಾವ್ಯವಾಗಿದೆ. ಎನ್.ಎಸ್. ತಾರಾನಾಥ ಅವರು ಅಭಿಪ್ರಾಯಪಡುವಂತೆ 'ಪ್ರಾಚೀನತೆಯನ್ನು ಆಧುನಿಕತೆಯೊಂದಿಗೆ ಶಿಷ್ಟವನ್ನು ಜಾನಪದದೊಂದಿಗೆ ಸಮೀಕರಿಸುವ ವಿನೂತನ ಸೃಜನ ಪ್ರತಿಕೃತಿ ಈ ಕಾವ್ಯದಲ್ಲಿದೆ'[೨೬] ಎಂದಿದ್ದಾರೆ.

ನಾಟಕಕಾರರು ಹಾಗೂ ವಿಮರ್ಶಕರಾದ ಲಿಂಗದೇವರು ಹಳೇಮನೆಯವರು ಜನಪದ ಮಹಾಭಾರತ ಗ್ರಂಥದ ಬಗ್ಗೆ ತಮ್ಮ ಅನಿಸಿಕೆಗಳನ್ನು ಹೀಗೆ ವ್ಯಕ್ತಪಡಿಸಿದ್ದಾರೆ: 'ಮಹಾಭಾರತದ ಒಟ್ಟು ಚೌಕಟ್ಟನ್ನು ಮುರಿಯದೆ ಅದರ ಒಳಗೆ ಮಾರ್ಫಿಂಗ್ ರೀತಿಯ ತಂತ್ರದ ಮೂಲಕ ಒಡಮೂಡುವ ಪ್ರಾಸಗಳು ಜನಪದರ ಅದ್ಭುತ ಕಲ್ಪನಾ ಶಕ್ತಿಗೆ ಶ್ರೇಷ್ಠ ಉದಾಹರಣೆ'[೨೭]

ಜನಪದ ಮಹಾಭಾರತದ ತಾರ್ಕಿಕ ಬೆಳೆವಣಿಗೆ, ಜನಪದರ ಮುಗ್ದ ಮನಸ್ಸು, ಏನನ್ನು ಪ್ರದರ್ಶಿಸಿಸದೆ ಎಲ್ಲವನ್ನೂ ಒಪ್ಪಿಕೊಳ್ಳುತ್ತದೆ ಎಂಬ ಮಿಥ್ಯೆಯನ್ನು ಈ ಕಾವ್ಯ ಭಗ್ನಗೊಳಿಸಿದೆ. ಇಲ್ಲಿ ಒಂದು ಪಾತ್ರ ಅಥವಾ ಒಂದು ಘಟನೆ, ಹುಟ್ಟು, ಒಂದು ನಿರ್ದಿಷ್ಟ ಹಿನ್ನಲೆಯಿಂದಲೇ ಪ್ರಾಪ್ತವಾಗುತ್ತದೆ ಎಂಬ ಎಚ್ಚರದ ಪ್ರಜ್ಞೆ ಕೆಲಸ ಮಾಡುತ್ತದೆ. ಗಂಗೆ ಶಂತನುವನ್ನು ಮದುವೆಯಾಗುವ ಪ್ರಸಂಗ, ಶಿವನ ಹೆಂಡತಿ ಗಂಗೆ ಶಂತುವಿಗೆ ಹೆಂಡತಿ ಹೇಗಾದಳು? ಈ ಕುತೂಹಲ ಕಥೆಗಾರನನ್ನು ಕಾಡಿದೆ. ಅದಕ್ಕೆ ಒಂದು ಹಿನ್ನಲೆ ಸೃಷ್ಟಿಸಿ ಶಿವನೇ ಶಂತನುವಾಗಿ ಹುಟ್ಟುವ ಒಪ್ಪಿತ ಮಾನವೊಂದನ್ನು ಅವನು ಸೃಷ್ಟಿಸಿಕೊಳ್ಳುತ್ತಾನೆ. ಇದೇ ರೀತಿಯ ಹಿನ್ನಲೆಗಳು ಕೃಷ್ಣ, ಕೌರವ, ಪಾಂಡವರ, ಜನಪದ ಹಿನ್ನಲೆಗೂ ಇದೆ. ಜೈನಧರ್ಮದಲ್ಲಿ 'ಭವಾವಳಿ'ಯ ತೊಳಲಾಟವಿರುವಂತೆ ಇಲ್ಲಿಯೂ ಹುಟ್ಟು-ಸಾವುಗಳ ತೊಳಲಾಟದ ಜನ್ಮಾವಳಿಯ ಸ್ವರೂಪ ಕಂಡುಬರುವುದುಂಟು.

ಜನಪದ ಮಹಾಭಾರತ ವ್ಯಾಸಭಾರತದ ಪ್ರತಿರೂಪವಲ್ಲ. ಇದು ನೆಲದ ಭಾರತ. ಇಲ್ಲಿ ಸ್ಥಳನಾಮಗಳಿಗೆಲ್ಲಾ ಒಂದೊಂದು ಐತಿಹ್ಯವಿದೆ. ಧರ್ಮರಾಯ ಸ್ವರ್ಗಾರೋಹಣಕ್ಕೆ ಹೋಗುವ ರಾತ್ರಿ ತಂಗಿದ ಸ್ಥಳವೇ ಧರ್ಮಸ್ಥಳವಂತೆ, ಶಕುನಿ ನರಕದಿಂದ ನೆಲಕ್ಕೆ ಬಿದ್ದ ಸ್ಥಳವೇ ಶಕುನಿಕೊಪ್ಪಲುವಂತೆ (ಇದು ಹುಣಸೂರು ತಾಲ್ಲೂಕಿನಲ್ಲದೆ). ಪಾಂಡವರು ಕೆಲಕಾಲ ಇದ್ದ ಸ್ಥಳವೇ ಪಾಂಡವಪುರ, ಉಲೂಪಿ, ಚಿತ್ರಾಂಗದೆಯರ ನೆಲೆ ಆದಿಚುಂಚನಗಿರಿಯ ಹತ್ತಿರದ ನಾಗಮಂಗಲವಂತೆ. ಕೆ.ಆರ್. ನಗರದ ಬಳಿ ಅರ್ಜುನಳ್ಳಿ ಎಂಬ ಊರು ಕಂಡುಬರುತ್ತದೆ.

ಜನಪದ ಮಹಾಕಾವ್ಯದಲ್ಲಿ ಕೃಷಿಗೆ ಸಂಬಂಧಿಸಿದ ಹಲವು ಪ್ರಕರಣಗಳು ಬರುತ್ತವೆ. ಬಲರಾಮ ನೇಗಿಲು ಹೊತ್ತು ತಿರುಗುತ್ತಿದ್ದುದು ಕೃಷಿ ಸಂಸ್ಕೃತಿಯ ಪ್ರತೀಕವಾಗಿ ಬಂದಿರುವಂತೆ ಕಾಣುತ್ತದೆ.

ಕುಬೇರ ತನ್ನ ಅರಮನೆಯಲ್ಲಿ ದನಗಳ ಗೊಬ್ಬರದೊಳಗಿದ್ದ ರಾಗಿ, ಭತ್ತ, ನವಣೆ, ಕಂಬು, ತೊಗರಿ, ಅವರೆ, ಉದ್ದು ಮುಂತಾದ ಕಾಳುಗಳನ್ನು ಶೇಖರಿಸುತ್ತಿದ್ದ. ಧನಕನಕ ತರಲು ಭೀಮನು ಕುಬೇರನ ಮನೆಗೆ ಬಂದಿದ್ದಾಗ ಸಗಣಿಯಲ್ಲಿ ಧಾನ್ಯಗಳನ್ನು ಆಯುತ್ತಿರುವುದನ್ನು ನೋಡಿ ಅಸಹ್ಯ ಪಡುತ್ತಾನೆ. ಆಗ ಕುಬೇರ ಆತನಿಗೆ ಊಟಕ್ಕೆ ಮುತ್ತು-ರತ್ನಗಳನ್ನು ಬಡಿಸುತ್ತಾನೆ. ಆಗ ಭೀಮ 'ಇದನ್ನು ಊಟ ಮಾಡುತ್ತಾರೆಯೇ?' ಎಂದಾಗ ಕುಬೇರ 'ನಾನು ಕಾಳುಗಳನ್ನು ಆಯುವಾಗ ನೀನು ಹೂಂಕರಿಸಿದೆ. ಮನುಷ್ಯನಿಗೆ ಚಿನ್ನಕ್ಕಿಂತ ಅನ್ನ ಹೆಚ್ಚು. ಅನ್ನ ದೇವರು ರೈತ ಜಗದ್ರಕ್ಷಕ' ಎಂಬುದನ್ನು ಅರಿವು ಮಾಡಿಕೊಟ್ಟ. ಇದು ಅನ್ನದ ಮಹತ್ವವನ್ನು ಎತ್ತಿ ಹಿಡಿದಿದೆ.

ಧರ್ಮರಾಯ ಭೀಮ ಕೂಲಿಯಿಂದ ಹನ್ನೆರಡು ಪಲ್ಲ ರಾಗಿ, ನೂರು ದುಡ್ಡು ತರುತ್ತಾನೆ. ಧರ್ಮರಾಜ 'ಇದು ತರವಲ್ಲ; ಧರ್ಮದ ಅನ್ನ ತಿನ್ನಬೇಕೇ ಹೊರತು, ಅನ್ಯಾಯ, ಅಧರ್ಮದನ್ನು ತಿನ್ನಬಾರದು' ಎಂದು ಹೇಳಿದಾಗ, ಭೀಮ ತನ್ನ ಕೂಲಿಯನ್ನು ಮಾತ್ರ ಉಳಿಸಿಕೊಂಡು ಮಿಕ್ಕಿದುದನ್ನು ಸಾಹುಕಾರನಿಗೆ ಹಿಂತಿರುಗಿಸುತ್ತಾನೆ. ಇದು ಶರಣ ಆಯ್ದಕಿಮಾರಯ್ಯ, ಲಕ್ಕಮ್ಮರ ಕಥೆಯನ್ನು ಜ್ಞಾಪಿಸುತ್ತದೆ. ಭೀಮನೂ ಕೃಷಿಯ ಕೆಲಸ ಮಾಡುತ್ತಾನೆ. ಮುದ್ದೇಗೌಡನ ದರಕಸ್ ಭೂಮಿಯಲ್ಲಿ ದುಡಿಯುತ್ತಾನೆ. ಏಕಚಕ್ರಾನಗರದಲ್ಲಿ ವ್ಯವಸಾಯವನ್ನಾಧರಿಸಿ ಜೀವನ ಮಾಡುತ್ತಾರೆ. ಕುಂತಿ ಭೋಜರಾಜ, ರಾಜ ಶೂರರೂ, ಪಾಂಡವರು ಹೊಲಗದ್ದೆಗಳಲ್ಲಿ ಕೆಲಸ ಮಾಡುತ್ತಾರೆ. ದ್ವೇಷ, ಮತ್ಸರ ಅವುಗಳಿಂದಾಗುವ ಅನರ್ಥಗಳನ್ನು ಮಹಾಕಾವ್ಯ ಧ್ವನಿಸುತ್ತದೆ. ದ್ರುಪದ-ದ್ರೋಣರ ಪ್ರಕರಣದಲ್ಲಿ ದ್ವೇಷ, ಪ್ರತೀಕಾರ ನೆಪದಲ್ಲಿ ಮಹಾಭಾರತ ದಾಯಾದಿ ಮಾತ್ಸರ್ಯದ ನಾಂದಿಯಾಗುತ್ತದೆ.

ಪಾವಿತ್ರತೆಯೇ ಪರಮಶ್ರೇಷ್ಠ ಎಂದ ಗಂಗಾದೇವಿಯ ಮೇಲೆ ರೋಷಗೊಳ್ಳುವ ಆದಿಶಕ್ತಿ, ಲಕ್ಷ್ಮಿ, ಸರಸ್ವತಿಯರ ಮತ್ಸರ, ಗಂಗೆ ಭೂಮಿಯಲ್ಲಿ ಹುಟ್ಟಲು ಕಾರಣವಾಗಿ ಅದೇ ಜನಪದ ಮಹಾಭಾರತದ ಬೀಜವಾಗುತ್ತದೆ. ನಾಗುರುಸಿಯನ್ನು ಅವಮಾನಿಸಿದ ಹಿಂಸಿಸಿದ ಸುವರ್ಣಕೇಶೀ ಹಾಗೂ ಆತನ ಹೆಂಡತಿ ಚಿತ್ರಾಂಗಿಯ ದೌರ್ಜನ್ಯದಿಂದಾಗಿ ಅವರ ಜೊತೆಗೆ ಶ್ವೇತಕೇಶಿ ಹಾಗೂ ಓಂಕಾರ ಗುರುಗಳು ಧೃತರಾಷ್ಟ್ರ, ಪಾಂಡು, ವಿದುರ ಮತ್ತು ನೂರೊಂದು ಜನ ಕೌರವರಾಗಿ ಹುಟ್ಟುತ್ತಾರೆ. ದುರ್ಯೋಧನನು ನಾಗರಹಾವಂತೆ ಹುರುಪುಳ್ಳ ದೇಹ ಹೊಂದಿ ಬುಸುಗುಟ್ಟುತ್ತಾನೆ. ಹಾವಂತೆ ಸರ್ಪಮತ್ಸರ ಅವನ ಬದುಕನ್ನೇ ಆಪೋಷಣೆ ತೆಗೆದುಕೊಳ್ಳುತ್ತದೆ. ಕುಂತಿ ಗಜಗೌರಿ ವ್ರತದಿಂದ ಹೊಟ್ಟೆಕಿಚ್ಚು ಧಗಧಗಿಸುತ್ತದೆ. ಈ ಕಾವ್ಯದಲ್ಲಿ ಗಜಗೌರಿ ವ್ರತವನ್ನು ವಿಶೇಷವಾಗಿ ಚಿತ್ರಿಸಲಾಗಿದೆ. ಕರ್ಣನ ಕಥೆಯಲ್ಲಿ ಕರುಣಾರಸ ಕೋಡಿ ಹರಿದಿದೆ. ಬ್ರಹ್ಮಶಿವ ಇಬ್ಬರ ಯುದ್ಧ ಆರ್ಯ–ದ್ರಾವಿಡ ಸಂಸ್ಕೃತಿ ಸಂಘರ್ಷದ ಒಂದು ಮಾದರಿಯಂತಿದೆ.

ಮಾಡಿದ ತಪ್ಪಿಗೆ ಶಿಕ್ಷೆ ಅನುಭವಿಸಬೇಕು, ಆಮೇಲೆ ತಿದ್ದಿಕೊಂಡು ಶುದ್ಧರಾಗಬೇಕು ಎಂಬುದು ಜನಪದರ ಆಶಯ. ಸತ್ತವರು ಕಾಗೆ ರೂಪದಲ್ಲಿ ಬಂದು ಹೋಗಲಿ ಎಂದು ಕೃಷ್ಣ ಶಾಪ ಕೊಡುತ್ತಾನೆ. ಸತ್ತವರಿಗೆ ಅನ್ನ ಹಾಕಿದಾಗ ಕಾಗೆಗಳ ಬರುವಿಕೆಗಾಗಿ ಕಾಯುವುದು ಜನಪದರ ನಂಬಿಕೆ.

ಇವೇ ಮೊದಲಾದ ಗುಣಗಳಿಂದ ಜನಪದ ಮಹಾಭಾರತ ಶಿಷ್ಟ ಮಹಾಭಾರತಕ್ಕಿಂತ ವಿಭಿನ್ನವಾಗಿದೆ. ಈ ಗ್ರಂಥದಲ್ಲಿ ಮೂಡಿಬಂದಿರುವ ಭಿನ್ನತೆಗಳನ್ನು, ವೈಶಿಷ್ಟ್ಯಗಳನ್ನು ಮುಂದಿನ ಅಧ್ಯಾಯಗಳಲ್ಲಿ ಪಾತ್ರಚಿತ್ರಣ, ಕಥಾವಿನ್ಯಾಸ, ಶೈಲಿ–ಮುಂತಾದ ಸಂದರ್ಭಗಳ ಹಿನ್ನಲೆಯಲ್ಲಿ ಸವಿಸ್ತಾರವಾಗಿ ವಿಶ್ಲೇಷಣೆಗೊಳಪಡಿಸಲಾಗಿದೆ.

**ಅಡಿ ಟಿಪ್ಪಣಿಗಳು:**

೧. ಇತಿಹಾಸ ಪ್ರದೀಪ, ಜಿ.ಎನ್. ಚಕ್ರವರ್ತಿ, ಕನ್ನಡ ಅನುವಾದ: ಮಾ. ವರದರಾಜು, ೨೦೦೩.

೨. ವ್ಯಾಸಭಾರತ ಭಿನ್ನ ವಿನ್ಯಾಸ ವೈಚಾರಿಕ ವಿಶ್ಲೇಷಣೆ, ಆರ್.ಆರ್. ಪಾಂಗಾಳ, ಪೀಠಿಕಾ ಪುಟ xx.

೩. ಮಹಾಭಾರತದ, ಭಾರತ ದರ್ಶನ, ಮುನ್ನಡಿ ಪುಟ xiv

೪. ಮಹಾಭಾರತ ಸಮೀಕ್ಷೆ, ನ.ಸುಬ್ರಹ್ಮಣ್ಯಂ, ಪುಟ. ೧೪, ೧೫, ೧೯೭೩.

೫. Vide: A History of Indian Literature, P. 316.

೬. ಯುಗಯಾತ್ರೀ ಭಾರತೀಯ ಸಂಸ್ಕೃತಿ, ಸಂಪುಟ ೨, ಸಂ. ಕೆವಿ.ಪುಟ್ಟಪ್ಪ, ಪುಟ ೪೫, ೧೯೭೧.

೭. ಶ್ರೀ ಮಹಾಭಾರತ ಕಾಲನಿರ್ಣಯ ಮತ್ತು ಇತರ ಲೇಖನಗಳು, ಕೆ.ಎಸ್.ನಾರಾಯಣಾಚಾರ್ಯ, ಪುಟ ೭, ೨೦೦೮.

೮. Vedic Aryans and the origins of civilization, Navarathna RajaRam, P. 197.

೯. A History of Indian Literature, M.Winternitz, P.317.

೧೦. Sanskrit Literature, A. Macdonell, P.283.

೧೧. ಉದ್ಧೃತ: ಮಹಾಭಾರತ ಸಮೀಕ್ಷೆ, ನ.ಸುಬ್ರಹ್ಮಣ್ಯಂ, ಪುಟ, ೧೬, ೧೭, ೧೯೭೩.

೧೨. Quoted: Suktankar Memorial Edition, Vol. I

೧೩. Quoted: Suktankar Memorial Edition, Vol. I

೧೪. ಯುಗಯಾತ್ರೀ ಭಾರತೀಯ ಸಂಸ್ಕೃತಿ, ಸಂಪುಟ ೨, (ಸಂ)ಕೆ.ವಿ.ಪುಟ್ಟಪ್ಪ, ಪುಟ ೪೫, ೧೯೭೧.

೧೫. ನನ್ನಯ್ಯಭಟ್ಟನು ಆದಿ, ಸಭಾಪರ್ವಗಳು ಮತ್ತು (ಕಡೆಯಲ್ಲಿ ಸ್ವಲ್ಪಬಿಟ್ಟು) ಅರಣ್ಯಪರ್ವ ಮಾತ್ರ ರಚಿಸಿದ್ದಾನೆ.

೧೬. ವಚನಭಾರತ (ಎರಡನೆಯ ಮುದ್ರಣ), ಎ.ಆರ್.ಕೃಷ್ಣಶಾಸ್ತ್ರಿ, ಪೀಠಿಕೆಯ ಟಿಪ್ಪಣಿ, ೧೩, ೧೯೮೧.

೧೭. ಜನಪದ ಮಹಾಭಾರತ, ಪಿ.ಕೆ.ರಾಜಶೇಖರ, ಪ್ರಸ್ತಾವನೆಯ ಪುಟ ೧೦೨-೧೦೩, ೨೦೦೪.

೧೮. ದ್ರೌಪತಿ ಸೆರಗು ಕಟ್ಟಿದ ಪರ್ವ, ಪುಟ ೨೨೪.

೧೯. ಅರ್ಜುನನಿಗೆ ಊರೋಸಿ ಶ್ಯಾಪಕೊಟ್ಟಪರ್ವ, ಪುಟ ೩೭೬.

೨೦. ಜನಪದ ಮಹಾಭಾರತ, ಪುಟ ೩೯೪.

೨೧. ಕರ್ಣ ಪರ್ವ, ಪುಟ ೫೨೮.

೨೨. ಜನಪದ ಮಹಾಭಾರತ, ಪಿ.ಕೆ.ರಾಜಶೇಖರ, ಪ್ರಸ್ತಾವನೆಯ ಪುಟ ೧೦೧, ೨೦೦೪.

೨೩. ಅದೇ, ಪುಟ ೧೯, ೨೦೦೪.

೨೪. ಅದೇ, ಪುಟ ೨೮, ೨೦೦೪.

೨೫. ಅದೇ, ಪುಟ ೧೭, ೨೦೦೪.

೨೬. ಅದೇ, ಪುಟ ೧೮, ೨೦೦೪.

೨೭. ಅದೇ, ಪುಟ ೧೯, ೨೦೦೪.

## ಅಧ್ಯಾಯ ಮೂರು

## ಕನ್ನಡ ಮಹಾಭಾರತ ಪರಂಪರೆ

**ಪೀಠಿಕೆ:**

ರಾಮಾಯಣ ಮಹಾಭಾರತಗಳು ಭಾರತೀಯ ಸಾಹಿತ್ಯ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ತುಂಬ ಮಹತ್ವಪೂರ್ಣವಾದ ಕಾವ್ಯಗಳು. ಭಾರತೀಯ ಜನಮಾನಸದಲ್ಲಿ ಹಾಸುಹೊಕ್ಕಾಗಿರುವ ಈ ಕಾವ್ಯಗಳು ತಮ್ಮ ವಸ್ತು, ಘಟನಾವಳಿ ಹಾಗೂ ಪಾತ್ರ ವೈವಿಧ್ಯತೆಗಳ ದೃಷ್ಟಿಯಿಂದ ಕಾಲಕಾಲಕ್ಕೂ ಹೆಚ್ಚು ಹಿರಿಮೆಗರಿಮೆಗಳನ್ನು ಗಳಿಸಿಕೊಂಡು ಆಯಾ ಕಾಲದ ಪರಂಪರಾಗತ ಸಾಹಿತ್ಯಧಾರೆಗೆ ಆಕರವನ್ನೂ ಸ್ಫೂರ್ತಿಯನ್ನೂ ಒದಗಿಸುತ್ತಿರುವ ಮೂಲಸೆಲೆಗಳಾಗಿವೆ. ರಾಮಾಯಣವು ಆದಿಕಾವ್ಯವಾದರೆ ಮಹಾಭಾರತ ಕೇವಲ ಕಾವ್ಯವಷ್ಟೇ ಅಲ್ಲ, ಇತಿಹಾಸ. ರಾಮಾಯಣದ ಕಥೆ ಒಬ್ಬ ನಾಯಕನಿಗೆ, ಒಬ್ಬ ಪ್ರತಿನಾಯಕನಿಗೆ ಸಂಬಂಧಿಸಿದುದು; ನೂರಾರು ಉಪಕಥೆಗಳು ಬಂದರೂ ಮುಖ್ಯಕಥೆಯ ಸೂತ್ರ ಎಲ್ಲಿಯೂ ಕಣ್ಮರೆಯಾಗುವುದಿಲ್ಲ. ವಾಲ್ಮೀಕಿಯ ಕಾವ್ಯ ಎಲ್ಲಿಯೂ ನೀರಸವಾಗುವುದಿಲ್ಲ. ಆದರೆ ಮಹಾಭಾರತದಲ್ಲಿ ಬರುವ ಮುಖ್ಯ ಪಾತ್ರಗಳೇ ಹತ್ತಾರು.

ಎಲ್ಲರೂ ನಾಯಕರೆನಿಸುವ ಅರ್ಹತೆಯುಳ್ಳವರಾಗಿರುವುದರಿಂದ ಎಲ್ಲರ ಕಥೆಯೂ ವ್ಯಾಸರಿಗೆ ಮುಖ್ಯವೆ. ಹಾಗಾಗಿ ವ್ಯಾಸರ ಕಥಾನಾಯಕ ಇಂತಹವನೇ ಎನ್ನುವುದು ಕೂಡ ಕಷ್ಟವಾಗುತ್ತದೆ. ಯುದ್ಧದ ಕಥೆಯೇ ಭಾರತದ ಮುಖ್ಯ ಕಥೆಯೆನ್ನುವುದಾದರೆ ರಾಜ್ಯಾಭೀಷೇಕವಾಗುವ ಯುಧಿಷ್ಠಿರನೇ ನಾಯಕನೆಂದು ತಿಳಿಯುವ ವಾಡಿಕೆಯುಂಟು. ಆದರೆ ಕನ್ನಡದ ಆದಿಕವಿ ಪಂಪನಿಗೆ ಯುದ್ಧಗಳಲ್ಲಿ ಅದ್ವಿತೀಯ ಪಾತ್ರವನ್ನು ವಹಿಸುವ ಅರ್ಜುನನೇ ನಾಯಕನೆಂದು ಭಾಸವಾಯಿತು. ಮಲ್ಲಯುದ್ಧ ರಸಿಕನಾದ ಕವಿಚಕ್ರವರ್ತಿ ರನ್ನನಿಗೆ ಭೀಮನ ಭೀಕರ ಪ್ರತಿಜ್ಞೆಗಳೂ ಅವನ್ನು ಅವನು ನಿರ್ವಹಿಸಿದ ಅಸಮ ಸಾಹಸವೂ ಮೆಚ್ಚಾದುವು; ಸಾಹಸಭೀಮನೇ ನಾಯಕ ಪದವಿಗೆ ಯೋಗ್ಯನೆನ್ನಿಸಿರಬಹುದು. ಇಬ್ಬರೂ ಕರ್ಣನ ಪಾತ್ರಕ್ಕೆ ಮಾರುಹೋಗಿ, ಅವನ ಉಜ್ವಲ ತೇಜಕ್ಕೆ ಪರವಶರಾಗಿ ಅವನ ದುರಂತಕ್ಕೆ ಕಣ್ಣೀರಿಟ್ಟಿರುವವರೇ ಆಗಿದ್ದಾರೆ. ಕುಮಾರವ್ಯಾಸನಿಗಂತೂ ಭಾರತವೆಲ್ಲ ಕೃಷ್ಣನ ಸೂತ್ರದಾಟವೇ ಆಗಿದೆ. ಬೇರೆಯವರೆಲ್ಲರೂ ನಿಮಿತ್ತಮಾತ್ರರು.

ಹೀಗೆ ಕನ್ನಡದ ಪ್ರಾಚೀನ ಕಾಲದ ಮಹಾಮತಿಗಳೇ ಮಹಾಭಾರತದ ಬೆಳಕನ್ನು ಬೇರೆ ಬೇರೆ ರೀತಿಯಾಗಿ ಕಂಡಿದ್ದಾರೆ. ಭೀಷ್ಮ, ದ್ರೋಣ, ಅಶ್ವತ್ಥಾಮ, ದ್ರೌಪದಿ– ಎಲ್ಲರ ಚರಿತ್ರೆಯೂ ಒಂದಲ್ಲ, ಹತ್ತಾರು ಸ್ವತಂತ್ರ ಸಾಹಿತ್ಯ ಕೃತಿಗಳಿಗೆ ಪ್ರೇರಕವಾಗಿವೆ. ಇಷ್ಟೇ ಅಲ್ಲದೆ ನಮಗೆ ಸ್ವತಂತ್ರ ಕೃತಿಗಳೆನಿಸುವಂತೆ ಪರಿಚಿತವಾಗಿರುವ ನಳಚರಿತ್ರೆ, ಸಾವಿತ್ರಿಚರಿತ್ರೆ, ಶಕುಂತಲೆಯ ಕಥೆ ಮುಂತಾದ ನೂರಾರು ಕಥಾನಕಗಳೆಲ್ಲವೂ ಮಹಾಭಾರತದ ಮಹಾಗರ್ಭದಲ್ಲಿ ಪ್ರಾಸಂಗಿಕವಾಗಿ ಬರುವ ಉಪಾಖ್ಯಾನಗಳು. ಇಷ್ಟು ಸಾಲದೂ ಎನ್ನುವಂತೆ ಕಥೆಯೇ ಅಲ್ಲದ ರಾಜನೀತಿ, ಧರ್ಮಬೋಧೆ, ತತ್ತ್ವವಿಚಾರ, ಆಚಾರ ವ್ಯವಹಾರಗಳ ನಿರೂಪಣೆ ಮುಂತಾದವು ಲೆಕ್ಕವಿಲ್ಲದಷ್ಟು ಶ್ಲೋಕಗಳಲ್ಲಿ ಬರುತ್ತವೆ. ಮಹಾಭಾರತದಲ್ಲಿರುವುದು ಎಲ್ಲಿಯೂ ಇರಬಹುದು; ಆದರೆ ಇಲ್ಲಿ ಇಲ್ಲದುದು ಎಲ್ಲಿಯೂ ಇರಲಾರದೆಂದು ಹೇಳಿರುವುದು ಅಕ್ಷರಶಃ ನಿಜವಾಗಿದೆ.

ಪ್ರಾಚೀನ ಭಾರತದ ಜ್ಞಾನಕೋಶವೇ ಮಹಾಭಾರತ. ಕವಿಗಳು ಮಾತ್ರ ವಾಲ್ಮೀಕಿಗೆ ದಾಸರಾದರೆ, ಕವಿಗಳಂತೆ ಎಲ್ಲ ಬಗೆಯ ಶಾಸ್ತ್ರಕಾರರೂ ಎಲ್ಲ ವಿದ್ಯಾನಿರತರೂ ವ್ಯಾಸನ ದಾಸರೇ ಎನ್ನುವುದುಂಟು. 'ವ್ಯಾಸೋಚ್ಛಿಷ್ಟಂ ಜಗತ್‌ಸರ್ವಂ' (ಜಗತ್ತೇ ವ್ಯಾಸರು ಉಂಡು ಮಿಕ್ಕಿದು), 'ಭಾರತಃ ಪಂಚಮೋವೇದಃ' (ಭಾರತವೇ ಐದನೆಯ ವೇದ) ಎಂಬ ಪೂರ್ವಸೂಕ್ತಿಗಳು ಪ್ರಮಾಣಿಸುತ್ತವೆ.

ಹೀಗೆ ಮಹಾಭಾರತವೆಂದರೆ ಕಾವ್ಯ, ಇತಿಹಾಸ, ನೀತಿ, ಜ್ಞಾನ, ಧರ್ಮ, ತತ್ತ್ವವಿಚಾರ ಎಲ್ಲವೂ ಅಡಕವಾದ ವಿಶ್ವಕೋಶವೆಂಬುದನ್ನು ಮರೆಯಬಾರದು. ನಮ್ಮಲ್ಲಿ ಇದನ್ನು ಓದುವವರಿಗೆ ಕಾವ್ಯದೃಷ್ಟಿಯಂತೆಯೇ ಧರ್ಮ ದೃಷ್ಟಿಯೂ ಇದ್ದೇ ಇರುತ್ತದೆ.

**ವೇದಪಾರಾಯಣದ ಫಲ ಗಂ**
**ಗಾದಿ ತೀರ್ಥಸ್ನಾನ ಫಲ ಕೃ**
**ಚ್ಛ್ರಾದಿ ತಪಸಿನ ಫಲವು ಜ್ಯೋತಿಷ್ಟೋಮಯಾಗ ಫಲ**
**ಮೇದಿನಿಯನೊಲಿದಿತ್ತ ಫಲ ವ**
**ಸ್ತ್ರಾದಿ ಕನ್ಯಾದಾನ ಫಲವಹು**
**ದಾದರಿಸಿ ಭಾರತದೊಳೊಂದಕ್ಷರವ ಕೇಳ್ದವರಿಗೆ**
**(ಕ.ಭಾ.ಕ.ಆ.ಪ. ೧–೨೦)**

ಎಂಬ ಫಲಶುತ್ರಿ ಭಾರತ ಜನತೆ ಮಹಾಭಾರತದ ಬಗೆಗೆ ಇಟ್ಟುಕೊಂಡಿರುವ ಪೂಜ್ಯಭಾವನೆಗೆ ಮಾಪಕವಾಗಿದೆ. ಕವಿಗಳ, ಪೌರಾಣಿಕರ, ನಾಟಕಕಾರರ, ಕೀರ್ತನಕಾರರ, ಅವಿಶ್ರಾಂತ ಪ್ರಯತ್ನಗಳಿಂದ

ಇಂದಿಗೂ ಮಹಾಭಾರತ, ಭಾರತದ ಜನತೆಯ ಮನಸ್ಸಿನಲ್ಲಿ ಹೊಸದಾಗಿಯೇ ಉಳಿದಿದೆ. ಭಗವದ್ಗೀತೆಯೊಂದೇ ಲಕ್ಷಾಂತರ ಜನರ ಬಾಳಿಗೆ ಅಂದಿನಿಂದ ಇಂದಿನವರೆಗೂ ಬೆಳಕನ್ನೀಯುತ್ತ ಬರುತ್ತಿದೆ.

ಇಂತಹ ಗುರುತ್ವ-ಮಹತ್ವಗಳ ಕೃತಿಯಾಗಿರುವ 'ಮಹಾಭಾರತ'ವನ್ನು ಅನುವಾದಿಸಿಕೊಳ್ಳುವ, ಅಳವಡಿಸಿಕೊಳ್ಳುವ ಭಾರತೀಯ ಭಾಷೆಗಳ ಸಂಪ್ರದಾಯಕ್ಕೆ ಕನ್ನಡವೂ ಹೊರತಾಗಿಲ್ಲ. ಮಹಾಭಾರತದ ಕನ್ನಡ ಅವತಾರಗಳು ಹಲವಾರು. ಆದಿಕವಿ ಪಂಪನಿಂದ ಹಿಡಿದು ಇಲ್ಲಿಯವರೆಗೂ ನಿರಂತರವಾಗಿ ಸಾಗುತ್ತ ಬರುತ್ತಿದೆ. ಆ ಅವತಾರಗಳಲ್ಲಿ ಅಪಾರ ವೈವಿಧ್ಯತೆ ಇದೆ; ಕೆಲವು ಭಾವಾಂತರಗಳಾದರೆ, ಇನ್ನೆಷ್ಟೋ ಭಾಷಾಂತರಗಳಾಗಿವೆ. ಪಂಪ, ಕುಮಾರವ್ಯಾಸರ ಭಾರತಗಳು ಮೊದಲನೆಯ ವರ್ಗಕ್ಕೆ ನಿದರ್ಶನಗಳಾದರೆ, ಅನಂತರದ ಶತಮಾನಗಳಲ್ಲಿ ಹುಟ್ಟಿಕೊಂಡ ಎಷ್ಟೋ ಕೃತಿಗಳು ಎರಡನೆಯ ವರ್ಗಕ್ಕೆ ಉದಾಹರಣೆಗಳಾಗುತ್ತವೆ.

ಕನ್ನಡ ಸಾಹಿತ್ಯಕ್ಕೆ ಶಿಖರಪ್ರಾಯರಾಗಿರುವ ಪಂಪ, ರನ್ನ, ಲಕ್ಷ್ಮೀಶ ಮತ್ತು ಕುಮಾರವ್ಯಾಸರ ಮಹಾಕೃತಿಗಳೇ ಅಲ್ಲದೆ, ಹಲವಾರು ಜೈನಕವಿಗಳೂ ವೈದಿಕಕವಿಗಳೂ 'ಮಹಾಭಾರತ'ವನ್ನು ಆಕರವಾಗಿಟ್ಟುಕೊಂಡು ಕೃತಿಗಳನ್ನು ರಚಿಸಿದ್ದಾರೆ. ಈ ಪರಂಪರೆ ಇಂದಿಗೂ ಮುಂದುವರಿಯುತ್ತಿರುವುದನ್ನು ಕಾಣಬಹುದು. ಕನ್ನಡಿಗರಿಗೆ ಮಹಾಭಾರತ ಎಷ್ಟು ಪ್ರಿಯವಾಗಿದೆ ಎಂದರೆ ಕಾವ್ಯಪಾರಾಯಣದ ಪ್ರಯುಕ್ತವಾಗಿ ಕುಮಾರವ್ಯಾಸ ಮತ್ತು ಲಕ್ಷ್ಮೀಶರ ಕೃತಿಗಳು ಮೊಳಗದೆ ಇರುವ ಎಡೆಯೇ ಇಲ್ಲವೆನ್ನನಬಹುದು. ಹೀಗೆ 'ಮಹಾಭಾರತವನ್ನು ಆಧರಿಸಿದ ರಚನೆಗಳಿಂದ ಮಾತ್ರವಲ್ಲದೆ ಕಾಲಕಾಲಕ್ಕೆ ಹೊರಬಂದಿರುವ ಮೂಲಕೃತಿಯ ಬಗೆಬಗೆಯಾದ ಆವೃತ್ತಿಗಳಿಂದಲೂ ಕನ್ನಡ ಸಾಹಿತ್ಯ ಶ್ರೀಮಂತವಾಗಿದೆ. ಮಹಾಭಾರತದ ಬಗೆಗಿನ ಕನ್ನಡಿಗರ ಪ್ರೀತಿಗೆ ಈ ಅಳವಡಿಕೆಗಳೂ ಸ್ವತಂತ್ರ ರಚನೆಗಳೂ ನೇರ ಅನುವಾದಗಳೂ ಅಸಂದಿಗ್ಧ ಪ್ರಮಾಣವನ್ನು ಒದಗಿಸುತ್ತವೆ'[1] ಎಂಬುದಾಗಿ ವಿದ್ವಾಂಸರು ಹೇಳಿಕೆಯನ್ನು ಗಮನಿಸಬಹುದು.

'ಕನ್ನಡದಲ್ಲಿ ಮಹಾಭಾರತ ಪರಂಪರೆ' ಎಂಬ ಈ ಅಧ್ಯಾಯದಲ್ಲಿ ಕನ್ನಡ ಸಾಹಿತ್ಯದಲ್ಲಿನ ಜೈನ ಹಾಗೂ ವೈದಿಕ ಪರಂಪರೆಯಲ್ಲಿ ಬಂದಿರುವ ಮಹಾಭಾರತಗಳ ಸ್ಥೂಲ ಪರಿಚಯ ಮಾಡಿಕೊಟ್ಟು ಜನಪದ ಮಹಾಭಾರತದ ಪ್ರಾಮುಖ್ಯತೆಯನ್ನು ಗುರುತಿಸಲಾಗಿದೆ. 'ಪಂಪಭಾರತ', 'ಕುಮಾರವ್ಯಾಸ

ಭಾರತ'ಗಳನ್ನು ಪ್ರಧಾನವಾಗಿಯೂ ಮಹಾಭಾರತದ ಕಥೆಗಳನ್ನೊಳಗೊಂಡಿರುವ ಉಳಿದ ಕೃತಿಗಳನ್ನು ಪ್ರಾಸಂಗಿಕವಾಗಿಯೂ ಅಧ್ಯಯನ ಮಾಡಲಾಗಿದೆ.

ಕನ್ನಡ ಸಾಹಿತ್ಯ ಪ್ರಾಚೀನ ಕಾಲದಿಂದಲೂ ಸಂಸ್ಕೃತ ಸಾಹಿತ್ಯದ ಪೋಷಣೆಯಿಂದ ಬೆಳೆದು ಬಂದಿದೆ. ಹಾಗಾಗಿ ಕನ್ನಡದ ಕವಿವರ್ಯರು ಮಹಾಭಾರತದ ಕಡೆಗೆ ಗಮನ ಕೇಂದ್ರೀಕರಿಸಿರುವುದು ಸಹಜವೇ ಆಗಿದೆ. ಪಂಪ, ರನ್ನ, ಕುಮಾರವ್ಯಾಸ, ಲಕ್ಷ್ಮೀಶ ಮೊದಲಾದವರು ಪ್ರಧಾನವಾಗಿಯೋ ಪ್ರಾಸಂಗಿಕವಾಗಿಯೇ ಮಹಾಭಾರತವನ್ನವಲಂಬಿಸಿ ಕನ್ನಡದಲ್ಲಿ ಕಾವ್ಯಗಳನ್ನು ರಚಿಸಿದ್ದಾರೆ. ಶ್ರೀವಿಜಯ, ಅಸಗ, ಗುಣವರ್ಮ, ಗುಣನಂದಿ ಮೊದಲಾದ ಪೂರ್ವಕವಿಗಳು ರಚಿಸಿದ ಕಾವ್ಯಗಳು ಅಲಭ್ಯವಾಗಿರುವುದರಿಂದ ಪಂಪನೇ ಕನ್ನಡದ ಆದಿಕವಿ ಎನಿಸಿದ್ದಾನೆ. ಇದುವರೆಗೂ ದೊರೆತ ಭಾರತದ ಕಾವ್ಯಗಳಲ್ಲಿ ಪಂಪನ 'ವಿಕ್ರಮಾರ್ಜುನ ವಿಜಯಂ' ಮತ್ತು ಕುಮಾರವ್ಯಾಸನ 'ಕರ್ನಾಟ ಭಾರತ ಕಥಾಮಂಜರಿ' ಇವೆರಡೂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಎರಡು ಮಹೋನ್ನತ ಗ್ರಂಥಗಳಾಗಿ ಕಂಗೊಳಿಸುತ್ತಿವೆ. ಈ ಎರಡು ಕೃತಿಗಳಿಗೂ ವ್ಯಾಸಭಾರತವೇ ಮೂಲ. ಆದರೆ ಆ ಸಾಮಗ್ರಿಯನ್ನು ಅಳವಡಿಸಿಕೊಳ್ಳುವಲ್ಲಿ ಇಬ್ಬರು ಕವಿಗಳ ಆಶಯಕ್ಕನುಗುಣವಾಗಿ ಅವರ ಗ್ರಂಥಗಳ ವ್ಯಾಪ್ತಿ, ಸ್ವರೂಪಗಳು ಭಿನ್ನ ಭಿನ್ನವಾಗಿವೆ.

**ಪಂಪ:**

ಕನ್ನಡ ಸಾಹಿತ್ಯದ ಹಿರಿಯ ಕವಿ, ಆದಿಕವಿ, ಮಹಾಕವಿ ಎಂದು ಪ್ರಸಿದ್ಧನಾಗಿರುವ ಪಂಪ ಸಾರಸ್ವತ ಸಾಮ್ರಾಜ್ಯದ ಮೊದಲ ಕವಿಗುರುವಾಗಿದ್ದಾನೆ. ಅವನು ತನ್ನನ್ನು 'ಧಾತ್ರೀವಳಿಯನಿಳಿಂಪ' ಎಂದು ಕರೆದುಕೊಂಡಿರುವುದು ಆತನ ಅಹಂಭಾವವನ್ನು ತೋರಿಸುವುದಕ್ಕಿಂತ ಮಿಗಿಲಾಗಿ ಆತ್ಮಪ್ರತ್ಯಯದ ಪ್ರತೀಕವಾಗಿ ನಿಲ್ಲುತ್ತಾನೆ. ಆದುದರಿಂದಲೇ 'ವಿಕ್ರಮಾರ್ಜುನವಿಜಯಂ'ದಲ್ಲಿ 'ವ್ಯಾಸ ಮುನೀಂದ್ರರುಂದ್ರ ವಚನಾಮೃತವಾರ್ಧಿಯನೀಸುವೆಂ ಕವಿ ವ್ಯಾಸನೆಂಬ ಗರ್ವಮೆನಗಿಲ್ಲ' ಎಂದು ತನ್ನ ವಿನೀತಭಾವವನ್ನು ವ್ಯಕ್ತಪಡಿಸುತ್ತಾನೆ. ತನ್ನ ಕೃತಿಗಳು ಜನಮನದಲ್ಲಿ ಶಾಶ್ವತವಾಗಿ ನಿಲ್ಲುವಂತೆ ಮಾಡಿ ಆತನು ಮುಂದಣ ಕವಿಗಳಿಗೆ ಮಾರ್ಗದರ್ಶಕನಾಗಿರುವಂತೆಯೇ ಆದರ್ಶತೆಯಲ್ಲಿಯೂ ಮುಂಚೂಣಿಯಲ್ಲಿದ್ದಾನೆ.

ಪಂಪ ತನ್ನ ಕೃತಿ 'ಆದಿಪುರಾಣ'ದ ಆರಂಭ ಭಾಗದಲ್ಲಿ ತಾನು ದುಂದುಭಿ ಸಂವತ್ಸರದಲ್ಲಿ ಜನಿಸಿದ್ದಾಗಿ ಉಲ್ಲೇಖಿಸಿದ್ದಾನೆ. ಆದಿಪುರಾಣದ ರಚನೆ ಶಕ. ೮೬೩ರ ಪ್ಲವಸಂವತ್ಸರದಲ್ಲಿ, ನಂದೀಶ್ವರ ಮಹಾಮಹಿಮೆಯೆಂಬ ಪೂಜೆಗಳು ನೆರವೇರಿಸುವ ಕಾರ್ತಿಕಮಾಸದ ಶುಕ್ಲಪಕ್ಷದ ಪಂಚಮೀ ತಿಥಿಯಂದು. ಭಾನುವಾರದ ದಿನ ಮೂಲಾನಕ್ಷತ್ರವಿರುವಾಗ ಮುಗಿಯಿತೆಂದು ಅದರ ಕಡೆಭಾಗದಲ್ಲಿ (೧೬-೭೬,೭೭) ಹೇಳಿದ್ದಾನೆ. ಶಾಲಿವಾಹನ ಶಕ ೮೬೩ನೆಯ ಸಂವತ್ಸರವು ಕ್ರಿಶ. ೯೪೧ನೆಯ ಇಸವಿಗೆ ಸರಿಹೊಂದುತ್ತದೆಂಬ ನಿಮಿತ್ತ ಪಂಪನ ಕಾಲಗಣನೆಗೆ ಸಾಹಿತ್ಯ ಚರಿತ್ರಕಾರರೂ ಈ ವರ್ಷವನ್ನೇ ಬಳಸುವುದುಂಟು. ಆದರೆ ಪಂಪನು ನೀಡಿರುವ 'ಆದಿಪುರಾಣ' ರಚನಾಕಾಲದ ಸಂವತ್ಸರಾದಿ ವಿವರಗಳು ಕ್ರಿಶ. ೯೪೧ಕ್ಕೆ ಸರಿಹೊಂದುವುದಿಲ್ಲವೆಂದೂ ಅದು ಕ್ರಿಶ. ೯೪೨ರ ಅಕ್ಟೋಬರ್ ೧೯ನೆಯ ದಿನಾಂಕದ ಭಾನುವಾರಕ್ಕೆ ಹೊಂದಿಕೆಯಾಗುವುದೆಂದೂ ಎಂ. ಗೋವಿಂದಪೈ ಅವರು ನಿರ್ಧರಿಸಿದ್ದಾರೆ.[೨]

'ಪಂಪಭಾರತ' ರಚನೆಯಾದ ಕಾಲವನ್ನು ತಿಳಿಯಲು ಆ ಗ್ರಂಥದಲ್ಲಿ ನೇರವಾದ ಉಲ್ಲೇಖಗಳಿಲ್ಲ. ತನ್ನ ಸಂಕಲ್ಪದಂತೆ 'ಪಂಪಭಾರತ' ಮತ್ತು 'ಆದಿಪುರಾಣ'ಗಳನ್ನು ೬ ತಿಂಗಳಲ್ಲಿ ಒಂದು, ೩ ತಿಂಗಳಲ್ಲಿ ಮತ್ತೊಂದನ್ನು ರಚಿಸಿದುದಾಗಿ ಪಂಪನು ಹೇಳಿಕೊಂಡಿದ್ದಾನೆ. ಪಂಪನ ಆಶ್ರಯದಾತ ಇಮ್ಮಡಿ ಅರಿಕೇಸರಿಯ (ಸು. ಕ್ರಿ.ಶ. ೯೩೦-೫೫) ಕಾಲದ ಬ್ರಹ್ಮದೇಯವೊಂದನ್ನು ದಾನವಾಗಿ ನೀಡಿದ ಶಾಸನವೊಂದರ[೩] ಆರಂಭದಲ್ಲಿಯೆ ಪಂಪಭಾರತದ ೫ ಪದ್ಯಗಳು ಉಲ್ಲೇಖಗೊಂಡಿರುವುದುಂಟು. ದಾನವಿತ್ತ ತೇದಿಯನ್ನು ಶಾಸನದಲ್ಲಿ '[ಸ]ಕವರ್ಷ[೮]೯ನೆಯ ಪರಾಭವ ಸಂವತ್ಸರದ ಕಾರ್ತಿಕ ಬಹುಳ ಏ[ಕಾದ]ಸಿ ಸೋಮವಾರದನ್ದು' ಎಂದಿದೆ. ಈ ತೇದಿಗೆ ಹೊಂದಿಕೆಯಾಗುವ ಕ್ರಿ.ಶ. ೯೪೬ರ ಮೊದಲು ಪಂಪಭಾರತ ರಚಿತವಾಗಿರಬೇಕೆಂದು ಇದರಿಂದ ತಿಳಿಯುತ್ತದೆ. ಉಲ್ಲೇಖಗೊಂಡಿರುವ ಪಂಪಭಾರತದಿಂದ ನೇರವಾಗಿಯೇ ಉದ್ಧೃತವಾಗಿರುವುದು ಸಂಭವನೀಯವೆನ್ನಬಹುದು. ಇದು ಸರಿಯಾದರೆ ಆದಿಪುರಾಣವು ಕ್ರಿ.ಶ. ೯೪೧ರಲ್ಲಿ, ಪಂಪಭಾರತವು ೯೪೧ರಿಂದ ೪೬ರೊಳಗೆ ರಚಿತವಾದುದೆಂಬುದು ಸರಿಯಾಗುತ್ತದೆ. ಇನ್ನು ಪಂಪಭಾರತದ ಕೊನೆಯಲ್ಲಿ ಬಂದಿರುವ 'ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ...' (ಆಶ್ವಾಸ-೧೪, ಪದ್ಯ-೬೦) ಎಂಬ ಪದ್ಯದ ಧಾಟಿ ಧೋರಣೆಗಳನ್ನು ಗಮನಿಸಿದರೆ ಕ್ರಿ.ಶ. ೯೪೧-೪೨ರಲ್ಲಿಯೇ ಅನುಕ್ರಮವಾಗಿ ಆದಿಪುರಾಣ ಮತ್ತು ಪಂಪಭಾರತಗಳನ್ನು ಬರೆದಿರುವಂತೆ ತೋರುತ್ತದೆ. ಆದರೆ ಆ ಎರಡು ಗ್ರಂಥಗಳ ರಚನೆಯಲ್ಲಿಯೂ ಕೆಲವು ವರ್ಷಗಳ ಅಂತರವಿದೆಯೆಂದು ಡಿ.ಎಲ್.ನರಸಿಂಹಾಚಾರ್, ತೀ.ನಂ.ಶ್ರೀಕಂಠಯ್ಯ ಮೊದಲಾದ ವಿದ್ವಾಂಸರ ಅಭಿಪ್ರಾಯ.

ಪಂಪನ ವಂಶದ ವಿವರಗಳು ಅವನ ಎರಡು ಕಾವ್ಯಗಳು ಹಾಗೂ ಆಂಧ್ರಪ್ರದೇಶದ ಕರೀಂನಗರ ಜಿಲ್ಲೆ ಹಾಗೂ ತಾಲ್ಲೂಕಿನ ಕುರ್ಕ್ಯಾಲುಗ್ರಾಮದ 'ಜಿನವಲ್ಲಭನ ಗಂಗಾಧರಂ ಶಿಲಾಶಾಸನ (೯೪೫)ಗಳಿಂದ ತಿಳಿಯಬಹುದು: ಪಂಪನ ಮುತ್ತಾತನ ತಂದೆ ಮಾಧವಸೋಮಯಾಜಿಯು ಸಮಸ್ತ ಶಾಸ್ತ್ರಗಳಲ್ಲಿ ನಿಪುಣ. ಇವನ ಮಗ ಪುರುಷಶ್ರೇಷ್ಠನೆನಿಸಿದ ಪಂಪನ ಮುತ್ತಾತ ಅಭಿಮಾನಚಂದ್ರ ತನ್ನ ಪೂರ್ವಿಕರಂತೆ ದಾನಗುಣಗಳಿಂದ ಸಮೃದ್ಧನಾಗಿದ ಅಭಿಮಾನಚಂದ್ರನ ಮಗ ಕೊಮರಯ್ಯ. ಇಂತಹ ಸದ್ಗುಣ ಸಂಪನ್ನನೂ ಹಿರಿಯ ವಿದ್ವಾಂಸನೂ ಆದ ಕೊಮರಯ್ಯನಿಗೆ ಭೀಮಪಯ್ಯನೆಂಬುವನು ಮಗನಾದವನು. ಈ ಭೀಮಪಯ್ಯನ ಮಗ 'ಕವಿತಾಗುಣಾರ್ಣವ' ನೆಂದು ಪ್ರಖ್ಯಾತನಾದ ಪಂಪ. ಈತನೇ ಕನ್ನಡಿಗರ ಪಾಲಿಗೆ ನಿಳಿಂಪನಾಗಿದ್ದಾನೆ.

ಪಂಪನು ವೆಂಗಿಮಂಡಲವೆಂಬ ಪ್ರದೇಶದಲ್ಲಿರುವ ವೆಂಗಿನಾಡು (ವೆಂಗಿಪಳು) ಎಂಬ ಊರಿನಲ್ಲಿ ನೆಲೆಸಿದ. ಈ ವೆಂಗಿಮಂಡಲವು 'ಕೃಷ್ಣಾಗೋದಾವರಿ ನದಿಗಳ ನಡುವೆ ಪೂರ್ವಕ್ಕೆ ಸಮುದ್ರವೇ ಮೇರೆಯಾಗಿ ಪಶ್ಚಿಮಕ್ಕೆ ಪೂರ್ವಘಟ್ಟಗಳೇ ಎಲ್ಲೆಯಾಗಿರುವ ಭೂ ಪ್ರದೇಶ'[೪]. ಹೀಗೆ ತಂದೆಯು ಆಂಧ್ರಪ್ರದೇಶದವನಾದರೆ ತಾಯಿಯು 'ಈಗಿನ ಧಾರವಾಡ ಜಿಲ್ಲೆಯ ಬೆಳ್ವೊಲ ೩೦೦ ಎಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿರುವ ಅಚ್ಚಗನ್ನಡ ನಾಡಿನವಳು. ಜೋಯಿಸಸಿಂಘನ ಮಗಳು ಅಬ್ಬಣಬ್ಬೆ. ಈ ದಂಪತಿಗಳಿಗೆ ಪಂಪ ಮತ್ತು ಜಿನವಲ್ಲಭ ಎಂಬಿಬ್ಬರು ಮಕ್ಕಳು. ತಮ್ಮ ಜಿನವಲ್ಲಭನು ಪಂಪನಂತೆಯೇ ಕವಿಯೂ ಪಂಡಿತನೂ ಆಗಿದ್ದನು. ವೆಂಗಿಪಳು ತೆಲುಗುದೇಶದ ಒಂದು ಭಾಗವಾಗಿದ್ದರೂ ಪಂಪನ ತಾಯಿಯ ತವರೂರಾದ ಅಣ್ಣಿಗೇರಿಯು ಕನ್ನಡದೇಶವೆ ಆದುದರಿಂದ ಪಂಪನಿಗೆ ಮೊದಲಿನಿಂದಲೂ ಕನ್ನಡದೇಶದ ನಿಕಟ ಸಂಬಂಧವಿದ್ದಿರಬೇಕು. ಪಂಪನು ತನ್ನ ಬಾಲ್ಯವನ್ನು ಬನವಾಸಿಯಲ್ಲೇ ಕಳೆದಿರಬೇಕು. ಆದ್ದರಿಂದಲೇ ಕಾವ್ಯದಲ್ಲಿ ಬನವಾಸಿಯನ್ನು ಕುರಿತಂತೆ 'ಆರಂಕುಶವಿಟ್ಟೊಡಂ ನೆನವುದೆನ್ನ ಮನಂ ಬನವಾಸಿ ದೇಶಮಂ' ಎಂದು ಮನದುಂಬಿ ಹಾಡಿದ್ದಾನೆ. ಅಲ್ಲದೆ ತನ್ನ ಕಾವ್ಯವನ್ನು ಪುಲಿಗೆರೆಯ ತಿರುಳ್ಗನ್ನಡದಲ್ಲಿ ಬರೆದುದ್ದಾಗಿ ಹೇಳಿಕೊಂಡಿದ್ದಾನೆ. ಪಂಪನ ಶಿಕ್ಷಣ ಅಂದಿನ ಗುರುಕುಲ ಪದ್ಧತಿಯಂತೆ ಕೆಲವು ಗುರುಗಳಲ್ಲಿ ಶಿಷ್ಯವೃತ್ತಿ ಪಡೆದಿರಬೇಕು. ದೇವೇಂದ್ರ ಮುನಿಗಳ ಸನ್ನಿಧ್ದಿಯಲ್ಲಿ ಉನ್ನತ ವ್ಯಾಸಂಗ, ಅಂದರೆ ಆಳವಾದ ಅಭ್ಯಾಸ ನಡೆದಿರಬೇಕು. 'ಗುರುದೇವೇಂದ್ರ ಮುನೀಂದ್ರ' ಎಂದು ತನ್ನ ಗುರುಗಳಿಗೆ ವಿಶೇಷಸ್ಥಾನವನ್ನು ಕಲ್ಪಿಸಿದ್ದಾನೆ. ಆದಿಪುರಾಣದ ಮೊದಲ ಪದ್ಯದ ಪ್ರಾರಂಭವೇ 'ಶ್ರೀದೇವೇಂದ್ರ ಮುನೀಂದ್ರ' ಎಂಬ ಮಾತಿನಿಂದ ಆರಂಭವಾಗುತ್ತದೆ. ಪಂಪನು ಕವಿಯಾಗಿಯಲ್ಲದೆ ಕಲಿಯಾಗಿಯೂ ಯುದ್ಧದಲ್ಲಿ ಭಾಗವಹಿಸಿ ತನ್ನ ಆಶ್ರಯದಾತನ ಪ್ರೀತಿಗೆ ಪಾತ್ರನಾಗಿ, 'ಧರ್ಮಪುರ'ವನ್ನು ಕಾಣಿಕೆಯಾಗಿ ಪಡೆದಿರಬೇಕು.

ಪಂಪನು ತನ್ನ ಕೃತಿಗಳ ರಚನಾ ಕಾಲಕ್ಕೆ ವೇಮುಲವಾಡ ಚಾಲುಕ್ಯವಂಶದ ಅರಸನಾದ ಇಮ್ಮಡಿ ಅರಿಕೇಸರಿಯ ಆಶ್ರಯಪೋಷಣೆಯನ್ನು ಪಡೆದುಕೊಂಡಿದ್ದ ಎಂಬುದು ಟಿ.ವಿ. ವೆಂಕಟಾಚಲಶಾಸ್ತ್ರೀಯವರ ಅಭಿಪ್ರಾಯವಾಗಿದೆ (ಆದಿಪುರಾಣ, ಪುಟ.೪). ಆದರೆ ಆದಿಪುರಾಣವನ್ನು ಅರಿಕೇಸರಿಯ ಆಶ್ರಯದಲ್ಲಿ ಬರೆದುದಕ್ಕೆ ಗ್ರಂಥದಲ್ಲಿ ಯಾವ ಪುರಾವೆಗಳೂ ದೊರೆಯುವುದಿಲ್ಲ. ಈ ಗ್ರಂಥವನ್ನು ರಚಿಸಿ ಪ್ರಸಿದ್ಧನಾದ ಮೇಲೆ ಅರಿಕೇಸರಿಯ ಆಸ್ಥಾನದ ವಿದ್ವನ್ಮಣಿಗಳ ಸಾಲಿನಲ್ಲಿ ಸ್ಥಾನ ದೊರೆತಿರಬೇಕು. 'ಆದಿಪುರಾಣ'ದ ರಚನಾ ವೈಭವವನ್ನು ಗಮನಿಸಿದ ಅಲ್ಲಿನ ಪಂಡಿತರು ತನಗೆ ಆದೇಶಿಸಿದ್ದನ್ನು ಪಂಪ ಹೀಗೆ ಹೇಳಿಕೊಂಡಿದ್ದಾನೆ:

**ಕತೆ ಪಿರಿದಾಡೊಡಂ ಕತೆಯ ಮೆಯ್ಗಿಡಲೀಯದೆ ಮುಂಸಮಸ್ತಭಾ**
**ರತಮನಪೂರ್ವಮಾಗೆ ಸಲೆ ಪೇಟ್ದ ಕವೀಶ್ವರಿಲ್ಲ ವರ್ಣಕಂ**
**ಕತೆಯೊಳೊಡಂಬಡಂ ಪಡೆಯೆ ಪೇಟ್ವೊಡೆ ಪಂಪನೆ ಪೇಟ್ಗುಮೆಂದು ಪಂ**
**ಡಿತರೆ ತಗುಳ್ದು ಬಿಚ್ಚಟಿಸೆ ಪೇಟಲೊಡರ್ಚಿದೆ ನೀ ಪ್ರಬಂಧಮಂ**

(ಪ.ಭಾ. ೧-೧೧)

ಎನ್ನುತ್ತಾ ಪಂಪನು ತನ್ನ ಆಶ್ರಯದಾತನಾದ ಅರಿಕೇಸರಿಯನ್ನು ಅರ್ಜುನನೊಡನೆ ಸಮೀಕರಿಸಿ 'ಈ ಕಥೆಯೊಳ್ ತಗುಳ್ಚಿ ಪೋಲಿಪೊಡೆನಗಟ್ತಿಯಾದುದು ಗುಣರ್ಣಾವ ಭೂಭುಜನಂ ಕಿರೀಟಿಯೊಳ್' (೧-೧೪) ಎಂದು ನಿರ್ಧರಿಸುತ್ತಾನೆ. ಆದರೆ ಹೀಗೆ ಆದಿಪುರಾಣವನ್ನು ಅರಿಕೇಸರಿಯ ಆಸ್ಥಾನಕ್ಕೆ ಬರುವ ಮೊದಲೇ ರಚಿಸಿದ್ದರೆ ಆಶ್ವಾಸ ಅಂತ್ಯಗಳಲ್ಲಿ ಬರುವ 'ಕವಿತಾಗುಣಾರ್ಣವ' ಎಂಬ ವಿಶೇಷಣ ಬಂದುದು ಹೇಗೆ? ಎಂಬ ಪ್ರಶ್ನೆ ಎದುರಾಗುತ್ತದೆ. ಕೆಲವು ವಿದ್ವಾಂಸರು ಊಹಿಸುವಂತೆ ಪಂಪನು ಕೆಲವು ಕೃತಿಗಳನ್ನು ಬರೆದು ಪ್ರಸಿದ್ಧನಾದ ಮೇಲೆ ಅರಿಕೇಸರಿ ತನ್ನ ಆಸ್ಥಾನಕ್ಕೆ ಬರಮಾಡಿಕೊಂಡು ಈ ಬಿರುದನ್ನು ನೀಡಿರುವನೆ ಇಲ್ಲವೆ? ಎಂಬುದು ಯಕ್ಷಪ್ರಶ್ನೆಯಾಗಿ ನಿಲ್ಲುತ್ತದೆ. ಇಲ್ಲವೆ ತಾನೇ ತನ್ನ ಕವಿತ್ವದ ಮೇಲ್ಮೆಯನ್ನು ಸೂಚಿಸುವಲ್ಲಿ ಈ ಮಾತನ್ನು ಬಳಸಿರುವ ಸಂಭವವೂ ಇಲ್ಲದಿಲ್ಲ; 'ಸರಸ್ವತೀಮಣಿಹಾರ'ವನ್ನು ಬಳಸಿದಂತೆ.

ಪಂಪ ಮತ್ತು ಅರಿಕೇಸರಿಯ ನಡುವೆ ಅತ್ಯುತ್ತಮವಾದ ಪೋಷಕ ಸಂಬಂಧವೂ ಇದೆ... ಆ ಸಂಬಂಧವೇ ಅವರ ಅಂತರಂಗವನ್ನು ಅನ್ಯೋನ್ಯವಾಗಿ ಆಕರ್ಷಿಸಿರಲೂಬಹುದು. ಅಷ್ಟು ಮಾತ್ರವಲ್ಲ ಪಂಪ, ಅರಿಕೇಸರಿಯ ವಯೋಮಾನ, ವೀರತ್ವಗಳ ಸಮಾನ ಸಂಬಂಧವೂ ಇದ್ದವು. ಅರಿಕೇಸರಿ 'ಉಡೆವಣಿಪಜೆಯದಮುನ್ನಮೆ ಚಲವಿಡಿದು ಪರಬಲದ ನೆತ್ತರನ್ನು ಓಕುಳಿಯಾಡಿದನಾದರೆ ಪಂಪನೂ

ಬರಿಯ ವಿದ್ವತ್ಕವಿಶೇಖರನಷ್ಟೆ ಅಲ್ಲ; ಚತುರಂಗ ಬಲಭಯಂಕರನು'[೫] ಎಂಬುದು ಮುಳಿಯ ತಿಮ್ಮಪ್ಪಯ್ಯನವರ ಅನಿಸಿಕೆ.

ಪಾಂಡಿತ್ಯ ಪ್ರತಿಭಾಪೂರ್ಣನಾದ ಪಂಪ ಕನ್ನಡ ಸಾಹಿತ್ಯಲೋಕದಲ್ಲಿ ಆಗಮಿಕ ಹಾಗೂ ಲೌಕಿಕವೆಂಬ ಎರಡು ಮಹಾಕಾವ್ಯಗಳನ್ನು ರಚಿಸಿ ಯಶೋವಂತನಾದನು. ಒಂದು ಪ್ರಥಮ ತೀರ್ಥಂಕರನ ಚರಿತೆಯಾದ 'ಆದಿಪುರಾಣ'ವಾದರೆ ಮತ್ತೊಂದು 'ಸಮಸ್ತಭಾರತ'ವೆಂದು ಹೇಳುವ 'ವಿಕ್ರಮಾರ್ಜುನವಿಜಯಂ'. ಈ ಎರಡು ಕೃತಿಗಳೂ ಚಂಪೂರೂಪವಾಗಿದ್ದು 'ಆದಿಪುರಾಣದಲ್ಲಿ ೧೬೩೦ ಪದ್ಯಗಳೂ ಹಲವಾರು ವಚನ ಭಾಗಗಳೂ ಇದ್ದರೆ ವಿಕ್ರಮಾರ್ಜುನ ವಿಜಯದಲ್ಲಿ ೧೬೦೯ ಪದ್ಯಗಳೂ ಹಲವು ವಚನ ಭಾಗಗಳೂ ಇವೆ. ಮೊದಲಿನದು ೧೬ ಆಶ್ವಾಸಗಳಲ್ಲಿ ಬಿತ್ತರಗೊಂಡರೆ ಮತ್ತೊಂದು ೧೪ ಆಶ್ವಾಸಗಳಲ್ಲಿ ಮೂರ್ತಗೊಂಡಿದೆ. ಇವುಗಳಲ್ಲಿ ಒಂದನ್ನು ಮೂರು ತಿಂಗಳಲ್ಲಿಯೂ ಮತ್ತೊಂದನ್ನು ಆರು ತಿಂಗಳಲ್ಲಿಯೂ ಮುಗಿಸಿರುವೆನೆಂಬ ಪಂಪನ ಮಾತನ್ನು ಯಾರಾದರೂ ನಂಬಲು ಅಸಾಧ್ಯ. ಕೆಲವು ವಿದ್ವಾಂಸರು ಊಹಿಸಿರುವಂತೆ ಕಾವ್ಯರಚನೆಗೆ ಕುಳಿತ ಕಾಲವಷ್ಟನ್ನೇ ಗಣಿಸಿದರೂ ಅಸಾಧಾರಣವೂ ಅದ್ಭುತವೂ ಆಗಿ ತೋರುತ್ತದೆ.

'ಪಂಪನ ಕೃತಿಗಳು ಪ್ರಕಟಗೊಂಡ ಕಾಲ ಸ್ಪಷ್ಟವೇ ಇದ್ದು ಅವನು ಹುಟ್ಟಿದುದೂ ಅಷ್ಟೇ ಖಚಿತವಿರುವುದರಿಂದ ಕೃತಿಗಳು ಪ್ರಕಟಗೊಂಡ ಕಾಲ ಕ್ರಿ.ಶ. ೯೪೧ರ ನವೆಂಬರ್ ೨ 'ಆದಿಪುರಾಣ' ಮತ್ತು ಕ್ರಿ.ಶ. ೯೪೨ ಮಾರ್ಚ್ ತಿಂಗಳಲ್ಲಿ 'ವಿಕ್ರಮಾರ್ಜುನವಿಜಯ' ಹಾಗೂ ಜನನ ಕ್ರಿ.ಶ. ೯೦೨'[೬] ಎಂದು ಸೀತಾರಾಮ ಜಾಗೀರದಾರರು ವಿವಿಧ ಆಯಾಮಗಳಿಂದ ವಿಮರ್ಶಿಸಿ ನಿರ್ಣಯಕ್ಕೆ ಬಂದಿದಾರೆ. 'ಒಂದಱುದಿಂಗಳೊಳೊಂದು ಮೂಱು ತಿಂಗಳೊಳೆ ಸಮಾಪ್ತಿಯಾದುದು' (ವಿ.ವಿ. ೧೪-೬೦) ಎಂಬ ಮಾತಿನಂತೆ ಒಂದು ವರ್ಷದ ಅವಧಿಯಲ್ಲಿಯೇ ಎರಡೂ ಕಾವ್ಯಗಳು ಪರಿಪೂರ್ಣವಾದಂತೆ ತಿಳಿಯಬೇಕಾಗಿದೆ.

ಹೀಗೆ ಕವಿಗಳ ಶಾಸ್ತ್ರಕಾರರ ಮನ್ನಣೆಗೆ ಪಾತ್ರನಾಗಿ ಹಿರಿಯ ವ್ಯಕ್ತಿತ್ವವನ್ನು ಹೊಂದಿದ ಪಂಪ ಮತ್ತು ಈತನ ಕಾವ್ಯಗಳನ್ನು ಆಧುನಿಕ ಕನ್ನಡ ಸಾರಸ್ವತಲೋಕಕ್ಕೆ ಪ್ರಥಮ ಬಾರಿಗೆ ಪರಿಚಯಿಸಿದ ಕೀರ್ತಿ ಲೂಯಿ ರೈಸ್ ಅವರದು. ಅವರು ಆದಿಪುರಾಣದಲ್ಲಿ ಕಂಡುಬರುವ ಪಂಪನ ಜನನ ಮತ್ತು ಕಾವ್ಯರಚನಾ ಕಾಲವನ್ನು ವಿಕ್ರಮಾರ್ಜುನವಿಜಯದಲ್ಲಿ ಹೇಳಿರುವ ಪಂಪನ ವಂಶಪಾರಂಪರ್ಯವನ್ನೂ ಬಹಿರಂಗಗೊಳಿಸಿ ಸಾಹಿತ್ಯಾಸಕ್ತರಿಗೆ ಉಪಕರಿಸಿದುದು ಹೆಮ್ಮೆಯ ವಿಷಯವಾಗಿದೆ. ಅನಂತರದಲ್ಲಿ

ಹಲವರು ಈತನ ಬಗೆಗೆ ತಮ್ಮ ಅನಿಸಿಕೆಗಳನ್ನು ದಾಖಲಿಸಿದ್ದಾರೆ. ತೀ.ನಂ.ಶ್ರೀಕಂಠಯ್ಯ ಅವರ ಅನಿಸಿಕೆಯಂತೆ 'ಪಂಪನ ಕೃತಿಗಳು ಹೊರಬಿದ್ದ ಬಳಿಕ ಕನ್ನಡ ಸಾಹಿತ್ಯದಲ್ಲಿ ಒಂದು ಹೊಸಯುಗವೇ ಮೊದಲಾಯಿತು. ಅಲ್ಲಿಂದೀಚೆಗೆ ಕಾವ್ಯ ಬರೆದವರಿಗೆಲ್ಲ, ಅವರು ಜೈನರಾಗಿರಲಿ ಅಲ್ಲದಿರಲಿ ಪಂಪನ ಕಾವ್ಯಗಳೇ ಆದರ್ಶ' ಎಂಬ ಮಾತುಗಳನ್ನು ನೆನೆಯಬೇಕಾಗಿದೆ.

**ಪಂಪನ ವಿಕ್ರಮಾರ್ಜುನ ವಿಜಯಂ (ಪಂಪಭಾರತ):**

ಹದಿನಾಲ್ಕು ಆಶ್ವಾಸಗಳೂ ೧೬೦೯ ಪದ್ಯಗಳೂ ಹಲವು ವಚನಗಳಿಂದಲೂ ಪಂಪ ಭಾರತ ವ್ಯಾಪಿಸಿದೆ. ಮೊದಲ ಆರು ಆಶ್ವಾಸಗಳಲ್ಲಿ ಪಾಂಡವರ ಹುಟ್ಟು, ಬೆಳೆವಣಿಗೆ, ಕಿರಿಯತನದ ಕಷ್ಟನಿಷ್ಠುರ, ದ್ರೌಪದೀಸ್ವಯಂವರ ಸುಭದ್ರಾಪರಿಣಯ, ರಾಜಸೂಯ, ಸ್ಯೂತಪ್ರಸಂಗಗಳಿಗೆ ಸಂಬಂಧಿಸಿದವು. ಏಳು, ಎಂಟು ಪಾಂಡವರ ವನವಾಸದ, ಪಾಶುಪತಾಸ್ತ್ರಗಳಿಕೆಯ, ವಿರಾಟಪರ್ವದ ಭಾಗ. ಒಂಬತ್ತು- ಕೃಷ್ಣದೌತ್ಯ, ಸಂಧಿಯ ನಿಷ್ಫಲತೆಯನ್ನು ಕುರಿತ್ತದ್ದು. ಹತ್ತರಿಂದ ಹದಿನಾಲ್ಕು ಯುದ್ಧ ಪಂಚಕ, ಪಾಂಡವ ವಿಜಯ, ಉಪಸಂಹಾರಗಳಿಗೆ ಸಂಬಂಧಿಸಿವೆ. ಪ್ರಸ್ತುತದ ಭಾಗದಲ್ಲಿ ಪಂಪ ಭಾರತವನ್ನು ಸಂಕ್ಷಿಪ್ತವಾಗಿ ಸಮೀಕ್ಷಿಸಲಾಗಿದೆ.

ಪಂಪನು ತನ್ನ ಆಶ್ರಯದಾತನಾದ ಅರಿಕೇಸರಿಯನ್ನು ಅರ್ಜುನನೊಡನೆ ಸಮೀಕರಿಸಿ ರಚಿಸಿರುವ 'ವಿಕ್ರಮಾರ್ಜುನ ವಿಜಯಂ'ವನ್ನು 'ಸಮಸ್ತ ಭಾರತ' ಎಂದು ಹೇಳಿ, ತನ್ನ ಕಾವ್ಯರಚನೆಗೆ ಪ್ರೇರಣೆಯಾದ ಸನ್ನಿವೇಶವನ್ನು ವಿವರಿಸುತ್ತಾನೆ; ತನ್ನಲ್ಲಿ ವಿದ್ವಾಂಸರಿಟ್ಟಿದ್ದ ವಿಶ್ವಾಸವನ್ನು ತುಂಬುಹೃದಯದಿಂದ ಸ್ಮರಿಸಿದ್ದಾನೆ. ಮುಂದುವರಿದು ಪೂರ್ವದಲ್ಲಿ ವ್ಯಾಸರಿಂದ ರಚಿತವಾದ ಸಂಸ್ಕೃತ ಭಾರತವೇ ತನ್ನ ಕೃತಿಗೆ ಮೂಲ ಆಕರವೆಂಬುದನ್ನೂ ಕೂಡ,

**ವ್ಯಾಸಮುನೀಂದ್ರರುಂದ್ರ ವಚನಾಮೃತವಾರ್ಧಿಯನೀಸುವೆಂ ಕವಿ**
**ವ್ಯಾಸನೆನೆಂಬ ಗರ್ವಮೆನಗಿಲ್ಲ; ಗುಣಾರ್ಣವನೊಳ್ಪುಮನ್ಮನೋ**
**ವ್ಯಾಸಮನೆಯ್ದೆ ಪೇೞ್ದಪೆನದಲ್ಲಿದೆ ಗರ್ವಮೆ ದೋಷಂ ಅಟ್ಟೆಗಂ**
**ದೋಷಮೆ ಕಾಣೆನೆನ್ನಜಿವ ಮಾಟ್ಕೆಯೆ ಪೇೞ್ವೆನಿದಾದ ದೋಷಮೋ**

(ಪ.ಭಾ. ೧-೧೩)

ಎಂದು ಹೇಳಿ ವ್ಯಾಸರಿಗೆ ತನ್ನ ಗೌರವವನ್ನು ಸಮರ್ಪಿಸಿದ್ದಾನೆ. ವ್ಯಾಸಭಾರತವನ್ನು ಅನುಸರಿಸಿದರೂ ಅದನ್ನು ತನ್ನ ಉದ್ದೇಶಕ್ಕೆ ತಕ್ಕಂತೆ ಅಳವಡಿಸಿಕೊಂಡಿದ್ದಾನೆ. ಇಲ್ಲಿ ತನ್ನ ಆಶ್ರಯದಾತನಾದ

ಅರಿಕೇಸರಿಯನ್ನು ಅರ್ಜುನನೊಡನೆ ಸಮೀಕರಿಸಿ ಹೇಳಬೇಕಾದುದರಿಂದ ಕಥಾನಾಯಕ ಅರ್ಜುನನೇ ಆಗಿದ್ದಾನೆ.

ಪಂಪ ಮತದಲ್ಲಿ ಜೈನ ಕವಿಯಾದರೂ ಲೌಕಿಕ ಕಾವ್ಯವಾದುದರಿಂದ ತೀರ್ಥಂಕರರೇ ಮೊದಲಾದವರನ್ನು ಸ್ತುತಿಸುವುದಿಲ್ಲ. ವಿನಾಯಕನ ಸ್ತುತಿಮಾಡಿ ತನ್ನ ಕಾವ್ಯರಚನೆಯನ್ನು ಕುರಿತು

**ಬಗೆ ಪೊಸತಪ್ಪುದಾಗಿ ಮೃದು ಬಂಧದೊಳೊಂದುವುದೊಂದಿ ದೇಸಿಯೊಳ್**
**ಪುಗುವುದು ಪೊಕ್ಕು ಮಾರ್ಗದೊಳೆ ತಳ್ವದ ತಳ್ತೊಡೆ ಕಾವ್ಯಬಂಧದು**
**ಪ್ಪುಗುಮೆಳಮಾವು ಕೆಂದಳಿರ ಪೂವಿನ ಬಿಣ್ಪೋಜೆಯಿಂನವಿಲ್ದು ತುಂ**
**ಬಿಗಳನೆ ತುಂಬಿ ಕೋಗಿಲೆಯ ಬಗ್ಗಿಸಿ ಸುಗ್ಗಿಯೊಳೊಪ್ಪುವಂತೆವೋಲ್**
**(ಪ.ಭಾ. ೧-೮)**

ಎಂದು ಸೊಗಸಾದ ತನ್ನ ಕಾವ್ಯದ ಗುಣಗಳನ್ನು ವಿಶದೀಕರಿಸಿದ್ದಾನೆ. ಇಲ್ಲಿ ಆಲೋಚನೆ ಹೊಸದು, ಅದು ಮೃದುಬಂಧದಲ್ಲಿ ನಿರೂಪಿತ, ಅಷ್ಟೇ ಅಲ್ಲ ಆ ನಿರೂಪಣೆಯೂ ದೇಸೀಶೈಲಿಯಲ್ಲಿ ಇರಬೇಕು, ಹೀಗಿದ್ದೂ ಮಾರ್ಗಶೈಲಿಯನ್ನು ಒಳಗೊಂಡಿರಬೇಕು. ಇಂತಹ ಕಾವ್ಯ ಬಂಧವು ವಸಂತ ಸಮಯದಲ್ಲಿ ಕೆಂದಳಿರಿಂದ, ಹೂವಿನ ಬಲುಭಾರದಿಂದ ಜೋತುಬಿದ್ದು, ದುಂಬಿಗಳಿಂದ ಆವೃತವಾಗಿ ಕೋಗಿಲೆಯ ಕೂಹೂರವದಿಂದ ಕೂಡಿ ಶೋಭಿಸುವ ರೀತಿಯಲ್ಲಿರಬೇಕು ಎಂಬ ವರ್ಣನೆ ರಂಜನೀಯವಾಗಿದೆ. ತನ್ನ ಆಶ್ರಯದಾತನಾದ ಅರಿಕೇಸರಿಯ ವಂಶವೃತಾಂತ್ತವನ್ನು ೧-೧೫ರಿಂದ ೫೦ನೇ ಪದ್ಯದವರೆಗೂ ವರ್ಣಿಸುತ್ತಾನೆ.

**ಮೊದಲನೆಯ ಆಶ್ವಾಸ:**

ಕುರುಜಾಂಗಣ ನಾಡು-ಹಸ್ತಿನಾವತಿ (೫೨-೫೮), ಭರತಕುಲತಿಲಕರ ವಂಶಾನುಕ್ರಮ-ಶಂತನು(೬೬)- ಗಾಂಗೇಯ ಜನನ-ಮತ್ಸ್ಯಗಂಧಿ ಪ್ರಸಂಗ-ವ್ಯಾಸ ಜನನ (೬೯)-ಶಂತನು ಸತ್ಯವತೀ ವಿವಾಹ (೭೩)-ಚಿತ್ರಾಂಗದ ವಿಚಿತ್ರವೀರ್ಯ-ಅಂಬೆ-ಪರಶುರಾಮನೊಂದಿಗೆ ಭೀಷ್ಮನ ಯುದ್ಧ(೮೦)-ವ್ಯಾಸರ ಅನುಗ್ರಹದಿಂದ ಧೃತರಾಷ್ಟ್ರ ಪಾಂಡು ವಿದುರರ ಜನನ (೮೬)- ಕರ್ಣನ ಜನನ (೯೪)-ಇಂದ್ರನಿಗೆ ಕರ್ಣನು ಕವಚವನ್ನು ಸಿಗಿದುಕೊಟ್ಟದ್ದು (೧೦೨)- ಪರಶುರಾಮನಿಂದ ಶಾಪ ಪಡೆದದ್ದು (೧೦೫)- ಪಾಂಡುವಿವಾಹ- ಮುನಿಶಾಪ (೧೧೧)- ಕುಂತಿಯ ಪುತ್ರದೋಹಳ (೧೧೭)-ಧರ್ಮರಾಜನ ಜನನ (೧೨೧)-ಭೀಮಜನನ (೧೨೮)-ದುರ್ಯೋಧನಾದಿಗಳ ಜನನ (೧೩೧), ಅರ್ಜುನನ ಜನನ (೧೪೫)-ದೇವತೆಗಳ ಸಂತೋಷ ಪ್ರದರ್ಶನ (೧೪೮).

ಇವಿಷ್ಟು ಮೊದಲನೆಯ ಆಶ್ವಾಸದಲ್ಲಿ ಬರುವ ಪ್ರಸಂಗಗಳು. ಇಲ್ಲಿ ಎರಡು ಪ್ರಮುಖ ವೈಶಿಷ್ಟ್ಯಗಳು; ೧. ಕರ್ಣನ ಜನನ, ೨. ಅರ್ಜುನನ ಜನನಕ್ಕೆ ಕೊಟ್ಟಿರುವ ಪ್ರಾಮುಖ್ಯತೆ. ಈ ಭಾಗದಲ್ಲಿ ಕರ್ಣನ ಜನನ-ಬೆಳೆವಣಿಗೆ, ಅವನಿಗೆ ಒದಗಿದ ಶಾಪ ಮುಂತಾದ ಅಂಶಗಳನ್ನು ಪಂಪ ಸಾರವತ್ತಾಗಿ ಚಿತ್ರಿಸಿದಾನೆ. ಕೃತಿಯ ಆರಂಭದಲ್ಲೆ ಕರ್ಣನ ಬಗೆಗೆ ಅಪಾರ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾನೆ. ಕರ್ಣನ ಚಾಗದ ಬೀರದ ಮಾತು ಜಗತ್ಪ್ರಸಿದ್ಧವಾಗಿದೆ. ಅವನು ಮುಂದೆ ತನ್ನ ಅಂಶದಿಂದ ಹುಟ್ಟಲಿರುವ ಅರ್ಜುನನಿಗೆ ಎದುರಾಳಿ ಎಂಬುದನ್ನರಿತು ಇಂದ್ರನು ಕಪಟವೇಷದಿಂದ ಬಂದು ಅವನ ಮೈಯಲ್ಲಿದ್ದ ಸಹಜ ಕವಚವನ್ನು ಕಿತ್ತುಕೊಳ್ಳುತ್ತಾನೆ. ರಕ್ತ ಹರಿಯುತ್ತಿರುವಂತೆಯೇ ಸಿಗಿದುಕೊಟ್ಟನಲ್ಲ 'ಎಂದುಂ ಪೋಗೆಂದನೆ, ಮಾಣ್ ಎಂದನೆ, ಪೆಱತೊಂದನೀವೆನೆಂದನೆ, ನೊಂದು ಅಃ ಎಂದನೆ! ಸೆರೆಗಿಲ್ಲದೆ ಪಿಡಿ ಎಂದನ್. ಇದೇಂ ಕಲಿಯೋಚಾಗಿಯೋ ರವಿತನಯಂ' (೧-೧೦೨) ಎಂದು ಪಂಪ ಉದ್ಗರಿಸಿದಾನೆ.

ಎರಡನೆಯದು ಅರ್ಜುನನ ಜನನಕ್ಕೆ ಕೊಟ್ಟಿರುವ ಪ್ರಾಮುಖ್ಯತೆ. ಪಂಪ ತನ್ನ ಕಾವ್ಯೋದ್ದೇಶಕ್ಕೆ ಸಹಜವಾಗಿಯೇ ಇವನ್ನು ವಿಸ್ತಾರಗೊಳಿಸುತ್ತಾನೆ. ಇಬ್ಬರು ಮಕ್ಕಳಾಗಿದ್ದರೂ ಇನ್ನೊಬ್ಬ ಸರ್ವಲಕ್ಷಣಸಂಪನ್ನನಾದ ಮಗ ತನಗೆ ಬೇಕೆಂದು ಕುಂತಿಗೆ ಆಸೆಯಾಗಿ ಅಂಥ ಮಗನನ್ನು ಪಡೆಯುವುದಕ್ಕಾಗಿ ಪಾಂಡು-ಕುಂತಿ ವ್ರತಗಳನ್ನು ಆಚರಿಸಿದರು. 'ಅಂತು ನೋನದೆ ಗುಣಾರ್ಣವನಂ ಪಡೆಯಲ್ಕೆ ತೀರ್ಗುಮೆ?' (೧-೧೩೯). ಇಂದ್ರ ತನ್ನ ಅಂಶವನ್ನು 'ಕುಲಗಿರಿಗಳ ಬಿಣ್ಪು, ಧರಾತಳದ ತಿಣ್ಪು, ಆದಿತ್ಯನ ತೇಜದ ಅಗುಂತಿ, ಚಂದ್ರನ ಕಾಂತಿ, ಮದನನ ಸೌಭಾಗ್ಯ' ಮುಂತಾದವುಗಳನ್ನು ಒಂದಾಗಿ ಕೂಡಿಸಿ ಅದಕ್ಕೆ ತನ್ನ ದಿವ್ಯಾಂಶವನ್ನು ಸೇರಿಸಿ ನೀಡಿದನು. ಅರ್ಜುನ ಜನಿಸಿದಾಗ ಸುರದುಂದುಭಿಗಳು ಮೊಳಗಿದುವು. ದೇವೇಂದ್ರನೊಂದಿಗೆ ದೇವತೆಗಳೆಲ್ಲ ಶತಶೃಂಗ ಪರ್ವತಕ್ಕೆ ಧಾವಿಸಿದರು. ಸಕಲ ಮುನಿಗಳು, ಏಕಾದಶರುದ್ರರು, ಮೂವತ್ತುಮೂರು ದೇವರು ನೆರೆದು ಜನ್ಮೋತ್ಸವವನ್ನು ಆಚರಿಸಿದರು. ಮಗುವನ್ನು ಬ್ರಹ್ಮನು ನೋಡಿ ಸಂತೋಷಿಸುತ್ತಾನೆ. ಅಮರೇಂದ್ರನು ಮುದ್ದಾಡುತ್ತಾನೆ. ಅಪ್ಸರೆಯರು ನರ್ತಿಸುತ್ತಾರೆ! 'ಪೊಗಟಲ್ವೇಡ ಗುಣಾರ್ಣವನ ಜನ್ಮದಿನದ ಬೆಡಂಗಂ!' ಮಗುವಿಗೆ ನೂರೆಂಟು ನಾಮಕರಣ ಮಾಡಿ ಆಶೀರ್ವಾದ ಮಾಡುತ್ತಾರೆ.

**ಎರಡನೆಯ ಆಶ್ವಾಸ:**

ನಕುಲ ಸಹದೇವರ ಜನನ (೩)-ಪಾಂಡವರ ಬಾಲಕೇಳಿ (೧೧)-ವಸಂತಾಗಮನ (೧೨)-ಪಾಂಡುಮರಣ (೧೮)-ಮಾದ್ರಿ ಸಹಗಮನ-ಹಸ್ತಿನಾವತಿಗೆ ಪಾಂಡವರ ಆಗಮನ (೨೯)-ಪಾಂಡವರ ಕೌರವರ ಕ್ರೀಡೆ-ದ್ವೇಷದ ಅಂಕುರ (೩೧-೩೨)-ಕೃಪಾಚಾರ್ಯನಿಂದ ವಿದ್ಯಾಭ್ಯಾಸ (೩೫)-ಅರ್ಜುನನ ಯೌವನಾರಂಭ ವರ್ಣನೆ (೩೯)-ದ್ರೋಣಜನನ-ಅಶ್ವತ್ಥಾಮಜನನ-ದ್ರುಪದ ಪ್ರಸಂಗ (೪೭)-ಪಾಂಡವ ಕೌರವನಿಗೆ ದ್ರೋಣನು ಆಚಾರ್ಯನಾದದ್ದು (೫೩)-ದ್ರುಪದಪರಿಭವ (೬೨)-ಧನುರ್ವಿದ್ಯಾ ಪ್ರದರ್ಶನ (೬೮-೭೭)-ಕರ್ಣನ ಆಗಮನ-ಸ್ಪರ್ಧೆ ಕರ್ಣನಿಗೆ ಅಂಗರಾಜ್ಯಾಭೀಷೇಕ (೮೪) ವಾರಣಾವತಕ್ಕೆ ಪಾಂಡವರನ್ನು ಕಳಿಸಿದ್ದು (೯೨).

ಈ ಆಶ್ವಾಸದಲ್ಲಿ ಪಾಂಡವರ ಕೌರವರ ನಡುವೆ ಆಟಪಾಠಗಳಿಂದ ಮೊದಲಿಟ್ಟ ದ್ವೇಷ, ಧನುರ್ವಿದ್ಯಾ ಪ್ರದರ್ಶನ ಸಂದರ್ಭದಲ್ಲಿ ಕರ್ಣನು ಪ್ರದರ್ಶಿಸಿದ ಶೌರ್ಯ, ದುರ್ಯೋಧನ ಕರ್ಣರ ಗಾಢವಾದ ಸ್ನೇಹ, ಇವುಗಳಿಗೆ ಕವಿ ಪ್ರಾಮುಖ್ಯತೆ ನೀಡಿದ್ದಾನೆ. 'ಮಿಕ್ಕವಂಗಾದರೆ ಜೀಯ, ಹಸಾದ ಎಂಬ ಸ್ವಾಮಿ ಭೃತ್ಯ ಸಂಬಂಧವಿರುತ್ತದೆ, ಆದರೆ ನಿನ್ನ ನನ್ನ ನಡುವೆ ಅದು ಬೇಡ. ನೀನು ನನ್ನ ಆತ್ಮೀಯ ಕೆಳೆಯ' ಎಂದು ಕರ್ಣನಿಗೆ ದುರ್ಯೋಧನನು ಹೇಳುತ್ತಾನೆ. ದ್ರುಪದ ಪರಿಭವದ ಸುತ್ತಮುತ್ತ ಅರ್ಜುನನ ಪರಾಕ್ರಮ ತಾನೇ ತಾನಾಗಿ ವಿಜೃಂಭಿಸುತ್ತದೆ. ಅರ್ಜುನನಿಗೆ ಯೌವನೋದಯವಾದುದನ್ನು ಕವಿ ಸವಿಸ್ತಾರವಾಗಿ ವರ್ಣಿಸಿದ್ದಾನೆ. ವರ್ಣನೆಯ ದೃಷ್ಟಿಯಿಂದ ಇಲ್ಲಿ ಪಾಂಡುವಿನ ಮರಣಕ್ಕೆ ಹಿನ್ನಲೆಯಾಗಿ ಬರುವ ವಸಂತಋುತು ವರ್ಣನೆ ಅಮೋಘವಾಗಿದೆ.

**ಮೂರನೆಯ ಆಶ್ವಾಸ:**

ಲಾಕ್ಷಾಗೃಹದಾಹ (೧-೭)-ಹಿಡಿಂಬವಧೆ-ಹಿಡಿಂಬೆಯ ಪ್ರಣಯ-ಘಟೋತ್ಕಚ ಜನನ (೮-೧೦)-ಏಕಚಕ್ರ ಪ್ರವೇಶ-ಬಕಾಸುರವಧೆ (೩೧) ಅಂಗದಪರ್ಣನೆಂಬ ಗಂಧರ್ವನ ಪರಾಭವ (೩೪) ಛತ್ರವತಿನಗರದ ವರ್ಣನೆ-ದ್ರೌಪದಿಯ ಸೌಂದರ್ಯ-ಸ್ವಯಂವರ-ಬಿಲ್ಲನ್ನೇರಿಸಲು ರಾಜರ ಪ್ರಯತ್ನ (೫೮)-ಅರ್ಜುನನ ಗೆಲುವು (೬೩)-ಯುದ್ಧ (೬೫-೭೧)-ದ್ರೌಪದಿ-ಅರ್ಜುನರ ವಿವಾಹ (೭೫)-ಪ್ರಣಯ.

ಬೇರೆ ಬೇರೆ ಆಶ್ವಾಸಗಳಲ್ಲಿರುವಂತೆ ಇಲ್ಲಿಯೂ ಅರ್ಜುನನಿಗೆ ಪ್ರಾಶಸ್ತ್ಯ ನೀಡಲಾಗಿದೆ. ಆದರೆ ಆಶ್ವಾಸದ ಪ್ರಾರಂಭದಲ್ಲಿ ಭೀಮನಿಗೆ ಪ್ರಾಧಾನ್ಯ. ಅರಗಿನಮನೆ, ಹಿಡಿಂಬವಧೆ ಹಾಗೂ ಬಕಾಸುರವಧೆ ಈ ಮೂರೂ ಘಟ್ಟಗಳಲ್ಲಿ ಅವನದೇ ಮೇಲುಗೈ. ಅದನ್ನು ಪಂಪನು ತಪ್ಪಿಸಿ ಅಥವಾ ತಗ್ಗಿಸಿ ಹೇಳಲಾರದವಾನಾಗಿದ್ದುದರಿಂದ ಇಲ್ಲಿ ಭೀಮನ ಪರಾಕ್ರಮವನ್ನು ವರ್ಣಿಸಲಾಗಿದೆ. ತನ್ನ ತಾಯಿ ಮತ್ತು ಸೋದರರು ದಿಕ್ಕೆಟ್ಟು ಮರದ ಕೆಳಗೆ ಮಲಗಿದುದನ್ನು ನೋಡಿದ ಭೀಮನು ದುಃಖಿಸುವ ಪ್ರಸಂಗ ಮಾರ್ಮಿಕವಾಗಿದೆ.

**ನಾಲ್ಕನೆಯ ಆಶ್ವಾಸ:**

ಪಾಂಡವರು ಹಸ್ತಿನಾಪುರಕ್ಕೆ ಬಂದದ್ದು (೫)-ಯುಧಿಷ್ಠಿರನಿಗೆ ಅರ್ಧರಾಜ್ಯವನ್ನು ಕೊಟ್ಟು ಪಟ್ಟಗಟ್ಟಿದುದು (೮)-ಇಂದ್ರಪ್ರಸ್ಥ ಪ್ರವೇಶ (೯)-ಅರ್ಜುನನ ಪ್ರವಾಸ (೧೦)-ನಾಗಲೋಕದಲ್ಲಿ ಮದನಲತೆಯನ್ನು ವಿವಾಹವಾದದ್ದು, ಇಳಾವಂತ ಜನನ (೧೮)-ಬನವಾಸಿವರ್ಣನೆ (೨೮-೩೧)-ದ್ವಾರಕೆಯ ಪ್ರವೇಶ (೩೨)-ಸುಭದ್ರೆಯಲ್ಲಿ ಮೋಹಗೊಂಡದ್ದು-ಸುಭದ್ರೆಯ ವಿರಹ (೫೫-೬೮)-ಅರ್ಜುನನ ವಿರಹ (೭೦-೭೯)-ಸೂಳೆಗೇರಿಯಲ್ಲಿ ತಿರುಗಾಟ (೮೦-೧೧೦).

ಈ ಆಶ್ವಾಸದ ಮುಖ್ಯವಸ್ತು ಸುಭದ್ರೆಯನ್ನು ಅರ್ಜುನನು ಒಲಿದದ್ದು, ಅವರ ವಿರಹ ವರ್ಣನೆ. ಅದನ್ನು ಕವಿ ಔಚಿತ್ಯಮೀರಿತೆನ್ನುವಷ್ಟು ವಿಸ್ತಾರವಾಗಿ ವರ್ಣಿಸಿದ್ದಾನೆ. ಅರಿಕೇಸರಿಯೊಂದಿಗೆ ಅರ್ಜುನನನ್ನು ಸಮೀಕರಿಸಿದುದರಿಂದ ಕಾವ್ಯದ ನಾಯಕನ ಪ್ರಣಯ, ವಿರಹಗಳನ್ನು ನಿರೂಪಿಸಲು ಇದೇ ಒಳ್ಳೆಯ ಸದಾವಕಾಶವೆಂದು ಭಾವಿಸಿದಂತಿದೆ. ಸೂಳೆಗೇರಿಯಲ್ಲಿ, ಮದ್ಯಪೇಯಗಳ ಕೇರಿಯಲ್ಲಿ ಅರ್ಜುನನು ಅಲೆದಾಡಿದ ವರ್ಣನೆಯೂ ಅಷ್ಟೆ, ಕತೆಗೆ ಅಷ್ಟಾಗಿ ಹೊಂದಿಕೆಯಾಗುವುದಿಲ್ಲ. ಸಂಗ್ರಹಕಾರನಾದ ಪಂಪ ಇಷ್ಟೊಂದು ಪದ್ಯಗಳನ್ನು ಬರೆದಿರುವಲ್ಲಿ ಆ ಕಾಲದ ಸಾಮಾಜಿಕ ಚಿತ್ರಣವನ್ನು ನೋಡಬಹುದೆಂದು ವಿಮರ್ಶಕರು ಗುರುತಿಸಿದ್ದಾರೆ. ಸೂಳೆಯರ ವಿಲಾಸ ವಿಭ್ರಮಗಳು, ಸಂಪ್ರದಾಯಬದ್ಧವಾಗಿ ವಿಧಿವತ್ತಾದ ಕ್ರಿಯೆಯೆಂಬಂತೆ ಕುಡುಕರ ಗುಂಪುಗಳು- ಇವುಗಳ ವರ್ಣನೆ ಕತೆಯ ಕಟ್ಟಡದಿಂದ ಹೊರಗಿಟ್ಟರು ಸುಂದರವಾಗಿ ಕಾಣುತ್ತವೆ.

ಕನ್ನಡ ನಾಡಿನ ಸಿರಿಸಂಪತ್ತು, ವೈಭವವನ್ನು ದೇಶಪ್ರೇಮವನ್ನು ಕವಿ ಓತಪ್ರೋತವಾಗಿ ಹರಿಸಿರುವುದನ್ನು ಕಾಣಬಹುದು:

**ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂನಿಂಪುಗ**
**ಳ್ಗಾಗರಮಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇ**
**ನಾಗಿಯುಮೇನೊ ತೀರ್ದಪುದೆ ತೀರದೊಡಂಮಱಿದುಂಬಿಯಾಗಿ ಮೇಣ್**
**ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್**
**(ಪ.ಭಾ. ೪-೨೯)**

ಎಂಬ ವರ್ಣನೆಯನ್ನು ಪರಿಶೀಲಿಸಬಹುದು. ಅಲ್ಲಿನ ಮಾನವರ ಸದ್ಗುಣಗಳ ಸಾಕಾರವಿದೆ. ಇಲ್ಲಿನ ಜನ ದಾನದಿಂದ, ಭೋಗದಿಂದ ಸಂಗೀತಗೋಷ್ಠಿಗಳಿಂದ ತುಂಬಿ ತುಳುಕುತ್ತಿರುವ ಮಾನವರೇ ಅಲ್ಲಿ ತುಂಬಿದ್ದಾರೆ. ಇದು ಎಂತಹ ಉನ್ನತ ಸ್ಥಿತಿಯಲ್ಲಿದೆ ಎಂದರೆ ಮಾನವರಾಗಿ ಹುಟ್ಟಿದರೆ ಇಲ್ಲಿ ಹುಟ್ಟಬೇಕು; ಅದು ಸಾಧ್ಯವಿಲ್ಲದಾದಲ್ಲಿ ಮರಿದುಂಬಿಯಾಗಿ ಕೋಗಿಲೆಯಾದರೂ ಜನ್ಮ ಪಡೆಯುವುದು ಸಾರ್ಥಕವಾಗುತ್ತದೆ ಎಂಬ ಉತ್ಕಟಾಭಿಮಾನವನ್ನು ವ್ಯಕ್ತಪಡಿಸಿದ್ದಾನೆ.

**ಐದನೆಯ ಆಶ್ವಾಸ:**

ಸುಭದ್ರೆಯ ವಿರಹ (೧-೧೦)-ಅರ್ಜುನ ಸಮಾಗಮ (೧೫)-ಕೃಷ್ಣನ ಸಲಹೆಯಂತೆ ಸುಭದ್ರಾಹರಣ (೨೧)-ವಿವಾಹ (೨೫)-ಅಭಿಮನ್ಯು ಜನನ (೨೯)-ವಸಂತಾಗಮನ (೩೦-೩೫)-ಬೇಟೆಯ ವರ್ಣನೆ (೩೬-೫೧)-ಜಲಕ್ರೀಡೆ (೫೪-೬೮)-ಖಾಂಡವವನದಹನ (೭೯-೯೮)-ಮಯನು ಬದುಕಿದ್ದು (೯೯)-ಅಶ್ವಸೇನ ಸರ್ಪ (೧೦೦)-ಇಂದ್ರನು ವರ ಕೊಟ್ಟಿದ್ದು (೧೦೩).

ಹಿಂದಿನ ಆಶ್ವಾಸದಲ್ಲಿ ಆರಂಭಗೊಂಡ ಸುಭದ್ರಾಪ್ರಣಯ ಪ್ರಕರಣ- ಹರಣ ಮತ್ತು ವಿವಾಹದಿಂದ ಇಲ್ಲಿ ಮುಂದುವರಿಯುತ್ತದೆ. ಮತ್ತೆ ಅರ್ಜುನನ ಮೇಲ್ಮೆಯ ಪ್ರದರ್ಶನಕ್ಕೆ ಇಲ್ಲಿ ಒದಗಿ ಬರುವ ಮುಖ್ಯ ಸಂದರ್ಭ ಖಾಂಡವವನ ದಹನ, ಜಲಕ್ರೀಡೆ ಮತ್ತು ವಸಂತ ವರ್ಣನೆಗಳು ಸುಂದರವಾಗಿವೆ. ಬೇಟೆಯ ವರ್ಣನೆ ಬಿಡಿಯಾಗಿದ್ದೂ ಸೊಗಸಾಗಿವೆ. ಅರ್ಜುನ-ಕೃಷ್ಣರ ನಡುವೆ ವಿಶ್ವಾಸ, ಪ್ರೀತಿ ಅಧಿಕಗೊಂಡದ್ದರ ಚಿತ್ರಣವೂ ಇದೆ.

ಈ ಸಂದರ್ಭದಲ್ಲಿ ಪಂಪನು ಸುಭದ್ರಾಹರಣಕ್ಕೆ ಕೊಟ್ಟಿರುವ ಪ್ರಾಧಾನ್ಯತೆ ಎಷ್ಟೆಂಬುದನ್ನು ಡಿ.ಎಲ್. ನರಸಿಂಹಚಾರ್ ಅವರು ತಮ್ಮ 'ಪಂಪಭಾರತ ದೀಪಿಕೆ' ಗ್ರಂಥದಲ್ಲಿ ಸಮರ್ಥವಾಗಿ ವಿವೇಚಿಸಿದ್ದಾರೆ. ಅವರು ಹೇಳುವಂತೆ 'ಈ ಕಥಾ ನಿರೂಪಣೆಗೆ ಪಂಪನು ಸುಮಾರು ೧೦೫ ಪದ್ಯಗಳನ್ನೂ ಅಷ್ಟೇ ಗದ್ಯಗಳನ್ನೂ ಬಳಸಿದ್ದಾನೆ. ವ್ಯಾಸಕೃತ ಮಹಾಭಾರತದಲ್ಲಿ ಈ ಉಪಾಖ್ಯಾನ ಸುಮಾರು ೩೦-೪೦ ಶ್ಲೋಕಗಳಲ್ಲಿ ಮುಗಿದುಹೋಗುತ್ತದೆ. ಎಷ್ಟೋ ಉಪಾಖ್ಯಾನಗಳನ್ನು ಒಂದೆರಡು

ಪದ್ಯಗಳಲ್ಲಿಯೇ ಸಂಗ್ರಹಿಸಿ ಮುಂದಕ್ಕೆ ಧಾವಿಸುವ ಪಂಪ ಈ ಅಲ್ಪವಾದ ಸುಭದ್ರಾಹರಣ ಪ್ರಸಂಗಕ್ಕೆ ಏಕೆ ಇಷ್ಟು ಗಮನಕೊಟ್ಟು ವಿಸ್ತರಿಸಿದನು?' ಎಂಬುದಾಗಿ ಪ್ರಶ್ನಿಸಿಕೊಂಡು ಪಂಪನಿಗೆ ತನ್ನ ಆಶ್ರಯದಾತನಾದ ಅರಿಕೇಸರಿಗಿದ್ದ 'ಪ್ರಿಯಗಳ್ಳ' ಎಂಬ ಬಿರುದಿಗೆ ಸಾರ್ಥಕತೆಯನ್ನು ಕಾಣಿಸಲು ಹೀಗೆ ಮಾಡಿರಬಹುದು; ಅಲ್ಲದೆ ಅರಿಕೇಸರಿಗಿದ್ದ ಇಬ್ಬರು ಪತ್ನಿಯರಲ್ಲಿ ಯಾರಾದರೊಬ್ಬಳನ್ನು ಇದೇ ರೀತಿ ಅಪಹರಿಸಿ ಮದುವೆಯಾಗಿರಬಹುದೆಂದು ಊಹಿಸಿದ್ದಾರೆ. ಜೊತೆಗೆ ಈ ಸಂದರ್ಭದಲ್ಲಿ ಬರುವ 'ಸೂರ್ಯಾಸ್ತ ಚಂದ್ರೋದಯಗಳ ವರ್ಣನೆ, ವೇಶ್ಯಾವಾಟಿಕೆಯ ಬಿಡಿಬಿಡಿ ಚಿತ್ರಗಳು, ಮಧುಪಾನ ಗೋಷ್ಠಿ, ಅಲ್ಲಿ ಕಾಣುವ ಜನಜೀವನ, ಪಂಪನ ಸೌಂದರ್ಯ ದೃಷ್ಟಿ, ಅವನ ರಸಿಕತೆ-ಇವೆಲ್ಲ ಈ ಕಥಾನಕದಲ್ಲಿ ಸ್ವಾರಸ್ಯಕರವಾದ ಅಂಶಗಳು' ಎಂದು ಗುರುತಿಸಿದ್ದಾರೆ.

**ಆರನೆಯ ಆಶ್ವಾಸ:**

ಮಯನು ದಿವ್ಯ ಸಭಾಮಂಟಪವನ್ನು ತಂದು ಕೊಟ್ಟದು (೩)-ನಾರದನ ಆಗಮನ (೭-೧೦) -ರಾಜಸೂಯಯಾಗ ವಿಚಾರ (೧೧-೨೫)- ಜರಾಸಂಧವಧೆ (೨೭)-ದಿಗ್ವಿಜಯ (೨೮-೩೩)- ಯಾಗವರ್ಣನೆ (೩೪-೪೦)- ಅಗ್ರಪೂಜೆಯ ಪ್ರಸಂಗ (೪೧-೬೪)- ಶಿಶುಪಾಲವಧೆ (೬೪)- ಕಪಟದ್ಯೂತ (೬೮-೭೬)-ಅದನ್ನು ನಿಲ್ಲಿಸಲು ಭೀಷ್ಮ ವಿದುರರ ವ್ಯರ್ಥ ಪ್ರಯತ್ನ.

ಈ ಆಶ್ವಾಸದ ಪ್ರಮುಖ ಪ್ರಸಂಗಗಳೆಲ್ಲ ರಾಜಸೂಯಯಾಗವನ್ನು ಮಾಡಿದುದು ಒಂದು. ಧರ್ಮರಾಜನು ತನ್ನ ತಮ್ಮಂದಿರು ವಿವಿಧ ದಿಕ್ಕುಗಳಿಗೆ ನಡೆದು ಶತ್ರುರಾಜರನ್ನೂ ಮಣಿಸಿ ಕೊನೆಗೆ ಸಕಲೈಶ್ವರ್ಯಕ್ಕೂ ಒಡೆಯನೆಂದು ನಂಬಿರುವ ಕುಬೇರನನ್ನೂ ಬಿಡದೆ ಅವರಿಂದ ಹೊನ್ನನ್ನು ತಂದು ರಾಶಿ ಹಾಕುವುದು; ಅವುಗಳನ್ನು ದೀನರಿಗೆ ಅನಾಥರಿಗೆ ವೃದ್ಧದ್ವಿಜರಿಗೆ ಮುನಿಸಮೂಹಕ್ಕೆ- ಅವರ ಬಡತನ ನಿವಾರಣೆಯಾಗುವಂತೆ ನೀಡುವುದು ಕಂಡು ಬರುತ್ತದೆ. ಇರುವವರಿಂದ ಕಿತ್ತು ತಂದ ಹಣವನ್ನು ಇಲ್ಲದವರಿಗೆ ಕೊಡುವ ಒಂದು ಪದ್ಧತಿ ಇದಾಗಿದ್ದಿತೆ? ಇಂತಹ ಕಾರ್ಯಗಳಲ್ಲಿ ಅಂದಿನ ಸಾಮಾಜಿಕ ದರ್ಶನಗಳನ್ನು ಪಡೆಯಬಹುದು.

ಹೀಗೆ ರಾಜಸೂಯಯಾಗವನ್ನು ಮಾಡಿ ಯಶಸ್ಸಿನ ಅಲೆಯ ಮೇಲೆ ತೇಲುತ್ತಾ ಸುಖ ಸಂಕಥಾವಿನೋದಗಳಿಂದ ರಾಜ್ಯಲಕ್ಷ್ಮಿಯನ್ನನುಭವಿಸುತ್ತಿದ್ದ ಪಾಂಡವರ ವೈಭವವನ್ನು ಕಂಡ ದುರ್ಯೋಧನನಿಗೆ ದಾಯಾದಿ ಮಾತ್ಸರ್ಯದ ಕಿಡಿ ಹೊತ್ತುತ್ತದೆ. ದುರ್ಯೋಧನ ಶಕುನಿಯರ ಕಪಟ

ಹಂಚಿಕೆಯ ಛಾಯೆ ಹರಡತೊಡಗುತ್ತದೆ. ಮೋಸದ ಪಗಡೆಯಾಟದಲ್ಲಿ ಭಾಗವಹಿಸಿದ ಯುಧಿಷ್ಠಿರ ತನ್ನ ಸಮಸ್ತವನ್ನೂ ಕಳೆದುಕೊಳ್ಳುತ್ತಾನೆ.

**ಏಳನೆಯ ಆಶ್ವಾಸ:**

ವನವಾಸ, ಅಜ್ಞಾತವಾಸಗಳ ಷರತ್ತಿನ ಮೇಲೆ ಧರ್ಮರಾಜ ಸೋತದ್ದು-ದುಶ್ಯಾಸನನ ಗೊಡ್ಡಾಟ-ಪಾಂಚಾಲಿಯ ಪರಿಭವ (೧-೫)- ಭೀಮ ಅರ್ಜುನರ ಕ್ರೋಧ (೬-೭)-ಭೀಮ ಪ್ರತಿಜ್ಞೆ (೧೨-೧೫)- ಪಾಂಡವರು ಕಾಡಿಗೆ ಹೊರಟ್ಟಿದ್ದು (೧೭) ಕಾಮ್ಯಕವನ ಪ್ರವೇಶ-ಮಳೆಗಾಲ (೨೨-೨೫)-ಕಿಮ್ಮೀರವಧೆ (೨೭)-ಜಯದ್ರಥನ ದುಷ್ಟತನ (೩೧)-ದುರ್ಯೋಧನನು ಕಾಡಿಗೆ ಬಂದುದು-ಗಂಧರ್ವರಿಂದ ಅವನನ್ನು ಅರ್ಜುನನು ಬಿಡಿಸಿದ್ದು (೩೮)-ಪಾಂಡವರು ತಮ್ಮಲ್ಲೇ ಸಮಾಲೋಚಿಸಿದುದು (೪೫-೫೫)- ವ್ಯಾಸಾಗಮನ (೫೯)-ಅರ್ಜುನನು ಇಂದ್ರಕೀಲಕ್ಕೆ ಹೋದದ್ದು (೬೮)-ಶರದದೃತುವಿನ ವರ್ಣನೆ (೬೯-೭೧)-ಹಿಮಾಚಲ ವರ್ಣನೆ (೭೨-೭೭)-ಅಪ್ಸರೆಯರ ವಿಫಲ ಪ್ರಯತ್ನ (೮೨-೯೪)-ಇಂದ್ರಾಗಮನ.

ಭೀಷ್ಮ ವಿದುರರ ಕಠಿಣ ಮಾತುಗಳಿಂದ ಎಚ್ಚೆತ್ತ ಧೃತರಾಷ್ಟ್ರನು ಮಗನಲ್ಲಿಗೆ ಬಂದು 'ಜಡಿದು ನುಡುದುಮೇಗೆಯ್ದುಮೊಡಂಬಡಿಸಲಾಱದಿರೆ' (೭-೨ವ) ಎಂಬ ಮಾತುಗಳು ದುರ್ಯೋಧನ ಧರ್ಮಜರ ಉದ್ಧಟತನವನ್ನು ತೋರಿಸುತ್ತವೆ. ಇದೇ ಆಶ್ವಾಸದ ಭಯಂಕರ ಸನ್ನಿವೇಶವೆಂದರೆ ದ್ಯೂತ್ಯದಲ್ಲಿ ವಶಳಾದ ದ್ರೌಪದಿಯನ್ನು ಸಭಾಮಧ್ಯಕ್ಕೆ ಎಳೆತರುವುದು. ದ್ರೌಪದಿಯು 'ರಜಸ್ವಲೆಯಾಗಿ ರ್ದಂ ಮುಟ್ಟಲಾಗದೆನೆಯುಮೊತ್ತಂಬದಿಂದೊಳಗಂಪೊಕ್ಕು ಪಾಂಚಾಳಿಯಂ ಕಣ್ಗಿಡೆ ಜಡಿದು ಮುಡಿಯಂ ಪಿಡಿದು ತನ್ಮಧ್ಯದಿಂ ಸುಯೋಧನನ ಸಭಾಮಧ್ಯಕ್ಕೆ ತಂದು' (೭-೪ವ) ಎಂಬಲ್ಲಿ ಕಂಡುಬರುವ ಹೆಣ್ಣಿನ ಮೇಲೆ ನಡೆಯುವ ದೌರ್ಜನ್ಯ ಎಂತಹ ಕೀಳುಮಟ್ಟದ್ದು ಎಂಬುದು ಹಿರಿಯರಿಗೂ ಅರಿವಾಗದಿರುವುದು ವಿಸ್ಮಯಕಾರಿಯಾಗಿದೆ.

ಅವಮಾನಕ್ಕೊಳಗಾದ ದ್ರೌಪದಿ 'ಮುಡಿಯಂ ಪಿಡಿದೆಟೆದವನಂ। ಮಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನಂ ಮುಡಿಯಿಸುವಿನೆಗಂ ಮುಡಿಯಂ। ಮುಡಿಯೆಂಗಡ ಕೇಳಿಮಿಗಳಾನ್ ನುಡಿನುಡಿದೆಂ' (೭-೧೦) ಎಂದು ಪ್ರತಿಜ್ಞೆ ಮಾಡುತ್ತಾಳೆ. ಅದಕ್ಕೆ ಪೂರಕವಾಗಿ ಭೀಮಸೇನನು ಪ್ರತಿಜ್ಞೆ ಮಾಡುವುದು ಸಮಾಧಾನಕರ ಅಂಶವಾಗಿದೆ.

ಮಳೆಗಾಲದ ವರ್ಣನೆ, ಕಿಮ್ಮೀರನವಧೆ, ಚಿತ್ರಾಂಗದನಿಂದ ಬಂಧನಕ್ಕೊಳಗಾದ ದುರ್ಯೋಧನ ದುಶ್ಯಾಸನರನ್ನು ಅರ್ಜುನನು ಬಿಡಿಸಿ ತಂದುದು ಮೊದಲಾದವು ಪಂಪನ ಪ್ರತಿಭಾಸಾಮರ್ಥ್ಯದಿಂದ ನಿರ್ಮಿತಗೊಂಡ ರಸದಾಣಗಳಾಗಿವೆ. ಸಂಗೀತ ನಾಟ್ಯ ಕಲಾವೈಭವದಲ್ಲಿ ಆಸಕ್ತನಾದ ಪಂಪನು ಊರ್ವಶಿಯ ನೃತ್ಯವನ್ನೂ ಮೇನಕೆಯ ಗಾನವನ್ನೂ ತಿಲೋತ್ತಮೆಯರ ನಾಟ್ಯವನ್ನೂ ಅತ್ಯಂತ ಯಶಸ್ವಿಯಾಗಿ ನಿರೂಪಿಸಿದ್ದಾನೆ:

**ಮಗಮಗಿಸುತ್ತುಮಿರ್ಪ ಮೃಗನಾಭಿಯ ನೀರ್ದಳಿವಲ್ಲಿ ಕಂಪನಾ**
**ಳ್ದುಗುಟ್ದಿಲರುತ್ತುಮಿರ್ಪ ಪದದೊಳ್ ಪದವಟ್ಟು ಪೊದಳ್ದು ತೋರಮ**
**ಲ್ಲಿಗೆಯ ತುಱುಂಬು ರಾಹುತವೆನುಂಗಿದ ಚಂದ್ರನನೋಯ್ಯನೊಯ್ಯನಂ**
**ದುಗುಟ್ವವೊಲೊಪ್ಪಿರಲ್ ಬಲದೊಳುರ್ವಸಿ ದೇಸಿಗೆ ದೇಸಿಯಾಡಿದಳ್**
**(ಪ.ಭಾ. ೭-೮೭)**

ಗಮಗಮಿಸುತ್ತಿರುವ ಕಸ್ತೂರೀ ಜಲವನ್ನು ಚಿಮುಕಿಸಿದಾಗ ಉಂಟಾಗುವ ಸುವಾಸನೆಯನ್ನು ಹೊಂದಿದ್ದು ಹೊರಸೂಸುವಂತೆ ಅರಳುತ್ತಿರುವ ಸಮಯದಲ್ಲಿ ಹದವಾಗಿ ಅಗಲವಾಗಿ ತೋರುವ ದಪ್ಪಮಲ್ಲಿಗೆಯ ತುರುಬು ಕಂಡ ಬಗೆಯನ್ನು ರಾಹು ನುಂಗಿದ ಚಂದ್ರನನ್ನು ಮೆಲ್ಲಮೆಲ್ಲಗೆ ಹೊರಗುಗುಳುವಂತೆ ತೋರುವ ಊರ್ವಶಿಯು ದೇಸಿನೃತ್ಯವನ್ನಾಡಿದಳು ಎಂಬ ಕಲ್ಪನೆಯೇ ವಿಶಿಷ್ಟವಾಗಿ ತೋರುತ್ತದೆ. ಇಲ್ಲಿನ ಪದ್ಯವನ್ನು ಕುರಿತು ಡಿ.ಎಲ್.ಎನ್. ಅವರು 'ಇದು ಬಲುಸೊಗಸಾದ ಪದ್ಯ: ತುರುಬಿನ ಮೇಲೆ ದುಂಡು ಮಲ್ಲಿಗೆ ಸರ ಕುಳಿತ್ತಿರುವುದು ಚಂದ್ರಗ್ರಹಣ ಸ್ವಲ್ಪ ಸ್ವಲ್ಪವಾಗಿ ಬಿಡುತ್ತ ಬರುವಾಗ ಕಾಣಿಸುವ ಚಂದ್ರನಿಗೆ ಸಮನಾಗಿದೆ ಚಿತ್ರ ಸುಂದರ' ಎಂದು ಪ್ರಶಂಸಿಸಿದ್ದಾರೆ (ಪೂರ್ವೋಕ್ತ).

ಈ ಆಶ್ವಾಸದ ಉತ್ತರಾರ್ಧದಲ್ಲಿ ಅರ್ಜುನ ಪ್ರಾಶಸ್ತ್ಯವನ್ನು ಪಡೆಯುತ್ತಾನೆ. ಪಂಪನ ಎಣಿಕೆಯನ್ನು ಮೀರಿ ಮೊದಲರ್ಧದಲ್ಲಿ ಭೀಮನ ಪೌರುಷ ಪ್ರಜ್ವಲಿಸಿದೆ. ಅವನು ಸಭೆಯಲ್ಲಿ ಮಾಡುವ ಪ್ರತಿಜ್ಞೆ ಸಿಡಿಲಿನಂತೆ ಮೊಳಗುತ್ತದೆ. ಅರ್ಜುನನ ತಪಸ್ಸನ್ನು ಕೆಡಿಸಲು ಇಂದ್ರನು ಅಪ್ಸರೆಯರನ್ನೂ ಕಾಮನನ್ನೂ ಇಂದ್ರಕೀಲಕ್ಕೆ ಕಳಿಸಿದ್ದು, ಅವರು ಸೋತದ್ದು ಹೊಸ ಅಂಶ. ಶೌಚಾಂಜನೇಯ ಎಂಬ ಅರಿಕೇಸರಿಯ ಬಿರುದನ್ನು ಮೆರೆಯಲು ಕವಿ ಮಾಡಿದ ಪ್ರಯತ್ನ ಇದೆನ್ನಬಹುದು.

**ಎಂಟನೆಯ ಆಶ್ವಾಸ:**

ಇಂದ್ರನು ಅರ್ಜುನನನ್ನು ಮೆಚ್ಚಿದ್ದು (೧-೮)-ಕಿರಾತ ಪ್ರಸಂಗ (೧೪-೨೪)-ಪಾಶುಪತಾಸ್ತ್ರ ಪ್ರದಾನ (೨೬)-ಇಂದ್ರಲೋಕಕ್ಕೆ ಪ್ರಯಾಣ-ನಿವಾತಕವಚಾದಿ ರಕ್ಕಸರ ಸಂಹಾರ (೨೮)-ರಂಭೆಯು ಮನಸೋತುದು-ಶಾಪ (೨೯)-ಭೀಮನು ಕನಕ ಕಮಲವನ್ನು ತಂದಿತ್ತುದು (೧೩)-ಜಟಾಸುರವಧೆ-ಆಂಜನೇಯದರ್ಶನ (೩೨-೩೬)-ಆನೆಅರಣಿಯನ್ನು ಅಪಹರಿಸಿದ್ದು (೩೭)-ಕೊಳದ ನೀರು ಕುಡಿದು ಸತ್ತುಬಿದ್ದುದು-ಕೀರ್ತಿಗೆಯ ವೃತ್ತಾಂತ (೪೩-೪೮), ಸಮಾಲೋಚನೆ-ವಿರಾಟಪುರ ಪ್ರವೇಶ (೫೧)-ಅಜ್ಞಾತವಾಸ-ಕೀಚಕವೃತ್ತಾಂತ ವಧೆ (೫೯-೭೮)-ಉಪಕೀಚಕ ಸಂಹಾರ (೮೦)-ಗೋಗ್ರಹಣ (೮೩-೯೧)-ಯುದ್ಧ (೯೨-೧೧೦) ವಿಜಯ.

ಈ ಆಶ್ವಾಸದಲ್ಲಿ ಅರ್ಜುನನ ತಪಸ್ಸು ಮತ್ತು ಶಿವಾರ್ಜುನರ ಯುದ್ಧ, ಪಾಂಡವರ ಅಜ್ಞಾತವಾಸದ ಸಾಮಾನ್ಯ ನಿರೂಪಣೆಯಿದೆ. ಪರಾಶರಮುನಿಗಳ ಮಾತಿನಂತೆ ಅರ್ಜುನನು ಶಿವನನ್ನು ಕುರಿತು ತಪಸ್ಸು ಮಾಡುವುದು, ಶಿವನು ಮಾಯಾರೂಪದಿಂದ ಬಂದು ಅರ್ಜುನನೊಡನೆ ಯುದ್ಧ ಮಾಡುವುದು, ಅರ್ಜುನನು ಹರನನ್ನು 'ನೆಲಕ್ಕಿಕ್ಕಿ ಗಂಟಲಂ ಮೆಟ್ಟು' (೮-೨೨ವ)ವುದು, ಅನಂತರ ಹರನು ನಿಜಸ್ವರೂಪವನ್ನು ತೋರಿಸಿ ಅರ್ಜುನನಿಗೆ ಪಾಶುಪತಾಸ್ತ್ರವನ್ನು ನೀಡಿ ಹರಸುವುದು, ನೀರನ್ನು ತರಲು ಕೊಳಕ್ಕೆ ತೆರಳಿದ ಭೀಮಸೇನಾದಿ ನಾಲ್ವರು ಎಚ್ಚರದಪ್ಪಿ ಬೀಳುವುದು, ಧರ್ಮರಾಜನು ಅವರನ್ನು ದೇವತಾನುಗ್ರಹದಿಂದ ಎಚ್ಚರಿಸಿದು ಮೊದಲಾದವು ಪುರಾಣಕಥೆಯಲ್ಲಿ ಬರುವ ಸಾಮಾನ್ಯ ವಿಷಯಗಳಾಗಿವೆ. ಇದಾದನಂತರ ಬರುವ ವಿರಾಟನಗರದಲ್ಲಿನ ಪಾಂಡವರ ಅಜ್ಞಾತವಾಸ ಒಂದು ವಿಶೇಷ ಘಟ್ಟವಾಗಿ ಕಂಡುಬರುತ್ತದೆ. ಇಲ್ಲಿಯೇ ವಿರಾಟರಾಜನ ಮೈದುನನಾದ ಕೀಚಕನ ದುಷ್ಟಬುದ್ಧಿಗೆ ತಕ್ಕ ಶಾಸ್ತಿಯನ್ನು ನೋಡಬಹುದು.

ಮಹಾಬಲಶಾಲಿಯಾದ ಕೀಚಕನು ಸುಧೀಷ್ಣೆಯಲ್ಲಿ ಸೈರಂಧ್ರಿಯಾಗಿದ್ದ ದ್ರೌಪದಿಯನ್ನು ನೋಡಿದಾಗ ಅವನಿಗೆ ಆಕೆ ಕಂಡ ರೀತಿಯನ್ನು ಪಂಪನು ಸೊಗಸಾಗಿ ಚಿತ್ರಿಸಿದ್ದಾನೆ:

**ಸೊಗಯಿಸೆತೋಳಮೊತ್ತಮೊದಲೊಳ್‌ಪೊಗರ್ವಟ್ಟಿಸೆವೊಂದುನುಣ್ಬುಸಾ**
**ವಗಿಸುವಮೇಲುದಂಮೊಲೆಗಳಳ್ಳಿಜೆಯೆತ್ತಿರೆಪೊಣ್ಮೆಘರ್ಮಬಿಂ**
**ದುಗಳಲರಂಬುಲೆವಳಸೆಪಾಟಲಯೋಲವಿಲೋಚನಂಮನಂ**
**ಬಗೆನಳಿತೋಳಕೋಳೆಸೆಯೆಘಟ್ಟಮಗುಳ್ಚುವಘಟ್ಟವಳ್ತಿಯಂ**
(ಪ.ಭಾ. ೮-೫೯)

ಹೀಗಿದ್ದ ದ್ರೌಪದಿಯನ್ನು ನೋಡುತ್ತಿದ್ದಂತೆಯೇ ಕಾಮಾಂಧನಾದ ಕೀಚಕನಿಗೆ ಮನಃಕ್ಷೋಭೆಯೊದಗಿತು. ಅದನ್ನು ಪಂಪನು 'ಕೀಚಕಂ ಕಾಮದೇವಂ ಮಾಡಿದ ಯಾಚಕನಂತೆ ಕರಮೆ ನಾಣ್ಗೆಟ್ಟು ಮನಂಗಾಪಟಿದು ಅಳಿಪಿ ನೋಡಿ ತನ್ನ ಮನದೊಳ್ ಇಂತೆಂದು ಬಗೆದಂ' (೮೦೫೯ವ) ಎಂದು ನಿರೂಪಿಸಿ ಕೀಚಕನ ಅಳಿಮನವನ್ನು ವಿಶದೀಕರಿಸಿದ್ದಾನೆ. ಕೀಚಕನಿಗೆ ಭೀಮನಿಂದ ತಕ್ಕ ಶಾಸ್ತಿಯಾಗುವುದನ್ನು ವರ್ಣಿಸಲಾಗಿದೆ.

**ಒಂಬತ್ತನೆಯ ಆಶ್ವಾಸ:**

ಅಭಿಮನ್ಯು ಉತ್ತರೆಯರ ವಿವಾಹ (೯)-ದುರ್ಯೋಧನ ಅರ್ಜುನರು ಕೃಷ್ಣನ ನೆರವು ಕೋರಿದ್ದು (೧೨-೧೭)-ಸಮಾಲೋಚನೆ (೧೩-೨೬)-ಕೃಷ್ಣರಾಯಭಾರ (೨೭)-ಕೃಷ್ಣಹಿತವಾದ (೩೫-೪೩)-ದುರ್ಯೋಧನನ ಅಸಮಾಧಾನ (೪೪-೪೮)-ಕೃಷ್ಣನಿಂದ ಅರ್ಜುನನ ಪ್ರಶಂಸೆ (೫೨-೫೭)-ವಿಶ್ವರೂಪದರ್ಶನ (೬೦)-ಕರ್ಣಭೇದನ-(೬೧-೭೧)-ಕುಂತಿಕರ್ಣರ ಸಂದರ್ಶನ (೭೨-೮೭)-ಸಂಜಯದೌತ್ಯ (೮೯-೯೩)- ಯುದ್ಧಪ್ರಯಾಣ (೯೪)-ಸೇನಾಸಂಗ್ರಹ-ಕುರುಕ್ಷೇತ್ರದಲ್ಲಿ ಬೀಡುಬಿಟ್ಟಿದ್ದು.

ದುಯೋಧನನಲ್ಲಿಗೆ ಸಂಧಿಗಾಗಿ ಬಂದ ಕೃಷ್ಣನನ್ನು ದುರ್ಯೋಧನನು ಆದರಿಸಿದನು; ಸಿಂಹಾಸನದಿಂದ ಮೇಲೆದ್ದು ಅಪ್ಪಿಕೊಂಡು 'ಪೊಡೆವಟ್ಟುಚ್ಚಾಸನಾಸೀನನಾಗಿರವೇಟ್ದಿರ್ಘ್ಯ ವನಿತ್ತನಂತರಮೆ' (೯-೩೧) ತಾನು ಕುಳಿತನು. ಕೃಷ್ಣನು ಸಂಧಿಯ ಮಾತನ್ನಾಡಿ, ದಾಯಿಗರು ಮತ್ತೇನನ್ನೂ ಬೇಡುವುದಿಲ್ಲ; ಅವರಿಗೆ ಐದು ಗ್ರಾಮಗಳನ್ನಾದರೂ ಕೊಡು ಎಂದಾಗ ಸುಯೋಧನನು ಕ್ರೋಧದಿಂದ ಕುದಿದು ಕೃಷ್ಣನನ್ನು ಹೀಯಾಳಿಸಿ ಕೊನೆಗೆ 'ನಾಮೆಲ್ಲಮೊಂದೆಗರುಡಿಯೊಳೋದಿದ ಮಾನಸರೆವೆಮ್ಮಂನಿಮ್ಮಡಿಕೆಮ್ಮನೆಬಳಲಿಸಲ್ವೇಕಬಂದಬಟ್ಟೆಯನೆಬಿಜಯಂಗೆಯ್ಯಿಂ' (೯-೪೮ವ) ಎಂಬ ಕಠಿಣ ಮಾತುಗಳಿಂದ ಛೇಡಿಸುವುದು ದುರ್ಯೋಧನನ ಧೂರ್ತತ್ವವನ್ನು ತೋರಿಸುತ್ತದೆ. ದುರ್ಯೋಧನನ ಈ ಧೂರ್ತತ್ವವನ್ನು ಇಲ್ಲಿಗೆ ಕೊನೆಗೊಳಿಸದ ಪಂಪನು ಈ ಬಗೆಗೆ ಮತ್ತೂ ವಿಷಯ ಮಂಡನೆ ಮಾಡುತ್ತಾನೆ. ದುಯೋಧನನ ಮಾತುಗಳಿಂದ ಕುಪಿತನಾದ ವಿದುರನು 'ಭೀಮಸೇನನು ನಿನ್ನ ತೊಡೆ ಮುರಿಯುವಲ್ಲಿ ನಾನು ಬಿಲ್ಲನ್ನು ಹಿಡಿಯಬೇಕೆಂದಿದ್ದೆನು-ಇದನ್ನು ಈಗಲೇ ಮುರಿಯುತ್ತೇನೆ' (೯-೫೦) ಎಂದು ತನ್ನಲ್ಲಿದ್ದ ಬಿಲ್ಲನ್ನು ಮುರಿದೆಸೆದನು. ಇದರಿಂದ ಸುಯೋಧನನ ಬಲದತೋಳು ಮುರಿದಂತಾಯಿತು. ಅವಮಾನಗೊಂಡ ದುರ್ಯೋಧನನು ಕತ್ತಿಯನ್ನು ಹಿಡಿದು ದೇವಕೀನಂದನನ ಮೇಲೆ ಬಿದ್ದನು. ಹೀಗೆ ಬಿದ್ದುದನ್ನು ಕವಿಯು 'ನಂಜಿನ

ಮೇಲೆವಾಯ್ದನೊಳವಿನುಂತುರುಳ್ತರೆ' ಎಂದು ಸೊಗಸಾಗಿ ಚಿತ್ರಿಸಿ ಕೃಷ್ಣನ ದೈವತ್ವವನ್ನೂ ದುರ್ಯೋಧನನ ಅತಿಕೀಳ್ತನವನ್ನೂ ವಿಶದೀಕರಿಸಿದ್ದಾನೆ.

ಯಾವ ಆಸೆ ಆಮಿಷಕ್ಕೂ ಬಲಿಯಾಗದೆ ಒಡೆಯನಿಗೆ, ಮಿತ್ರನಿಗೆ ಮೀಸಲಾದ ತನ್ನ ತನುಮನಗಳನ್ನು ಕಾಪಾಡಿಕೊಂಡ ಕರ್ಣನ ನನ್ನಿ ಅಪೂರ್ವವಾದ ರೀತಿಯಲ್ಲಿ ಬಿಂಬಿತವಾಗಿದೆ. ಕರ್ಣನೆದುರಿಗೆ ಕೃಷ್ಣನೂ ಕುಂತಿಯೂ ಸಣ್ಣವರಾಗಿ ಕಾಣಿಸುತ್ತಾರೆ. ಇದಾಗುತ್ತಿದ್ದಂತೆಯೇ ಮಹಾಭಾರತ ಯುದ್ಧದ ಪ್ರಸ್ಥಾನಭೇರಿಯು ಮೊಳಗುತ್ತದೆ. ಯುದ್ಧ ಸಿದ್ಧತೆ ಮೊದಲಾಗುತ್ತದೆ. ಸಭೆಯಲ್ಲಿ ಕೃಷ್ಣನ ಬಾಯಲ್ಲೇ ಅರ್ಜುನನನ್ನು ಅತಿಯಾಗಿ ಪ್ರಶಂಸೆ ಮಾಡಿಸಿರುವುದು ಅನುಚಿತವೆನಿಸುತ್ತದೆ.

**ಹತ್ತನೆಯ ಆಶ್ವಾಸ:**

ಕೌರವರ ಯುದ್ಧ ಸಿದ್ಧತೆ. ಭೀಷ್ಮರಿಗೆ ಸೇನಾಧಿಪತ್ಯ ವಹಿಸಿದ್ದು ಕರ್ಣನ ಅಸಮಾಧಾನ-ಭೀಷ್ಮ ಪ್ರತಿಜ್ಞೆ (೧೯-೨೫)-ಸೈನ್ಯ ವರ್ಣನೆ-ಶ್ವೇತನಿಗೆ ಪಾಂಡವ ಸೇನಾಧಿಪತ್ಯ (೩೪)-ಯುದ್ಧ ಪ್ರಾರಂಭ (೩೬)-ಯೋಧರ ವೀರಾಲಾಪಗಳು (೩೯-೫೦)-ಕೌರವ ಬಲದ ವರ್ಣನೆ (೫೪-೫೯)-ಪಾಂಡವ ಬಲದ ವಿನ್ಯಾಸ (೫೯ವ)-ಯುಯುತ್ಸುವನ್ನು ಧರ್ಮಜನು ಕರೆತಂದುದ್ದು- ಯುದ್ಧ(೯೯-೧೧೬)-ಶ್ವೇತನ ಕಾಳಗ-ವಧೆ (೧೧೪-೧೨೩).

ಪಾಂಡವ ಕೌರವರ ಯುದ್ಧ ಆರಂಭವಾದಾಗ ಕುರುಕುಲ ಪಿತಾಮಹರಾದ ಭೀಷ್ಮರಿಗೆ ಸೇನಾ ಪಟ್ಟವಾದಾಗ ಕರ್ಣ ಬೇಸರಗೊಂಡನು. ಅವನು ದುರ್ಯೋಧನನನ್ನು ಕುರಿತು 'ಗುರುಗಳನ್ನು ಕುಲವೃದ್ಧರನ್ನೂ ರಣರಂಗಕ್ಕೆ ಕಳುಹಿಸಿ ನಗೆಗೀಡಾಗುತ್ತೀಯೆ; ವೈರಿಗಳ ನಿಟ್ಟೆಲುವನ್ನು ಮುರಿಯಬೇಕಾದರೆ ನನಗೆ ಪಟ್ಟಗಟ್ಟು' ಎಂಬ ಮಾತುಗಳು ದಾಷ್ಟ್ಯದಿಂದ ಕೂಡಿದಂತೆ ತೋರುತ್ತವೆ. ಭೀಷ್ಮರನ್ನು ಮುಪ್ಪಿನವರೆಂದು ಜರಿದುದನ್ನು ಸಹಿಸದ ದ್ರೋಣಾಚಾರ್ಯರು ಕೋಪಗೊಂಡು 'ಸಿಂಹದ ಮುಪ್ಪೂ ಗಾಂಗೇಯರ ಮುಪ್ಪೂ ಆನೆಗಳಿಗೆ ಚತುರಂಗಬಲಗಳಿಗೆ ದುರ್ಬಲವೆಂದು ತೋರುವುದೆ?' ಎಂದವರೇ 'ನಾಲಗೆ ಕುಲವನ್ನರುಹಿತು' ಎಂಬಂತೆ ನೀನಾಡಿದೆ ಎಂದರು.

ಪಂಪನಿಗೆ ಇದ್ದಂತಹ ರಾಜನೀತಿ ನೈಪುಣ್ಯವನ್ನೂ ಯುದ್ಧರಂಗದ ಪ್ರತ್ಯಕ್ಷ ಅನುಭವವನ್ನೂ ಈ ಆಶ್ವಾಸದ ಎರಡು ಸಂದರ್ಭಗಳಲ್ಲಿ ವಿಮರ್ಶಕರು ಗುರುತಿಸಿದ್ದಾರೆ. ಅವುಗಳೆಂದರೆ: ಕ್ರಮವಾಗಿ ಭೀಷ್ಮರು ಸೇನಾಧಿಪತ್ಯ ವಹಿಸಿದಾಗಿನ ಸಂದರ್ಭ ಮತ್ತು ಪಾಂಡವ ಕೌರವಬಲಗಳೆರಡರಲ್ಲೂ

ಯುದ್ಧಾರಂಭಕ್ಕೆ ಮೊದಲು ಕಂಡು ಬಂದ ಸಿದ್ಧತೆ ಮತ್ತು ವೀರಾಲಾಪಗಳು. ಪಂಪನು ತನ್ನ ಕಾಲದ ಕ್ಷಾತ್ರಧರ್ಮವನ್ನು ವೀರವನ್ನು ಸಮರ್ಥವಾಗಿ ಸ್ವಾಭಾವಿಕವಾಗಿ ಇಲ್ಲಿ ಚಿತ್ರಿಸಿದ್ದಾನೆ.

ಶ್ವೇತವಧಾ ಪ್ರಸಂಗ ಕಿರಿದಾದರೂ ಉಲ್ಕೆಯಂತೆ ಉಜ್ವಲವಾಗಿ ನಿರೂಪಿತವಾಗಿದ್ದು, ಭೀಷ್ಮರ ಉನ್ನತಿಕೆಯನ್ನು ಸಾರುತ್ತದೆ. ವಾಸ್ತವವಾಗಿ ಭೀಷ್ಮರು ಶ್ವೇತನನ್ನು ಕೊಂದಲ್ಲಿಗೆ ಕಥೆ ನಿಂತರೂ ಸೂರ್ಯಾಸ್ತವಾಗಿ ಅರ್ಜುನನು ಬೀಡಿಗೆ ಹಿಂದಿರುಗಿದನೆಂದು ಹೇಳಿ ಆಶ್ವಾಸ ಮುಗಿಯುತ್ತಿರುವಾಗ ಕವಿ ಅನವಶ್ಯಕವಾಗಿ ಅರ್ಜುನನ ಪ್ರಸಕ್ತಿಯನ್ನು ಹೇಳಿರುವುದು ಕಂಡುಬರುತ್ತದೆ.

**ಹನ್ನೊಂದನೆಯ ಆಶ್ವಾಸ:**

ಯುದ್ಧ ಶಿಬಿರ ದೃಶ್ಯಗಳು (೨-೪)-ಯುದ್ಧಾರಂಭ (೬)-ಭೀಮ-ಭೀಷ್ಮ (೧೦)-ಭೀಷ್ಮರನ್ನು ಕೃಷ್ಣನು ಹೊಡೆದದ್ದು (೨೧)-ಭೀಷ್ಮರ ಸಲಹೆ (೨೭-೩೨)-ಭೀಷ್ಮಶರಶಯನ (೪೪-೪೭)-ದ್ರೋಣಸೇನಾಧಿಪತ್ಯ ಸ್ವೀಕಾರ (೫೪)_ಶಂಖವಧೆ (೫೯)-ಚಕ್ರವ್ಯೂಹ ಭೇದನ (೮೬-೯೨)-ಅಭಿಮನ್ಯುವಿನ ಕಾಳಗ-ವಧೆ (೯೩-೧೦೫)-ಅರ್ಜುನನ ಕೋಪ-ಪ್ರತಿಜ್ಞೆ (೧೧೮-೧೨೨). ಕೃಷ್ಣನು ರಾತ್ರಿ ಅರ್ಜುನನಿಗೆ ಶಿವನಿಂದ ಪಾಶುಪತ ಮುಷ್ಟಿಕೊಡಿದಿದ್ದು (೧೩೦)-ಅರ್ಜುನನ ಯುದ್ಧ-ಭೂರಿಶ್ರವವಧೆ (೧೪೧)-ಕರ್ಣ-ಭೀಮ (೧೪೩-೧೪೪)-ಸೈಂಧವವಧೆ (೧೫೪).

ಎರಡು ಕಡೆಯವರೂ ಯುದ್ಧಕ್ಕೆ ಸಿದ್ಧರಾಗಿ ನಿಂತು ಸುಯೋಧನನು ಭೀಷ್ಮರಿಗೆ ಪಟ್ಟಗಟ್ಟಿದನು. ಭೀಷ್ಮರು 'ಪಿಡಿಯೆಂಚಕ್ರಮನೆಂಬಚಕ್ರಿಯನಿಳಾಚಕ್ರಂಭಯಂಗೊಳ್ವಿನಂಪಿಡಿಯಿಪ್ಪೆಂಕರಚಕ್ರಮಂ' ಎಂಬ ವೀರಾವೇಶದ ನುಡಿಗಳಿಂದ ಹೊರಟವರು ಅಂತೆಯೇ ಪಾಂಡವಪಡೆಯ ವೀರಾಧಿವೀರರನ್ನು ಯಮಲೋಕಕ್ಕಟ್ಟಿದ್ದರು. ಪಾಂಡವ ಸೈನ್ಯದವರಿಂದಲೂ ಭೀಷ್ಮರನ್ನು ಸೋಲಿಸುವುದು ಅಸಾಧ್ಯವೆಂದು ಮನದಟ್ಟಾದಾಗ ಧರ್ಮಸುತನು ಕೃಷ್ಣನಲ್ಲಿಗೆ ಬಂದು ಇದಕ್ಕುಪಾಯವೇನೆಂದು ಕೇಳಿದನು. ಅದಕ್ಕೆ ಕೃಷ್ಣನು 'ಭೇದದೊಳಲ್ಲದೆಗೆಲಲರಿದಾದಂಸಿಂಧುಸುತನನ್' (೧೧-೨೭) ಎಂದವನೇ ಭೇದೋಪಾಯವನ್ನು ಹೇಳಿಕೊಟ್ಟನು. ಅದರಂತೆ ರಾತ್ರಿ ಬೀಡು ಬಿಟ್ಟಿರುವಾಗ ಧರ್ಮಜನು ಭೀಷ್ಮರಲ್ಲಿಗೆ ಬಂದು ತಮಗೆ ಸಹಾಯ ಮಾಡಬೇಕೆಂದು ಕೇಳಿಕೊಳ್ಳುವುದು, ಅದಕ್ಕೆ ಗಂಗಾಸುತನು 'ಕರುಣಾರಸಹೃದಯನಾಗಿಮಮ್ಮನಮೊಗಮಂಕೂರ್ಮೆಯಿಂನೋಡಿಕಣ್ಣನೀರಂನೆಗಪಿ' (೧೧-೩೨ವ), 'ಶಿಖಂಡಿತೊಟ್ಟಗೆಕೊಳೆಬಂದುಮುಂದೆನಿಲೆಸಾವೆನಗಪ್ಪುದು' (೧೧-೩೨) ಎಂದು ಉಪಾಯವನ್ನು

ಸೂಚಿಸುವುದು ತನ್ನನ್ನು ನಚ್ಚಿಕೊಂಡಿದ್ದ ದುರ್ಯೋಧನನಿಗೆ ದ್ರೋಹ ಬಗೆದಂತಾಗುವುದಿಲ್ಲವೆ? ಎಂದು ಯೋಚಿಸಬೇಕಾಗುತ್ತದೆ.

**ಹನ್ನೆರಡನೆಯ ಆಶ್ವಾಸ:**

ದ್ರೋಣರು ನಡೆಸಿದ ರಾತ್ರಿ ಕಾಳಗ (೪)-ಘಟೋತ್ಕಚವಧೆ (೧೪)-ದ್ರೋಣ-ದ್ರುಪದ (೧೯)-ದ್ರುಪದನ ವಧೆ (೨೩)-ದ್ರೋಣರ ಚಿತ್ತಸ್ಥೈರ್ಯಕದಡಿದುದು (೨೬-೨೯)-ಯೋಗದಿಂದ ಜೀವಬಿಟ್ಟದ್ದು, ಧೃಷ್ಟದ್ಯುಮ್ನ, ಅಶ್ವತ್ಥಾಮನ ನಾರಾಯಣಾಸ್ತ್ರವನ್ನು ಕೃಷ್ಣ ಪರಿಹರಿಸಿದ್ದು (೩೨)-ಅಶ್ವತ್ಥಾಮ ಕರ್ಣಸಂವಾದ (೪೦-೪೬) ಕರ್ಣನಿಗೆ ಸೇನಾಧಿಪತ್ಯ (೪೯-೫೨)-ಕರ್ಣನ ವಿನಯ (೫೩ವ-೫೯)-ಭೀಮ-ಅಶ್ವತ್ಥಾಮ (೬೫-೭೭)-ಕ್ಷೇಮಧೂರ್ತಿವಧೆ (೭೮)-ಶಲ್ಯನನ್ನು ಕರ್ಣನಿಗೆ ಸಾರಥಿಯಾಗೆಂದು ಬೇಡಿದ್ದು (೮೯-೯೯)-ಶಲ್ಯಸಾರಥ್ಯಸ್ವೀಕಾರ (೧೦೧)-ಕರ್ಣನ ತ್ಯಾಗ ಗುಣ-ಪ್ರಚಂಡ ಯುದ್ಧ-ಧರ್ಮಜನ ಮೂರ್ಛೆ-ಅರ್ಜುನನ ಅಸಮಾಧಾನ-ವಿನಯ ಪ್ರತಿಜ್ಞೆ (೧೨೧-೧೩೪)-ಕರ್ಣಾರ್ಜುನ ಕಾಳಗ-ದೇವತೆಗಳ ಸಂಭ್ರಮ (೧೩೮-೧೪೪)-ದುಶ್ಯಾಸನವಧೆ, ಪ್ರತಿಜ್ಞಾಪೂರಣ (೧೪೬-೧೬೧)-ವೃಷಸೇನ ವಧೆ (೧೬೮) ಕರ್ಣಾರ್ಜುನರ ವೀರಾಲಾಪಗಳು (೧೭೩-೧೮೨)-ಕರ್ಣಾರ್ಜುನ ಕಾಳಗ, ಸರ್ಪಾಸ್ತ್ರ ಪ್ರಸಂಗ (೧೯೧-೨೦೫)-ಶಲ್ಯನ ಅಸಮಾಧಾನ-ಭೂಮಿಯು ಕರ್ಣನ ರಥಚಕ್ರವನ್ನು ನುಂಗಿದ್ದು (೨೦೬)-ಕರ್ಣವಧೆ (೨೧೩)-ಕರ್ಣ ಪ್ರಶಂಸೆ (೨೧೪-೨೧೭).

ಇಲ್ಲಿ ಕವಿ ದ್ರೋಣ, ಅಶ್ವತ್ಥಾಮ, ಭೀಮ, ವೃಷಸೇನ ಮೊದಲಾದ ಹಲವರ ಪೌರುಷ ಪರಾಕ್ರಮಗಳು ಉಜ್ವಲವಾಗಿ ನಿರೂಪಿತವಾಗಿದ್ದರೂ ಕೊನೆಗೆ ನಮ್ಮ ಮನಸ್ಸು ಆಕರ್ಷಿಸುವುದು ಕರ್ಣನ ಅಸದಳವಾದ ಪರಾಕ್ರಮದ ಮೇಲೆ ಎನ್ನಬಹುದು. ದುಶ್ಯಾಸನನನ್ನು ಕೊಂದು ಭೀಮನು ಪ್ರತಿಜ್ಞಾ ಪೂರಣ ಮಾಡಿದ್ದೂ ಅಷ್ಟೇ ಶಕ್ತಿಯುತವಾಗಿದೆ. ಪಂಪ ಇಲ್ಲಿ ಕರ್ಣನ ಪರಾಕ್ರಮಕ್ಕೆ ಪ್ರಧಾನ ಒತ್ತು ನೀಡಿರುವುದನ್ನು ಕಾಣಬಹುದು.

ವೀರಾಧೀವೀರನಾದ ಕರ್ಣನಿಗೆ ದೈವಬಲವಿಲ್ಲದೆ ತನ್ನೊಡಲನ್ನು ಪಾಂಡವರ ಪಾಳಯಕ್ಕೆ ಬಲಿಕೊಡಬೇಕಾಯಿತು. ಮೊದಲಿಗೆ ಕರ್ಣನ ಸಹಜ ಕವಚ ಕುಂಡಲಗಳನ್ನು ಅಪಹರಿಸಿದುದು, ಕುಂತಿಗೆ ತೊಟ್ಟ ಬಾಣವನ್ನು ತೊಡುವುದಿಲ್ಲವೆಂಬ ಭಾಷೆಯನ್ನಿತ್ತುದು ಈ ಎಲ್ಲವೂ ಕರ್ಣನಿಗೆಸಗಿದ ಮೋಸದ ಬಲೆಯಾಗಿದೆ. ಅರ್ಜುನನ ಬಾಣಗತಿಯು ತೀವ್ರಗೊಂಡಾಗ ಸಾರಥಿಯಾಗಿದ್ದ ಮದ್ರೇಶನು

'ಈಯಂಬುಗಳೊಳೇಂತೀರ್ದಪುದುದಿವ್ಯಾಸ್ತ್ರಂಗಳಿಂದೆಚ್ಚುಪಗೆಯಂಸಾಧ್ಯಂಮೂಡೆಂಬುದುಂ' (೧೨-೧೬೦ವ) ಕರ್ಣನು ತನ್ನ ತಾಯಿಗೆ ಕೊಟ್ಟ ಮಾತನ್ನು ಮೀರದಾದನು. ಏನೇ ಆದರೂ ಅರ್ಜುನನನ್ನು ಕೊಂದಲ್ಲಿ ಧರ್ಮಪುತ್ರನೂ ಅಳಿಯುತ್ತಾನೆ. ತಾಯಿ ಕುಂತಿಯು ಮೊದಲಿಗೆ ಬಂದು ನನ್ನಲ್ಲಿ ಪ್ರಾರ್ಥಿಸಿ ಹೋಗಿದ್ದಾಳೆ. ತಾಯಿಗೆ ಕೊಟ್ಟ ಮಾತನ್ನು ಹೇಗೆ ಮೀರಲಿ ಎಂಬ ಸಂದಿಗ್ಧತೆಗೆ ಸಿಲುಕಿದನು. ತೊಟ್ಟ ದಿವ್ಯಾಸ್ತ್ರವೊಂದು ಕಿರೀಟಿಯ ಮಕುಟುವನ್ನುರುಳಿಸಿತು. ಅದು ಬಂದು ಮತ್ತೊಮ್ಮೆ ಪ್ರಯೋಗಿಸುವಂತೆ ಕರ್ಣನನ್ನು ಕೇಳಿಕೊಂಡರೂ ತೊಡದಾದನು. ಇದನ್ನೆಲ್ಲಾ ಗಮನಿಸಿದ ಶಲ್ಯರಾಜನು 'ಕಿನಿಸಿ ಮನಸಿನೊಳೆಕಣಾಣದಿಂತಪ್ಪೇಕಗ್ರಾಹಿಗಮೊರಂಟಂಗಂರಥಮನೆಸಗನೆಂದುವರೂಥದಿಂದಿಳಿದುಪೋದಂ' (೧೨-೨೦೫ವ).

ಅನಂತರ ಕರ್ಣನು ತಾನೇ ರಥವನ್ನು ನಡೆಯಿಸಿಕೊಂಡು ಮುನ್ನುಗ್ಗುವಲ್ಲಿ ರಥದ ಚಕ್ರವು ಭೂಮಿಯಲ್ಲಿ ಹೂತುಹೋಯಿತು. ಕರ್ಣನು ರಥದಿಂದಿಳಿದು ಗಾಲಿಯನೆತ್ತುತ್ತಿರುವಲ್ಲಿ ಇವನನ್ನು ಈ ಸಮಯದಲ್ಲಿಯೇ ಕಡಿದೊಟ್ಟದಿದ್ದರೆ ಈತನನ್ನು ಗೆಲ್ಲಲಾರೆ ಎಂದು ಕೃಷ್ಣನು ಅರ್ಜುನನಿಗೆ ಹೇಳಿದನು. ಇದನ್ನು ಕೇಳಿದ ಜಗದೇಕಮಲ್ಲನು 'ಬಜಿಯುಂ ತಾನಿಲ್ಲದೆಂತೀಗಳಾನಿಜಿವೆಂ' (೧೨-೨೦೭) ಎಂದು ಮೊದಲಾಗಿ ಉದ್ಗಾರವೆತ್ತುತ್ತಾನೆ. ಆದರೂ ದೈವಬಲವಿಲ್ಲದ ಕರ್ಣನ ಶಿರ ಅರ್ಜುನನಿಂದ ನೆಲದಲ್ಲುರುಳುತ್ತದೆ.

ಈ ಸಂದರ್ಭದಲ್ಲಿ ಇನಸುತನ ಉದಾತ್ತಗುಣಗಳಿಂದ ಪ್ರಮತ್ತನಾಗಿದ್ದ ಪಂಪನ ಮಾನವತಾ ವಿಚಾರ ಸಹೃದಯರ ಕರುಣೆಯ ಪ್ರತೀಕವಾಗಿ ಕಂಗೊಳಿಸುತ್ತದೆ; ಕಥಾಲಾಪಕರ ಕಣ್ತೋಯುವಂತೆ ಮಾಡುತ್ತದೆ. 'ಚಾಗದ ನನ್ನಿಯ ಕಲಿತನದ ಆಗರ'ನಾದ ಕರ್ಣನ ಬಗೆಗೆ ಕೊನೆಗೂ ಪಂಪನಾಡುವ 'ನೆನೆಯದಿರಣ್ಣ ಭಾರತದೊಳಿಂ ಪೆಜಿರಾರುಮನ್... ಕರ್ಣರಸಾಯನಮಲ್ತೆ ಭಾರತಂ' (೧೨-೨೧೭) ಎಂಬ ಮಾತುಗಳು ತನ್ನ ಆಶ್ರಯದಾತ ಅರಿಕೇಸರಿಯನ್ನೂ ಕಾವ್ಯಪ್ರಭು ಅರ್ಜುನನನ್ನೂ ಮರೆಯುವಂತೆ ಮಾಡುತ್ತವೆ; ಸುತಶೋಕದ ಪೊಂಪುಱಿಯೊಳ್ ಮೆಯ್ಯಜಿಯದೆ ನೀರಿಟಿವಂತೆ ವೊಲಿಟಿದನಪರ ಜಳಧಿಗೆ ದಿನಪಂ' (೧೨-೨೨೦). ಇದನ್ನರಿತ ದುರ್ಯೋಧನನು ಮೂರ್ಛೆವೋಗಿ ಕನಕರಥದಲ್ಲಿಯೇ ಮೆಯ್ಯನೀಡಾಡುತ್ತಾನೆ. ಇಲ್ಲಿ ಕೌರವನ ನೆಚ್ಚಿನ ಕೆಚ್ಚಿನ ಇನಸುತನ ವೀರಮರಣವಾಗುತ್ತದೆ; ಉದಾತ್ತ ಗುಣಗಳಿಂದ ಕೂಡಿದ್ದರೂ ಎಣೆಯಿಲ್ಲದ ಶೌರ್ಯದಿಂದ ಪ್ರಜ್ವಲಿಸಿದರೂ ದೈವಬಲವಿಲ್ಲದೆ ವಿಧಿವಶನಾದ ಕರ್ಣನ ತ್ಯಾಗ ಬಲಿದಾನಗಳು ಸಹೃದಯರ ಹೃದಯ ಸಂವೇದನೀಯವಾಗಿವೆ.

**ಹದಿಮೂರನೆಯ ಆಶ್ವಾಸ:**

ದುರ್ಯೋಧನನ ಶೋಕ (೩-೧೯), ಶಲ್ಯಸೇನಾಧಿಪತ್ಯ (೩೦)-ಧರ್ಮರಾಜ ಶಲ್ಯರ ಕಾಳಗ, ಶಲ್ಯನನ್ನು ಧರ್ಮಜನು ತನ್ನ ದೃಷ್ಟಿಯಿಂದ ಬೂದಿಮಾಡಿದ್ದು (೪೮)-ದುರ್ಯೋಧನನು ರಣರಂಗದಲ್ಲಿ ಸಂಚರಿಸಿದ್ದು (೫೧)-ಮರುಳುಗಳ ಪ್ರಸಂಗ (೫೪-೫೫)-ದುರ್ಯೋಧನ ಪ್ರಲಾಪ (೫೬-೬೧), ಭೀಷ್ಮರ ಸಲಹೆ (೬೪-೭೦)-ವೈಶಂಪಾಯನ ಸರೋವರದಲ್ಲಿ ಅಡಗಿದ್ದು (೭೨-೭೪)-ಭೀಮನ ಮೂದಲೆ (೭೭-೮೦)-ಗದಾಯುದ್ಧ (೯೩-೯೫)-ಊರುಭಂಗ (೯೬)-ಮುಕುಟಭಂಗ-(೯೮)-ಅಶ್ವತ್ಥಾಮನು ಲಕ್ಷ್ಮಿಯನ್ನು ಸೆಳೆದು ತಂದದ್ದು (೯೯-೧೦೩)-ಅಶ್ವತ್ಥಾಮನಿಂದ ಉಪಪಾಂಡವರ ವಧೆ (೧೦೩)-ದುರ್ಯೋಧನ ಮರಣ (೧೦೭ವ).

ಈ ಆಶ್ವಾಸದಲ್ಲಿ ದುರ್ಯೋಧನ ಮತ್ತು ಕರ್ಣರ ಗಾಢ ಸ್ನೇಹವನ್ನು ಅನಾವರಣಗೊಳಿಸಲಾಗಿದೆ. ಅಮರಸಿಂಧೂದ್ಭವನಾದ ಭೀಷ್ಮ ಶಸ್ತ್ರಾಸ್ತ್ರ ವಿದ್ಯೆಯಲ್ಲಿ ಪರಿಣತನಾಗಿದ್ದ ದ್ರೋಣ, ಕಲಿತನದಲ್ಲಿ ಎಣೆಯಿಲ್ಲದವನಾಗಿದ್ದ ಕರ್ಣ- ಈ ಮೂವರೂ ನಚ್ಚಿನ ನಾಯಕರು ದುರ್ಯೋಧನನ ಭಾಗಕ್ಕೆ ಇಲ್ಲವಾದ ಮೇಲೆ ಆತನ ಮನಕ್ಷೋಭೆಯನ್ನು ಯಾರಾದರೂ ಅರ್ಥ ಮಾಡಿಕೊಳ್ಳಬಹುದು.

ಗೆಳೆಯನ ಮರಣದ ವೃತ್ತಾಂತದಿಂದ ಮೂರ್ಛೆಯಿಂದೆಚ್ಚೆತ್ತ ದುರ್ಯೋಧನನು ಕರ್ಣನನ್ನು ನೆನೆನೆನೆದು ದುಃಖಿಸುವ ಸನ್ನಿವೇಶ ಹೃದಯ ಸ್ಪರ್ಶಿಯಾಗಿದೆ; ಕೆಳೆತನದ ಪರಾಕಾಷ್ಠತೆಯ ಕುರುಹಾಗಿ ತೋರುತ್ತದೆ. ಆತನು ಕರ್ಣನನ್ನು ಕುರಿತು ಆಡುವ ಮಾತುಗಳನ್ನು ಪಂಪನು ೧೩-೩ರಿಂದ ೧೩-೮ರ ಪದ್ಯದವರೆಗೂ ಪ್ರತಿಭಾಪೂರ್ಣವಾಗಿ ದಾಖಲಿಸಿರುವುದುಂಟು. 'ಒಡಲೆರಡೂ ಒಂದೆಜೀವಂ ಇವರ್ಗೆಂಬುದನ್ ಲೋಕಂ ಈಗಳ್ ಆ ನುಡಿ ಪುಸಿಯಾಯ್ತು' (೧೩-೪) ಮುಂತಾದ ನುಡಿಗಳನ್ನು ನುಡಿದು ಗೋಳಾಡುತ್ತಾ: 'ಸಮಸ್ತ ರಾಜ್ಯವನ್ನೂ ನಿನಗಿತ್ತು, ನೀನು ಕೊಟ್ಟುದನ್ನೇ ಪ್ರಸಾದವೆಂದು ಅಂಗೀಕರಿಸಿ ಬದುಕುವ ಆಸೆಯಿತ್ತು. ಆದರೆ ನಾನು ಭೀಮಸೇನನೊಡನೆ ಹೊಂದಿದ್ದ ಕೋಪವೇ ಮೂಲವಾಗಿ ಹೊತ್ತಿಸಿದ ಕಾಳಗವೇ ನಿನಗೆ ಧೂಮಕೇತುವಾಯಿತು' ಎಂದು ಹೇಳುವಲ್ಲಿ ದುರ್ಯೋಧನನ ಉದಾತ್ತತೆಯನನ್ನು ಕಾಣಬಹುದು.

ದುರ್ಯೋಧನನ ಪ್ರಾಣ ಪರಿತ್ಯಾಗ, ಅಶ್ವತ್ಥಾಮ ಕೃಪರ ಹಿಮವತ್ಪರ್ವತ ಪಯಣ ಮತ್ತು ಕೃತವರ್ಮನು ದ್ವಾರಾವತಿಗೆ ತೆರಳುವುದರೊಂದಿಗೆ ಹದಿಮೂರನೆಯ ಆಶ್ವಾಸ ಅಂತ್ಯಗೊಳ್ಳುತ್ತದೆ.

**ಹದಿನಾಲ್ಕನೆಯ ಆಶ್ವಾಸ:**

ರಣರಂಗದಲ್ಲಿ ಧೃತರಾಷ್ಟ್ರ ಗಾಂಧಾರಿಯರು ಬಂದದ್ದು-ಸ್ತ್ರೀಯರ ಶೋಕ (೩-೭)-ಸಂಸ್ಕಾರಗಳನ್ನು ಆಚರಿಸಿದ್ದು, ಅರ್ಜುನನಿಗೆ ಪಟ್ಟಕಟ್ಟಬೇಕೆಂದು ಧರ್ಮಜನ ಸಲಹೆ (೧೧)-ಹಸ್ತಿನಾವತಿಗೆ ಪ್ರಯಾಣ (೧೨-೧೬)-ಅರ್ಜುನನ ರಾಜ್ಯಾಭಿಷೇಕ (೧೮-೨೬)-ಮಂಗಳಾಶಾಸನ (೨೭-೩೬)-ಅರಿಕೇಸರಿ ಪ್ರಶಂಸೆ (೩೭ವ)-ಕವಿಕಾವ್ಯ ವಿಚಾರ (೪೦-೬೫).

ರಣರಂಗದಲ್ಲಳಿದ ವೀರಾಧಿವೀರರನ್ನು ನೋಡಿ ನೋಡಿ ದುಃಖಿಸುವುದು; ಅವರನ್ನು ಸಂತೈಸುವುದು; ಮುಂದಣ ಕಾರ್ಯಯೋಜನೆಯನ್ನು ಕೈಗೊಳ್ಳುವುದು; ಅಂತ್ಯದಲ್ಲಿ ಅರ್ಜುನನು ಪಟ್ಟಾಭಿಷಿಕ್ತನಾಗುವುದನ್ನು ಕವಿ ವಿಸ್ತೃತಗೊಳಿಸಿದ್ದಾನೆ.

ಕುಂತಿಯು ಕರ್ಣನ ಕಳೇಬರವನ್ನು ತಳ್ಕೈಸಿಕೊಂಡು ಪಾಂಡವರೈವರನ್ನೂ ಕರೆಸಿ 'ಈತನು ನಿಮ್ಮಣ್ಣ; ಅಣ್ಣನ ಈ ಪರಿಸ್ಥಿತಿಗೆ ನಾನೇ ಕಾರಣಳಾದ ಮಹಾಪಾತಕಿ; ನಿಮ್ಮ ಮೇಲಣ ಮೋಹದಿಂದ ಹೀಗೆ ಮಾಡಬೇಕಾಯಿತು' ಎಂದು ಪರಿತಪಿಸುತ್ತಾಳೆ. ಪಾಂಡವರೂ ದುಃಖಕ್ಕೊಳಗಾಗುತ್ತಾರೆ. ಅವರೆಲ್ಲರೂ ಶೋಕಾಕ್ರಾಂತರಾಗಿರಲು ನಾರಾಯಣನು ಜಗತ್ತಿನ ವ್ಯಾಪಾರವೆಲ್ಲವೂ ಈಶ್ವರೇಚ್ಛೆಯಂತೆ ನಡೆಯುತ್ತದೆ ಎಂದು ಅವರನ್ನು ಸಂತೈಸುತ್ತಾನೆ. ಎಲ್ಲರ ಕಳೇಬರಗಳನ್ನು 'ಮಹಾಬ್ರಾಹ್ಮಣರಿಂದಂಮಂತ್ರವಿಧಿಯಿಂದಿರಿಸಿ ಹರಿಚಂದನ ಕರ್ಪೂರ ಕಾಳಾಗುರುಕಾಷ್ಠಗಳಿಂದಂ ಯಥೋಕ್ತ ವಿಧಿಯಿಂ ಸಂಸ್ಕರಿಸಿ' (೧೪-೧೦ವ) ಮೊದಲಾದ ಸಾಮಾಜಿಕ ಸಂಸ್ಕಾರವಿಧಿಯನ್ನು ನೆರವೇರಿಸಲಾಗುತ್ತದೆ.

ಧೃತರಾಷ್ಟ್ರ ಗಾಂಧಾರಿಯರು ಮುನಿಜನವನ್ನು ಸೇರಿದರೆ ಕೊಂತಿಯು ತಪಶ್ಚರಣೆಯಾದಳು. ಇತ್ತ ಪಾಂಡವರು ಶುಭಮುಹೂರ್ತದಲ್ಲಿ ಅರಿಕೇಸರಿಯನ್ನು (ಅರ್ಜುನನನ್ನು) ಮುಂದಿಟ್ಟು ಹಸ್ತಿನಾಪುರ ಪ್ರವೇಶ ಮಾಡಿದರು. ಧರ್ಮಪುತ್ರ ದೇವಕೀಪುತ್ರ ಮರುತ್ಪುತ್ರರು ಅರ್ಜುನನನ್ನು ಪಟ್ಟಾಭಿಷೇಕಕ್ಕೆ ಒಪ್ಪಿಸಿ, ವಸಿಷ್ಠ ಕಶ್ಯಪ ವ್ಯಾಸಾದಿ ಮುನಿಪತಿಗಳನ್ನು ಕರೆಸಿ ಅತ್ಯಂತ ವೈಭವದಿಂದ ರಾಜ್ಯಾಭಿಷೇಕವನ್ನು ಮಾಡಿದರು. ದೇವದುಂದುಭಿಗಳು ಮೊಳಗಿದವು.

ಜಗದೇಕಮಲ್ಲನಾದ ಅರ್ಜುನನ ಪಟ್ಟಬಂಧನ ಮಹೋತ್ಸವವಾಯಿತು. ಮುಕುಂದನು ದ್ವಾರಾವತಿಗೆ ಬೀಳ್ಕೊಂಡನು. 'ತನ್ನವಿಕ್ರಮಮೆತನ್ನನೆಗೆಲ್ಲಿಯೆತನ್ನಮಾತೆತಾನೆಸೆವಜಗತ್ತ್ರಯಕ್ಕೆನಿಸಿಪಾಲಿಸಿದಂನೆಲನಂ ಗುಣಾರ್ಣವಂ' (೧೪-೩೯).

ಪಂಪ ತನ್ನೆರಡು ಮಹಾಕಾವ್ಯಗಳ ಬಗೆಗೆ 'ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ' (೧೪-೬೦) ಎಂದು 'ಆದಿಪುರಾಣದಲ್ಲಿ ಜಿನಾಗಮವನ್ನೂ ಇಲ್ಲಿ ಸಮಸ್ತ ಭಾರತವನ್ನೂ ಹೇಳಿದ್ದೇನೆ; ನಾನು ಪ್ರತಿಜ್ಞೆ ಮಾಡಿದಂತೆ ಒಂದನ್ನು ಆರು ತಿಂಗಳಲ್ಲಿ ಮತ್ತೊಂದನ್ನು ಮೂರು ತಿಂಗಳಲ್ಲಿ ಸಮಾಪ್ತಿ ಮಾಡಿರುವೆನು' ಎಂದಿದ್ದಾನೆ.

ಪಂಪ ಇಲ್ಲಿ ಬಹುಮುಖ್ಯವಾದ ವ್ಯತ್ಯಾಸವೊಂದನ್ನು ಮಾಡಿದ್ದಾನೆ. ಯುದ್ಧವೆಲ್ಲ ಮುಗಿದ ಮೇಲೆ ಧರ್ಮರಾಜನು 'ನನಗೆ ಪ್ರಾಯದ ಪೆಂಪು ಒಂದೇ, ಆದರೆ ಪರಾಕ್ರಮ ತ್ಯಾಗ ಮುಂತಾದ ಹಲವು ಪೆಂಪುಗಳಿಗೆ ಆಗರನಾದ ಅರ್ಜುನನೇ ಪಟ್ಟಕ್ಕೆ ಸರಿಯಾದವನು. ಅವನಿಗೇ ರಾಜ್ಯಾಭಿಷೇಕ ಮಾಡೋಣ' ಎಂದು ಹೇಳುತ್ತಾನೆ. ಹಾಗಾಗಿ ಕಾವ್ಯ ನಾಯಕನಿಗೆ ರಾಜ್ಯಾಭಿಷೇಕವಾಗುತ್ತದೆ. ಆದರೆ ದ್ರೌಪದಿಗೆ ಬದಲಾಗಿ ಸುಭದ್ರೆಗೆ ಪಟ್ಟಮಹಿಷಿಯ ಸ್ಥಾನ ಸಿಕ್ಕುತ್ತದೆ. ತಾನು ಮೊದಲು ಘೋಷಿಸಿಕೊಂಡ ಅರ್ಜುನ ಪ್ರಾಮುಖ್ಯವೆಂಬ ಸಂಕಲ್ಪಕ್ಕನುಗುಣವಾಗಿ ಪಂಪ ಮಾಡಿಕೊಂಡ ಮಹತ್ತರ ಮಾರ್ಪಾಟು ಇದಾಗಿದೆ.

ಅರ್ಜುನನ ಪಾತ್ರದ ದೃಷ್ಟಿಯಿಂದ ಇದರಲ್ಲಿ ಪ್ರಧಾನವಾಗಿರುವ ಘಟ್ಟಗಳು ಹನ್ನೊಂದು. ಜನನೋತ್ಸವ ವೈಭವ, ಧನುರ್ವಿದ್ಯಾ ಪ್ರದರ್ಶನದಲ್ಲಿ ಗಳಿಸಿದ ಮೇಲ್ಮೆ, ದ್ರೌಪದೀ ಸ್ವಯಂವರ, ದಿಗಂಗನಾಮುಖಾವಲೋಕನ, ಸುಭದ್ರಾಹರಣ, ವಿವಾಹ, ಖಾಂಡವವನದಹನ, ಇಂದ್ರಕೀಲ, ಗೋಗ್ರಹಣ, ಸೈಂಧವವಧೆ, ಕರ್ಣನೊಂದಿಗೆ ಯುದ್ಧ, ಪಟ್ಟಾಭಿಷೇಕ, ಉದ್ದಕ್ಕೂ ಅರ್ಜುನನ ಪಾಶಸ್ತ್ಯವನ್ನು ಪ್ರಯತ್ನಪೂರ್ವಕವಾಗಿ ಉಳಿಸಿಕೊಂಡೇ ಹೋಗುತ್ತಾನೆ. ಆದರೂ ಉಳಿದ ಪಾತ್ರಗಳನ್ನು ಪಂಪ ಕಡೆಗಣಿಸಿಲ್ಲವೆನ್ನುವುದೇ ಸಮಾಧಾನಕರ ಸಂಗತಿ.

## ರನ್ನನ ಸಾಹಸ ಭೀಮ ವಿಜಯಂ (ಗದಾಯುದ್ಧ)

ಹತ್ತನೆಯ ಶತಮಾನದ ಶ್ರೇಷ್ಠ ಕನ್ನಡ ಕವಿಗಳಲ್ಲಿ ರನ್ನನೂ ಪ್ರಮುಖನಾದವನು. ರನ್ನನ ಕಾಲ ದೇಶ ವರ್ತಮಾನಗಳ ಬಗೆಗೆ ಸಾಕಷ್ಟು ಮಾಹಿತಿಗಳು ಆತನ ಕಾವ್ಯಗಳಿಂದಲೇ ದೊರೆಯುವುದರ ಜೊತೆಗೆ ವಾದವಿವಾದಗಳೂ ಕಂಡುಬಂದಿವೆ. ಎಲ್ಲ ವಿದ್ವಾಂಸರ ಅಭಿಪ್ರಾಯಗಳನ್ನು ಅನುಲಕ್ಷಿಸಿ ರನ್ನನ ಇತಿವೃತ್ತವನ್ನು ಮುಂದಿನಂತೆ ನಿರೂಪಿಸಬಹುದು: ರನ್ನನ ಜೀವಿತದ ಕಾಲಾವಧಿ ಕ್ರಿ.ಶ. ೯೪೯ರಿಂದ ೧೦೨೦ ಇರಬಹುದು. ಈತನ ಜನ್ಮಸ್ಥಳ ಈಗಿನ ಬಾಗಲಕೋಟೆ ಜಿಲ್ಲೆಯ ಮುಧೋಳ. ಇದಕ್ಕೆ ಮುದವೊಳಲು ಎಂಬ ಪ್ರಾಚೀನ ಹೆಸರೂ ಇದೆ. ಇವನ ತಂದೆ ಜಿನವಲ್ಲಭ, ತಾಯಿ ಅಬ್ಬಲಬ್ಬೆ. ಇವರದು ಬಳೆಗಾರಕುಲ. ರನ್ನನ ಸಹೋದರರು ಧೃಡಬಾಹು, ರೇಚಣ, ಮಾರಿಮಯ್ಯ. ಜಕ್ಕಿ ಮತ್ತು ಶಾಂತಿ ಎಂಬ ಇಬ್ಬರು ಹೆಂಡತಿಯರು. ಈತನಿಗೆ ರಾಯ ಎಂಬ ಮಗನೂ ಅತ್ತಿಮಬ್ಬೆ ಎಂಬ ಮಗಳೂ ಇದ್ದರು.

ಈತನ ಗುರು ಅಜಿತಸೇನಾಚಾರ್ಯರು. ತನ್ನ ಹುಟ್ಟೂರನ್ನು ಬಿಟ್ಟು ಗಂಗಮಂಡಲದ ಬಂಕಾಪುರದಲ್ಲಿದ್ದ ಅಜಿತಸೇನಾಚಾರ್ಯರಲ್ಲಿ ವಿದ್ಯೆಯನ್ನು ಕಲಿತ. ರನ್ನನಿಗೆ ಕನ್ನಡ ಸಂಸ್ಕೃತ ಭಾಷೆಗಳೆರಡರಲ್ಲೂ ಅಪಾರವಾದ ಪಾಂಡಿತ್ಯಗಳಿದ್ದಂತೆ ಕಾಣುತ್ತದೆ. ಜೊತೆಗೆ ವ್ಯಾಕರಣ, ಸಂಗೀತ, ಅಲಂಕಾರ, ನಾಟ್ಯಶಾಸ್ತ್ರಗಳಲ್ಲೂ ಪರಿಣತಿಯಿದ್ದಂತೆ ವ್ಯಕ್ತವಾಗುತ್ತದೆ. ಜೈನಧರ್ಮದಲ್ಲಂತೂ ಪರಿಪೂರ್ಣ ಪಾಂಡಿತ್ಯವನ್ನು ಗಳಿಸಿದಂತೆ ಗೋಚರವಾಗುತ್ತದೆ. ರನ್ನನಿಗೆ ಚಾಲುಕ್ಯರಾಜನಾದ ಆಹವಮಲ್ಲ ತೈಲಪನೂ ಈತನ ಮಗ ಇಱುವಬೆಡಂಗ ಸತ್ಯಾಶ್ರಯನೂ ಆಶ್ರಯದಾತರಾಗಿದ್ದರು. ತೈಲಪ ಚಕ್ರವರ್ತಿ ರನ್ನನಿಗೆ 'ಕವಿ ಚಕ್ರವರ್ತಿ' ಎಂಬ ಬಿರುದನ್ನು ಕೊಟ್ಟಿದ್ದಾನೆ:

**ಪಡೆಯೆಡೆಯ ಕಡೆಯ ಬಡವ**
**ಕುಡೆ ಪಡೆದನೊ ಚಕ್ರವರ್ತಿಯೊಳ್ ತೈಲಪನೊಳ್**
**ಪಡೆದಂ ಮಹಿಮೋನ್ನತಿಯಂ**
**ಪಡೆದಂ ಕವಿಚಕ್ರವರ್ತಿವೆಸರಂ ರನ್ನಂ**

(ಸಾ.ಭೀ.ವಿ. ೧–೩೭)

ಅಲ್ಲದೆ ದಾನಚಿಂತಾಮಣಿ ಅತ್ತಿಮಬ್ಬೆಯ ಪ್ರೇರಣೆ ಪ್ರಭಾವಗಳಿಂದ 'ಅಜಿತಪುರಾಣ'ವನ್ನು ರಚಿಸಿದಂತೆಯೂ ಹೇಳಿಕೊಂಡಿದಾನೆ. ರನ್ನನಿಗೆ ಕವಿಮುಖಚಂದ್ರ, ಕವಿಚಕ್ರವರ್ತಿ, ಕವಿರಾಜಶೇಖರ, ಕವಿರಾಜ, ಕವಿಜನಚೂಡಾರತ್ನ, ಕವಿತಿಲಕ, ಕವಿಚತುರ್ಮುಖ ಎಂಬ ಬಿರುದುಗಳಿದ್ದದ್ದೂ ಕಂಡುಬರುತ್ತದೆ.

ರನ್ನನಿಗೆ ತನ್ನ ಬಗ್ಗೆ ಆಪಾರವಾದ ಆತ್ಮ ಪ್ರಶಂಸೆಯಿರುವುದನ್ನು ಕಾಣಬಹುದು:

**ಆರಾತೀಯ ಕವೀಶ್ವರ**
**ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ**
**ಡಾರದ ಮುದ್ರೆಯನೊಡೆದಂ**
**ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ॥**
**(ಸಾ.ಭೀ.ವಿ. ೧-೩೮)**

**ರತ್ನಪರೀಕ್ಷಕನಾಂ ಕೃತಿ**
**ರತ್ನ ಪರೀಕ್ಷಕನೆನೆಂದು ಫಣಿಪತಿಯ ಫಣಾ**
**ರತ್ನಮುಮಂ ರನ್ನನ ಕೃತಿ**
**ರತ್ನಮುಮಂ ಪೇಳ್ ಪರೀಕ್ಷಿಪಂಗೆಂಟೆರ್ದೆಯೇ॥**
**(ಸಾ.ಭೀ.ವಿ. ೧-೪೪)**

ಎಂದು ಪ್ರಶ್ನಿಸಿದ್ದಾನೆ. ಈ ಹೇಳಿಕೆ ಉತ್ಪ್ರೇಕ್ಷೆಯಲ್ಲವೆಂಬುದು ಅವನ ಕೃತಿಗಳ ಪರಿಶೀಲನೆಯಿಂದ ಭಾಸವಾಗುತ್ತದೆ.

ಪಂಪನಂತೆಯೇ ರನ್ನನು ಲೌಕಿಕ ಮತ್ತು ಆಗಮಿಕ ಕಾವ್ಯಗಳನ್ನು ಬರೆದಿದ್ದಾನೆ. ಸಾಹಸಭೀಮವಿಜಯಂ ಅಥವಾ ಗದಾಯುದ್ಧ, ಅಜಿತಪುರಾಣ, ಪರಶುರಾಮಚರಿತ್ರೆ, ಚಕ್ರೇಶ್ವರಚರಿತೆ ಎಂಬುವು ಇವನ ಕೃತಿಗಳು. ಅಲ್ಲದೆ ರನ್ನಕಂದ ಎಂಬ ನಿಘಂಟನ್ನು ರಚಿಸಿದಂತೆ ಪ್ರತೀತಿಯಿದೆ. ಅಜಿತಪುರಾಣದಲ್ಲಿ,

**ಕರಮೆಸೆದುವು ರತ್ನತ್ರಯ**
**ಪರಿಕಲ್ಪದೆ ಪರಶುರಾಮಚರಿತಂ ಚಕ್ರೇ**
**ಶ್ವರಚರಿತಮಜಿತತೀರ್ಥೇ**
**ಶ್ವರಚರಿತಂ ರತ್ನನಿಂದೆ ಭುವನತ್ರಯದೊಳ್**
**(ಅಜಿತಪುರಾಣ: ೧೨-೪೪)**

ಈ ಮೇಲಿನ ಕೃತಿಗಳನ್ನು ಬರೆದಂತೆ ಹೇಳಿಕೊಂಡಿದ್ದಾನೆ. ಇವುಗಳಲ್ಲಿ ಪರಶುರಾಮಚರಿತೆ, ಚಕ್ರೇಶ್ವರ ಚರಿತೆ ಇನ್ನೂ ಉಪಲಬ್ಧವಿಲ್ಲ. 'ರನ್ನಕಂದದ ಹನ್ನೊಂದು ಪದ್ಯಗಳು ಈ ಹಿಂದೆ ಪ್ರಕಟವಾಗಿದ್ದುವು. ಇತ್ತೀಚೆಗೆ ಮತ್ತಷ್ಟು ಪದ್ಯಗಳು ಸಿಕ್ಕಿ ಅಚ್ಚಾಗಿವೆ'[2] ಎಂದು ಎನ್.ಬಸವರಾಧ್ಯ ಅವರು ಉಲ್ಲೇಖಿಸಿದ್ದಾರೆ.

**ಸಾಹಸ ಭೀಮ ವಿಜಯಂ:**

ರನ್ನನ ಕೀರ್ತಿಗೆ ಗೋಪುರವಿಟ್ಟಂತಿರುವುದು ಆತನ ಸಾಹಸಭೀಮ ವಿಜಯಂ ಅಥವಾ ಗದಾಯುದ್ಧ. ಈ ಕೃತಿ ಹತ್ತು ಆಶ್ವಾಸಗಳುಳ್ಳ ಒಂದು ಕಾವ್ಯ. ಇದಕ್ಕೆ ಮೂಲ ಆಕರ ಮಹಾಭಾರತದ ಗದಾಸೌಪ್ತಿಕಪರ್ವಗಳ ಕಥೆ. ಪಂಪನ ವಿಕ್ರಮಾರ್ಜುನವಿಜಯಂದ ಹದಿಮೂರು ಮತ್ತು ಹದಿನ್ನಾಕನೆಯ ಆಶ್ವಾಸಗಳನ್ನು ಆಧಾರವಾಗಿಟ್ಟುಕೊಂಡಿದ್ದಾನೆ. ಜೊತೆಗೆ ಭಟ್ಟನಾರಾಯಣನ 'ವೇಣೀ ಸಂಹಾರ', 'ಭಾಸನ ಊರುಭಂಗಗಳ (ಸಂಸ್ಕೃತ ಕಾವ್ಯ) ಪ್ರಭಾವವನ್ನೂ ಇದರಲ್ಲಿ ಕಾಣಬಹುದಾದರೂ ರನ್ನನು ಮಾತ್ರ ಪಂಪ, ಭಟ್ಟನಾರಾಯಣ, ಭಾಸ ಇವರ ಹೆಸರನ್ನು ಎಲ್ಲಿಯೂ ಸ್ಮರಿಸಿಲ್ಲ.

ಪಂಪನಂತೆಯೇ ಇವನೂ ತನ್ನ ಆಶ್ರಯದಾತನನ್ನು ಕಥಾನಾಯಕನೊಡನೆ ಈ ಕಾವ್ಯದಲ್ಲಿ ಮೇಳೈಸಿ ಹೊಗಳಿದ್ದಾನೆ. 'ಇರಿವಬೆಡಂಗ', 'ಆಕಳಂಕಚರಿತ', 'ಸಾಹಸಭೀಮ' ಮುಂತಾದ ಬಿರುದನ್ನು ಪಡೆದಿದ್ದ ಸತ್ಯಾಶ್ರಯನನ್ನು ತನ್ನ ಕಾವ್ಯದ ನಾಯಕನಾದ ಭೀಮನೊಡನೆ ಹೋಲಿಸಿದ್ದಾನೆ. ಆದ್ದರಿಂದ ಇಲ್ಲಿ ಯುದ್ಧವಾದ ಮೇಲೆ ಪಟ್ಟವಾಗುವುದು ಭೀಮನಿಗೆ. ಈ ಕಾವ್ಯದ ವೈಶಿಷ್ಟ್ಯವೆಂದರೆ ಇಲ್ಲಿನ ರಮಣೀಯ ನಾಟಕೀಯತೆ. ಇಲ್ಲಿ ಗದಾಯುದ್ಧ ಪ್ರಸಂಗವನ್ನು ಕಾವ್ಯವಸ್ತುವನ್ನಾಗಿ ಮಾಡಿಕೊಂಡಿದ್ದರೂ ಹಿಂದಿನ ಭಾರತಕತೆಯನ್ನು ಸಂಗ್ರಹವಾಗಿ 'ಸಿಂಹಾವಲೋಕನಕ್ರಮದಿಂದ' ಹೇಳಿರುವುದಾಗಿ ರನ್ನನೇ ತಿಳಿಸುತ್ತಾನೆ:

**ಒಳಪೊಕ್ಕು ನೋಡೆ ಭಾರತ**
**ದೊಳಗಣ ಕಥೆಯೆಲ್ಲಮೀ ಗದಾಯುದ್ಧದೊಳಂ**
**ತೊಳಕೊಂಡತ್ತೆನೆ ಸಿಂಹಾ**
**ವಲೋಕನಕ್ರಮದಿನಱಿಪಿದಂ ಕವಿರನ್ನಂ**
**(ಸಾ.ಭೀ.ವಿ. ೧–೪೫)**

ರನ್ನನನ್ನು 'ಶಕ್ತಿಕವಿ' ಎಂದು ಕುವೆಂಪು ಅವರು ಕರೆದಿರುವುದು ಸಮಂಜಸವಾದುದು. ಅವನ ಶೈಲಿಯಲ್ಲಿ ಅಂತಹ ಶಕ್ತಿಯಿದೆ. ನಿಸ್ಸಾರನಾದ ವ್ಯಕ್ತಿಯಲ್ಲಿಯೂ ಪೌರುಷವನ್ನು ತುಂಬುವ ಸಾಮರ್ಥ್ಯ ಅವನ ಬರೆವಣಿಗೆಯಲ್ಲಿದೆ.

ಪಂಪನನ್ನು ರನ್ನ ಪಾತ್ರಚಿತ್ರಣದಲ್ಲಿಯೂ ಅನುಸರಿಸಿದ್ದಾನೆ. ಪಂಪನ ಕಾವ್ಯದಲ್ಲಿ ಅರ್ಜುನನು ನಾಯಕನಾದರೂ ಕರ್ಣನ ಪಾತ್ರ ಕವಿಯನ್ನು ಹೇಗೆ ಆಕರ್ಷಿಸಿತೋ ಹಾಗಿಯೇ ತನ್ನ ನಾಯಕ ಭೀಮನಾದರೂ ದುರ್ಯೋಧನನನ್ನು ರನ್ನ 'ಮಹಾನುಭಾವ'ನೆಂದು ಕರೆದಿದ್ದಾನೆ. ಕೇವಲ

ಖಳನಾಯಕನೆಂಬಂತೆ ಈ ಪಾತ್ರವನ್ನು ಚಿತ್ರಿಸದೆ ಅನೇಕ ಉದಾತ್ತ ಗುಣಗಳಿಂದ ಕೂಡಿದ ಪ್ರತಿನಾಯಕನನ್ನು ಇಲ್ಲಿ ಕಡೆದಿದ್ದಾನೆ.

ಮಹಾಭಾರತ ಯುದ್ಧದ ಹದಿನೇಳು ದಿನಗಳಲ್ಲಿ ದುರ್ಯೋಧನನು ಸರ್ವಸ್ವವನ್ನೂ ಕಳೆದುಕೊಂಡು, ಮುಂದೇನು ಮಾಡಬೇಕೆಂಬುದರ ಬಗ್ಗೆ ಸಲಹೆ ಪಡೆಯಲು ಹದಿನೆಂಟನೆಯ ದಿವಸ ಸಂಜಯನ ಹೆಗಲನ್ನು ಹಿಡಿದುಕೊಂಡು ಕುರುಕ್ಷೇತ್ರದ ರಣರಂಗದಲ್ಲಿ ನಡೆಯುತ್ತ ಬರುತ್ತಾನೆ. ಅಲ್ಲಿ ಮುರಿದು ಬಿದ್ದ ಅನೇಕ ಆಯುಧಗಳು ಅವನ ಕಾಲಿಗೆ ಚುಚ್ಚಿ ರಕ್ತವೊಸರುತ್ತದೆ. ಅಖಂಡಾಧಿಪತಿಯಾಗಿದ್ದವನಿಗೆ ಒದಗಿದ ಈ ದುರವಸ್ಥೆಯನ್ನು ಕಂಡು ಸಂಜಯ ಶೋಕಿಸುತ್ತಾನೆ. ಅದನ್ನು ಕಂಡ ದುರ್ಯೋಧನನು ಹೇಳುವ ಮಾತು:

**ತನುಜಾನುಜರ ವಿಯೋಗದ**
**ಮನಃಕ್ಷತ್ರಂ ನೋಯಿಸಲ್ಕೆ ನೆಱೆಯವು, ಸಮರಾ**
**ವನಿಯೊಳುಡಿದಿರ್ದ ಕಯ್ದುಗ**
**ಳನಿಸುಂ ನೋಯಿಕುಮೆ ವಜ್ರಮನನಪ್ಪೆನ್ನಂ**
**(ಸಾ.ಭೀ.ವಿ. ೪-೧೯)**

ತನುಜರನ್ನೂ ಅನುಜರನ್ನೂ ಕಳೆದುಕೊಂಡ ದುಃಖವೇ ವಜ್ರದಂತೆ ಕಠಿಣವಾದ ನನ್ನ ಮನಸ್ಸನ್ನು ನೋಯಿಸಲಿಲ್ಲ ಎಂದ ಮೇಲೆ ಈ ರಣರಂಗದ ಆಯುಧದ ಚೂರುಗಳು ನೋಯಿಸುತ್ತವೆಯೇ? ಎಂಬ ಮಾತುಗಳಿಂದ ಅವನ ದುಃಖ ಅರಿವಾಗದೆ ಇರದು.

ಹಾಗೆಯೇ ದುರ್ಯೋಧನನು ಮುಂದೆ ಬರುವಾಗ ದ್ರೋಣನ ಶವ ಕಾಣಿಸುತ್ತದೆ. ಈ ಸಂದರ್ಭದಲ್ಲಿ ದುಯೋಧನನ ದುಃಖದ ಕಟ್ಟೆಯೊಡೆಯುವ ಪರಿ ಇದು:

**ಇಭಶೈಲಂಗಳನೇಱಿಯೇಱಿ, ರುಧಿರಸ್ರೋತಂಗಳಂ ದಾಂಟಿ ದಾಂ**
**ಟಿಭದೋರ್ನೀಲಲತಾಪ್ರತಾನವಿಪಿನವ್ರಾತಂಗಳೊಳ್ ಸಿಲ್ಕಿ ಸಿ**
**ಲ್ಕಿ ಭರಂಗೆಯ್ದುಱದೆಯ್ದಿ ಸಂಜಯಶಿರಸ್ಕಂಧಾವಲಂಬಂ ಕುರು**
**ಪ್ರಭು ಕಂಡಂ ಶರಜಾಲಜರ್ಜರಿತಗಾತ್ರತ್ರಾಣನಂ ದ್ರೋಣನಂ**
**(ಸಾ.ಭೀ.ವಿ. ೪-೪೮)**

ಸತ್ತು ಬಿದ್ದಿದ್ದ ಆನೆಗಳೆಂಬ ಬೆಟ್ಟಗಳನ್ನೇರುತ್ತ, ರಕ್ತದ ಪ್ರವಾಹವನ್ನು ದಾಟುವ, ಆನೆಗಳ ಸೊಂಡಿಲುಗಳೆಂಬ ಕಪ್ಪುಬಳ್ಳಿಗಳ ಸಮೂಹದಲ್ಲಿ ಕಾಲುತೊಡರಿಸಿಕೊಳ್ಳುತ್ತ ಸಂಜಯನ ಹೆಗಲಿನ

ಮೇಲೆ ಕೈಯೂರಿ ಬರುತ್ತಿದ್ದ ದುರ್ಯೋಧನನು ದ್ರೋಣನ ದೇಹವನ್ನು ಕಂಡು ಅವರ ಸಾವಿಗೂ ನಾನೇ ಕಾರಣನೆಂಬ ಭಾವನೆ ವ್ಯಕ್ತಪಡಿಸುತ್ತಾನೆ.

ಅಲ್ಲಿಂದ ಮುಂದೆ ನಡೆದಾಗ ಕಾಣಿಸಿದ್ದು ಅಭಿಮನ್ಯುವಿನ ಶವ. ಅವನು ತನ್ನ ಶತ್ರು ಬಣಕ್ಕೆ ಸೇರಿದವನಾಗಿದ್ದರೂ ಮಹಾರಥರನ್ನು ಎದುರಿಸಿ ಹೋರಾಡಿದ ರೀತಿಯು ದುರ್ಯೋಧನನನ್ನು ಬಹುವಾಗಿ ಆಕರ್ಷಿಸಿತ್ತು. 'ಗುಣಕ್ಕೆ ಮತ್ಸರಮುಂಟೆ' ಎಂಬಂತೆ ಅವನು ತನ್ನ ಮಗನಂತೆಯೇ ಅಲ್ಲವೇ? ಕಿರಿಯನಾಗಿದ್ದರೂ ಅವನ ಶೌರ್ಯವು ತನ್ನಂತಹವರಿಗೂ ಬರಲಿ ಎಂದು ಹಾರೈಸುವ ಉದಾತ್ತ ವ್ಯಕ್ತಿ:

**ಅಸಮಬಲ ಭವದ್ವಿಕ್ರಮ**
**ಮಸಂಭವಂ ಪೆಱರ್ಗೆ ನಿನ್ನನಾನಿನಿತಂ ಪ್ರಾ**
**ರ್ಥಿಸುವೆನಭಮನ್ಯು ನಿಜಸಾ**
**ಹಸೈಕದೇಶಾನುಮರಣಮೆಮಗಕ್ಕೆ ಗಡಾ**
**(ಸಾ.ಭೀ.ವಿ. ೪-೫೭)**

ಎಂದು ದುಃಖಿಸುವ 'ನೀನು ತೋರಿದ ಶೌರ್ಯವನ್ನು ತೋರಿಸಿ ನಿನ್ನಂತೆ ಸಾಯುವ ಹಾಗೆ ನನಗೂ ಆಗಲಿ' ಎಂದು ಮನದಲ್ಲಿ ಅಂದುಕೊಳ್ಳುತ್ತಾನೆ. ಅನಂತರ ತನ್ನ ಮಗ ಲಕ್ಷ್ಮಣಕುಮಾರನ ಶವವನ್ನು ದರ್ಶಿಸಿ, 'ಪುತ್ರಶೋಕಂ ನಿರಂತರಂ' ಎಂಬಂತೆ ಈ ರೀತಿ ಪ್ರಲಾಪಿಸುತ್ತಾನೆ:

**ಜನಕಂಗೆ ಜಲಾಂಜಲಿಯಂ**
**ತನೂಭವಂ ಕುಡುವುದುಚಿತಮದುಗೆಟ್ಟೀಗಳ್**
**ನಿನಗಾಂ ಕೊಡುವಂತಾದುದೆ**
**ತನೂಜ ನೀಂ ಕ್ರಮವಿಪರ್ಯಯಂ ಮಾಡುವುದೇ**
**(ಸಾ.ಭೀ.ವಿ. ೪-೬೨)**

ಲೋಕರೂಢಿಯಂತೆ ಮಗನು ತಂದೆಗೆ ತರ್ಪಣವನ್ನು ಕೊಡುವುದುಂಟು. ಆದರಿಲ್ಲಿ ಮಗನಿಗೆ ತಂದೆ ಕೊಡುವಂತಾಗಿದೆ. ಈ ರೀತಿ ಕ್ರಮವನ್ನು ವ್ಯತ್ಯಾಸ ಮಾಡುವರೆ? ಎಂದು ತನ್ನಲ್ಲಿ ತಾನು ಅಂದುಕೊಂಡು ಶೋಕಿಸುತ್ತಾನೆ. ಹಾಗಿಯೇ ತನ್ನ ಸಹೋದರರು, ಸೈನಿಕರು ಮಡಿದು ಬಿದ್ದಿರುವುದನ್ನು ನೋಡುತ್ತಾ ಬರುತ್ತಿದ್ದ ದುರ್ಯೋಧನನಿಗೆ ತನ್ನ ಆಪ್ತಮಿತ್ರನಾದ ಕರ್ಣನ ಕಳೇಬರವನ್ನು ಕಂಡಾಗಂತೂ ದುಃಖ ಕಡಲಂತೆ ಉಕ್ಕಿಬರುತ್ತದೆ. ನಾನಾ ಬಗೆಯಾಗಿ ಅವನು ತನ್ನ ಗೆಳೆತನವನ್ನು ನೆನೆನೆನೆದು ಗೋಳಾಡುತ್ತಾನೆ:

**ನೀನುಳ್ಳೊಡುಂಟು ರಾಜ್ಯಂ**
**ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟಯ್**
**ನೀನುಳ್ಳೊಡುಂಟು ಪೀಟೆಗೆ**
**ನೀನಿಲ್ಲದಿವೆಲ್ಲಮೊಳವೆ ಅಂಗಾಧಿಪತೀ**

(ಸಾ.ಭೀ.ವಿ. ೫-೨೦)

ನೀನಿದ್ದರೆ ನನಗೆ ರಾಜ್ಯವುಂಟು, ಪಟ್ಟವುಂಟು, ಬೆಳ್ಗೊಡೆಯುಂಟು, ಸಿಂಹಾಸನವುಂಟು. ನೀನು ಹೋದ ಮೇಲೆ ಇವು ಇದ್ದರೂ ಇಲ್ಲದಂತೆಯೇ ಸರಿ ಎಂಬ ಈ ಮಾತುಗಳು ಕರ್ಣ-ದುರ್ಯೋಧನನ ಆಪ್ತಸ್ನೇಹಕ್ಕೆ ನಿದರ್ಶನವಾಗಿದೆ.

ಹೀಗೆ ದುರ್ಯೋಧನನ ಪ್ರೀತಿ ವಾತ್ಸಲ್ಯ-ವಿನಯ ಸಜ್ಜನಿಕೆಗಳೆಲ್ಲ ಗೋಚರವಾಗುತ್ತವೆ. ಅವನು ಹಿಂದೆ ಎಷ್ಟೆಲ್ಲ ವೈಭವಗಳಿಂದ ಕೂಡಿದ್ದವನಾದರೂ ಅನಾಥನಂತೆ ಒಂಟಿತನದಿಂದ ಬೇಯುತ್ತ ಗೋಳಾಡುವ ರೀತಿ ಸಹೃದಯರಲ್ಲಿ ಸಹಾನುಭೂತಿಯನ್ನು ಉಂಟುಮಾಡುತ್ತದೆ. ದುರ್ಯೋಧನನ ವಿಲಾಪದ ಈ ಭಾಗ ಕನ್ನಡ ಸಾಹಿತ್ಯದಲ್ಲಿಯೇ ಅತ್ಯುಂತ ಸುಂದರವಾದ ಶೋಕಗೀತೆಯಾಗಿದೆ.

ಗದಾಯುದ್ಧ ಪ್ರಸಂಗದಲ್ಲಿಯೂ ದುರ್ಯೋಧನನ ಹಿರಿಮೆ ಗರಿಮೆಗಳನ್ನು ರನ್ನ ಸೂಕ್ಷ್ಮವಾಗಿ ಚಿತ್ರಿಸಿದ್ದಾನೆ. ಗದಾಯುದ್ಧದ ಸನ್ನಿವೇಶದಲ್ಲಿ ಭೀಮನ ರಾಜಸಗುಣವೂ ಸುಂದರವಾಗಿ ಬಿಂಬಿತವಾಗಿದೆ. ವೈಶಂಪಾಯನ ಸರೋವರದಲ್ಲಿ ಅಡಗಿದ್ದ ದುರ್ಯೋಧನನು ಕಾಲವಂಚನೆ ಮಾಡುತ್ತಿರುತ್ತಾನೆ. ಅವನೆಲ್ಲಿರುವನೆಂದು ತಿಳಿಯದ ಭೀಮನು ಅವನನ್ನು ಹುಡುಕುತ್ತ ಬರುತ್ತಾನೆ. ದುರ್ಯೋಧನನನ್ನು ತನ್ನ ಕೋಪಾಗ್ನಿಗೆ ಆಹುತಿ ಮಾಡುವೆನೆಂದು ಪಂಚಭೂತಗಳ ಸಾಕ್ಷಿಯಾಗಿ ಪ್ರತಿಜ್ಞೆ ಮಾಡಿ, ತನ್ನ ಅಣ್ಣನಾದ ಧರ್ಮರಾಯನು ಇದಕ್ಕೆ ಅಡ್ಡಿ ಬರಬಹುದೆಂದು ಅವನಿಗೆ ನಮಸ್ಕಾರ ಮಾಡಿ ಅವನಿಂದ ಅನುಮತಿ ಪಡೆದು ಬರುತ್ತಾನೆ.

ತನ್ನ ವೈರಿಯಾದ ದುರ್ಯೋಧನನನ್ನು ಕುರಿತು ಕೆರಳಿ ನುಡಿಯುತ್ತಾನೆ:

**ಭವದನುಜನರುಣಜಲಮಂ**
**ಸವಿನೋಡಿದೆ ನಾನೆ ನಿನ್ನ ಬಲಜಲನಿಧಿಯಂ**
**ಸವಿನೋಡಿದೆನೀ ಕೊಳನಂ**
**ತವೆ ಪೀರ್ದು ಬಟಿಕ್ಕೆ ನಿನ್ನ ಸವಿಯಂ ನೋೞ್ಪೆಂ**

(ಸಾ.ಭೀ.ವಿ. ೭-೧೧)

ನಿನ್ನ ತಮ್ಮ ದುಶ್ಯಾಸನನ ರಕ್ತದ ರುಚಿನೋಡಿದೆ, ನಿನ್ನ ಸೈನ್ಯ ಎಂಬ ಸಮುದ್ರದ ರುಚಿನೋಡಿದೆ. ಈಗ ನೀನು ಕೊಳದಿಂದ ಹೊರಗೆ ಬಾರದಿದ್ದರೆ ಮೊದಲು ಕೊಳದ ನೀರನ್ನೆಲ್ಲ ಕುಡಿದು ಬಳಿಕ ನಿನ್ನನ್ನು ಮುಗಿಸುತ್ತೇನೆಂದು ಅಬ್ಬರಿಸುತ್ತಾನೆ. ಇವನ ಬಿರುಸು ನುಡಿಗಳು ಅವನಿಗೆ ತಾಕಿಲ್ಲದ್ದರಿಂದ ಇನ್ನೂ ಕಟುನುಡಿಗಳನ್ನು ನುಡಿಯುತ್ತಾನೆ.

**ಜಳದೊಳ್ ಮೀನಿರ್ಪವೊಲ್ ನೀಂ ಕೊಳದೊಳ್ ಮುಳುಗಿರ್ದಕ್ಕಟಾ ಕೋಡ ಸೇಡಿಂ**
**ಗೊಳಗಾದಯ್ ನಿನ್ನ ದುರ್ಯೋಧನವೆಸರ್ಗಿದು ಲಜ್ಜಾಕರಂ ತೋಜಿದಯ್ ನಿ**
**ನ್ನಳವಂ ಚಿಃ ಸತ್ತರೇಂ ಪುಟ್ಟರೆ ಪೊಱಮಡು ನೀಂ ಕಯ್ದುಗೊಳ್ ಕೌರವೇಂದ್ರಾ**
**ಚಳವಜ್ರಂ ಬಂದನೀಗಳ್ ಕುರುಕುಲಮಥನೋದ್ಭೀಕರಂ ಭೀಮಸೇನಂ**

(ಸಾ.ಭೀ.ವಿ. ೭–೧೩)

ಮುಂತಾದ ಮೂದಲಿಕೆಯ ಮಾತುಗಳಿಂದ ದುರ್ಯೋಧನನ ವ್ಯಕ್ತಿತ್ವಕ್ಕೆ ಭಂಗತರುವಂಥ ಚುಚ್ಚುನುಡಿಗಳನ್ನಾಡುತ್ತಾ ಹಿಂದೆ ನಡೆದ ಘಟನೆಗಳನ್ನು ನೆನಪಿಸುತ್ತಾನೆ:

**ಹರಿ ಸಂಧಾನಕ್ಕೆ ವಂದಂದವಗಡಿಸಿದಹಂಕಾರಮೇನಾಯ್ತೊ ಕೃಷ್ಣಾಂ**
**ಬರಕೇಶಾಕೃಷ್ಟಿಯಂ ಮಾಡಿಸಿದ ಮದಮದೇನಾಯ್ತೊ ಕೌಂತೇಯರಂ ಮ**
**ಚ್ಚರದಿಂ ಕಾಂತಾರದೊಳ್ ತಿಱ್ರನೆ ತಿರಿಪಿದ ಸೊರ್ಕೀಗಳೇನಾದುದೆಂದಾ**
**ಕುರುವಂಶಾಧೀಶನಂ ಮೂದಲಿಸಿದನದಟಂ ಭೀಮನುದ್ದಾಮ ಭೀಮಂ**

(ಸಾ.ಭೀ.ವಿ. ೭–೧೪)

ಕೃಷ್ಣನು ಸಂಧಾನಕ್ಕೆ ಬಂದಾಗ ನೀನು ತೋರಿಸಿದ ಅಹಂಕಾರ ಎಲ್ಲಿ ಹೋಯಿತು? ದ್ರೌಪದಿಯ ಮುಡಿಯನ್ನು ಹಿಡಿದೆಳಸಿದಂದು ಇದ್ದ ಕೊಬ್ಬು ಎಲ್ಲಿ ಹೋಯಿತು? ಪಾಂಡವರನ್ನು ಅರಣ್ಯವಾಸಕ್ಕೆ ಕಳಿಸಿದಾಗಿನ ಸೊಕ್ಕು ಎಲ್ಲಿ ಹೋಯಿತು? ಎಲ್ಲವನ್ನೂ ಬಿಟ್ಟು ನೀರಿನಲ್ಲಿ ಹೀಗೆ ಅಡಗಿದ್ದೀಯಲ್ಲ ಎಂದು ಭೀಮ ಹೀಯ್ಯಾಳಿಸುತ್ತಾನೆ.

ಭೀಮನ ಇಂಥ ಅಪಮಾನದ ಮಾತುಗಳನ್ನು ಕೇಳುತ್ತಾ ನೀರಿನಲ್ಲಿ ಇನ್ನು ಕೂರುವುದು ಸರಿಕಾಣಲಿಲ್ಲ. ಕೊಳದ ತಳದಿಂದ ಚಿಮ್ಮಿ ಅವನು ನೀರಿನಿಂದ ಮೇಲೆ ಬಂದ ಬಗೆಯನ್ನು ರನ್ನನ ಮಾತುಗಳಲ್ಲಿ ನೋಡುವುದಾದರೆ:

ರಸೆಯಿಂ ಕಾಲಾಗ್ನಿರುದ್ರಂ ಪೊಱಮಡುವವೊಲಂತಾ ಸರೋಮಧ್ಯದಿಂ ಸಾ
ಹಸಗರ್ವಾಲಂಕೃತಂ ತೊಟ್ಟನೆ ಕೊಳೆ ಪೊಱಮಟ್ಟೆಲ್ಲಿದಂ ಭೀಮನೆಂದೆ
ಣ್ದೆಸೆಯಂ ನೋಡುತ್ತೆ ಮತ್ತದ್ಭುತನಟನಿಟಲಾಲೋಲಕೀಲಾಕ್ಷಿವೊಲ್ ದ
ಳ್ಳಿಸೆ ಕೋಪಾರಕ್ತನೇತ್ರಂ ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ

(ಸಾ.ಭೀ.ವಿ. ೭–೩೦)

ಪ್ರಳಯ ಕಾಲದಲ್ಲಿ ಭೂಮಿಯನ್ನು ಸೀಳಿಕೊಂಡು ಮೇಲಕ್ಕೆ ಚಿಮ್ಮಿಬರುವ ಕಾಲರುದ್ರನಂತೆ ಥಟಕ್ಕನೆ ಮೇಲೆದ್ದು ಬಂದು 'ಭೀಮನೆಲ್ಲಿ' ಎಂದು ಸುತ್ತಲೂ ನೋಡುತ್ತಾ, ತಾಂಡವವಾಡುವ ನಟರಾಜನ ಉರಿಯುವ ಹಣೆಗಣ್ಣಿನಿಂದ ಕೂಡಿದ ದುರ್ಯೋಧನನು ತನ್ನ ತೋಳುಗಳೆಂಬ ಗದೆಯನ್ನೇ ತೂಗಿದ ಎಂಬ ಔಚಿತ್ಯಪೂರ್ಣವಾದ ವರ್ಣನೆಯನ್ನು ಕಾಣಬಹುದು.

ಗದಾಯುದ್ಧ ಪ್ರಾರಂಭವಾಗುತ್ತಿದ್ದಂತೆ ಭೀಮ ದುರ್ಯೋಧನರಿಬ್ಬರೂ ಪರಸ್ಪರರನ್ನು ಮೂದಲಿಸುತ್ತಾ ತಮ್ಮ ತಮ್ಮ ಗದೆಗಳನ್ನೆತ್ತಿಕೊಂಡು ಹೋರಾಡುತ್ತಾರೆ. ಎರಡು ಕುಲಪರ್ವತಗಳೇ ಹೋರಾಡುತ್ತಿರುವಂತೆ ಆ ದೃಶ್ಯ ಕಾಣುತ್ತಿದೆ. ಉಲ್ಕಾಪಾತದಂತೆ ಅವರ ಗದೆಯಿಂದ ಕಿಡಿಗಳು ಹೊಮ್ಮುತ್ತಿದ್ದವು. ಒಮ್ಮೆ ಭೀಮನು ಮೂರ್ಛೆ ಹೋದಾಗ ಅವನನ್ನು ಹೊಡೆಯದೆ ತನ್ನ ಗದೆಯಿಂದಲೇ ಗಾಳಿ ಹಾಕಿ ದುರ್ಯೋಧನನು ಎಚ್ಚರಿಸುತ್ತಾನೆ. ಅದೇ ಭೀಮನು ದುರ್ಯೋಧನನ ತೊಡೆಯನ್ನು ಮುರಿದು ಅವನನ್ನು ನೆಲಕ್ಕುರುಳಿಸಿದಾಗ ಅವನ ತಲೆಯನ್ನು ಕಾಲಿನಿಂದ ಒದೆಯುತ್ತಾನೆ. ಇಂಥ ಸಂದರ್ಭದಲ್ಲಿ ಓದುಗರಿಗೆ ಪ್ರತಿನಾಯಕನ ಬಗ್ಗೆ ಗೌರವವೂ ನಾಯಕನ ಅಮಾನವೀಯ ಸ್ವಭಾವವೂ ಅರಿವಾಗುತ್ತದೆ.

ಈ ರೀತಿ ಕುರುಕುಲ ಚಕ್ರವರ್ತಿಯಾದ ದುರ್ಯೋಧನನು ಅನಾಥನಾಗಿ ಧೂಳಿನಲ್ಲಿ ಹೊರಳುತ್ತ ಬಿದ್ದಿರುವಾಗ ಅಶ್ವತ್ಥಾಮನು ಅವನ್ನು ಕಂಡು 'ನಾನು ಪ್ರತೀಕಾರವನ್ನು ಕೈಗೊಳ್ಳುತ್ತೇನೆ. ಆಜ್ಞೆಯನ್ನು ಕೊಡು' ಎಂದು ಬೇಡಿಕೊಂಡಾಗ ನನ್ನ ದಾಯಾದಿಗಳ ತಲೆಗಳನ್ನು ಕಂಡು ಸಂತೋಷದಿಂದ ಸಾಯುತ್ತೇನೆ, ಹಾಗೇ ಮಾಡು, ಎಂದು ದುರ್ಯೋಧನನು ಹೇಳುತ್ತಾನೆ. ಅಶ್ವತ್ಥಾಮನು ಅವಸರದಿಂದ ಹೊರಟು ಮುಗ್ಧರಾದ ಉಪಪಾಂಡವರ ತಲೆಗಳನ್ನು ಕತ್ತರಿಸಿ ತನ್ನ ಸ್ವಾಮಿಯ ಮುಂದಿಡುತ್ತಾನೆ. ಅವುಗಳನ್ನು ನಿಟ್ಟಿಸಿ ನೋಡಿದ ದುರ್ಯೋಧನನು ಭೀಮನ ಮುಖದ ಹೋಲಿಕೆಯಿದ್ದ ಮುಖವನ್ನು ಕಂಡು;

ಪವನಜನಾಸ್ಯಮಲ್ತಿದವನಾನನಮಪ್ಪೊಡೆ ಮಟ್ಟಮಿರ್ದು ನೋ
ಡುವುದೆ ಮದೀಯ ವಕ್ತ್ರಮನೆ ಕೆಮ್ಮನೆ ಪೋಯ್ತುಜೆವಿಲ್ಲದಾಯ್ತು ಪಾಂ
ಡವರ ಶಿರಂಗಳಲ್ಲವಿವು ಪಾಂಡವಸೂನುಗಳಪ್ಪ ಪಂಚಪಾಂ
ಡವರ ಶಿರಂಗಳಂ ನೆಜೆ ವಿಚಾರಿಸದಕ್ಕಟ ಕೊಂಡು ಬರ್ಪುದೇ
(ಸಾ.ಭೀ.ವಿ. ೯-೩೩)

ಅಂದರೆ, ಇದು ಭೀಮನ ಮುಖವಲ್ಲ, ಅವನದಾಗಿದ್ದರೆ ನನ್ನನ್ನು ನೋಡುತ್ತಾ ಸುಮ್ಮನಿರುತ್ತಿತ್ತೇ? ತಿಳಿಯದೇ ನಿನ್ನಿಂದ ತಪ್ಪಾಗಿಹೋಯಿತು. ಇವು ಪಾಂಡವರ ಮಕ್ಕಳಾದ ಉಪಪಾಂಡವರ ತಲೆಗಳು. ವಿಚಾರ ಮಾಡದೆ ಹೀಗೆ ತರುತ್ತಾರೆಯೇ ಎನ್ನುತ್ತಾನೆ.

ಭೀಮನ ಮುಖದ ಹೋಲಿಕೆಯಿದ್ದದ್ದು ಭೀಮನ ಮುಖವಲ್ಲ ಎಂದು ದುರ್ಯೋಧನನು ಭಾವಿಸಲು ಕೊಡುವ ಕಾರಣ ಅತ್ಯಂತ ಸುಂದರವಾದದ್ದು; ಕತ್ತರಿಸಿದ ತಲೆಯಾದರೂ ಅದು ತನ್ನನ್ನು ಕಂಡಿದ್ದರೆ ಸುಮ್ಮನಿರದೆ ಅವಡುಗಚ್ಚಿ ಕ್ರೋಧವನ್ನು ತೋರಿಸುತ್ತಿತ್ತು. ಅವರಿಬ್ಬರಿಗೂ ಅಷ್ಟು ದ್ವೇಷ, ಕೊನೆಗೆ ದುರ್ಯೋಧನನು ಬಾಲವಧೆಯ ಯಾತನೆಯನ್ನು ಅನುಭವಿಸುತ್ತಾ ಸಾಯುವಂತಾಯ್ತು. ದುರ್ಯೋಧನನ ಸಾವನ್ನು ಸೂರ್ಯಾಸ್ತದೊಡನೆ ಹೋಲಿಸಿ ಕವಿ ಅತ್ಯಂತ ಹೆಚ್ಚಿನ ಗೌರವವನ್ನು ತೋರಿಸುತ್ತಾನೆ:

**ಪಂಕಜಮುಂ ಸುಹೃದ್ವದನಪಂಕಜಮುಂ ಮುಗಿವನ್ನಮುಗ್ರತೇ**
**ಜಂ ಕಿಡುತಿರ್ಪಿನಂ, ನಿಜಕರಂಗಳನಂದುಡುಗುತ್ತುಮಿರ್ದು ಚ**
**ಕ್ರಾಂಕಮಗಲ್ವಿನಂ ಕ್ರಮದಿನಂಬರಮಂ ಬಿಸುಟುರ್ವಿಗಂಧಕಾ**
**ರಂ ಕವಿತರ್ಪಿನಂ ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್**
**(ಸಾ.ಭೀ.ವಿ. ೯–೩೯)**

ಅಂದರೆ, ಕಮಲಗಳು ಮುಚ್ಚಿಕೊಳ್ಳುತ್ತಾ, ಬಿಸಿಲು ಕಡಿಮೆಯಾಗುತ್ತಾ, ತನ್ನ ಕಿರಣಗಳನ್ನು ಮುದುರಿಕೊಳ್ಳುತ್ತಾ ಚಕ್ರವಾಕ ಪಕ್ಷಿಗಳು ಅಗಲುತ್ತಿರಲು ಭೂಮಿಗೆ ಕತ್ತಲೆಯು ಆವರಿಸುತ್ತಿರಲು ಸೂರ್ಯನು ಮುಳುಗಿದ ಹಾಗೆಯೇ ಮಿತ್ರರ ಮುಖಗಳು ಬಾಡುವಂತೆ ತನ್ನ ತೇಜಸ್ಸು ಕಡಿಮೆಯಾಗಲು ತನ್ನ ಕೈಗಳನ್ನು ಮುದುರಿಕೊಳ್ಳುತ್ತಲೂ ಚಕ್ರವರ್ತಿಯೆಂಬ ಹೆಸರು ತನ್ನಿಂದ ದೂರ ಸರಿಯುತ್ತಿರಲು ಲೋಕಕೆಲ್ಲ ದುಃಖವನ್ನುಂಟುಮಾಡಿ ಕುರುಕುಲಕ್ಕೆ ಸೂರ್ಯನಾಗಿದ್ದ ದುರ್ಯೋಧನನು ಅವಸಾನ ಹೊಂದಿದ. ಅನಂತರ ಭೀಮ–ದ್ರೌಪದಿಗೆ ರಾಜ್ಯಾಭಿಷೇಕವಾಗುತ್ತದೆ. ಪ್ರತಿಜ್ಞಾಪೂರ್ಣ ಮಾಡಿದ ಭೀಮನು ಪಟ್ಟಬಂಧ ಗೌರವಕ್ಕೂ ಅರ್ಹನಾಗುತ್ತಾನೆ. ಪಂಪನು ಕರ್ಣನ ಬಗ್ಗೆ ಓದುಗರಿಗೆ ಉಂಟಾದ ಸಹಾನುಭೂತಿಯೆ ರನ್ನನ ದುರ್ಯೋಧನನ ಬಗ್ಗೆಯೂ ಮೂಡುತ್ತದೆ. 'ಪಂಪನು ಈ ಗದಾಯುದ್ಧದ ನಿಜವಾದ ನಾಯಕನನ್ನು, 'ಮಹಾನುಭಾವ'ನನ್ನು ನೋಡಿದ್ದರೆ– 'ಶಿಷ್ಯಾದಿಚ್ಛೇತ್ ಪರಾಜಯಂ' ಎಂದು ಹೇಳಿ ಆನಂದ ಪಡುತ್ತಿದ್ದನು?' ಎಂಬ ಬಿ.ಎಂ.ಶ್ರೀಕಂಠಯ್ಯ ಅವರ ಮಾತು ಔಚಿತ್ಯಪೂರ್ಣವಾಗಿದೆ. ರಂ.ಶ್ರೀ. ಮುಗಳಿಯವರು 'ಗದಾಯುದ್ಧದ ಗುಣವಿಶೇಷವೆಲ್ಲ ಅದರ ಅದ್ಭುತ ನಾಟ್ಯ ನಿರ್ಮಾಣದಲ್ಲಿದೆ' ಎಂದಿದ್ದಾರೆ. ಪ್ರತಿಯೊಂದು ದೃಶ್ಯದಲ್ಲೂ ಸಂವಾದದಲ್ಲೂ ಹುಟ್ಟು ನಾಟಕಕಾರನ ಕೈವಾಡ ಕಂಡುಬರುತ್ತದೆ. ಕಂಚುಕಿ, ವಿದೂಷಕ ಪಾತ್ರಗಳೂ ಇಲ್ಲಿವೆ.

ಪಂಪನಿಂದ ಪ್ರೇರಿತ ಹಾಗೂ ಪ್ರಭಾವಿತನಾಗಿದ್ದರೂ ರನ್ನ ಯಶಸ್ಸು ಸಾಧಿಸಿದ್ದು ನಾಟಕೀಯ ಶೈಲಿಯಿಂದಾಗಿ. 'ನಾಟಕೀಯತೆಯಲ್ಲಿ ರನ್ನನು ಪಂಪನಿಗಿಂತಲೂ ಒಂದು ಕೈ ಮೇಲು' ಎಂದು ರಂ.ಶ್ರೀ.ಮುಗಳಿಯವರ ಅಭಿಪ್ರಾಯವಾದರೆ 'ಶಕ್ತಿ ಸಮನ್ವಿತವಾದ ನಾಟಕೀಯತೆಯಿಂದಲೇ ರನ್ನ ವರಕವಿ, ಚಿರಕವಿ ಮತ್ತು ಮಹಾಕವಿಯಾಗಿ ನಿಂತಿದ್ದಾನೆ' ಎನ್ನುವುದು ಕುವೆಂಪು ಅವರ ಅಭಿಪ್ರಾಯವಾಗಿದೆ.

**ಕುಮಾರವ್ಯಾಸ ಭಾರತ:**

'ಕುಮಾರವ್ಯಾಸ ಭಾರತ', 'ಗದುಗಿನ ಭಾರತ', 'ಕನ್ನಡ ಭಾರತ', 'ದಶಪರ್ವ ಭಾರತ' ಎಂದೆಲ್ಲ ರೂಢಿಯಾಗಿರುವ 'ಕರ್ಣಾಟ ಭಾರತ ಕಥಾಮಂಜರಿ' ಎಂಬ ಗ್ರಂಥವು ವ್ಯಾಸರ ಸಂಸ್ಕೃತ ಮಹಾಭಾರತದ ಮೊದಲ ಹತ್ತು ಪರ್ವಗಳ ಕಥೆಯನ್ನು ಸ್ವತಂತ್ರ ರೀತಿಯಲ್ಲಿ ಅನುವಾದಿಸಿರುವ ಜನಪ್ರಿಯ ಮಹಾಕಾವ್ಯವಾಗಿದೆ. ಇದರ ಕರ್ತೃ ಕುಮಾರವ್ಯಾಸನೆಂದೇ ಪ್ರಸಿದ್ಧನಾಗಿರುವ ಗದುಗಿನ ನಾರಾಣಪ್ಪ. ಈ ಕೃತಿಯನ್ನಲ್ಲದೆ 'ಐರಾವತ' ಎಂಬ ಮತ್ತೊಂದು ಗ್ರಂಥವನ್ನೂ ರಚಿಸಿರುವಂತೆ ಸಾಮಾನ್ಯವಾಗಿ ತಿಳಿಯಲಾಗಿದೆಯಾದರೂ ಗ್ರಂಥಕರ್ತೃ ವಿಚಾರ ಚರ್ಚಾಸ್ಪದವಾಗಿದೆ. ಈಗ ಈ ಕವಿಯ ಹೆಸರಿನಲ್ಲಿ ಪ್ರಸಿದ್ಧವಾಗಿರುವುದು, ಕವಿಯ ಹಾಗೂ ಕನ್ನಡ ಭಾಷೆಯ ಹಿರಿಮೆಗೆ ಕಾರಣವಾಗಿರುವುದು 'ಕರ್ಣಾಟ ಭಾರತ ಕಥಾಮಂಜರಿ'ಯೊಂದೇ.

ಕರ್ಣಾಟಭಾರತ ಕಥಾಮಂಜರಿಯ ಭಾಷೆ ನಡುಗನ್ನಡ, ಛಂದಸ್ಸು ಭಾಮಿನಿ ಷಟ್ಪದಿ. ಕುಮಾರವ್ಯಾಸ ಭಾರತದ ಕಥಾವಸ್ತುವಿಗೆ ಮೂಲ ಸಂಸ್ಕೃತ ಮಹಾಭಾರತ. ಇದರ ಕರ್ತೃ ಕೃಷ್ಣದ್ವೈಪಾಯನ ವ್ಯಾಸರೆಂದು ರೂಢಿಯಾಗಿದೆ. ಮಹಾಭಾರತದ ಕಥೆ ಭರತವಂಶದ ಧೃತರಾಷ್ಟ್ರ ಪಾಂಡುಗಳೆಂಬ ಅಣ್ಣ ತಮ್ಮಂದಿರ ಮಕ್ಕಳಾದ ಕೌರವ ಪಾಂಡವರ ಕಥೆ. ಹಂಚಿಕೊಂಡು ಅನುಭವಿಸಬೇಕಾದ ರಾಜ್ಯಕೋಶಗಳನ್ನು ಪೂರ್ತಿಯಾಗಿ ತಾವೇ ದಕ್ಕಿಸಿಕೊಳ್ಳಲು ಕೌರವರು ನಡೆಸಿದ ಕುಟಿಲ ಕಾರಸ್ಥಾನಗಳೂ ನ್ಯಾಯಬದ್ಧವಾಗಿ ತಮಗೆ ಸೇರಬೇಕಾದುದನ್ನು ದಕ್ಕಿಸಿಕೊಳ್ಳಲು ಪಟ್ಟಪಾಡುಗಳೂ ಈ ಕಥೆಯಲ್ಲಿ ವಿಸ್ತಾರವಾಗಿ ನಿರೂಪಿತವಾಗಿವೆ.

'ಕುಮಾರವ್ಯಾಸ ಭಾರತ' ಒಂದು ಕಲಾತ್ಮಕ ಮಹಾಕಾವ್ಯವಾಗಿದ್ದರೂ ಜೀವನವನ್ನು ಅದರ ಸಮಗ್ರತೆಯಲ್ಲಿ ಅಭಿವ್ಯಕ್ತಿಸುವುದರಲ್ಲೂ ಕವಿ ಯಶಸ್ವಿಯಾಗಿದ್ದಾನೆ. ಈ ಕಲಾಪ್ರೌಢಿಮೆ ಮತ್ತು ಜೀವನ ಸಂಕೀರ್ಣತೆಗಳು ಸುಗಮ ಸಂವಹನ ಕ್ರಿಯೆಗೆ ತಡೆಯಾಗದಿರುವುದನ್ನು ಗಮನಿಸಬೇಕು. ಈ ಹಿನ್ನಲೆಯಿಂದ ಶ್ರೇಷ್ಠತೆ ಹಾಗೂ ಜನಪ್ರಿಯತೆಗಳು ಭಾರತ ಕಾವ್ಯದಲ್ಲಿರುವ ಎರಡು ಆಯಾಮಗಳಾಗಿವೆ. ಮೂಲ ಮಹಾಭಾರತ ೧೮ ಪರ್ವಗಳನ್ನು ಹೊಂದಿರುವ ಸುಧೀರ್ಘ ಮಹಾಕಾವ್ಯ. ಅದರಲ್ಲಿ ಕುಮಾರವ್ಯಾಸ ತನ್ನ ಕಾವ್ಯವನ್ನು ೧೦ ಪರ್ವಗಳಿಗೆ ಸೀಮಿತಗೊಳಿಸಿದ್ದಾನೆ. ಉಳಿದ ೮ ಪರ್ವಗಳನ್ನು ಉದ್ದೇಶಪೂರ್ವಕವಾಗಿಯೇ ಬಿಟ್ಟಿದ್ದಾನೆನ್ನಬಹುದು. ಏಕೆಂದರೆ ಪಾಂಡವರ ವಿಜಯ ಮತ್ತು ಧರ್ಮರಾಜನ ಪಟ್ಟಾಭಿಷೇಕದೊಂದಿಗೆ, ಕಥೆಗೆ ನಿರ್ದಿಷ್ಟ ಚೌಕಟ್ಟೊಂದು ಲಭ್ಯವಾಗಿದೆ. ಕವಿಯ ಕಾವ್ಯದ ಉದ್ದೇಶವೂ ಇದೇ ಆಗಿದೆ. ಕುಮಾರವ್ಯಾಸ ತನ್ನ ಕಾವ್ಯವನ್ನು 'ಪ್ರತೀಪರ್ವರಸೋದಯ'ವಾಗುವಂತೆ ರಚಿಸಿದ್ದಾನೆ. ಹಾಗಾಗಿಯೇ ಅವನ ಕಾವ್ಯ ಎಲ್ಲೂ ಕಳೆಗುಂದದೆ, ಹೊಳೆಯುತ್ತದೆ. ಮೊದಲ ಐದು ಪರ್ವಗಳಲ್ಲಿ ಮಹಾಭಾರತ ಯುದ್ಧಕ್ಕೆ ಕಾರಣವಾಗುವ ಸಂಗತಿ, ಘಟನೆ, ಸನ್ನಿವೇಶಗಳ ನಿರೂಪಣೆಯಿದ್ದರೆ, ಅನಂತರದ ಐದು ಪರ್ವಗಳಲ್ಲಿ ಯುದ್ಧ ಮತ್ತು ಅದರ ಪರಿಣಾಮ ಸ್ಥಾಯಿಯಾಗಿದೆ. ಈ ಕಡೆಯ ಐದು ಪರ್ವಗಳನ್ನು 'ಯುದ್ಧಪಂಚಕ'ಗಳೆಂದೂ ಕರೆಯಲಾಗಿದೆ. ಇವು ಅನುಕ್ರಮವಾಗಿ ಭೀಷ್ಮಪರ್ವ, ದ್ರೋಣಪರ್ವ, ಕರ್ಣಪರ್ವ, ಶಲ್ಯಪರ್ವ ಮತ್ತು ಗದಾಪರ್ವಗಳೆಂದು ಹೆಸರಿಸಲಾಗಿದೆ. ಸಾಮಾನ್ಯವಾಗಿ ಕೌರವರ ಕಡೆಯ ಸೇನಾಧಿಪತ್ಯವನ್ನು ವಹಿಸುವವರ ಹೆಸರಿನ ಮೂಲಕ ಈ ಪರ್ವಗಳನ್ನು ವಿಭಾಗಿಸಲಾಗಿದೆ. ಆದರೆ ಕೊನೆಯ ಪರ್ವವನ್ನು 'ಗದಾಪರ್ವ' ಎಂದು ಕರೆದಿರುವುದು ಅದರ ಪ್ರಾಮುಖ್ಯತೆಯ ಸಂಕೇತವಿರಬಹುದು. ಈ ಗದಾಯುದ್ಧ ಮಹಾಭಾರತದ ಅಳಿವುಉಳಿವುಗಳ ನಿರ್ಣಾಯಕ ಘಟ್ಟವಾಗಿರುವುದರಿಂದ ಮತ್ತು ದುರ್ಯೋಧನನೇ ದಿಗ್ವಿಜಯದ ಕೇಂದ್ರವಾಗಿರುವುದರಿಂದ ಹಾಗೆ ಮಾಡಿರಬಹುದು. ಯುದ್ಧಪಂಚಕಗಳಲ್ಲಿ ಶಲ್ಯಪರ್ವ ಹೊರತುಪಡಿಸಿ ಉಳಿದೆಲ್ಲವೂ ಸುಧೀರ್ಘವಾಗಿದ್ದು, ಸಮಪ್ರಮಾಣದಲ್ಲಿವೆ.

ಕುಮಾರವ್ಯಾಸನ ಜೀವಿತವೃತ್ತಾಂತದಲ್ಲಿ ಹೆಚ್ಚು ತೊಡಕಾದುದೆಂದರೆ ಆತನ ಕಾಲವಿಚಾರ. ಈ ವಿಷಯದಲ್ಲಿಯೇ ವಿದ್ವಾಂಸರ ವಿಮರ್ಶೆ ಹೆಚ್ಚಾಗಿ ನಡೆದು ಭಿನ್ನಾಭಿಪ್ರಾಯಗಳು ವ್ಯಕ್ತವಾಗಿವೆ. ಕವಿ ಬದುಕಿದ್ದ ಕಾಲವನ್ನಾಗಲಿ; ಆತನು ತನ್ನ ಕೃತಿಯನ್ನು ರಚಿಸಿದ ಕಾಲವನ್ನಾಗಲಿ ತಿಳಿಯಲು ಗ್ರಂಥದಲ್ಲಿಯೇ ಸ್ಪಷ್ಟವಾದ ಆಧಾರಗಳ್ಯಾವೂ ಉಲ್ಲೇಖವಾಗಿಲ್ಲ.

'ಕುಮಾರವ್ಯಾಸನು ಅತಿ ಪ್ರಾಚೀನನೂ ಅಲ್ಲ, ಅತಿ ಅರ್ವಾಚೀನನೂ ಅಲ್ಲ. ಮಧ್ಯಕಾಲದವನೆಂದು ಅವನ ಭಾಷಾಶೈಲಿಯ ಮೇಲಿಂದ ನಿರ್ವಿವಾದವಾಗಿ ಹೇಳಬಹುದು' ಎನ್ನುವುದು ಐ. ಶಿವರಾಮಯ್ಯನವರ ಭಾವನೆ. 'ಭಾರತದ ಶೈಲಿ, ವ್ಯಾಕರಣ, ಛಂದಸ್ಸು ಎಲ್ಲವೂ ಹೊಸಗನ್ನಡ ಜಾಡಿಗೆ ಸೇರಿವೆ. ಇಂತಹ ಭಾಷೆ ಶಬ್ದಮಣಿದರ್ಪಣಕಾರನಿಗೂ (ಕೇಶಿರಾಜ) ಹಿಂದೆ ಇತ್ತೆಂದು ಹೇಳಲು ಆಧಾರವಿಲ್ಲ. ಇಷ್ಟು ಜನರಂಜಕವಾದ ಗ್ರಂಥವನ್ನು ೩೫೦ ವರ್ಷಗಳವರೆಗೆ ಯಾರೂ ಸ್ಮರಿಸದೆ ಇರುವುದು ಅಸಂಭವ. ಆದ್ದರಿಂದ ೧೧೯೫ರಲ್ಲಿ ಕವಿಯಿದ್ದಿರಬೇಕೆಂದು ಹೇಳಲಾಗುವುದು' ಇದು ದೊರೆಸ್ವಾಮಿ ಅಯ್ಯಂಗಾರರ ವಿಚಾರ. 'ಹೇರಳವಾಗಿ ಬರುವ ಮರಾಠಿ ಭಾಷೆಯ ಪ್ರಯೋಗದಿಂದ ಈ ಕವಿ ಬಹಳ ಪ್ರಾಚೀನನಲ್ಲ ಎಂದೂ, ಕವಿಯ ದೃಷ್ಟಿಕೋನ ಹಾಗೂ ಕಾವ್ಯದ ಭಾಷೆ ಇವುಗಳನ್ನು ನೋಡಿದಾಗ ಆತ ಭಕ್ತಿಯುಗಕ್ಕೆ ಸೇರಿದವನೆಂದೂ ಸುಲಭ ನಡುಗನ್ನಡದ ಕಾಲದವನೆಂದೂ ಸ್ಪಷ್ಟವಾಗಿ ತಿಳಿಯುತ್ತದೆ' ಎಂದಿದ್ದಾರೆ ಮಾಳವಾಡರು. ೧೪ನೆಯ ಶತಮಾನದ ಉತ್ತರಾರ್ಧ ಕುಮಾರವ್ಯಾಸನ ಭಾಷಾಶೈಲಿ ಎಂಬುದು ರಂ.ಶ್ರೀ.ಮುಗಳಿಯವರ ಗ್ರಹಿಕೆ. ೧೪ನೆಯ ಶತಮಾನದ ಸಂಕ್ರಮಣ ಸ್ವರೂಪಕ್ಕೆ ಅವನ ಭಾಷೆ ಮಾದರಿಯೆಂದೂ ವರ್ಣಪಲ್ಲಟ, ವಚನಪಲ್ಲಟ, ವಿಭಕ್ತಿಪಲ್ಲಟ, ಲಿಂಗವ್ಯತ್ಯಾಸ ಇಂಥವುಗಳಿಂದ ಹಳಗನ್ನಡದ ನಿಯಮಗಳನ್ನು ಮೀರಿ ದೇಶೀಯತೆಯನ್ನು ಅದು ಪ್ರತಿನಿಧಿಸುತ್ತದೆಯೆಂದೂ ಇನ್ನೊಂದು ಸೂಚನೆಯೂ ಇದೆ.

ಕುಮಾರವ್ಯಾಸ ಸಮಗ್ರ ಕೃತಿರಚನೆಗೆ 'ಭಾಮಿನೀಷಟ್ಪದಿ' ಬಳಸಿದ್ದಾನೆ. ಆತ ಕುಮಾರಪದ್ಮರಸ, ಕುಮುದೇಂದುಗಳ ಕಾಲದಲ್ಲಿ ಇದ್ದಿರಲಾರ. ಭೀಮಕವಿ, ಮಲ್ಲಣ್ಣ, ಭಾಸ್ಕರ, ಚಾಮರಸ ಈ ಈಚಿನ ೧೪-೧೫ನೆಯ ಶತಮಾನದ ಕವಿಗಳ ಕಾಲದಲ್ಲಿ ಯಾವಾಗ ಇದ್ದಿರಬೇಕು ಎಂಬುದನ್ನು ಅದು ಸೂಚಿಸುತ್ತದೆ. ಆತನ ಭಾಷೆ ಶೈಲಿ, ಛಂದಸ್ಸುಗಳ ಬೆಳವಣಿಗೆಯ ಫಲವಾಗಿ ಗೋಚರಿಸುತ್ತದೆ ಎನ್ನಬಹುದು. ಸುಮಾರು ೧೨೫೦ರಿಂದ ೧೩೦೦ರಲ್ಲಿ ಕುಮಾರವ್ಯಾಸ ಜೀವಿಸಿದ್ದಿರಬೇಕು.

ಈ ಸಂಗತಿಗಳನ್ನು ಗಮನಿಸಿದರೆ, ಭಾಗವತ ಧರ್ಮ ಭಕ್ತಿ ಪಂಥಗಳಿಂದ ಪ್ರೇರೇಪಿತವಾಗಿ, ರಾಮಾಯಣ, ಭಾರತ, ಭಾಗವತ ವಸ್ತುಗಳನ್ನಾಶ್ರಯಸಿ ಕೃತಿರಚನೆ ಮಾಡಲು ಬ್ರಾಹ್ಮಣ ಕವಿಯೂ ಕಾಣಿಸಿಕೊಂಡಿರಬಹುದು. 'ಮಹಾಭಾರತ ತಾತ್ಪರ್ಯ ನಿರ್ಣಯ'ದ ಪ್ರಭಾವ ಕುಮಾರವ್ಯಾಸ ಭಾರತದಲ್ಲಿ ಕಂಡುಬರುತ್ತದೆಯೆಂದು ಕೆಲವರು ಹೇಳುವುದು ನಿಜವಾದರೆ ಈ ಕವಿಯೂ ಸುಮಾರು ೧೩೦೦ರ ಅನಂತರ ಕಾಲದಲ್ಲಿದ್ದನೆಂದು ವಿದಿತವಾಗುತ್ತದೆ.

ಈಗ ಪ್ರಚಲಿತವಾಗಿರುವ ಅಭಿಪ್ರಾಯವನ್ನು ಮನ್ನಿಸಿ ಕವಿಯ ಕಾಲವನ್ನು ಸುಮಾರು ೧೪೦೦ ಎಂದು ಇಲ್ಲಿ ಇಟ್ಟುಕೊಳ್ಳಲಾಗಿದೆ. ಆದರೆ ಈ ಕವಿಯ ಜೀವಿತಾವಧಿ ಕೃತಿರಚನೆಯ ಕಾಲಗಳು ಸುಮಾರು ೧೩೫೦-೧೪೦೦ರ ನಡುವೆ ಎಂದು ಬಲುಮಟ್ಟಿಗೆ ತೋರುತ್ತದೆ.[೮] ತಮ್ಮ ನಿಲುವಿನ ಕೊನೆಯಲ್ಲಿ ವೆಂಕಟಚಾಲಶಾಸ್ತ್ರಿಯವರು ಸೂಚಿಸಿದ ಅವಧಿಯು ಡಿ.ಎಲ್.ನರಸಿಂಹಾಚಾರ್, ರಂ.ಶ್ರೀ.ಮುಗಳಿ ಹಾಗೂ ಸುಜನಾ ಅವರುಗಳು ನಿರ್ಣಯಿಸಿದ ಕಾಲಗಳ ವ್ಯಾಪ್ತಿಗೊಳಪಡುತ್ತವೆ. ಒಟ್ಟಿನಲ್ಲಿ ತಮ್ಮ ಸುಧೀರ್ಘವಾದ ವಿಶ್ಲೇಷಣೆಯ ಅನಂತರ ಕುಮಾರವ್ಯಾಸನ ಕಾಲವನ್ನು ಸುಮಾರು ೧೪೦೦ ಎಂದು ಇಟ್ಟುಕೊಂಡು ಪ್ರಚಲಿತ ಅಭಿಪ್ರಾಯವನ್ನು ಮಾನ್ಯಮಾಡಿದಂತೆ ಇಲ್ಲಿಯೂ ಅದನ್ನೇ ಮಾನ್ಯ ಮಾಡಲಾಗಿದೆ.

ಕವಿ ಕುಮಾರವ್ಯಾಸನ ವ್ಯಕ್ತಿವಿಚಾರದಲ್ಲಿ ಚರ್ಚೆಗೆ ಗ್ರಾಸವಾಗಿರುವ ಇನ್ನೊಂದು ವಿಚಾರವೆಂದರೆ ಆತನ ಮತ. ಕವಿ ಬ್ರಾಹ್ಮಣನೆಂಬುದನ್ನು ಮಾನ್ಯಮಾಡಿರುವ ವಿದ್ವಾಂಸರು ಬ್ರಾಹ್ಮಣ್ಯರಲ್ಲಿ ಯಾವ ಒಳಪಂಗಡಕ್ಕೆ ಸೇರಿದವನೆಂಬ ವಿಚಾರದಲ್ಲಿ ಚರ್ಚೆನಡೆಸಿದ್ದಾರೆ. ಬಿ.ಎಂ.ಶ್ರೀಕಂಠಯ್ಯನವರು 'ಆತನ (ಕುಮಾರವ್ಯಾಸ) ಹಣೆಯ ಮೇಲೆ ಯಾವ ಲಾಂಛನವಿದ್ದರೇನು ನಮಗೆ; ನಮ್ಮ ಈ ದಿವ್ಯ ಕವಿ ನಮ್ಮವನು; ಕನ್ನಡಿಗನು, ಕನ್ನಡಿಗರ ಕುಲವನ್ನು ಒಂದಾಗಿ ಬೆಸೆಯುವವನು; ಕನ್ನಡಿಗರ ದೊಡ್ಡ ಹೆಮ್ಮೆ, ದೊಡ್ಡಕಣ್ಣು; ಮಹಾತ್ಮ'[೯] ಎಂದಿದ್ದಾರೆ.

ಕುಮಾರವ್ಯಾಸ ತನ್ನ ವೈಯಕ್ತಿಕ ವಿಚಾರಗಳಾವುವನ್ನೂ ಹೇಳದೆ ಇರುವುದರಿಂದ ಅವುಗಳ ವಿಚಾರವಾಗಿಯೂ ವಿದ್ವಾಂಸರು ವ್ಯಾಪಕ ಚರ್ಚೆಗಳನ್ನು ನಡೆಸಿದ್ದಾರೆ. ಗದುಗಿನ ವೀರನಾರಾಯಣ ದೇವಾಲಯದಲ್ಲಿ ಕವಿಯ ಹೆಸರುಳ್ಳ ಶಾಸನ ದೊರೆಕಿರುವುದರಿಂದಲೂ ಕವಿಯ ಬಗೆಗೆ ಪ್ರಚಲಿತವಿರುವ ಐತಿಹ್ಯಗಳು ಒಂದಲ್ಲಾ ಒಂದು ವಿಧದಲ್ಲಿ ಗದುಗಿನೊಡನೆ ಕವಿಗೆ ಸಂಬಂಧ ಕಲ್ಪಿಸಿರುವುದರಿಂದಲೂ ಗದುಗು ಇಲ್ಲವೇ ಗದುಗಿನ ಸುತ್ತಮುತ್ತಲಿನ ಪರಿಸರ ಕವಿಯ ಸ್ಥಳವಾಗಿರಬೇಕೆಂದೂ ಪ್ರಾಯಶಃ ವೀರನಾರಾಯಣಸ್ವಾಮಿಯ ದೇವಾಲಯದ ಪ್ರಸನ್ನ ವಾತಾವರಣದಲ್ಲಿ ಕುಳಿತು[೧೦] ತನ್ನ ಕೃತಿಯನ್ನು ಪೂರೈಸಿರಬೇಕೆಂದೂ ಗ್ರಹಿಸಬಹುದಾಗಿದೆ.

ಕರ್ಣಾಟಭಾರತ ಕಥಾಮಂಜರಿಯ ಪ್ರತಿ ಪರ್ವಾಂತ್ಯ ವಚನದಲ್ಲಿ 'ಯೋಗೀಂದ್ರ' ಎಂಬ ಉಲ್ಲೇಖವಿದೆ. ಆದಿಪರ್ವದ ಪೀಠಿಕಾ ಸಂಧಿಯಲ್ಲಿ 'ಶುಕರೂಪನಲ್ಲವೆ' (೧೭) ಎಂದೂ ಕವಿ ತನ್ನನ್ನು ಸಂಭೋದಿಸಿಕೊಂಡಿರುವುದನ್ನು ಗಮನಿಸಿ ಕುಮಾರವ್ಯಾಸ ಸನ್ಯಾಸಿಯಾಗಿದ್ದ ಎಂದು ಕವಿ

ಚರಿತೆಕಾರರು ವಾದಿಸಿದ್ದಾರೆ. ಕೃತಿರಚನೆಯ ಸಮಯದಲ್ಲಿ ಕುಮಾರವ್ಯಾಸ ಯಾವ ಆಶ್ರಮಸ್ಥನೇ ಆಗಿರಲಿ, ಅವನು ತಾತ್ವಿಕವಾಗಿ ಸಂಸಾರವಿರೋಧಿಯಾಗಿರಲಿಲ್ಲವೆಂಬುದು ಮುಖ್ಯ. ಜೀವನದ ಗಾಢ ಅನುಭವಗಳಿಗೆ ಕುಮಾರವ್ಯಾಸ ಮುಖ ತಿರುಗಿಸಿದವನಲ್ಲವೆಂಬುದಕ್ಕೆ ಕಾವ್ಯದುದ್ದಕ್ಕೂ ಅವನು ನೀಡುವ ವಾಸ್ತವಿಕ ಚಿತ್ರಣಗಳನ್ನು ನೋಡಬಹುದು. ಉದಾಹರಣೆಗೆ ಸ್ವಯಂವರ, ರಾಜತಾಂತ್ರಿಕತೆ, ಯುದ್ಧ ಮೊದಲಾದವುಗಳಿಂದ ಅವನ ಲೌಕಿಕಪ್ರಿಯತೆಯನ್ನು ತಿಳಿಯಬಹುದಾಗಿದೆ. ಶ್ರೀಕೃಷ್ಣನನ್ನು 'ನತಸಂಸಾರ ಕಾನನ ಘನ ದವಾನಳನು' ಎಂದು ಸ್ಮರಿಸಿದ್ದರೂ ಕೃಷ್ಣನು ತನ್ನ ಸುತ್ತಲೂ ನಿರ್ಮಿಸಿಕೊಂಡ ಸಂಸಾರ ಜಗತ್ತನ್ನು ಕವಿ ಅತ್ಯಾಸಕ್ತಿಯಿಂದ ಚಿತ್ರಿಸಿದ್ದಾನೆ.

ಕುಮಾರವ್ಯಾಸನು ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿಯಾಗಿದ್ದ ತುಳುವಂಶದ ಕೃಷ್ಣದೇವರಾಯನ(೧೫೦೯-೩೦) ಸಮಕಾಲೀನನಾಗಿದ್ದು 'ನರಸನೃಪನ ಆಸ್ಥಾನದಲ್ಲಿಯೂ ಅನಂತರ ಕೆಲವು ವರ್ಷಗಳು ಕೃಷ್ಣದೇವರಾಯನ ಆಸ್ಥಾನದಲ್ಲಿಯೂ ಇದ್ದು ರಾಜಮರ್ಯಾದೆಯನ್ನು ಪಡೆದವನೆಂದು ತೋರುತ್ತದೆ'[೧೧] ಎಂಬುದು ಎಚ್.ದೇವೀರಪ್ಪನವರ ಅಭಿಮತ.

ಆದಿಪರ್ವದ ಪೀಠಿಕಾ ಸಂಧಿಯಲ್ಲಿ ಬರುವ

**ತಿಳಿಯ ಹೇಳುವೆ ಕೃಷ್ಣ ಕಥೆಯನು**
**ಇಳೆಯ ಜಾಣರು ಮೆಚ್ಚುವಂತಿರೆ**
**ನೆಲೆಗೆ ಪಂಚಮ ಶ್ರುತಿಯನೊರೆವೆನು ಕೃಷ್ಣ ಮೆಚ್ಚಲಿಕೆ**
(ಆ.ಪ. ಪದ್ಯ ೧೩)

ಕುಮಾರವ್ಯಾಸ ತನ್ನ ಗ್ರಂಥದಲ್ಲಿ ಅಲ್ಲಲ್ಲಿ 'ಕೃಷ್ಣರಾಯ' ಎಂಬ ಮಾತನ್ನು ಬಳಸಿರುವುದೇ ಇದಕ್ಕೆ ನಿದರ್ಶನವೆನ್ನಲಾಗಿದೆ. ಆದರೆ 'ಕೃಷ್ಣಮೆಚ್ಚಲಿಕೆ' ಎಂಬ ಮಾತಿನಲ್ಲಾಗಲೀ 'ಕೃಷ್ಣರಾಯ' ಎಂಬ ಪದಪ್ರಯೋಗದಲ್ಲಾಗಲೀ ಕುಮಾರವ್ಯಾಸ ವಿಜಯನಗರದ ದೊರೆ ಕೃಷ್ಣದೇವರಾಯನನ್ನೇ ಕುರಿತು ಹೇಳುತ್ತಿದ್ದನೆಂದು ಹೇಳಲಾಗುವುದಿಲ್ಲ. ಕವಿ ತನ್ನ ಇಷ್ಟದೈವವಾದ ವೀರನಾರಾಯಣ ಅರ್ಥಾತ್ ಶ್ರೀಕೃಷ್ಣ ಪರಮಾತ್ಮನ ಬಗೆಗಿನ ತನ್ನ ಭಕ್ತಿ ಗೌರವಾದರಗಳನ್ನು 'ಕೃಷ್ಣರಾಯ' ಎಂಬುದಾಗಿ ಸೂಚಿಸಿರುವ ಸಂಭಾವ್ಯತೆಯೂ ಇಲ್ಲದಿಲ್ಲ.

ಕೋಳಿವಾಡದ ಸಾರಸ್ವತಗೌಡರ ಕುಲವೃತ್ತಾಂತವನ್ನು ಒಳಗೊಂಡಿರುವ ಕಾಗದ ಪತ್ರಗಳ ಹಿನ್ನಲೆಯಿಂದ ಕುಮಾರವ್ಯಾಸನಿಗೂ ವಿಜಯನಗರ ಸಾಮ್ರಾಜ್ಯಕ್ಕೂ ಸಂಬಂಧವನ್ನು ಕಲ್ಪಿಸಲಾಗಿದೆ. ಆರ್.ಎಸ್.ಪಂಚಮುಖಿ ಮೊದಲಾದ ವಿದ್ವಾಂಸರು ಈ ಕಾಗದ ಪತ್ರಗಳನ್ನು ಪರಿಶೀಲಿಸಿ

ಕೋಳಿವಾಡದ ಶಾನುಭೋಗಮನೆತನದವರು ವಿಜಯನಗರದರಸರಲ್ಲಿ ಅಧಿಕಾರಿಗಳಾಗಿದ್ದರೆಂದು ಒಪ್ಪಿಕೊಂಡಿರುವುದರಿಂದ ಕುಮಾರವ್ಯಾಸನು ಆ ಮನೆತನದವನೆನ್ನಲಾಗಿದೆ. ಆದರೆ ಕೃತಿಯ ಸ್ವರೂಪ ಹಾಗೂ ಅದರಿಂದ ಹೊರಹೊಮ್ಮುವ ವ್ಯಕ್ತಿತ್ವವನ್ನು ಅವಲೋಕಿಸಿದರೆ ಕುಮಾರವ್ಯಾಸ ರಾಜಾಸ್ಥಾನವನ್ನು ಹಂಬಲಿಸದ ಸ್ವತಂತ್ರ ಪ್ರವೃತ್ತಿಯವನೆನ್ನಬಹುದು, ಅರಮನೆಯ ಪರಿಸರಕ್ಕಿಂತ ದೇವರ ಸನ್ನಿಧಿಯಲ್ಲಿದ್ದು (ಗದುಗಿನ ವೀರನಾರಾಯಣನ ಆಶ್ರಯ) ಕೊಂಡು ಕೃತಿ ರಚಿಸಿದವನು ಎಂಬ ಅಭಿಪ್ರಾಯಕ್ಕೆ ಹೆಚ್ಚು ಒತ್ತು ದೊರೆಯುತ್ತದೆ. 'ಈಸುಮರವೆಯಿದರಸುತನದ ಮಹಾಸಗಾಡಿಕೆ' (ವಿಪ:೩;೨೮), ಲೋಗರಸೇವೆಯಲಿ ಬೆಂದೊಡಲ ಹೊರೆವಿರಿ, (ಅದೇ, ೬೪) ಎಂಬಂತಹ ಉಲ್ಲೇಖಗಳು ಕೂಡ ರಾಜಾಶ್ರಯವನ್ನು ಬಯಸದ ಧೋರಣೆಯನ್ನು ವ್ಯಕ್ತಪಡಿಸುತ್ತದೆ. ಹೀಗಾಗಿ ಕುಮಾರವ್ಯಾಸನು ಪ್ರಭುಗಳ ಮನ್ನಣೆಯನ್ನು ಪಡೆದಿದ್ದ ಸಾಧ್ಯತೆಗಳು ವಿರಳಾತಿವಿರಳವೆನ್ನಬಹುದು.[೧೨] ರಾಜಾಸ್ಥಾನವನ್ನು ತಿರಸ್ಕರಿಸಿಯೋ ಅಥವಾ ಆಶಿಸದೆಯೋ ದೇವರ ಸನ್ನಿಧಿಯಲ್ಲಿದ್ದು ಗ್ರಂಥರಚಿಸಿದ ಹರಿಹರನಂಥ ಕವಿಗಳ ಮೇಲ್ಪಂಕ್ತಿ ಕುಮಾರವ್ಯಾಸನಿಗೆ ಆದರಣೀಯವಾಗಿದ್ದಂತೆ ಗೋಚರಿಸುತ್ತದೆ.

**ಕಥಾವಸ್ತು:**

ಭರತವಂಶದ ಶಂತನುವಿಗೆ ಗಂಗೆಯಲ್ಲಿ ಭೀಷ್ಮ ಜನಿಸಿ, ತಂದೆಗಾಗಿ ಬ್ರಹ್ಮಚರ್ಯವ್ರತ ಪಾಲಿಸಿ ಸತ್ಯವತಿಯ ಮಕ್ಕಳನ್ನು ಉತ್ತರಾಧಿಕಾರಿಗಳನ್ನಾಗಿ ಮಾಡಿದ, ಧೃತರಾಷ್ಟ್ರ ಹುಟ್ಟುಕುರುಡನಾದುದರಿಂದ ಪಾಂಡುರಾಜನಿಗೆ ಪಟ್ಟವಾಯಿತು. ಕುಂತಿ ಮತ್ತು ಮಾದ್ರಿಗೆ ಧರ್ಮರಾಜಾದಿ ಐದು ಜನ ಮಕ್ಕಳಾದರು. ಧೃತರಾಷ್ಟ್ರನಿಗೆ ಗಾಂಧಾರಿಯಲ್ಲಿ ದುರ್ಯೋಧನಾದಿ ನೂರುಜನ ಮಕ್ಕಳು ಜನಿಸಿದರು. ಪಾಂಡವ ಕೌರವರ ನಡುವೆ ದ್ವೇಷ ಮೂಡಿತು. ಭೀಮನನ್ನು ಸಾಯಿಸಲು ದುರ್ಯೋಧನ ಅನೇಕ ಪ್ರಯತ್ನ ಮಾಡಿದರೂ ಪ್ರಯೋಜನವಾಗಲಿಲ್ಲ. ಕೌರವ ಪಾಂಡವರು ಅಸ್ತ್ರವಿದ್ಯಾಪ್ರದರ್ಶನ ಮಾಡುವಾಗ ಕರ್ಣ ಬಂದು ಅರ್ಜುನನಿಗೆ ಪ್ರತಿಸ್ಪರ್ಧಿಯಾದ್ದರಿಂದ ದುರ್ಯೋಧನನಿಗೆ ಆಪ್ತನಾದ.

ಪಾಂಡವರನ್ನು ಹೇಗಾದರೂ ನಿರ್ನಾಮ ಮಾಡಬೇಕೆಂದು ಕೌರವರು ಉಪಾಯ ಹೂಡಿ ವಾರಣಾವತಕ್ಕೆ ಕಳುಹಿಸಿ ಅರಗಿನ ಮನೆಯಲ್ಲಿಟ್ಟರು. ವಿದುರನಿಂದ ವಿಷಯ ತಿಳಿದ ಪಾಂಡವರು ಅಪಾಯದಿಂದ ಪಾರಾದರು. ಅಲ್ಲಿಂದ ಕಾಡಿಗೆ ಸೇರಿ ಅನಂತರ ಏಕಚಕ್ರಾಪುರಕ್ಕೆ ಹೋದರು. ಅರ್ಜುನ ಮತ್ಸ್ಯಯಂತ್ರವನ್ನು ಭೇದಿಸಿ ದ್ರೌಪದಿಯನ್ನು ಮದುವೆಯಾಗುತ್ತಾನೆ. ಅಲ್ಲಿ ಕೃಷ್ಣನ ಪರಿಚಯವಾಗುತ್ತದೆ. ಕುಂತಿಯ ಮಾತಿನಂತೆ ದ್ರೌಪದಿ ಪಂಚವಲ್ಲಭೆಯಾದಳು.

ಧೃತರಾಷ್ಟ್ರ ಪಾಂಡವರನ್ನು ಹಸ್ತಿನಾಪುರಕ್ಕೆ ಕರೆಯಿಸಿ ರಾಜ್ಯದಲ್ಲಿ ಪಾಲು ನೀಡುತ್ತಾನೆ. ಅರ್ಜುನನು ತೀರ್ಥಯಾತ್ರೆಗೆ ಹೋಗುವಾಗ ದ್ವಾರಕೆಯಲ್ಲಿ ಸುಭದ್ರೆಯನ್ನು ವಿವಾಹವಾಗುತ್ತಾನೆ. ಪಾಂಡವರು ರಾಜಸೂಯಯಾಗವನ್ನು ನೆರವೇರಿಸುತ್ತಾರೆ. ಕೌರವರ ಆಹ್ವಾನದಂತೆ ಧರ್ಮರಾಜ ಹಸ್ತಿನಾಪುರಕ್ಕೆ ಬಂದು ಜೂಜಿನಲ್ಲಿ ಸರ್ವಸ್ವವನ್ನು ಸೋಲುತ್ತಾನೆ. ಕೌರವರು ದ್ರೌಪದಿಯನ್ನು ರಾಜಸಭೆಗೆ ಕರೆಸಿ ಅವಮಾನ ಮಾಡಿದಾಗ ದುರ್ಯೋಧನ ದುಶ್ಯಾಸನರನ್ನು ಕೊಲ್ಲುವುದಾಗಿ ಭೀಮ ಪ್ರತಿಜ್ಞೆ ಮಾಡಿದ. ಧೃತರಾಷ್ಟ್ರ ಪಾಂಡವರಿಗೆ ರಾಜ್ಯವನ್ನು ಮತ್ತೆ ಕೊಟ್ಟನಾದರೂ ಧರ್ಮರಾಯ ಮತ್ತೆ ಜೂಜಿನಲ್ಲಿ ಎಲ್ಲವನ್ನು ಸೋತ. ಪಾಂಡವರು ಹನ್ನೆರಡು ವರ್ಷ ವನವಾಸವನ್ನು ಒಂದು ವರ್ಷ ಅಜ್ಞಾತವಾಸವನ್ನು ಮಾಡಬೇಕಾಯಿತು.

ಪಾಂಡವರು ಕಾಡಿಗೆ ಹೋದಾಗ ಕೃಷ್ಣ ಬಂದು ಸಂತೈಸಿದ. ಅರ್ಜುನ ಶಿವನನ್ನು ಕುರಿತು ತಪಸ್ಸು ಮಾಡಿ ಪಾಶುಪತಾಸ್ತ್ರ ಪಡೆದ. ವನವಾಸ ಮುಗಿದ ಮೇಲೆ ಪಾಂಡವರು ವಿರಾಟನಗರಕ್ಕೆ ಹೋದರು. ದ್ರೌಪದಿಯನ್ನು ಬಯಸಿದ ಕೀಚಕ ಭೀಮನಿಂದ ಹತನಾದ. ಕೌರವರು ವಿರಾಟನ ಗೋವುಗಳನ್ನು ಅಪಹರಿಸಿದಾಗ ಅರ್ಜುನ ಕುರುಸೈನ್ಯವನ್ನು ಗೆದ್ದ.

ಪಾಂಡವರು ತಮಗೆ ರಾಜ್ಯವನ್ನು ಕೊಡಬೇಕೆಂದು ಕಳುಹಿಸಿದ ಕೃಷ್ಣರಾಯಭಾರವು ವಿಫಲವಾಯಿತು. ಕೃಷ್ಣ ಅರ್ಜುನನಿಗೆ ಸಾರಥಿಯಾದ. ಕುರುಕ್ಷೇತ್ರದಲ್ಲಿ ಯುದ್ಧ ನಿಶ್ಚಯವಾಗಿ ಕೌರವರ ಸೇನಾಧಿಪತಿಯಾಗಿ ಭೀಷ್ಮನಿಗೆ ಪಟ್ಟಕಟ್ಟಲಾಯಿತು. ಯುದ್ಧವಿಮುಖನಾದ ಅರ್ಜುನನಿಗೆ ಕೃಷ್ಣ ಗೀತೋಪದೇಶ ಮಾಡಿದ. ಪಾಂಡವರು ಶಿಖಂಡಿಯನ್ನು ಮುಂದಿಟ್ಟಾಗ ಭೀಷ್ಮ ಶರಶಯ್ಯೆಯಲ್ಲಿ ಮಲಗಿದ. ಅನಂತರ ಸೇನಾಧಿಪತ್ಯವನ್ನು ದ್ರೋಣ ವಹಿಸಿಕೊಂಡ. ಅಭಿಮನ್ಯುವನ್ನು ಕೌರವರು ಮೋಸದಿಂದ ಕೊಂದರು. ದ್ರೋಣನ ಮರಣಾನಂತರ ಕರ್ಣ ಸೇನಾಧಿಪತಿಯಾದ. ಕರ್ಣನಾದ ಮೇಲೆ ಶಲ್ಯ ಸೇನಾಧಿಪತ್ಯ ವಹಿಸಿಕೊಂಡ. ಶಲ್ಯನಾದಮೇಲೆ ದುರ್ಯೋಧನ ಸೇನಾಧಿಪತಿಯಾದಾಗ ಭೀಮ ಅವನ ತೊಡೆಮುರಿದ. ಅಶ್ವತ್ಥಾಮ ಉಪಪಾಂಡವರನ್ನು ಸಂಹರಿಸಿದ. ಕೊನೆಗೆ ಧರ್ಮರಾಯನಿಗೆ ಪಟ್ಟಾಭಿಷೇಕವಾಯಿತು. ಈ ಕಥೆಯನ್ನು ಕುಮಾರವ್ಯಾಸ ಹತ್ತು ಪರ್ವಗಳಲ್ಲಿ ಔಚಿತ್ಯಪೂರ್ಣವಾಗಿ ಅಳವಡಿಸಿರುವುದು ಅವನ ದೈತ್ಯಪ್ರತಿಭೆಗೆ ನಿದರ್ಶನವಾಗಿರುವುದನ್ನು ಇಲ್ಲಿ ಅವಲೋಕಿಸಬಹುದು.

೧. **ಆದಿಪರ್ವ:** ಮಂಗಳಾಚರಣೆ, ಭಾರತಕಥಾರಂಭ, ಕರ್ಣಜನನ, ಕುರುಪಾಂಡವಜನನ, ಪಾಂಡು ವೃತ್ತಾಂತ, ಭೀಮದುರ್ಯೋಧನರ ವೈರ, ದ್ರೋಣಾಗಮನ, ಶಸ್ತ್ರಪ್ರದರ್ಶನ; ದ್ರುಪದ ಮಾನಭಂಗ;

ದ್ರೌಪದಿ, ಧೃಷ್ಟದ್ಯುಮ್ನರ ಜನನ, ಅರಗಿನ ಅರಮನೆಯಿಂದ ಪಾರು, ಹಿಡಿಂಬವಧೆ, ಘಟೋತ್ಕಜ ಜನನ, ಬಕವಧೆ, ಅಂಗಾರವರ್ಮ ವೃತ್ತಾಂತ, ಪಾಂಚಾಲನಗರ ಪ್ರವೇಶ, ಸ್ವಯಂವರ ಸಿದ್ಧತೆ, ಸ್ವಯಂವರ ಮಂಟಪದಲ್ಲಿ ದ್ರೌಪದಿ, ರಾಜರಾಜರನ್ನೆಲ್ಲ ಮತ್ಸ್ಯಯಂತ್ರ ಗೆದ್ದಿತು, ಬ್ರಾಹ್ಮಣವೇಷಧಾರಿ ಅರ್ಜುನನಿಂದ ಯಂತ್ರಭೇದನ, ರಿಪುನೃಪರಮರ್ದನ, ವ್ಯಾಸರ ಉಪದೇಶ, ದ್ರೌಪದಿ ಪಂಚಪಾಂಡವರ ವಿವಾಹ ಮತ್ತೆ ಹಸ್ತಿನಾಪುರಕ್ಕೆ ಪಾಂಡವರ ಪ್ರವೇಶ, ರಾಜ್ಯವಿಭಜನೆ, ಸುಭದ್ರಾ ಪರಿಣಯ, ಖಾಂಡವವನದಹನ.

೨. **ಸಭಾಪರ್ವ:** ರಾಜಸೂಯಾರಂಭ, ಜರಾಸಂಧನವಧೆ, ಪಾರ್ಥ ದಿಗ್ವಿಜಯ, ಭೀಮನ ಪೂರ್ವ ದಿಗ್ವಿಜಯ, ಸಹದೇವನಿಂದ ದಕ್ಷಿಣದಿಗ್ವಿಜಯ; ಘಟೋತ್ಕಚನ ಲಂಕಾಯಾತ್ರೆ, ನಕುಲನ ಪಶ್ಚಿಮ ದಿಗ್ವಿಜಯ ಯಾಗಾರಂಭ, ಶಿಶುಪಾಲ ಪ್ರತಾಪ, ಭೀಷ್ಮರಿಂದ ಕೃಷ್ಣಸ್ತುತಿ, ಶಿಶುಪಾಲನ ಶಿರಸ್ಛೇಧನ, ಯಾಗ ಸಮಾಪ್ತಿ, ಧರ್ಮರಾಯನು ತನ್ನ ನಗರಿಯನ್ನು ಬಿಟ್ಟು ಹಸ್ತಿನಾವತಿಗೆ ನಡೆಯುತ್ತಾನೆ, ಕಪಟದ್ಯೂತದಲ್ಲಿ ಧರ್ಮಜನನ್ನು ಕೌರವ ಗೆಲ್ಲುತ್ತಾನೆ. ಪರಿಭವದಿಂದ ದ್ರೌಪದಿಯನ್ನು ಶ್ರೀಕೃಷ್ಣಸ್ತುತಿ ಕಾಯುತ್ತದೆ, ನೊಂದಪಾಂಡವರನ್ನು ಧೃತರಾಷ್ಟ್ರ ಸಂತೈಸಿ ಕಳಿಸುತ್ತಾನೆ, ಮತ್ತೆ ದ್ಯೂತ; ಮತ್ತೆ ಸೋಲು; ವನವಾಸಯಾತ್ರೆ.

೩. **ಅರಣ್ಯಪರ್ವ:** ವನಪ್ರವೇಶ, ಕಿಮ್ಮೀರವಧೆ, ಶ್ರೀಕೃಷ್ಣ ಸಂದರ್ಶನ, ಕಣ್ವಾಶ್ರಮದ ಜಂಬೂಫಲ, ಇಂದ್ರಕೀಲಕ್ಕೆ ಅರ್ಜುನನ ಯಾತ್ರೆ, ಶಂಭು ಕಿರಾತಪ್ರವೇಶ, ದಾನವದಹನ, ಧೀರ ಭಕ್ತಿ, ಅರ್ಜುನನಿಗಾದ ಶಿವಕರುಣೆಯ ಲಾಭ, ಇಂದ್ರಪುರಕ್ಕೆ ಅರ್ಜುನ, ಊರ್ವಶಿಯ ಸುಮನೋಹರ ಪ್ರಣಯದಿಂದ ಅರ್ಜುನ ಪಾರಾದುದು, ಧರ್ಮನಂದನನ ತೀರ್ಥಯಾತ್ರೆ, ಭೀಮ ಆಂಜನೇಯನ ದರ್ಶನ ಪಡೆಯುತ್ತಾನೆ, ಜಟಾಸುರ ಮುಂತಾದ ದಾನವರನ್ನು ಭೀಮಕೊಂದುದು, ಧರ್ಮರಾಯನಿಗೆ ಅರ್ಜುನ ನಿರೂಪಿಸಿದ ನಿವಾತಕವಚರಯುದ್ಧ ವರ್ಣನೆ, ಸರ್ಪಬಂಧನದಿಂದ ಭೀಮಸೇನನನ್ನು ಧರ್ಮರಾಯ ಉಳಿಸುತ್ತಾನೆ, ಕೃಷ್ಣಾಗಮನ, ಮುನಿಗಳ ಉಪಕಥೆ, ದೂರ್ವಾಸ ವೃತ್ತಾಂತ, ಘೋಷಯಾತ್ರೆಯ ನೆಪ, ಗಂಧರ್ವಕೌರವ ಬಲಗಳ ನಡುವೆ ಹೋರಾಟ, ಚಿತ್ರಸೇನ ಕೌರವರನ್ನು ಕಟ್ಟಿಕೊಂಡೊಯ್ಯುತ್ತಾನೆ, ಅರ್ಜುನನಿಂದ ಚಿತ್ರಸೇನನ ಪರಾಭವ, ಕೌರವ ಸಂರಕ್ಷಣೆ, ಪರಿಭವಿತನಾದ ಕೌರವ ಪ್ರಾಯೋಪವೇಶಕ್ಕೆ ಸಿದ್ಧನಾಗುತ್ತಾನೆ. ರಾಕ್ಷಸೋಪದೇಶ, ದ್ರೌಪದಿಯನ್ನು ಅಪಹರಿಸಬಂದ ಸೈಂಧವನಿಗಾದ ಪರಿಭವ, ಯಕ್ಷಪ್ರಶ್ನೆ.

**೪. ವಿರಾಟಪರ್ವ:** ವಿರಾಟನಗರ ಪ್ರವೇಶ-ದ್ರೌಪದಿಯಲ್ಲಿ ಕೀಚಕ ನೆನೆದ ವಿಷಮ-ಮೋಹ-ಭೀಮನಿಂದ ಕೀಚಕವಧೆ-ದಕ್ಷಿಣಗೋಗ್ರಹಣದಲ್ಲಿ ಭೀಮ ಸುಶರ್ಮಕನನ್ನು ಹಿಡಿಯುತ್ತಾನೆ-ಉತ್ತರಗೋಗ್ರಹಣ; ಉತ್ತರನ ಪೌರುಷ; ಅರ್ಜುನನ ಸಾರಥೀತನ-ಭೀತಿಗೊಂಡ ಉತ್ತರನನ್ನು ಕಲಿಮಾಡಿ ಅರ್ಜುನ ಕೌರವ ಬಲವನ್ನು ಎದುರುಗೊಳ್ಳುತ್ತಾನೆ-ಕೌರವರನ್ನು ಸದೆದು ಗೋವುಗಳನ್ನು ಬಿಡಿಸಿದುದು-ಸಮ್ಮೋಹನಾಸ್ತ್ರ ಪ್ರಯೋಗ-ಉತ್ತರ ಧನಂಜಯರು ಜಯಶಾಲಿಗಳಾಗಿ ನಗರಕ್ಕೆ ಹಿಂತಿರುಗಿದುದು, ವಿರಾಟನ ಪುತ್ರವ್ಯಾಮೋಹ, ಉತ್ತರನ ಮೌನ-ಅಭಿಮನ್ಯು ಉತ್ತರೆಯರ ಮದುವೆಗೆ ಶ್ರೀಕೃಷ್ಣ ಆಗಮನ.

**೫. ಉದ್ಯೋಗ ಪರ್ವ:** ಭಕ್ತಕುಟುಂಬಿ ಕೃಷ್ಣ ಅರ್ಜುನನ ಸಾರಥಿಯಾಗುವುದು-ಶಲ್ಯನನ್ನು ಕೌರವ ಒಲಿಸಿಕೊಂಡುದು, ಸಂಜಯನ ದೌತ್ಯ-ವಿದುರನೀತಿ, ಸನತ್ಸುಜಾತ ನೀತಿ-ಕೃಷ್ಣ ಪಾಂಡವರು ಹೇಳಿದುದನ್ನು ಸಂಜಯ ಕೌರವರಿಗೆ ನಿರೂಪಿಸುತ್ತಾನೆ-ಸಂಗ್ರಾಮಕ್ಕೆ ಪಾಂಡವರ ಮನಸ್ಸನ್ನು ಕೃಷ್ಣ ಹದಗೊಳಿಸಿದುದು-'ಕಾಳಗವನೇ ಬಲಿದು ಬಹೆ' ಎಂದು ದ್ರೌಪದಿಗೆ ವಚನವಿತ್ತು ಕೃಷ್ಣ ಹಸ್ತಿನಾವತಿಗೆ ನಡೆದುದು-ಕೌರವನ ಒಡ್ಡೋಲಗಕ್ಕೆ ರಾಯಭಾರಿ ಅಸುರಾರಿ ಕೃಷ್ಣ ನಡೆತರುತ್ತಾನೆ-'ಬಿಡುನೆಲನ, ಕೇಡಿಗರ ಮಾತಿಂಗೊಡಬಡದಿರು' ಎಂದು ಜರೆದ ಕೃಷ್ಣನನ್ನು ಕೌರವ ಕಟ್ಟಲು ಮಾಡುವ ಸಾಹಸ, ವಿಶ್ವರೂಪದರ್ಶನ, ಕರ್ಣಭೇದನ-ಧೃಷ್ಟದ್ಯುಮ್ನನು ಸೇನಾಧಿಪತಿಯಾಗುತ್ತಾನೆ.

**೬. ಭೀಷ್ಮಪರ್ವ:** ಭೀಷ್ಮರು ಕೌರವರ ಸೇನಾಧಿಪತಿಯಾದುದು-ಶತ್ರು ಸುಭಟರನ್ನು-ಧರ್ಮರಾಯನು ಸಾಮದಿಂದ ಒಲಿಸಿಕೊಂಡಿದ್ದು-ತನ್ನ ನಿಜವನ್ನು ತೋರಿ ಶ್ರೀಕೃಷ್ಣನು ಅರ್ಜುನನ ವಿಷಾದವನ್ನು ಕಳೆದುದು-ಯುದ್ಧಾರಂಭ-ಉಭಯಪಕ್ಷದ ಮಹಾರಥರ ಯುದ್ಧ-ಕೃಷ್ಣಕೋಪವನ್ನು ಕೆರಳಿಸಿ ಅದನ್ನು ಭಯಭಕ್ತಿಯಿಂದ ಗೆದ್ದ ಗಾಂಗೇಯರು ದೇವದೇವನಿಗಾಗುತ್ತಿದ್ದ ಮಹದಪವಾದವನ್ನು ನಿವಾರಿಸುತ್ತಾರೆ-ಕೃಷ್ಣನೊಡನೆ ಬಂದ ಪಾಂಡವರು ಪ್ರಾರ್ಥಿಸಲು ಭೀಷ್ಮರು ಶಸ್ತ್ರಸನ್ಯಾಸ ಮಾಡುವುದಾಗಿ ತಿಳಿಸಿದುದು-ಅರ್ಜುನನ ಪ್ರತಾಪವನ್ನು ಕಂಡ ದ್ರೋಣಾದಿಗಳ ಬೆರಗು-ಭೀಷ್ಮಾರ್ಜುನ ಸಂಗ್ರಾಮ-ಭೀಷ್ಮರ ಶರಶಯನ.

**೭. ದ್ರೋಣಪರ್ವ:** ದ್ರೋಣಸೇನಾಧಿಪತ್ಯ-ಧರ್ಮರಾಯನನ್ನು ಹಿಡಿದು ತರುವುದಾಗಿ ಕೌರವನಿಗೆ ದ್ರೋಣರು ಭಾಷೆಕೊಡುವುದು-ಸುಪ್ರತೀಕ ಭಗದತ್ತರನ್ನು ಅರ್ಜುನ ಕೊಲ್ಲುವುದು-ಪದ್ಮವ್ಯೂಹರಚನೆ; ವ್ಯೂಹ ಭೇದನಕ್ಕೆ ಅಭಿಮನ್ಯು ಹೊರಟದ್ದು-ಅಭಿಮನ್ಯುವಿನ ಮಕ್ಕಳಾಟಿಕೆ ಅತಿರಥರಿಗೆ

ಮೃತ್ಯುವಾಟವಾಗಿ ಅವನ ಮಹಾಪ್ರತ್ಯಾಪಕ್ಕೆ ಶತ್ರು ಕುಮಾರರು ಆಹುತಿಗೊಳ್ಳುವುದು-ಕಾಡ್ಗಿಚ್ಚಿನ ಉಪಶಮನ; ಅಭಿಮನ್ಯು ಮರಣ-ಧರ್ಮರಾಯನ ದುಃಖಾತಿರೇಕ, ವ್ಯಾಸರ ಉಪದೇಶ-ಅರ್ಜುನನ ಶೋಕ, ಕೋಪ; ಸೈಂಧವನ ಪ್ರತಿಜ್ಞೆ-ಭಕ್ತಿಯಿಂದ ದ್ರೋಣರನ್ನು ಗೆದ್ದದ್ದು, ಅರ್ಜುನ ಸೈನ್ಯವ್ಯೂಹವನ್ನು ಭೇದಿಸುವುದು-ಕೌರವರನ್ನು ಗೆದ್ದ ಅರ್ಜುನ ಬಳಲಿದ ತನ್ನ ಕುದುರೆಗಳಿಗೆ ಸಂಗ್ರಾಮ ಮಧ್ಯದಲ್ಲಿ ನೀರುಕುಡಿಸುವುದು-ಧರ್ಮರಾಜ ಕಳಿಸಿದ ಸಾತ್ಯಕಿ ಅರ್ಜುನನನ್ನು ಸೇರುವುದು-ಭೀಮಸೇನ ಕೌರವಾನುಜರನ್ನು ಆಹುತಿಗೊಳ್ಳುವುದು-ದ್ರೋಣರನ್ನು ಗೆದ್ದ ಭೀಮ ಕರ್ಣನೊಡನೆ ಸೆಣಸಿ ಘಾಸಿಯಾಗುವುದು-ಸೈಂಧವ ವಧೆ-ಘಟೋತ್ಕಚನ ರಾತ್ರಿಯುದ್ಧ-ಕರ್ಣನಿಂದ ಅವನ ಮರಣ-ಅಶ್ವತ್ಥಾಮನ ಪ್ರಳಯಕೋಪ; ನಾರಾಯಣಾಸ್ತ್ರ ಪ್ರಯೋಗ; ಶ್ರೀಕೃಷ್ಣನ ಅಮೃತ ರಕ್ಷೆ.

೮. **ಕರ್ಣಪರ್ವ:** ಕರ್ಣನ ಸೇನಾಧಿಪತ್ಯ-ಭೀಮಸೇನನು ಕ್ಷೇಮಧೂರ್ತಿಯನ್ನು ಕೊಲ್ಲುವುದು-ಕೌರವ ಸೈನ್ಯವನ್ನು ಸಾತ್ಯಕಿ ಕಲಕುವುದು-ದುರ್ಯೋಧನನನ್ನು ಧರ್ಮರಾಯ ಗೆಲ್ಲುವುದು-ತ್ರಿಪುರದಹನದ ಕಥೆಯನ್ನು ಹೇಳಿ ಕೌರವನು ಶಲ್ಯನನ್ನು ಕರ್ಣನ ಸಾರಥಿಯಾಗಲು ಒಡಂಬಡಿಸುವುದು-ಸಾರಥಿಯಾದ ಶಲ್ಯನೊಡನೆ ಕರ್ಣ ಯುದ್ಧ ಭೂಮಿಗೆ ನಡೆತರುವುದು-ಶಲ್ಯಕರ್ಣರ ತಿಕ್ಕಾಟ-ಸುಷೇಣನನ್ನು ಭೀಮ ಕೊಂದುದು-ಧರ್ಮರಾಯನನ್ನು ಕರ್ಣ ಭಂಗಿಸುವುದು-ಕರ್ಣನಿಂದ ಭೀಮನ ಪರಾಭವ-ಭೀಮನಿಂದ ಕೌರವಾನುಜರ ಮರಣ, ಕರ್ಣನಿಂದ ಧರ್ಮಜನ ಪರಾಜಯ-ಅರ್ಜುನನು ಅಣ್ಣನ ಸೋಲನ್ನು ಕೇಳಿಬರುತ್ತಿರುವಾಗ ಎದುರುಗೊಂಡ ಕೌರವ ಬಲವನ್ನು ಸಮೆಸುವುದು-ಕೌರವಸಾಗರವನ್ನು ಭೀಮಸೇನ ಕದಡುವುದು, ನೊಂದ ಅಣ್ಣನನ್ನು ಕಾಣಲು ಕೃಷ್ಣನೊಡನೆ ಅರ್ಜುನ ಬರುವುದು; ಧರ್ಮಜನ ಬಿರುನುಡಿ-ಅವಮಾನಿತನಾದ ಅರ್ಜುನ ಅಣ್ಣನನ್ನು ಕೊಲ್ಲುತ್ತೇನೆಂದು ಮುನ್ನುಗ್ಗುವುದು; ಶ್ರೀಕೃಷ್ಣ ಕೃಪೆ; ಪಶ್ಚಾತ್ತಾಪದ ಕಣ್ಣೀರಿನಲ್ಲಿ ಸಹೋದರರ ಸಮ್ಮಿಲನ-ಅಣ್ಣನಾಣತಿಯನ್ನು ಪಡೆದು ಯುದ್ಧಕ್ಕೆ ಅರ್ಜುನ ಹೊರಟದ್ದು-ದುಶ್ಶಾಸನನ ರಕ್ತದಲ್ಲಿ ಭೀಮಸೇನನ ಕೋಪಾಗ್ನಿಗೆ ಸ್ನಾನ-ಜಯಮತ್ತನಾದ ಭೀಮನನ್ನು ವೃಷಸೇನನು ವಿರಥನನ್ನಾಗಿ ಮಾಡುವುದು; ಅರ್ಜುನ ಅವನನ್ನು ಕೊಲ್ಲುವುದು-ಕರ್ಣಾರ್ಜುನ ಯುದ್ಧಾರಂಭ-ಸೃಷ್ಟಿಯ ಸಮಸ್ತ ಸುರಾಸುರ ಶಕ್ತಿಗಳು ಎರಡು ಬಣವಾಗಿ ಕರ್ಣಾರ್ಜುನರ ಪಕ್ಷ ವಹಿಸುವುದು-ಕರ್ಣಾರ್ಜುನರ ಭಯಂಕರ ಯುದ್ಧ; ಕೃಷ್ಣ ಮೆಚ್ಚುವಂತೆ ಕರ್ಣ ಹೋರಾಡುವುದು-ಕರ್ಣನ ಪರಾಕ್ರಮಕ್ಕೆ ಆಂಜನೇಯ ತಲೆತೂಗುವುದು-ಸರ್ಪಬಾಣ ಪ್ರಯೋಗ; ಶಲ್ಯ ತಿರಸ್ಕಾರ-ಕರ್ಣನ ವಿಜಯಸಿರಿ ಧನಂಜಯನ ಭುಜಕ್ಕೆ ಸರಿದಳು ಕರ್ಣಾವಸಾನ; ಪಾಂಡವರ ದುಮ್ಮಾನ; ಕೌರವನ ಪ್ರಲಾಪ.

೯. **ಶಲ್ಯಪರ್ವ:** ಶಲ್ಯಸೇನಾಧಿಪತ್ಯ-ಧರ್ಮರಾಯನು ಶಲ್ಯನನ್ನು ಜಯಿಸುವುದು-ಧರ್ಮರಾಯನಿಂದ ಶಲ್ಯವಧೆ.

೧೦. **ಗದಾಪರ್ವ:** ಸುಯೋಧನನು ತನ್ನನ್ನು ತಾನೆ ಸೇನಾಧಿಪತಿಯಾಗಿ ಮಾಡಿಕೊಂಡಿದು-ಸಹದೇವನಿಂದ ಶಕುನಿಯ ವಧೆ; ಅರ್ಜುನನಿಂದ ಸಂಸಪ್ತಕರ ವಧೆ-ವೈಶಂಪಾಯನ ಸರೋವರ ಪ್ರವೇಶ-ಪಾಂಡವರು ಸುಯೋಧನನನ್ನು ಅರಸಿಕೊಂಡು ಅಲ್ಲಿಗೆ ಬರುವುದು-ಪಾಂಡವರ ಅವಹೇಳನದಿಂದ ಕೌರವ ಸರೋವರದಿಂದ ಹೊರಬರುತ್ತಾನೆ; ಬಲರಾಮನಾಗಮನ-ಭೀಮ ದುರ್ಯೋಧನ ಸಂಗ್ರಾಮ-ಊರುಭಂಗ-ತೊಡೆಯುಡಿದ ಕೌರವನನ್ನು ಕಂಡು ದುಃಖಗೊಂಡ ಅಶ್ವತ್ಥಾಮ ಪಾಂಡವರನ್ನು ನಿರ್ನಾಮಗೊಳಿಸಲು ಪ್ರತಿಜ್ಞೆಗೈಯುತ್ತಾನೆ-ರಾತ್ರಿ ಪಾಂಡವ ಶಿಬಿರದಲ್ಲಿ ಪ್ರಾಣಹತ್ಯೆ-ಅಶ್ವತ್ಥಾಮನ ಕುಶಿಕಾಸ್ತ್ರದಿಂದ ಉತ್ತರೆಯ ಗರ್ಭವನ್ನು ಶ್ರೀಕೃಷ್ಣ ಕಾಪಾಡುತ್ತಾನೆ; ಅಶ್ವತ್ಥಾಮನನ್ನು ಕೊಲ್ಲಲು ಮುನ್ನುಗುವ ಭೀಮಾರ್ಜುನರನ್ನು ದ್ರೌಪದಿ ತಡೆಯುತ್ತಾಳೆ-ವೇದವ್ಯಾಸರು ಧೃತರಾಷ್ಟ್ರನನ್ನು ಸಂತೈಸುವುದು; ಧರ್ಮರಾಯನಿಗೆ ಗಾಂಧಾರಿಯ ಶಾಪ-ಮಡಿದ ಮಕ್ಕಳನ್ನು ಯುದ್ಧಭೂಮಿಯಲ್ಲಿ ಕಂಡ ಗಾಂಧಾರಿಯ ವಿಲಾಪ-ಧರ್ಮರಾಜ ಪಟ್ಟಾಭಿಷೇಕ.

ಹೀಗೆ ಕುಮಾರವ್ಯಾಸ ಪ್ರತಿಭೆ ಮತ್ತು ಪಾಂಡಿತ್ಯದ ಬಲದಿಂದ ಬೃಹತ್ ಕಾವ್ಯವೊಂದನ್ನು ನಿರೂಪಿಸಿ ಯಶಸ್ಸು ಪಡೆದು ಪ್ರಸಿದ್ಧನಾಗಿದ್ದಾನೆ. ಕವಿ ತೋರಿಸಿರುವ ವಿನಯ, ಸಜ್ಜನಿಕೆಗಳು ವ್ಯಕ್ತಿತ್ವದ ಘನತೆಯನ್ನು ಸೂಚಿಸುತ್ತವೆ. ತನ್ನ ಕೃತಿಯ ಮೂಲದ ಕರ್ತೃ ವೇದವ್ಯಾಸರ ಸ್ಮರಣೆಯಲ್ಲಿಯೇ ಎಣಿಯಿಲ್ಲದ ಸಮರ್ಪಣ ಭಾವವನ್ನು ಕವಿ ವ್ಯಕ್ತಪಡಿಸಿದ್ದಾನೆ. '...ತರಳನನು ತನ್ನವನೆನುತ ಪತಿಕರಿಸಿ ಮಗನೆಂದೊಲಿದು ಕರುಣದಿ ವರವನಿತನು ದೇವ ವೇದವ್ಯಾಸ ಗುರುರಾಯ' (ಆಪ. ೧:೧೧). ಮಗನೆಂದು ಭಾವಿಸಿ ಒಲಿದು ಅನುಗ್ರಹಿಸಿದ ವೇದವ್ಯಾಸ ಗುರುರಾಯರು ಎಂಬಲ್ಲಿ ತನ್ನನ್ನು ತಾನು ಮಗನಾಗಿ ಅವರಿಗೆ ಒಪ್ಪಿಸಿಕೊಂಡಿದ್ದೇನೆ ಎಂಬ ವಿನೀತಭಾವವೇ ಅಡಗಿದೆ. ವ್ಯಾಸರಿಗೆ ಸಂದಾಯವಾಗಿರುವ ದೈವಿಕ ಶಕ್ತಿಗೆ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡಿರುವ ಇಲ್ಲಿನ ವಿಧೇಯತೆಗೆ ಹೊರತಾದುದೇನೂ ಇರಲಾರದೆನಿಸುತ್ತದೆ. ಹೀಗೆ ಸಮರ್ಪಿಸಿಕೊಳ್ಳುವ ಮೂಲಕ ವ್ಯಾಸರ ಋಣಭಾರವನ್ನು ಕವಿಸ್ಮರಣೆಗೆ ತಂದುಕೊಂಡಿದ್ದಾನೆ. ತನ್ನ ಕೈಚಳಕವನ್ನು ಹೇಳಿಕೊಳ್ಳುವ 'ಹಲಗೆ ಬಳಪವ ಪಿಡಿಯದ...' ಪದ್ಯದ ನಂತರವೇ ತನಗಿಂತ ಉದ್ದಾಮ ಪಂಡಿತರು ಇರಬಹುದಾದ ಸಾಧ್ಯತೆಯನ್ನು ಸ್ವೀಕರಿಸಿದ್ದಾನೆ. ಆ ಮೂಲಕ ತನ್ನ ಕ್ರತುಶಕ್ತಿಯ ಮಿತಿಯನ್ನು ಅರಿತುಕೊಂಡವನಂತೆ 'ವರ ಪಂಡಿತರು, ಸುಜನರು, ಸೂಕ್ತಿಕಾರರು, ಮತಿಯನೀವುದು ವೀರನಾರಾಯಣನ ಕಿಂಕರಗೆ' (ಆಪ:

೧:೧೬) ಎಂದು ಭಿನ್ನೈಸಿಕೊಂಡಿದ್ದಾನೆ. 'ಬರಿಯ ತೊಳಸಿಯ ಉದಕ' ಎಂಬ ಮಾತು ಕೃತಿ ಎಷ್ಟು ಸರಳವೋ ಅಷ್ಟೆ ಘನ, ಪಾವನ ಎಂಬುದನ್ನು ಅಭಿವ್ಯಕ್ತಿಸುತ್ತದೆ. ಕುಮಾರವ್ಯಾಸ ವಾಸ್ತವವನ್ನು ವ್ಯಂಜಿಸುವಾಗ ಎಷ್ಟು ನಿಷ್ಠುರಿಯೋ ಇತರರನ್ನು ಗೌರವಿಸುವಾಗ ಅಷ್ಟೇ ವಿನಯಶಾಲಿಯಾಗುತ್ತಾನೆ. 'ತಿದ್ದುವುದು', 'ಮತಿಯನೀವುದು' ಎಂದು ಬೇಡಿದ ಕವಿಯೇ, ಕಾವ್ಯಕ್ಕೆ ಗುರುವೆನಲು ರಚಿಸಿದ ಕುಮಾರವ್ಯಾಸಭಾರತವ' (ಆಪ: ೧:೧೯) ಎಂದೂ ಹೇಳಿಕೊಳ್ಳುತ್ತಾನೆ. ಆದ್ದರಿಂದ ಕುಮಾರವ್ಯಾಸ ತೋಡಿಕೊಂಡಿರುವ ವಿನಯ, ಸಜ್ಜನಿಕೆ ಕೀಳರಿಮೆಯಿಂದ ಪ್ರೇರಿತವಾದುದಲ್ಲ; ಸ್ವಶಕ್ತಿಯ ಅರಿವಿದ್ದೂ ಪರಶಕ್ತಿಯನ್ನು ಗೌರವಿಸುವ ಸಮಚಿತ್ತತೆಯಿಂದ ಕೂಡಿದುದು:

**ಅರಸುಗಳಿಗಿದು ವೀರ ದ್ವಿಜರಿಗೆ**
**ಪರಮ ವೇದದ ಸಾರ ಯೋಗೀ**
**ಶ್ವರರ ತತ್ವವಿಚಾರ ಮಂತ್ರಿಜನಕೆ ಬುದ್ಧಿಗುಣ**
**ಪರಿಣತರಲಂಕಾರ...**
**(ಆ.ಪ. ೧–೧೯)**

ಎಂಬ ಹೇಳಿಕೆ ವಾಸ್ತವವಾಗಿ ಭಾರತಕಥಾಮಂಜರಿಯ ಸಂವಿಧಾನಕ್ಕೆ ಸಂಬಂಧಿಸಿದುದರಿಂದ ಇಲ್ಲಿ ಕುಮಾರವ್ಯಾಸನ ವ್ಯಕ್ತಿತ್ವದ ಬಹುಮುಖತೆಯನ್ನು ಗ್ರಹಿಸಬಹುದು. ಕವಿ ಭಿನ್ನ ರುಚಿಯ ಲೋಕಸಮಸ್ತವನ್ನೂ ತಣಿಸುವ ಸವಾಲಿಗೆ ಆಹ್ವಾನಕೊಟ್ಟು ಕಾರ್ಯೋನ್ಮುಖನಾಗಿದ್ದಾನೆ. ತನ್ನ ಕಾರ್ಯದಲ್ಲಿ ವೈಫಲ್ಯಕ್ಕಿಂತ ಹೆಚ್ಚಿನ ಪ್ರಮಾಣದ ಸಾಫಲ್ಯವನ್ನು ಸಾಧಿಸಿದ್ದಾನೆ. ಭಾರತೀಯ ಕಾವ್ಯ ಮೀಮಾಂಸಕರು ರೂಢಿಸಿದ ಸಾಂಪ್ರದಾಯಿಕ ಜಾಡನ್ನು ಹಿಡಿದೂ ಅದರ ಅಂಧಾನುಕರಣೆಯನ್ನು ಮಾಡದೆ ಹೊಸತನವನ್ನೂ ಮೆರೆದಿದ್ದಾನೆ ಎಂಬುದನ್ನು ಈ ಹೇಳಿಕೆ ಸೂಚಿಸುತ್ತದೆ. ಸ್ವತಂತ್ರ ಪ್ರತಿಭೆಯ ಕವಿಯಾದರೂ ಪರಂಪರೆಗೆ ಹೊರತಾದವನಾಗಲಾರ. ಆದರೆ ಪರಂಪರೆಯನ್ನು ಮುರಿಯುವ, ಮುರಿದು ಕಟ್ಟಿ ಕಸಿಮಾಡುವ ಸ್ವಾತಂತ್ರ್ಯ ವಹಿಸುತ್ತಾನೆ. ಇದು ಪ್ರತಿಯೊಬ್ಬ ಪ್ರತಿಭಾಶಾಲಿಯ ಕರ್ತವ್ಯ ಮತ್ತು ಜವಾಬ್ದಾರಿ. ಕುಮಾರವ್ಯಾಸ ಇಂತಹ ಸ್ವತಂತ್ರ್ಯಶೀಲ ಪ್ರತಿಭಾನ್ವಿತ ಕವಿ. 'ಕಾವ್ಯಕೆ ಗುರುವೆನಲು' ಎನ್ನುವ ಮಾತು ಇಲ್ಲಿ ವಿಶೇಷವಾಗಿ ಗಮನಿಸಬೇಕಾದದು. ವ್ಯಾಸಭಾರತ ಹೇಗೆ ರಾಷ್ಟ್ರೀಯ 'ಗುರು'ತ್ವವನ್ನು ಪಡೆದುಕೊಂಡಿದೆಯೋ, ಹಾಗಿಯೇ ಕುಮಾರವ್ಯಾಸಭಾರತ ಪ್ರಾಂತೀಯ 'ಗುರು'ತ್ವವನ್ನು ಪಡೆದುಕೊಂಡಿದೆ, ಈ ಎರಡೂ ಕೃತಿಗಳು ತಮ್ಮ ತಮ್ಮ ಮಟ್ಟದಲ್ಲಿ ಸಮೃದ್ಧವಾದ ಸಾಹಿತ್ಯ ಪರಂಪರೆಯನ್ನು ಹುಟ್ಟುಹಾಕಿವೆ. ಕುಮಾರವ್ಯಾಸ ನಿಶ್ಚಯವಾಗಿ ಪರಂಪರೆಯ ನಿರ್ಮಾಪಕ[೧೩] ಎನ್ನಬಹುದು.

**ಲಕ್ಷ್ಮೀಶನ ಜೈಮಿನಿಭಾರತ:**

ವ್ಯಾಸಭಾರತದಿಂದ ಪ್ರೇರಣೆ ಪಡೆದು ಕಾವ್ಯ ರಚಿಸಿದ ಕನ್ನಡದ ಕವಿಗಳಲ್ಲಿ ಲಕ್ಷ್ಮೀಶನೂ ಒಬ್ಬ. ತನ್ನ ಕಾವ್ಯ 'ಜೈಮಿನಿಭಾರತ'ದ ಮೂಲಕ ವಾಚಕ ಸಮೂಹವನ್ನು ಸಮ್ಮೋಹನಗೊಳಿಸಿದಾತ. ಆದರೆ ಕವಿ ತನ್ನ ಇತಿವೃತ್ತದ ಬಗ್ಗೆ ಎಲ್ಲಿಯೂ ಖಚಿತವಾಗಿ ಉಲ್ಲೇಖಿಸದೆ ಇರುವುದರಿಂದ ಕವಿ ಚರಿತ್ರಕಾರರಿಗೆ ಕವಿ ಕಾಲ, ದೇಶ, ಮತ ಮುಂತಾದ ವಿಷಯಗಳ ಬಗ್ಗೆ ಜಿಜ್ಞಾಸೆಯುಂಟಾಗಿದೆ. ಮೂಲ ಸಂಸ್ಕೃತ 'ಜೈಮಿನಿಭಾರತ'ದ ೬೮ ಅಧ್ಯಾಯದ ಹರಹನ್ನು ಲಕ್ಷ್ಮೀಶ ೩೪ ಸಂಧಿಗಳ ೧೯೦೭ 'ವಾರ್ಧಕ ಷಟ್ಪದಿ'ಗಳಲ್ಲಿ ಅಡಕಗೊಳಿಸಿದ್ದಾನೆ. ರಾಘವಾಂಕನಿಂದ ಸ್ಫೂರ್ತಿಗೊಂಡು, ದೇಸೀಯ ಛಂದೋ ಪರಂಪರೆಯ ವಾರ್ಧಕ ಷಟ್ಪದಿಯನ್ನು ಮತ್ತೆ ಕನ್ನಡದಲ್ಲಿ ತಂದವನು. ವಾರ್ಧಕ ಷಟ್ಪದಿಯ ನಾಟಕೀಯವಾದ ಗಂಡು ಶೈಲಿಯ ಅಭಿವ್ಯಕ್ತಿ ರಾಘವಾಂಕನಲ್ಲಿ ಕಂಡು ಬಂದರೆ ಲಕ್ಷ್ಮೀಶ ಪದಲಾಲಿತ್ಯ ಮಾರ್ದವತೆಗೆ, ನಾದಪ್ರಿಯತೆಗೆ ಹೆಸರಾದ ಶೈಲಿಯಾಗಿಸಿದ್ದಾನೆ.

ಲಕ್ಷ್ಮೀಶ ತನ್ನ 'ಜೈಮಿನಿಭಾರತ'ದ ಪೀಠಿಕಾ ಸಂಧಿಯ ೧೧ನೆಯ ಪದ್ಯದಲ್ಲಿ ವೈಯಕ್ತಿಕ ವಿಚಾರವನ್ನು ಕ್ವಚಿತ್ತಾಗಿ ಹೇಳಿಕೊಂಡಿರುವುದನ್ನು ಬಿಟ್ಟರೆ ಮತ್ತೆಲ್ಲಿಯೂ ಉಲ್ಲೇಖಿಸಿಲ್ಲ.

**ವಿದ್ವತ್ಸಭಾವಲಯಮರಿಯೆ ವಿರಚಿಸಿದಂ ಭ**
**ರದ್ವಾಜ ಗೋತ್ರಭವನಣ್ಣ ಮಾಂಕನ ಸುತಂ**
**ಸದ್ವಿನುತ ಕರ್ಣಾಟ ಕವಿ ಚೂತವನ ಚೈತ್ರ ಲಕ್ಷ್ಮೀಶನೆಂಬೋಂನು**
**ಹೃದ್ವನಜದೊಳ್ ದೇವಪುರದ ಲಕ್ಷೀಶನ ಪ**
**ದದ್ವಯವನಾವಗಂ ಧ್ಯಾನಿಸುವರಡಿಗಳಂ**
**ಸದ್ವಿನಯದಿಂ ಭಜಿಪ ಬಲ್ಪಿಂದ ವಿಮಲ ಜೈಮಿನಿಭಾರತದ ಕಥೆಯನು**
**(ಜೈ.ಭಾ. ೧–೧೧)**

ಅಂದರೆ, ಅಣ್ಣಮಾಂಕನ ಮಗನೂ ಭಾರದ್ವಾಜಗೋತ್ರಭವನೂ ಸದ್ವಿನುತ 'ಕರ್ನಾಟಕವಿಚೂತವನ ಚೈತ್ರ'ನೂ ಆದ ಲಕ್ಷ್ಮೀಶನೆಂಬ ಒಬ್ಬನು ಜೈಮಿನೀ ಭಾರತದ ಕತೆಯನ್ನು 'ವಿದ್ವತ್ಸಭಾವಲಯಮರಿಯೆ' ರಚಿಸಿದ–ಎಂದು ಉಲ್ಲೇಖಿಸಿದ್ದಾನೆ. ಹಾಗಿಯೇ ಗ್ರಂಥದ ಕೊನೆಯಲ್ಲಿ 'ವಿರಾಜಿಪುದು ಲಕ್ಷ್ಮೀಪತಿಯ ಕಾವ್ಯರಚನೆ', ಕನ್ನಡ ಭಾಷಾ ಪದ್ಧತಿಯೊಳಣ್ಣಮಾಂಕನ ಕುಮಾರ ಲಕ್ಷ್ಮೀಪತಿಯ ಮುಖದಿಂದ ರಚಿಸಿದಂ ಕೃತಿಯಾಗೆ ಸುರಪುರ ಶ್ರೀಕಾಂತನು, ಸುರಪುರದ ಲಕ್ಷ್ಮೀಶ ಕನ್ನಡದೊಳು ವಿರಚಿಸಿದ– ಎಂದು ಹೇಳಿರುವುದನ್ನು ಹೊರತುಪಡಿಸಿದರೆ ಕವಿ ತನ್ನ ಬಗ್ಗೆ ಬೇರೆಲ್ಲೂ ಮತ್ತೇನನ್ನೂ ಹೇಳಿಲ್ಲ.

ಕವಿಯ ಕಾಲದ ಬಗ್ಗೆ ಅನೇಕ ವಾದವಿವಾದಗಳು ನಡೆದಿವೆ. 'ರಂ.ಶ್ರೀ.ಮುಗಳಿಯವರು ಗೋವಿಂದಪೈರವರ ವಾದದಲ್ಲಿನ ಮಲ್ಲಣಾರ್ಯ ಮತ್ತು ಬೊಮ್ಮರಸರ ಮೇಲಣ ಲಕ್ಷ್ಮೀಶನ ಪ್ರಭಾವವನ್ನು ಸಂದೇಹಿಸಿ, ಮೇಲಣ ಗಡುವನ್ನು ಗೊತ್ತು ಪಡಿಸಲು ಪೈಗಳು ಕೊಟ್ಟ ಆಧಾರವು ಯೋಗ್ಯವೆಂದು ತೋರುತ್ತದೆ. ಆದ್ದರಿಂದ ೧೩-೧೪ನೆಯ ಶತಮಾನದಿಂದ ೧೬ನೆಯ ಶತಮಾನದೊಳಗಣ ಕಾಲದಲ್ಲಿ ಲಕ್ಷ್ಮೀಶನ ಕಾಲಾವಧಿಯನ್ನು ನಿರ್ವಿವಾದವಾಗಿ ಇಟ್ಟುಕೊಳ್ಳಬಹುದು ಎಂದು ಹೇಳಿ ಸು. ೧೫೫೦ ಎಂದು ತಾತ್ಪೂರ್ವಿಕವಾಗಿ ಗ್ರಹಿಸಿದ್ದಕ್ಕೆ ಕಾರಣವೆಂದರೆ ಅದಕ್ಕಿಂತ ತರುವಾಯ ಅವನು ಇದ್ದಿರಲಾರನೆಂಬುದು'[೧೪] ಎಂದು ಕವಿ ಚರಿತ್ರಕಾರರು ನಿರ್ಧರಿಸಿದ್ದಾರೆ. ಲಕ್ಷ್ಮೀಶನ ಜನ್ಮಸ್ಥಳದ ಬಗೆಗೂ ಏಕಾಭಿಪ್ರಾಯವಿಲ್ಲ. ಕೆಲವರು 'ಕಡೂರು ತಾಲ್ಲೂಕಿನ ದೇವನೂರಿನವನೆ'ಂದೂ 'ಕಲಬುರ್ಗಿಯ ಬಳಿಯ ಸುರಪುರದವನು' ಎಂಬ ಹೇಳಿಕೆಗಳಿವೆ. ಹಾಗೆಯೇ ಅವನ ಮತವಿಚಾರವೂ ಚರ್ಚೆಗೆ ಗ್ರಾಸವಾಗಿದ್ದು, ಕವಿ ಶೈವಬ್ರಾಹ್ಮಣ, ಶ್ರೀವೈಷ್ಣವ, ಶಿವ-ವಿಷ್ಣು ಇಬ್ಬರನ್ನೂ ಸಮನ್ವಯಿಸಿ ಸ್ತುತಿಸಿದ ಭಾಗವತ ಮನೋಧರ್ಮದ ಕವಿ-ಈ ಎಲ್ಲ ಅಭಿಪ್ರಾಯಗಳೂ ವಿದ್ವದ್ವಲಯದಲ್ಲಿರುವುದನ್ನು ಕಾಣಬಹುದು.

ವ್ಯಾಸಭಾರತದ ಅಶ್ವಮೇಧಿಕ ಪರ್ವದಲ್ಲಿ ಪಾಂಡವರು ಮಾಡಿದ ಅಶ್ವಮೇಧಯಾಗದ ಪ್ರಸಂಗ ಬಂದಿದೆ. ಸಂಸ್ಕೃತ ಜೈಮಿನಿಭಾರತದ ಕಥಾವಸ್ತುವೂ ಇದೇ ಆಗಿದೆ. ಆದರೆ ಎರಡಕ್ಕೂ ವ್ಯತ್ಯಾಸವಿದೆ. ವ್ಯಾಸಭಾರತದಲ್ಲಿ ಈ ಕಥೆ ಮುಖ್ಯಕಥೆಗೆ ಅನುಬಂಧದಂತಿದ್ದರೆ, ಜೈಮಿನಿಭಾರತದಲ್ಲಿ ಇದೆ ಪ್ರಧಾನ ವಸ್ತುವಾಗಿದೆ. ಮಹಾಭಾರತದ ಕೆಲವು ಪಾತ್ರಗಳು ನುಸುಳಿದರೂ ಹಂಸಧ್ವಜ, ಸುಧನ್ವ ತಾಮ್ರಧ್ವಜ, ವೀರವರ್ಮ ಮೊದಲಾದ ಹೊಸ ಪಾತ್ರಗಳು ಇಲ್ಲಿವೆ. ಮೂಲಕೃತಿ ಕೇವಲ ಅಶ್ವಮೇಧಯಾಗದ ನೀರಸ ನಿರೂಪಣೆಯ ಕಥೆಯಾಗಿದ್ದರೆ, ಲಕ್ಷ್ಮೀಶನಲ್ಲಿ 'ಪುಣ್ಯಮದು ಶ್ರೀ ಕೃಷ್ಣಚರಿತಾಮೃತಂ' ಆಗಿದೆ.

ರಾಮಾಯಣದ ಉತ್ತರಕಾಂಡದ ಭಾಗವೂ ಉಂಟು. ಲವಕುಶರ ಕಥೆಯ ಸಂದರ್ಭವೂ ಬಂದಿದೆ. ಇದರಿಂದ ಮತ್ತೊಂದು ಮಹಾಕಾವ್ಯ ಸಂಪರ್ಕವೂ ಇದಕ್ಕೆ ದೊರೆತಂತಾಗಿದೆ. ಜಾಣರನ್ನು ತಲೆದೂಗಿಸುವ ಚಮತ್ಕೃತಿಯಿರುವ ಈ ಕಥನಾಕರ್ಷಣೆಯ ವಿಶೇಷತೆಯನ್ನು ವಿಮರ್ಶಕರೊಬ್ಬರು ಹೀಗೆ ವಿಶ್ಲೇಷಿಸಿದ್ದಾರೆ: 'ಭಾರತದ ಕಥಾವಸ್ತುವು ಅತ್ಯಂತ ಚಮತ್ಕಾರವಾದುದು. ಆ ಕಥೆಗಳು ಕೇಳುವವರ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡುವ, ಸುಖ-ದುಃಖ, ಲಾಭ-ನಷ್ಟ, ಮಾನಾಪಮಾನ, ಪ್ರೇಮ-ದ್ವೇಷಗಳನ್ನು ಅನುಭವಕ್ಕೆ ತರುತ್ತದೆ. ಈ ಕಾರಣಕ್ಕಾಗಿಯೇ ಭಾರತಕಥೆ ಹೆಚ್ಚು ಜನಪ್ರಿಯವೆನಿಸಿದೆ' ಎಂದಿರುವುದನ್ನು ಗಮನಿಸಬಹುದು.

ಜೈಮಿನಿಭಾರತದಲ್ಲಿ ಧರ್ಮರಾಜನ ವ್ಯಸನ, ವೇದವ್ಯಾಸರ ಉಪದೇಶ, ವೃಷಿಕೇತು-ಯೌವ್ವನಾಶ್ವರ ಯುದ್ಧ, ಭೀಮ-ಕೃಷ್ಣರ ಸಲ್ಲಾಪ, ಅರ್ಜುನ-ನೀಲಧ್ವಜರ ಯುದ್ಧ, ಜ್ವಾಲೆಯ ಫಲ, ಉದ್ದಾಲಕನ ಕಥೆ, ಯಜ್ಞಾಶ್ವವು ಹೆಣ್ಣು ಕುದುರೆಯಾಗಿ ಕಡೆಗೆ ಹುಲಿ ಆದವಿಚಾರ, ಕೃಷ್ಣಭಕ್ತರ ಭಕ್ತಿಯ ಪರೀಕ್ಷೆ ಮುಂತಾದ ಕುತೂಹಲಜನಕವಾದ ಕಥೆಗಳಿಂದ ಕೂಡಿದೆ. ಈ ಕಥೆಗಳಲ್ಲೆಲ್ಲಾ ಯುದ್ಧ ಸಂದರ್ಭಗಳು ಯಥೇಚ್ಚವಾಗಿ ಅತಿಕ್ರಮಿಸಿವೆ. ಹಂಸಧ್ವಜ ತನ್ನ ಮಗ ಸುಧನ್ವನನ್ನು ಎಣ್ಣೆಯ ಕೊಪ್ಪರಿಗೆಯಲ್ಲಿ ಬೇಯಿಸಿದ್ದು, ನಿರುಪದ್ರವಿ, ಅಮಾಯಕಿ ಸೀತೆಗೆ ರಾಮನಿಂದ ವನವಾಸ ಪ್ರಾಪ್ತಿಯಾದದ್ದು, ಭಾಗವತ ನಿಷ್ಠೆಯ ಸಾಕಾರಮೂರ್ತಿ ಚಂದ್ರಹಾಸನನ್ನು ದುಷ್ಟಬುದ್ಧಿ ಚಂಡಾಲರ ಕೈಗೆ ವಶಪಡಿಸಿದ್ದು ಮುಂತಾದ ಕಥಾಸಂದರ್ಭದಲ್ಲಿನ ಕರುಣಾರ್ದ್ರರಸ ಪ್ರವಹಿಸಿ ಮನಸ್ಸಿನ ಮೇಲೆ ಘೋರಪರಿಣಾಮವನ್ನುಂಟು ಮಾಡುತ್ತವೆ. ಚಂಡಿಯ ಕಥೆ, ಭೀಮ-ಕೃಷ್ಣರ ಹಾಸ್ಯ ಸಂದರ್ಭ, ನಾರದರ ವಿನೋದದ ಸಂದರ್ಭದಲ್ಲಿ ತಿಳಿಹಾಸ್ಯದ ಹೊನಲು ಪ್ರವಹಿಸಿದೆ. ಇವೆಲ್ಲಕ್ಕೂ ಮುಖ್ಯವಾಗಿ ಬರುವ ಶ್ರೀಕೃಷ್ಣ ಮಹಿಮೆ, ಅವನ ಅನಂತ ಲೀಲಾವಳಿ, ದಿವ್ಯವಾದ ದೇವಾಲಯಕ್ಕೆ ಸುವರ್ಣದ ಗೋಪುರದಂತೆ ಕಂಗೊಳಿಸುತ್ತದೆ.

ಜೈಮಿನಿಭಾರತದಲ್ಲಿ ಮುಖ್ಯವಾಗಿ ವೀರರಸ ಪ್ರತಿಪಾದನೆಯಾದರೂ ಅಲ್ಲಲ್ಲಿ ಭಕ್ತಿ ಮತ್ತು ಶೃಂಗಾರ ಭಾವಗಳು ಪ್ರವೇಶಿಸಿವೆ. ಲಕ್ಷ್ಮೀಶನ ಅನ್ವರ್ಥಕನಾಮ 'ಉಪಮಾಲೋಲ', ಅವನ ಕಾವ್ಯದಲ್ಲಿ ಪರಮಸಿದ್ಧಿಯನ್ನು ಸಾಧಿಸಿದೆ. ಅವನ ಅನುಭವ ಜನ್ಯ ಪಾರಂಗತ್ವವನ್ನು ವಿಸ್ತೃತಗೊಳಿಸುತ್ತದೆ.

'ಪಾಪಿಗಳ್ ಒಡಲೋಳ್ ಇಹ ಪರಮಾತ್ಮನಂತೆ', 'ಮುಳ್ಳಡಿದ ಮರವನೇರಿದಂತೆ', 'ಬಿರುಗಾಳಿ ಪೊಡೆಯಲ್ಕೆ ಫಲಿತಕದಳಿ ಮುರಿದಿಳೆಗೊರಗುವಂತೆ', 'ಕತ್ತಲೆಯ ಮನೆಗೆ ಮಣಿದೀಪವಾದಂತೆ'- ಮುಂತಾದ ಉತ್ತಮ ಉಪಮೆಗಳು ಜೈಮಿನಿಭಾರತದಲ್ಲಿ ಅಳವಟ್ಟಿರುವುದನ್ನು ಕಾಣಬಹುದು.

ಕನ್ನಡದ ಜೈಮಿನಿಭಾರತದಲ್ಲಿನ ಹೆಗ್ಗುರುತೆಂದರೆ ಕಥನ ಶಕ್ತಿ, ಉಪಮಾಸಮೃದ್ಧಿ ಮತ್ತು ಗೇಯತೆಯ ನಾದಲೋಲತೆ. ರಂ.ಶ್ರೀ.ಮುಗಳಿಯವರು ಹೇಳುವಂತೆ 'ಕಥೆಯನ್ನು ಹೇಳುತ್ತಾ ಅವನು ಸೊಗಸಾದ ಚಿತ್ರಗಳನ್ನು ಬಿಡಿಸುತ್ತಾನೆ. ಉತ್ಪ್ರೇಕ್ಷೆಗಳ ಮಾಲೆಯನ್ನು ರಚಿಸುತ್ತಾನೆ. ಕುಣಿತದ ಗೆಜ್ಜೆಗಳಂತೆ ಮಧುರವಾದ ನುಡಿಗಡಣವನ್ನು ತೆರೆಯುತ್ತಾನೆ'[೧೫] ಎಂದಿದ್ದಾರೆ. ಮಾಸ್ತಿಯವರು 'ಲಕ್ಷ್ಮೀಶ ಪ್ರಥಮ ಪಂಕ್ತಿಯ ಕಥನಕಾರ' ಎಂದಿದ್ದಾರೆ. ಭಾಷಾ ಬಳಕೆಯಲ್ಲಿ ಕವಿಯ ಪ್ರತಿಭೆ ಮತ್ತು ರಸಿಕತೆಯ

ದರ್ಶನವಾಗುತ್ತದೆ. ಕಥೆಯ ಏಕತೆಗಿಂತ ಭಾಗವತ ದೃಷ್ಟಿಯ ಏಕತೆ ಇದರ ವಿಶೇಷವಾಗಿದೆ. ಹಾಗೆಯೇ ಉಪಮೆ ರೂಪಕಗಳ ಬಳಕೆಯಲ್ಲಿ ಮನೋಹರತೆ, ರಸಾರ್ದ್ರತೆಯಿದೆ.

ಪ್ರಸಿದ್ಧ ವಿದ್ವಾಂಸರಾದ ರಾಗೌ ಅವರು ಜೈಮಿನಿಭಾರತದ ಪಾತ್ರಗಳ ವೈವಿಧ್ಯತೆಯನ್ನು ಕುರಿತು ವ್ಯಕ್ತಪಡಿಸಿರುವ ಅಭಿಪ್ರಾಯ ಹೀಗಿದೆ: 'ಜೈಮಿನಿಭಾರತದಲ್ಲಿ ಸಣ್ಣಪುಟ್ಟ ಪಾತ್ರಗಳೂ ಸೇರಿದಂತೆ ಸುಮಾರು ನೂರು ಪಾತ್ರಗಳಾದರೂ ಕಾಣಸಿಗುತ್ತವೆ. ಅಂದ ಮಾತ್ರಕ್ಕೆ ಇವೆಲ್ಲವೂ ಸಮಪ್ರಮಾಣದಲ್ಲಿ ಕಾರ್ಯನಿರ್ವಹಿಸುತ್ತವೆ ಎಂದಲ್ಲ. ಕಥೆಯನ್ನು ರೂಪಿಸಲು ಮತ್ತು ಕ್ರಿಯೆಯನ್ನು ಬೆಳೆಸಲು ಕಾರಣವಾದ ಸುಮಾರು ಐವತ್ತು ಪಾತ್ರಗಳಾದರೂ ಮುಖ್ಯವೆನಿಸಿವೆ. ವಿಭಿನ್ನ ಕಥಾ ವಾತಾವರಣದ ನಡುವೆ ಕಾವ್ಯದ ಕ್ರಿಯೆ ಚಲನಶೀಲವಾಗುವಂಥದು. ಈ ಹಿನ್ನಲೆಯಲ್ಲಿ ಪಾತ್ರಗಳು ಎರಡು ವರ್ಗಗಳಾಗುತ್ತವೆ: ಆಯಾ ಕಥೆಗಳಲ್ಲಿನ ಪಾತ್ರಗಳು ಮತ್ತು ಕಾವ್ಯದಲ್ಲಿ ಮೊದಲಿಂದ ಕಡೆಯತನಕ ಸಾಗುವ ಪಾತ್ರಗಳು. ಮೊದಲನೆಯ ಗುಂಪಿಗೆ ಶರಣಾದವು; ಎರಡನೆಯವು ಮೊದಲನೆಯ ವರ್ಗದೊಡನೆ ಸಂಬಂಧ ಕಲ್ಪಿಸಿಕೊಳ್ಳುತ್ತ ಧಾವಿಸುವಂಥವು. ಎರಡೂ ವರ್ಗ ಪರಸ್ಪರ ಸಂಬಂಧಕ್ಕೆ ಬರುವವರೆಗೆ ಬೇರೆ ಬೇರೆಯಾಗಿದ್ದಂಥವು. ಮೊದಲನೆಯ ವರ್ಗಕ್ಕೆ ಯೌವನಾಶ್ವ, ನೀಲಧ್ವಜ, ಹಂಸಧ್ವಜ, ಸುಧನ್ವ, ಮಯೂರಧ್ವಜ, ಪ್ರಮೀಳೆ, ಸೀತೆ, ಚಂದ್ರಹಾಸ ಮೊದಲಾದವರೂ ಎರಡನೆಯ ವರ್ಗಕ್ಕೆ ಕೃಷ್ಣಾರ್ಜುನರೂ ನಿದರ್ಶನವಾಗುತ್ತಾರೆ. ಕಾವ್ಯದ ಅಧಿಕೃತ ನಿಲುವಿಗೆ ಪರವಾದವರು ಮತ್ತು ವಿಮುಖರಾದವರು ಎಂದೂ ಪಾತ್ರಗಳನ್ನು ವಿಭಜಿಸಿಕೊಳ್ಳಬಹುದು. ಕೃಷ್ಣಪಾರಮ್ಯವೇ ಕಾವ್ಯದ ಪರಮಗಂತವ್ಯ; ದರ್ಶನ. ಅರ್ಜುನನ ಹಯದ ಗಮನ ಅಂತಿಮವಾಗಿ ಕೃಷ್ಣಭಕ್ತಿಯನ್ನು ಸಾರುವ ಸಂಕೇತವಾಗಿಬಿಡುತ್ತದೆ. ಇದನ್ನು ಯುದ್ಧಪೂರ್ವದಲ್ಲೊ, ಯುದ್ಧದ ಪರಿಣಾಮವಾಗಿಯೊ ಒಪ್ಪಿಕೊಳ್ಳುವ ಸನ್ನಿವೇಶವೇ ಹೆಚ್ಚು. ಅನೇಕ ವೇಳೆ ಅರ್ಜುನ ನೆಪಮಾತ್ರ, ಕೃಷ್ಣನದೇ ಪಾತ್ರ. ಹೀಗಾಗಿ ಕೃಷ್ಣ ಕಾವ್ಯದ ತುಂಬ ತುಂಬಿಕೊಳ್ಳುತ್ತಾನೆ. ಕವಿಯ ಉದ್ದೇಶವಾದರೂ ಇದೇ. ಇದಕ್ಕೆ ವಿರುದ್ಧವಾಗಿ ಜ್ವಾಲೆ, ಚಂಡಿ, ಬಭ್ರುವಾಹನ, ದುಷ್ಟಬುದ್ಧಿಯರು ಈಜುವಂತೆ ಕಂಡರೂ ನಿಜವಾಗಿ ಸೇಡು ತೀರಿಸಿಕೊಳ್ಳುವವಳು ಜ್ವಾಲೆ ಮಾತ್ರ; ಉಳಿದವರು ಅಧಿಕೃತ ಹಂಬಲವನ್ನೇ ಒಪ್ಪಿಕೊಳ್ಳುವಂತೆ ಕಾಣುತ್ತಾರೆ. ಆದರೆ ಅದನ್ನು ದುಷ್ಟಬುದ್ಧಿ ಪಾತ್ರ ಸತ್ತು ಪಡೆಯುವಂತೆ ಚಿತ್ರಿತವಾಗಿದೆ. ಪಾತ್ರಗಳಲ್ಲಿನ ಈ ವೈವಿಧ್ಯ ಮತ್ತು ವಿಶೇಷ ಕಾವ್ಯದ ಶೋಭೆಯನ್ನು ಹೆಚ್ಚಿಸಿವೆ ಎಂದೇ ಹೇಳಬೇಕು'[೧೬] ಎಂದಿದ್ದಾರೆ.

ಹೀಗೆ 'ಕಾವ್ಯದ ಕೆಲವೆಡೆಗಳಲ್ಲಿ ಲಕ್ಷ್ಮೀಶನು ಉದ್ದಾಮ ಕವಿಯೆಂದು ತೋರಿಬಂದರೂ ಸಮಗ್ರ ಕಾವ್ಯ ದೃಷ್ಟಿಯಿಂದ ಆತನನ್ನು ಪ್ರಥಮ ಶ್ರೇಣಿಗೆ ಸೇರಿದ ಮಹಾಕವಿಯೆಂದು ಕರೆಯುವುದು

ಅತಿಶಯೋಕ್ತಿಯಾಗಬಹುದು. ಆದರೂ ಲಕ್ಷ್ಮೀಶನು ಶ್ರೇಷ್ಠ ಕವಿ... ಲಕ್ಷ್ಮೀಶನ ಕಾವ್ಯ ಜ್ಯೋತಿಯು ಮಬ್ಬಾಗಿದ್ದರೆ, ಅದು ಮಹತ್ವದ ಅಭಾವದಿಂದಲ್ಲ, ನೀರಸತೆಯ ಭಾವದಿಂದ'[೧೭] ಎಂಬ ಕುವೆಂಪುರವರ ಮಾತುಗಳು ಲಕ್ಷ್ಮೀಶನ ವ್ಯಕ್ತಿತ್ವದ ವಿಶ್ಲೇಷಣಾತ್ಮಕ ಮಾದರಿಗಳಾಗಿವೆ. 'ಜೈಮಿನಿಭಾರತ ವಾಚಕರ ಮನಸ್ಸನ್ನು ಇನ್ನಿಲ್ಲದಂತೆ ಗೆದ್ದುಕೊಂಡಿದ್ದು, ಆನಂದಾನುಭವವನ್ನು ನೀಡುವಲ್ಲಿ ಸಫಲವಾಗಿದೆ. ಕೃಷ್ಣಪಾರಮ್ಯ ಸರ್ವಸಮಸ್ಯೆ ಪರಿಹಾರ ಎಂದು ಕಾವ್ಯ ಬಿಟ್ಟುಕೊಡುವ ತತ್ತ್ವವನ್ನು ಹೊರತುಪಡಿಸಿದರೆ, ಶುದ್ಧ ಕಲಾತ್ಮಕ ಉದ್ದೇಶದಿಂದ ಕೃತಿ ವಂಚಿತವಾಗುವುದಿಲ್ಲನಿಸುತ್ತದೆ. ಮೇಲಿನ ಚರ್ಚಿತ ಎಲ್ಲ ಅಂಶಗಳಿಂದ ಜೈಮಿನಿಭಾರತ ಪ್ರಥಮದರ್ಜೆಯ ಒಂದು ಕಾವ್ಯವಾಗಿದ್ದು, ಲಕ್ಷ್ಮೀಶ ಒಬ್ಬ ಮಹತ್ವದ ಕವಿಯಾಗಿದ್ದಾನೆ ಎಂದು ಹೇಳಲು ಯಾವ ಕಾರಣದಿಂದಲೂ ಹಿಂದೆಗೆಯಬೇಕಾಗಿಲ್ಲ'[೧೮] ಎಂಬ ರಾಗೌ ಅವರ ಅಭಿಪ್ರಾಯ ಸಮಂಜಸವೆನಿಸುತ್ತದೆ.

**ತಿಮ್ಮಣ್ಣನ ಕರ್ಣಾಟ ಕೃಷ್ಣರಾಯಭಾರತ ಕಥಾಮಂಜರಿ:**

ವಿಜಯನಗರ ಸಾಮ್ರಾಟನಾದ ಕೃಷ್ಣದೇವರಾಯನ (೧೫೦೯-೨೯) ಆಸ್ಥಾನದ ಪ್ರಮುಖ ಕವಿಯಾದ ತಿಮ್ಮಣ್ಣನು 'ಕರ್ಣಾಟ ಕೃಷ್ಣರಾಯಭಾರತ ಕಥಾಮಂಜರಿ' ಎಂಬ ಕಾವ್ಯದ ಕರ್ತೃವಾಗಿದ್ದಾನೆ. ಗದುಗಿನ ನಾರಾಣಪ್ಪನೆಂದೇ ಖ್ಯಾತನಾಗಿರುವ ಕುಮಾರವ್ಯಾಸನು ಬರೆದ 'ಕರ್ಣಾಟಭಾರತ ಕಥಾಮಂಜರಿ'ಯ ಉಳಿದ ಪರ್ವಗಳನ್ನು 'ಕರ್ಣಾಟ ಕೃಷ್ಣರಾಯಭಾರತ' ಎಂಬ ಹೆಸರಿನಲ್ಲಿ ಬರೆದು ಪೂರೈಸಿದ್ದಾನೆ. ಕವಿ ತಾನು ಈ ಕಾವ್ಯವನ್ನು ಬರೆಯಲು ಪ್ರೋತ್ಸಾಹಿಸಿದ ತನ್ನ ಆಶ್ರಯಧಾತನನ್ನು ಹೀಗೆ ನೆನೆಯುತ್ತಾನೆ:

**ಸುರನದಿಯ ಯಮುನಾ ತರಂಗಿಣಿ**
**ಬೆರಸಿ ಹರಿವಂದದಲಿ ಕವಿಕುಂ**
**ಜರ ಕುಮಾರವ್ಯಾಸನುರುವಾಗ್ಲ ಹರಿಯೊಡನೀಗ**
**ಸರಿಯೆನಿಸಿ ನೀ ಕೂಡಿಸೈ ಸುರು**
**ಚಿರಭವತ್ಕವಿತಾಪ್ರವಾಹವ**
**ಪರಮ ಪುಣ್ಯನಿಧಾನವಹುದೆನುತಲಿ ನಿರೂಪಿಸಿದ**
**(ಪೀಠಿಕಾಸಂಧಿ ೨೭)**

'ಎನೆ ಹಸಾದವೆನುತ್ತ' ಭಾರತ ಕಥೆಯ ರಚನೆಯನ್ನು ಕೈಗೆತ್ತಿಕೊಂಡ ತಿಮ್ಮಣ್ಣನ ಈ ಕಾವ್ಯವನ್ನು ಕೃಷ್ಣದೇವರಾಯನಿಗೆ ಅಂಕಿತ ಮಾಡಿದ್ದಾನೆ.[೧೯] ಈ ಕಾರಣದಿಂದ ತಿಮ್ಮಣ್ಣ ೧೬ನೆಯ ಶತಮಾನದ ಪೂರ್ವಾರ್ಧದಲ್ಲಿ ಇದ್ದಿರಬೇಕೆಂದು ಊಹಿಸಬಹುದು. ಕವಿಚರಿತೆಕಾರರು ಈ ಕವಿಯ ಕಾಲವನ್ನು

೧೫೧೦ ಎಂದು ನಿರ್ಣಯಿಸಿದ್ದಾರೆ.[೨೦] ತುಳುವಂಶದ ಕೃಷ್ಣದೇವರಾಯ ಸಿಂಹಾಸನಕ್ಕೆ ಕ್ರಿ.ಶ. ೧೫೦೯ರಲ್ಲಿ ಬಂದುದ್ದರಿಂದ ಅವನು ಅಧಿಕಾರಕ್ಕೆ ಬಂದ ಪ್ರಾರಂಭದಲ್ಲೇ ತಿಮ್ಮಣ್ಣ ಈ ಕಾವ್ಯ ರಚಿಸಿರಬೇಕೆನ್ನಿಸುತ್ತದೆ. ತಿಮ್ಮಣ್ಣನು ಈ ಕೃತಿಯನ್ನು ರಚಿಸಿದ್ದಕ್ಕೆ 'ಶ್ರೀಮತ್ಕರ್ಣಾಟಕ ಕವಿಕುಲ ಸಾರ್ವಭೌಮ' ಎಂಬ ಬಿರುದು ಬಂದುದಾಗಿ ತಿಳಿದುಬರುತ್ತದೆ. ಕೃಷ್ಣದೇವರಾಯ ತಿಮ್ಮಣ್ಣನನ್ನು ಕರೆದು 'ವಿನೂತನಾಧಿಕ ವಸ್ತ್ರ ಭೂಷಾಣಾದಿಗಳ ಕೊಟ್ಟೊಡನೆಮನ್ನಿಸಿ'ದಾಗ ಅವನು ತನ್ನ ಆಶ್ರಯದಾತನ ಮಾತುಗಳಿಗನುಸಾರವಾಗಿ ಸಕಲ ಜಗ ಮೆಚ್ಚುವಂತೆ ವಿಲಾಸದಲ್ಲಿ ಬರೆಯಲು ಹೊರಟ.

**ಕರ್ಣಾಟ ಕೃಷ್ಣರಾಯ ಭಾರತ ಕಥಾಮಂಜರಿಯ ಕಥಾಸಾರ:**

ಸ್ತ್ರೀಪರ್ವ ದುಃಖಾತಿಶಯವನ್ನು ನಿರೂಪಿಸುವ ಗಂಭೀರವಾದ ಕಥನಕಾವ್ಯ. ಸುತರನ್ನು ಕಳೆದುಕೊಂಡ ಧೃತರಾಷ್ಟ್ರನ ಶೋಕ, ಅಭಿಮನ್ಯುವನ್ನು ಕಳೆದುಕೊಂಡ ಸುಭದ್ರೆಯ ಶೋಕ, ಗಾಂಧಾರಿಯಾದಿಯಾಗಿ ಭರತವಂಶದ ನಾರಿಯರ ಶೋಕ, ಮೃತ ಜನರ ಸಂಸ್ಕಾರ ಈ ಪರ್ವದ ವಿಷಯಗಳಾಗಿವೆ.

ಶಾಂತಿಪರ್ವದಲ್ಲಿ ತತ್ತ್ವಪ್ರಧಾನ ಅಂಶಗಳನ್ನೊಳಗೊಂಡಿದೆ. ಧರ್ಮರಾಜಾದಿಗಳಿಗೆ ಧರ್ಮದ ಕಥೆಯನ್ನು ಹೇಳುವಂತೆ ಕೃಷ್ಣ ಭೀಷ್ಮನನ್ನು ಕೇಳುತ್ತಾನೆ. ಭೀಷ್ಮ ಹೇಳಿದ ಧರ್ಮ ವಿಚಾರಗಳ ವಿಸ್ತಾರವಾದ ವರ್ಣನೆ ಈ ಪರ್ವದಲ್ಲಿದೆ. ಧರ್ಮವಿಚಾರವನ್ನು ತಿಳಿಸುವ ಹಲವು ಉಪಾಖ್ಯಾನಗಳನ್ನು ಭೀಷ್ಮ ಹೇಳುತ್ತಾನೆ.

ಆನುಶಾಸನಿಕಪರ್ವದಲ್ಲಿ ಧರ್ಮಬೋಧನೆಯೇ ಪ್ರಧಾನವಾಗಿದೆ. ನೀತಿ ಕಥೆಗಳಿಂದ ಕೂಡಿದ ಈ ಎರಡು ಪರ್ವಗಳು ಭಾರತೀಯ ಕಥಾಸಾಹಿತ್ಯಕ್ಕೆ ಉಜ್ವಲ ಕೊಡುಗೆಗಳೆನ್ನಬಹುದು. ನಮ್ಮ ಸಂಪ್ರದಾಯಕ್ಕೆ ಸೇರದ ಅನೇಕ ದಾನ, ವಿಧಿ, ಪೂಜಾವಿಧಾನಗಳ ವಿವರಗಳು ಈ ಪರ್ವದಲ್ಲಿವೆ.

ಅಶ್ವಮೇಧ ಪರ್ವದಲ್ಲಿ ಮರುತ್ತರಾಯನ ಚರಿತ್ರೆ, ಬಭ್ರುವಾಹನನ ಕಥೆ ಮುಂತಾದವು, ಅನಂತರ ಕಾಲದಲ್ಲಿ ಜೈಮಿನಿ ಭಾರತವಾಗಿ ಬೆಳೆದಿವೆ. ಧೃತರಾಷ್ಟ್ರನ ವಾನಪ್ರಸ್ಥಾನವನ್ನೊಳಗೊಂಡ ಆಶ್ರಮವಾಸಪರ್ವ, ಶ್ರೀಕೃಷ್ಣನ ಪರಮಪದ ಪ್ರಾಪ್ತಿ ಸಂಭವಿಸಿದ ಮೌಸಲಪರ್ವ, ಕುಟುಂಬ ಸಮೇತ

ಧರ್ಮರಾಯನ ಪ್ರಸ್ಥಾನವನ್ನು ವರ್ಣಿಸುವ ಮಹಾಪ್ರಸ್ಥಾನ ಪರ್ವ ಕೊನೆಯ ಕಥೆಗಳು. ಸ್ವರ್ಗಾರೋಹಣ ಪರ್ವದಲ್ಲಿ ಸ್ವರ್ಗದಲ್ಲಿ ಸ್ವಜನದರ್ಶನ, ಧರ್ಮರಾಯ ಇಂದ್ರ ಸಂವಾದ ಮುಂತಾದವು-ಇಷ್ಟು ಕಾವ್ಯದ ಸಾರಾಂಶ.

ಕನ್ನಡ ಸಾಹಿತ್ಯದಲ್ಲಿ ತಿಮ್ಮಣ್ಣನಿಗೆ ಪಂಪ, ಹರಿಹರ, ಕುಮಾರವ್ಯಾಸ, ಲಕ್ಷ್ಮೀಶರಂಥ ಮಹಾಕವಿಗಳ ಸಾಲಿನಲ್ಲಿ ಸ್ಥಾನ ಲಭಿಸದಿದ್ದರೂ ಒಂದು ರಾಷ್ಟ್ರೀಯ ಇತಿಹಾಸದ ಕನ್ನಡ ರೂಪವನ್ನು ಸಮಗ್ರವಾಗಿ ನೀಡಲು ಮಾಡಿದ ಪ್ರಯತ್ನವೆಂದು ಗುರುತಿಸಬಹುದು. 'ಕಥಾವಸ್ತುವಿನ ದೃಷ್ಟಿಯಿಂದ, ಬದಲಾದ ಕಾವ್ಯಮೌಲ್ಯಗಳ ದೃಷ್ಟಿಯಿಂದ, ಕಾವ್ಯನಿರ್ಮಾಣ ಶಕ್ತಿಯ ದೃಷ್ಟಿಯಿಂದ ತಿಮ್ಮಣ್ಣ ಅತ್ಯುತ್ತಮ ಕವಿಗಳ ಸಾಲಿಗೆ ಸೇರದಿದ್ದರೂ ಅವನ ಕೊಡುಗೆಗಳನ್ನು ಮಾತ್ರ ಸಾಹಿತ್ಯಾಸಕ್ತರು ಅಲ್ಲಗಳೆಯುವಂತಿಲ್ಲ'[೨೧] ಎಂಬ ಅಭಿಪ್ರಾಯ ಔಚಿತ್ಯಪೂರ್ಣವಾಗಿದೆ.

**ಸಾಳ್ವ ಭಾರತ:**

ನಡುಗನ್ನಡ ಕಾಲದ ಪ್ರಮುಖ ಕವಿಗಳಲ್ಲಿ ಸಾಳ್ವನೂ ಒಬ್ಬ. ಈತನ 'ಸಾಳ್ವಭಾರತ' ಅಥವಾ 'ನೇಮಿನಾಥ ಚರಿತ್ರೆ'. 'ರಸರತ್ನಾಕರ'(ಅಲಂಕಾರ ಗ್ರಂಥ), ಶಾರದಾವಿಲಾಸ (ಧ್ವನಿತತ್ವ ಕೃತಿ), ವೈದ್ಯಸಾಂಗತ್ಯ (ವೈದ್ಯಗ್ರಂಥ)- ಎಂಬ ಕೃತಿಗಳನ್ನು ರಚಿಸಿದ್ದಾನೆ. 'ನೇಮಿನಾಥ ಚರಿತೆ' ಮತ್ತು 'ರಸರತ್ನಾಕರ'-ಗ್ರಂಥಗಳು ಉಪಲಬ್ಧವಾಗಿದ್ದರೆ ಉಳಿದೆರಡು ಕೃತಿಗಳು ಅಸಮಗ್ರವಾಗಿ ಲಭಿಸಿವೆ. ಇವನು ತನ್ನ ಗುರು ದೇಸಿಗಣದ ವಿಜಯ ಕೀರ್ತಿಗಳ ಮಗ ಶ್ರುತಕೀರ್ತಿಯೆಂದೂ ತಂದೆ ಧರ್ಮಚಂದ್ರನೆಂದೂ ತಾನು ಸಾಳ್ವಮಲ್ಲನ ಪಟ್ಟದ ಕವಿಯಾಗಿದ್ದು ಸಾಳ್ವಮಲ್ಲನ ಸೋದರಳಿಯನಾದ ಸಾಳ್ವದೇವನನ್ನೂ ಸ್ಮರಿಸಿರುವುದರಿಂದ ಇವನು ಈ ಇಬ್ಬರ ಆಳ್ವಿಕೆಯಲ್ಲಿದ್ದನೆಂದೂ ಅರಿವಾಗುತ್ತದೆ. ಇವನ ಕಾಲದ ಬಗ್ಗೆ ವಿದ್ವಾಂಸರು ವಿಭಿನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರೂ ಕವಿಚರಿತೆಕಾರರು ಇವನ ಕಾಲವನ್ನು ೧೫೫೦ ಎಂದು ತಿಳಿಸಿದ್ದಾರೆ.[೨೨]

ಸಾಳ್ವಭಾರತ ಕಾವ್ಯವು ೬೪ ಸಂಧಿಗಳನ್ನೊಳಗೊಂಡು, ಜೈನ ಪರಂಪರೆಯ ನೇಮಿನಾಥ ಚರಿತೆಯಾಗಿದೆ. ಮಹಾಭಾರತದ ಕಥೆಯನ್ನೊಳಗೊಂಡಿದೆ. ಇಲ್ಲಿ ಮಹಾಭಾರತದ ಕಥೆ ಜೈನ ಮತ್ತು ವೈದಿಕ ವಿಷಯಗಳ ಜೊತೆಗೆ ಬೆರತು ಸಮನ್ವಯ ಸ್ವರೂಪವನ್ನು ಪಡೆದುಕೊಂಡಿರುವುದನ್ನು ಕಾಣಬಹುದು. ಇದು ಪ್ರಧಾನವಾಗಿ ೨೨ನೆಯ ತೀರ್ಥಂಕರ ನೇಮಿನಾಥನ ಚರಿತೆಯನ್ನು

ಕುರಿತದ್ದಾದರೂ ಕೃಷ್ಣನ ವೃತ್ತಾಂತದ ಸಂದರ್ಭದಲ್ಲಿ ಕೃಷ್ಣ ಜನನ, ಪೂತನಿವಧೆ, ಕಾಳಿಂಗ ಮರ್ದನ ಹಾಗೂ ಕಂಸವಧೆಯಂತಹ ಪವಾಡ ಸದೃಶ ಘಟನೆಗಳನ್ನೂ ಒಳಗೊಂಡಿದ್ದು ವಿಶೇಷವಾಗಿದೆ.

**ಕಥಾಸಾರಾಂಶ:**

ಹಸ್ತಿನಾಪುರವು ಪುನರ್ ನಿರ್ಮಾಣಗೊಂಡು ಹಲವು ರಾಜರು ವಿನೂತನವಾದ ಶೈಲಿಯಲ್ಲಿ ರಾಜ್ಯಭಾರ ಮಾಡುತ್ತಿದ್ದರು. ಈ ಎಲ್ಲಾ ಪ್ರಭುಗಳು ಒಂದಲೊಂದು ರೀತಿಯಲ್ಲಿ ಜೈನಧರ್ಮದ ಪ್ರಭಾವಕ್ಕೊಳಗಾಗಿ ಜಿನದೀಕ್ಷೆ ಪಡೆದುಕೊಂಡಿದ್ದರು. ಆ ಸಂದರ್ಭದಲ್ಲಿ ರಾಜ್ಯವು ಶಾಂತಿ ಸಮೃದ್ಧವಾಗಿತ್ತು. ಇಂತಹ ಪ್ರಶಸ್ತ ವಾತಾವರಣದಲ್ಲಿ ಇದ್ದ ಹಸ್ತಿನಾಪುರದ ಮಹಾರಾಣಿಯರುಗಳಾದ ಕುಂತಿ, ಮಾದ್ರಿ ಹಾಗೂ ಗಾಂಧಾರಿಯರಲ್ಲಿ ಕುರು-ಪಾಂಡವರು ಜನಿಸಿ ಬಾಲ್ಯಕ್ಕೆ ಕಾಲಿಡುತ್ತಿದ್ದಂತೆಯೇ ಪರಿಸ್ಥಿತಿ ವಿಕೋಪಕ್ಕೆ ತಿರುಗಿತು:

**ಬಾಲಕೇಳಿಯೊಳಂಧನೃಪನಾ**
**ಬಾಲಕರು ಪಾಂಡವ ತನೂಜರು**
**ಲೀಲೆಯಿಂ (ದಲಿ) ನೂಱುಐದಾಟಗಳನಾಡುತಿರೆ**
**ಮೇಳಿಸಿದ ಮಾತ್ಸರ್ಯವದು ತಾಂ**
**ಬೂದಿಕಾಲದಿನೊಡನೆ ಬೆಳೆಯಲು**
**ಬಾಲರನು ಭೀಷ್ಮಾಂಧನೃಪರಂಜಿಸಿ ನಡೆಸುತಿಹರೂ**
**(ಸಾ.ಭಾ. ೧೨-೮೯)**

ಇಂತಹ ಪರಿಸ್ಥಿತಿಯಿದ್ದರೂ 'ಹುಟ್ಟುವಾಗ ಅಣ್ಣ ತಮ್ಮಂದಿರಾದರೂ ಬೆಳೆಯುವಾಗ ದಾಯಾದಿಗಳಾಗುತ್ತಾರೆ'ಂಬಂತೆ ಅವರಲ್ಲಿ ದ್ವೇಷಭಾವನೆ ಅಧಿಕಗೊಂಡು ದುರ್ಯೋಧನ ಪಾಂಡವರನ್ನು ದೂರ ಓಡಿಸಬೇಕೆಂದು ಬಗೆದು ಶಕುನಿಯ ಸಹಾಯಪಡೆದು ಧರ್ಮರಾಜನನ್ನು ಪಗಡೆಯಾಟದಲ್ಲಿ ಸೋಲಿಸಿ ನಿರ್ಗತಿಕನನ್ನಾಗಿ ಮಾಡುತ್ತಾನೆ. ಇಷ್ಟಕ್ಕೆ ತೃಪ್ತನಾಗದ ದುರ್ಯೋಧನ ಪಾಂಡವರನ್ನು ನಿರ್ನಾಮಮಾಡಬೇಕೆಂದೂ ನಿಶ್ಚಯಿಸಿ ಅರಗಿನ ಮನೆಯನ್ನು ಸೃಷ್ಟಿಸಿ ಅದರಲ್ಲಿ ಪಾಂಡವರನ್ನು ಕೂಡಿಹಾಕಿ ಬೆಂಕಿ ಇಟ್ಟರೂ ಪಾಂಡವರು ಅಲ್ಲಿಂದ ತಪ್ಪಿಸಿಕೊಂಡು ಪಾರಾಗುತ್ತಾರೆ. ಹೀಗೆ ಬದುಕುಳಿದ ಪಾಂಡವರು ದ್ರೌಪದಿಯ ಸ್ವಯಂವರದಲ್ಲಿ ಭಾಗವಹಿಸಿದಾಗ ದ್ರೌಪದಿ 'ಬಂದು ಮಾಲೆಯ ಸೂಡಿದಳು ಫಲುಗುಣನ ಕಂಠದಲ್ಲೀ' (೩೭-೩೯). ಹೀಗೆ ದ್ರೌಪದಿಯನ್ನು ಸ್ವಯಂವರದಲ್ಲಿ ಗೆದ್ದು ಪಡೆದರೂ ಧರ್ಮರಾಜನು ಪಗಡೆಯಾಟದಲ್ಲಿ ಸೋತಿದ್ದರಿಂದ ಹನ್ನೆರಡು ವರ್ಷ ವನವಾಸ, ಒಂದು ವರ್ಷ ಅಜ್ಞಾತವಾಸ ಅನುಭವಿಸಬೇಕಾಗುತ್ತದೆ. ಆಗ ಪಾಂಡವರು

ವಿರಾಟರಾಜನಲ್ಲಿ ಆಶ್ರಯದಲ್ಲಿದಾಗ ಕುರುಸೇನೆ ವಿರಾಟರಾಜನ ಗೋವುಗಳನ್ನು ಅಪಹರಿಸಿದಾಗ ಅರ್ಜುನ ವೀರಾವೇಶದಿಂದ ಹೋರಾಡಿ ಜಯ ಪಡೆಯುತ್ತಾನೆ.

ಪಾಂಡವರು ಪಗಡೆಯಾಟದ ದೆಸೆಯಿಂದ ೧೩ ವರ್ಷ ಕಷ್ಟಕಾರ್ಪಣ್ಯಗಳನ್ನು ಅನುಭವಿಸಿ ಬಂದಾಗ, ಅವರ ಸ್ಥಿತಿಯನ್ನರಿತ ಕೃಷ್ಣ ಕೌರವನಿಂದ ಅರ್ಧರಾಜ್ಯವನ್ನು ಕೊಡಿಸಬೇಕೆಂದು ಚಿಂತಿಸುತ್ತಾನೆ. ಇದೇ ವಿಚಾರವನ್ನು ದುರ್ಯೋಧನನ ಹತ್ತಿರ ಸಂಧಾನಕ್ಕಾಗಿ ಹೊರಟ ಕೃಷ್ಣ 'ಒಡಹುಟ್ಟಿದವರಲ್ಲಿ ವೈರತ್ವಬೇಡ, ಅವರ ಪಾಲಿನ ರಾಜ್ಯವನ್ನು ಅವರಿಗೆ ಬಿಟ್ಟುಕೊಡು' ಎಂದು ಎಷ್ಟು ಹೇಳಿದರೂ ಕುರುಪತಿ:

**ಮರುಳು ನೀನೆಲೆಕೃಷ್ಣ ಕೌಂತೇ**
**ಯರೊಳು ಮಧುಸೂದನಗೆ ಮೋಹವು**
**ಉರಿದು ತಾನದರಿಂದ ಕಳುಹಲು ಬಂದು ನೀನೆಂದೈ**
**ಕುರುಪತಿಯ ಕೈವೊಕ್ಕ ಕಬ್ಬದು**
**ಮರಳಿ ಬಹುದೇ ನಗರಿಗೆಂದನು ಹೊಗೆಮೊಗದ ಭೂಪಾ**

**(ಸಾ.ಭಾ. ೪೨-೨೪)**

ಎಂದು ಉದ್ಧಟತನದಿಂದ ಉತ್ತರಿಸುತ್ತಾನೆ. ಹೀಗಿರುವಾಗ ದುರ್ಯೋಧನನಿಂದ ರಾಜ್ಯವನ್ನು ಪಡೆಯಲು ಸಾಧ್ಯವಿಲ್ಲವೆಂದು ಅರಿತ ಕೃಷ್ಣ ಪಾಂಡವರನ್ನು ಯುದ್ಧಕ್ಕೆ ಸನ್ನದ್ಧಗೊಳಿಸುತ್ತಾನೆ. ಕುರು-ಪಾಂಡವರ ನಡುವೆ ಯುದ್ಧ ನಡೆದು ಧರ್ಮ ಪರಿಪಾಲಕರಾದ ಪಾಂಡವರಿಗೆ ಜಯ ಲಭಿಸುತ್ತದೆ.

ಯುದ್ಧ ಮುಗಿದು ಕೌರವರು ಅವಸಾನವಾದ ಮೇಲೆ ಪಾಂಡವರು ಕೃಷ್ಣನ ದ್ವಾರಾವತಿಗೆ ಬಂದು ಸ್ವಲ್ಪದಿನ ಅಲ್ಲಿ ವಾಸವಿದ್ದು ಚಕ್ರಿಯ ಆತಿಥ್ಯ ಸ್ವೀಕರಿಸಿ, ನೇಮೀಶ್ವರರ ಆರ್ಶಿವಾದವನ್ನೂ ಪಡೆಯುತ್ತಾರೆ. ಒಟ್ಟಾರೆ ಸಾಳ್ವಭಾರತದಲ್ಲಿ ಕುರುವಂಶ, ಹರಿವಂಶದ ಕಥೆ ಇದ್ದರೂ ಜೈನ ಭಾರತವೆನಿಸುವಂತಹ ವಾತಾವರಣವನ್ನು ಕವಿ ನಿರ್ಮಿಸುವುದರ ಜೊತೆಗೆ ಮಹಾಭಾರತದ ಕಥೆಯನ್ನು ಚಿತ್ರಿಸಿದ್ದಾನೆ.

ಸಾಳ್ವಭಾರತ ಪ್ರಧಾನವಾಗಿ ಭಾಮಿನಿ ಷಟ್ಪದಿಯ ಕಾವ್ಯವಾದರೂ ಪರಿವರ್ಧಿನಿ ಮತ್ತು ವಾರ್ಧಕ ಷಟ್ಪದಿಗಳನ್ನೂ ಅಲ್ಲಲ್ಲಿ ಬಳಸಲಾಗಿದೆ. ಕವಿ ತನ್ನ ಭಾರತದಲ್ಲಿ ಸಂಪ್ರದಾಯವನ್ನು ಮೀರುವುದಕ್ಕಾಗಿಯೆ ಎನ್ನುವಂತೆ ಕಂದ ಪದ್ಯಗಳನ್ನೂ ಕೊನೆಯ ಸಂಧಿಯ ಅಂತ್ಯದಲ್ಲಿ ಸ್ವಲ್ಪ

ಗದ್ಯವನ್ನೂ ಸೇರಿಸಿ ವೈವಿಧ್ಯ ತರಲು ಯತ್ನಿಸಿದ್ದಾನೆ. ಸಾಳ್ವಭಾರತ ಛಂದಸ್ಸಿನ ಚರಿತ್ರೆಯಲ್ಲೂ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ.[೨೩]

'ಸಾಳ್ವಕವಿಯ 'ಸಾಳ್ವಭಾರತ' ಇಂತಹ ವೈವಿಧ್ಯತೆಗಳಿಂದ ಕೂಡಿದ ನಡುಗನ್ನಡ ಕಾವ್ಯ ರೂಪದ ವಿಶಿಷ್ಟ ಕಾವ್ಯವಾಗಿದೆ. ಯಾವುದೇ ಅನುಭವದ ಅಭಿವ್ಯಕ್ತಿಯ ಸನ್ನಿವೇಶವನ್ನು ಅವಲೋಕಿಸಿದರೂ ಅಲ್ಲಿ ಅನುಭವದ ಪ್ರೌಢಿಮೆ ಉತ್ತಮವಾಗಿ ಮೂಡಿಬಂದಿದೆ. ಧಾರ್ಮಿಕತೆಯ ಕಡೆಗೆ ಹೆಚ್ಚು ಒತ್ತುಕೊಟ್ಟಿದ್ದರೂ ಇದನ್ನು ಭಾವಪೂರ್ಣ ಕಾವ್ಯವಾಗಿಸುವಲ್ಲಿ ಸಾಳ್ವ ಯಶಸ್ವಿಯಾಗಿದ್ದಾನೆ. ಈ ಕಾವ್ಯದೊಳಗಿನ ಲಯಬದ್ಧತೆ, ಪದಜೋಡಣಕ್ರಮ, ಛಂದೋವೈವಿಧ್ಯ–ಮೊದಲಾದವುಗಳು ಸಂದರ್ಭಕ್ಕೆ ಸುಸಂಗತವಾಗುವಂತೆ ಯಾವುದನ್ನಾದರೂ ಹೇಗೆ ತರಬಲ್ಲ ಕವಿ ಎಂಬುದಕ್ಕೆ ಸಾಕ್ಷಿಯಾಗಿ ನಿಲ್ಲುತ್ತವೆ. ಒಟ್ಟಾರೆ ಸುಧೀರ್ಘವಾಗಿರುವ ಈ ಕಾವ್ಯ ಹೇಳಬೇಕಾದುದನ್ನೆಲ್ಲ ಧೀರ್ಘವಾಗಿಯೇ ಹೇಳುವಲ್ಲಿ ಯಶಸ್ವಿಯಾಗಿದ್ದಾನೆ'[೨೪] ಎಂಬ ಮಾತು ಅರ್ಥವತ್ತಾಗಿದೆ.

**ಸುಜನಾ ಅವರ ಯುಗ ಸಂಧ್ಯಾ:**

'ಸುಜನಾ' ಎಂಬ ಕಾವ್ಯನಾಮದಿಂದ ಪ್ರಸಿದ್ಧವಾಗಿರುವ ಎಸ್.ನಾರಾಯಣಶೆಟ್ಟಿಯವರು ಹೆಸರಾಂತ ಕವಿ ಹಾಗೂ ವಿಮರ್ಶಕರು (೧೯೩೦-೨೦೧೧). ಆಧುನಿಕ ಕನ್ನಡದ ಮಹಾಕಾವ್ಯಗಳಲ್ಲಿ ಸುಜನಾ ಅವರ 'ಯುಗ ಸಂಧ್ಯಾ' (೧೯೯೯)ವೂ ಒಂದು. ಮಹಾಭಾರತದಲ್ಲಿ ಪಾಂಡವರ ವಿಜಯದ ಅನಂತರ ಬರುವ ಕಥೆಯನ್ನು ಮುಖ್ಯ ವಸ್ತುವಾಗಿ ಹೊಂದಿ ಭಾರತೋತ್ತರ ಕಥಾಪ್ರಸಂಗ ಹಾಗೂ ಅದರ ದರ್ಶನ ಇತ್ಯಾದಿ ವಿಷಯಗಳನ್ನು ಎತ್ತಿಹಿಡಿಯುವ ಮಹಾಕಾವ್ಯ ಯುಗಸಂಧ್ಯಾ. ಸರಳರಗಳೆಯ ಛಂದಸ್ಸಿನಲ್ಲಿ ಈ ಕೃತಿ ರಚನೆಗೊಂಡಿದೆ. ಮಹಾಭಾರತದ ವಿಷಾದಯೋಗದ ಚಿತ್ರಣವನ್ನು ಇಲ್ಲಿ ಕಂಡರಿಸಲಾಗಿದೆ. ತಮ್ಮ ಕಾವ್ಯ ರಚನೆಯ ಪ್ರಾರಂಭದ ದಿನಗಳಿಂದಲೂ ಗುಪ್ತವಾಗಿ, ಬಿಡದೆ ನಡೆದು ಬಂದಿರಬಹುದಾದ ಸರಳರಗಳೆಯ ಛಂದಸ್ಸನ್ನು ಕೊಂಚ ಸ್ವಾತಂತ್ರ್ಯ ವಹಿಸಿ ಬಳಸಿಕೊಂಡಿರುವುದಾಗಿ ಇವರು ಹೇಳಿಕೊಂಡಿದ್ದಾರೆ. 'ಯುಗಸಂಧ್ಯಾ' ಮಹಾಕಾವ್ಯದ ವಸ್ತು ಮಹಾಭಾರತದ ಪಾಂಡವವಿಜಯದ ಅನಂತರದ ಕಥೆ. 'ವ್ಯಾಸರು ಮಹಾಭಾರತದಲ್ಲಿ ಆ ಭಾಗವನ್ನು ವಿಶೇಷವಾಗಿ ಬೆಳೆಸಿದ್ದಾರೆ. ಆದರೆ ಕನ್ನಡದಲ್ಲಿ ಭಾರತವನ್ನು ಬರೆದ ಪಂಪನಾಗಲಿ, ಕುಮಾರವ್ಯಾಸನಾಗಲಿ ಆ ಜಾಡಿನಲ್ಲಿ ಮುನ್ನಡೆಯಲಿಲ್ಲ. ಪಾಂಡವರು ವಿಜಯಿಗಳಾದ ಅನಂತರ

ಧರ್ಮಾಧರ್ಮ ಯುದ್ಧದಲ್ಲಿ ಧರ್ಮಕ್ಕೆ ಜಯ ದೊರಕಿದ ಮೇಲೆ ಮುಂದೆ ಏನು ಸ್ವಾರಸ್ಯವಿದ್ದೀತು ಎಂದೋ ಏನೋ'[೨೫] ಎಂಬುದು ಸುಜನಾ ಅವರ ಅನಿಸಿಕೆ.

ಹಾಗಾಗಿ ಇವರು ವ್ಯಾಸಹೃದಯವನ್ನು ಅರಿತು ಮುನ್ನೆಡೆದಿದ್ದಾರೆನ್ನಬಹುದು. ಮಹಾಭಾರತ ಯುದ್ಧವಾದ ಮೇಲೆ ಕೊನೆಯಲ್ಲಿ ಕೃಷ್ಣ ಬೇಡನೊಬ್ಬನ ಬಾಣಕ್ಕೆ ದೇಹತ್ಯಾಗ ಮಾಡಿದ. ಇದರ ಅರ್ಥವೇನು? ಎಲ್ಲವೂ ಸಪ್ಪೆಯಾಗಿ ಪರಿಣಮಿಸಬೇಕೆ? ಮಹಾಭಾರತ ಯುದ್ಧಾನಂತರವೂ ಉಳಿದಿದ್ದ ಲೋಕಕಂಟಕರೆಲ್ಲರ ನಿರ್ನಾಮ ದೈವಸಂಕಲ್ಪವಾಗಿತ್ತು. ಬೇಡನ ಬಾಣಕ್ಕೆ ಕೃಷ್ಣ ದೇಹತ್ಯಾಗ ಮಾಡಿದ್ದು ಅರ್ಥವತ್ತಾದದ್ದು. ಮುಳ್ಳನ್ನು ಮುಳ್ಳಿನಿಂದ ತೆಗೆದು ಎರಡನ್ನೂ ಎಸೆದುಬಿಡುವಂತೆ, ಲೋಕಕಾರ್ಯವನ್ನು ನಿರ್ಮೂಲ ಮಾಡಿದ ಶ್ರೀಕೃಷ್ಣ ತನ್ನ ದೇಹವನ್ನು ಕಳಚಿ ಒಗೆದ ದರ್ಶನ ಸುಜನಾ ಅವರಿಗೆ ಆಯಿತು. ಇವರ ದೃಷ್ಟಿಯಲ್ಲಿ ಇದೊಂದು ಅದ್ಭುತ ಪ್ರಸಂಗ. ಮುಂದಿನ ಕಥೆಯನ್ನು ಅವರೇ ಹೀಗೆ ವರ್ಣಿಸಿದ್ದಾರೆ: 'ಕುಮಾರವ್ಯಾಸ ಭಾರತವನ್ನು ಜನಪ್ರಿಯ ಆವೃತ್ತಿಗಾಗಿ ಸಿದ್ಧಪಡಿಸುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಇವರು ಆಗಿನಿಂದಲೇ ಈ ಕಥಾಭಾಗದ ಅಭಿವ್ಯಕ್ತಿಗೆ ಮಾನಸಿಕವಾಗಿ ತೊಡಗಿದ್ದರು. 'ಯುಗಸಂಧ್ಯಾ' ಮಹಾಕಾವ್ಯವನ್ನು ರಚಿಸತೊಡಗಿದಾಗ ಇವರ ದೇಹಸ್ಥಿತಿ ಕೆಟ್ಟಿತು. ಲೇಖನಿ ಹಿಡಿದು ಬರೆಯಲಾಗದವರಾದರು. ಮಕ್ಕಳ ಸಹಕಾರದಿಂದ ಇದು ಪೂರೈಸಿತು. ಭಾರತೋತ್ತರ ಕಥಾ ವಿಷಯ ಪ್ರಸಂಗದೊಳಗೇನುಂಟು? ರಸಪೂರ್ಣ ಕಥೆಯೇ, ಕ್ರಿಯೆಯೆ, ದರ್ಶನವೆ? ಮನುಜಮನದರ್ಥಗಳೆ ಎಂಬ ಪ್ರಶ್ನೆಗೆ ೪೨೫ ಪುಟಗಳ ಈ ಮಹಾಕಾವ್ಯ ಉತ್ತರವಾಗಿದೆ.'[೨೬] ಈ ಮಹಾಕಾವ್ಯಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರೆತಿದೆ (೨೦೦೨). 'ಯುಗಸಂಧ್ಯಾ' ಮಹಾಕಾವ್ಯವು ೪೮ ಅಧ್ಯಾಯಗಳು, ೪೨೫ ಪುಟಗಳಲ್ಲಿ ಹರಡಿಕೊಂಡಿದೆ.

ಪ್ರಸಿದ್ಧ ವಿದ್ವಾಂಸರಾದ ರಾಗೌರವರು ಸುಜನಾ ಅವರ ಕಾವ್ಯವನ್ನು ಕುರಿತು ಆಡಿರುವ ಮಾತುಗಳು ಔಚಿತ್ಯವಾಗಿವೆ: 'ಸುಜನಾ ಅವರ ಕಾವ್ಯ ವಿಕಾಸದಲ್ಲಿ ಯುಗಸಂಧ್ಯಾಪೂರ್ವದ್ದು ಒಂದು ಬಗೆಯಾದರೆ, ಯುಗಸಂಧ್ಯಾ ಇನ್ನೊಂದು ಬಗೆಯದು. ಅನುಭವ, ವಿಚಾರ, ಭಾವನೆಗಳಂತಹ ವಿಷಯಗಳು ಮೊದಲನೆಯ ರೀತಿಯ ಕಾವ್ಯವನ್ನು ರೂಪಿಸಿವೆ. ಪ್ರಾಚೀನ ಕಥೆಯೊಂದನ್ನು ಧಾರಣಶಕ್ತಿಯೊಡನೆ ಹೊಸ ವಿನ್ಯಾಸದಲ್ಲಿ ದುಡಿಸಿಕೊಂಡದ್ದು ಎರಡನೆಯದರ ವಿಶೇಷ. ಸುಜನಾ ಸಾಕಷ್ಟು ವೈವಿಧ್ಯಪೂರ್ಣವಾದ ಕಾವ್ಯವನ್ನು ರಚಿಸಿರುವುದು ಸ್ಪಷ್ಟವೇ. ಅವರ ಕಾವ್ಯ ಎಲ್ಲ ನಿಟ್ಟಿನಿಂದಲೂ ಪರಿಪಕ್ವಗೊಂಡುದು 'ಯುಗಸಂಧಾ'ದಲ್ಲಿಯೇ ಎನ್ನಬೇಕು. ಸುಜನಾ ಅವರ ಕಾವ್ಯ ಜೀವನದ ಮೂರು ಸ್ತರಗಳು: ಕವನಗಳು, ವಚನಗಳು ಮತ್ತು 'ಯುಗಸಂಧ್ಯಾ' ಮಹಾಕಾವ್ಯ. ಸುಜನಾ

ಅವರ ಕಾವ್ಯದಲ್ಲಿ ಕ್ರಮಬದ್ಧ ಬೆಳೆವಣಿಗೆ ಕಾಣದಾದರೂ, ಪ್ರಬುದ್ಧತೆಗೆ ಕೊರತೆಯಿಲ್ಲ. ಸೃಜನಶೀಲತೆ ಅವರಿಗೆ ಒಂದು ವರವಾಗಿ ಅತೀತ ಒಲವಿನಿಂದಾಗಿ ಕಾವ್ಯರಚನಾ ವಿಕಾಸದಲ್ಲಿ ಮಧ್ಯೆ ಮಧ್ಯೆ ಅಂತರ ಹೆಚ್ಚಾಗಿಯೇ ಕಾಣಿಸಿಕೊಂಡಿತು...'[೨೭] ಎಂಬುದಾಗಿ ವಸ್ತುನಿಷ್ಠವಾಗಿ ವಿಮರ್ಶಿಸಿದ್ದಾರೆ.

ಮೇಲಿನ ಶಿಷ್ಟಭಾರತಗಳಿಗೆ ಸಂವಾದಿಯಾಗಿ ಜನಪದ ಮಹಾಭಾರತವು ರೂಪುಗೊಂಡಿದೆ. ಜನಪದ ಮಹಾಭಾರತವು ಜನಪದ ಪ್ರತಿಭೆಯ ಒಂದು ಅದ್ಭುತ ಸೃಷ್ಟಿಯಾಗಿದೆ. ಕೇವಲ ಶಿಷ್ಟನೆಲೆಯಲ್ಲಿ ಹಲವು ರೂಪಾಂತರ ಹೊಂದುತ್ತಾ ಬಂದ ಮಹಾಭಾರತ ಕುರಿತಾದ ಜನಪದರ ನಿಲುವುಗಳನ್ನು, ಜನಪದ ಮಹಾಭಾರತ ರೂಪುಗೊಂಡ ಬಗೆಯನ್ನು ಹಿಂದಿನ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

**ಅಡಿ ಟಿಪ್ಪಣಿಗಳು:**

೧. ಕನ್ನಡ ಮಹಾಭಾರತ, ವಿರಾಟಪರ್ವ, ಅನು: ಸಿ.ಪಿ.ಕೃಷ್ಣಕುಮಾರ್, ಪ್ರಸ್ತಾವನೆ ಪುಟ XI, ೧೯೯೦.

೨. ಪಂಪ ಮಹಾಕವಿ, ಎಂ. ಗೋವಿಂದಪೈ, ಪುಟ ೧೦೮, ೧೯೫೧.

೩. No. 1, Inscriptions of Andhra Pradesh, Karimnagar District, The Govt. of A.P, Hyderabad, P.P. 1-5, 1974; ಕರೀಂನಗರ ಶಾಸನದಲ್ಲಿ ಪಂಪಭಾರತದ ಪದಗಳು, ೨-೩, ಪುಟ ೧೧೬-೨೫.

೪. ಕನ್ನಡ ಸಾಹಿತ್ಯ ಚರಿತ್ರೆ, ಕೆ.ವೆಂಕಟರಾಮಪ್ಪ, ಪುಟ ೨೮, ೧೯೭೪.

೫. ನಾಡೋಜ ಪಂಪ, ಮುಳಿಯ ತಿಮ್ಮಪ್ಪಯ್ಯ, ಪುಟ ೧೩೪.

೬. ಸಾಪೇಕ್ಷ, ಸೀತಾರಾಮ ಜಾಗೀರ್‌ದಾರ್, ಪುಟ ೨೦, ೧೯೯೯.

೭. ಆರಾಧ್ಯ ಸಂಪದ, ಸಂ. ಎಸ್.ವಿದ್ಯಾಶಂಕರ, ೫೦೬, ೨೦೦೫.

೮. ಕನ್ನಡ ಸಾಹಿತ್ಯ ಚರಿತ್ರೆ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ, ಆರ್.ವಿ.ಎಸ್. ಸುಂದರಂ, ಸಂಪುಟ-೫, ಭಾಗ-೩, ಪುಟ ೭೨, ೨೦೦೮.

೯. ಕುಮಾರವ್ಯಾಸ ಪ್ರಶಸ್ತಿ, ಕರ್ಣಾಟಕ ಸಂಘ, ಮೈಸೂರು, ಮುನ್ನುಡಿ ಪುಟ VI, ೧೯೪೦.

೧೦. ಐತಿಹ್ಯ ಒಂದರ ಪ್ರಕಾರ ಕುಮಾರವ್ಯಾಸನು ವೀರನಾರಾಯಣ ದೇವಸ್ಥಾನದ ಪುಷ್ಕರಿಣಿಯಲ್ಲಿ ಸ್ನಾನಮಾಡಿ ಒದ್ದೆ ಬಟ್ಟೆಯಲ್ಲಿದ್ದುಕೊಂಡು ಕನ್ನಡ ಕಾವ್ಯರಚಿಸುತ್ತಿದ್ದನಂತೆ. ಮೈಮೇಲಿನ. ಬಟ್ಟೆ ಒಣಗುವ ತನಕ ಅವನ ಕಾವ್ಯ ಸ್ಫೂರ್ತಿ ನಿರರ್ಗಳವಾಗಿ ಪ್ರವಹಿಸುತ್ತಿತ್ತಂತೆ. ಅನಂತರ ಅವನು ಬರೆಯುತ್ತಿರಲಿಲ್ಲವಂತೆ.

೧೧. ಕವಿ ಕಥೆಯ ಹರಿಕಥೆ, ಪ್ರಬುದ್ಧ ಕರ್ಣಾಟಕ, ಮೈಸೂರು, ೪೧-೩, ಪುಟ ೧೫೦, ೧೯೫೯.

೧೨. ಕುಮಾರವ್ಯಾಸ: ಒಂದು ಅಧ್ಯಯನ, ಬೋರೇಗೌಡ ಚಿಕ್ಕಮರಳಿ, ಪುಟ ೧೪, ೧೯೯೯.

೧೩. ಅದೇ, ಪುಟ ೨೯, ೩೦.

೧೪. ಕು.ಕ.ಅ. ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು, ೫ನೆಯ ಸಂಪುಟ, ೨ನೆಯ ಭಾಗ, ಪುಟ ೭೦೬, ೨೦೦೮.

೧೫. ಕನ್ನಡ ಸಾಹಿತ್ಯ ಚರಿತ್ರೆ, ರಂ.ಶ್ರೀ.ಮುಗಳಿ, ಪುಟ ೨೩೯-೨೪೦.

೧೬. ಕನ್ನಡ ಸಾಹಿತ್ಯ ಚರಿತ್ರೆ ಕು.ಕ.ಅ. ಸಂಸ್ಥೆ, ಮೈಸೂರು, ೫ನೆಯ ಸಂಪುಟ, ೨ನೆಯ ಭಾಗ, ಪುಟ ೭೭೯, ೨೦೦೮.

೧೭. ಸಾಹಿತ್ಯ ಚರಿತ್ರೆ ಭಾಗ-೧, ಸಂ. ಬಿ.ಆರ್.ರಾಮಚಂದ್ರೇಗೌಡ, ಪುಟ ೬೧, ೧೯೯೮.

೧೮. ಕನ್ನಡ ಸಾಹಿತ್ಯ ಚರಿತ್ರೆ ಕು.ಕ.ಅ. ಸಂಸ್ಥೆ, ೫ನೆಯ ಸಂಪುಟ, ೨ನೆಯ ಭಾಗ, ಪುಟ ೭೭೯, ೨೦೦೮.

೧೯. ಕನ್ನಡ ಸಾಹಿತ್ಯ ಚರಿತ್ರೆ ಕು.ಕ.ಅ. ಸಂಸ್ಥೆ, ೫ನೆಯ ಸಂಪುಟ, ೩ನೆಯ ಭಾಗ, ಪುಟ ೭೧.

೨೦. ಅದೇ, ಪುಟ ೭೨.

೨೧. ಅದೇ, ೩ನೆಯ ಭಾಗ, ೨೦೦೮.

೨೨. ಅದೇ, ೨ನೆಯ ಭಾಗ, ಪುಟ ೪೪೪, ೨೦೦೮.

೨೩. ಅದೇ, ೩ನೆಯ ಭಾಗ, ಪುಟ ೪೫೮, ೨೦೦೮.

೨೪. ಅದೇ, ೩ನೆಯ ಭಾಗ, ಪುಟ ೪೫೮, ೨೦೦೮.

೨೫. ಯುಗಸಂಧ್ಯಾ, ಸುಜನಾ, ಅರಿಕೆಯ ಪುಟಗಳು, ೧೯೯೯.

೨೬. ———————— ಅದೇ. ————————

೨೭. ಷಷ್ಠಿ ಸಂಪದ, ರಾಗೌ, ಪುಟ ೧೮೪, ೨೦೦೫.

## ಅಧ್ಯಾಯ ನಾಲ್ಕು

## ಕಥಾವಸ್ತು ಮತ್ತು ವಿನ್ಯಾಸ

ಮಹಾಭಾರತ ಮೊದಲಿಗೆ ಹಾಡುಗಬ್ಬವಾಗಿ ಅನಂತರ ಅಕ್ಷರ ರೂಪ ಪಡೆಯಿತೆಂಬ ಅಭಿಪ್ರಾಯ ಅನಾದಿಯಿಂದಲೂ ಚಾಲ್ತಿಯಲ್ಲಿದೆಯಾದರೂ ಅದು ಯಾವಾಗ ಲಿಖಿತರೂಪ ಪಡೆಯಿತ್ತೆಂಬ ಬಗ್ಗೆ ಖಚಿತವಾಗಿ ಹೇಳಲಾಗುವುದಿಲ್ಲ. ಪ್ರಸ್ತುತ ವ್ಯಾಸವಿರಚಿತ ಸಂಸ್ಕೃತದ ಮಹಾಭಾರತವೇ ಮೊದಲ ಹಾಗೂ ಮೂಲ ಕೃತಿಯಾಗಿದೆ. ಭಾರತದ ಎಲ್ಲಾ ಭಾಷೆಗಳಲ್ಲಿ ರಚಿತವಾಗಿರುವ ಲಿಖಿತ ಮಹಾಭಾರತಕ್ಕೆ ವ್ಯಾಸಭಾರತವೇ ಮೂಲ. ಕನ್ನಡದಲ್ಲೂ ರಚಿತವಾದ ಪಂಪ ಮತ್ತು ಕುಮಾರವ್ಯಾಸ ಮೊದಲಾದವರ ಮಹಾಭಾರತಕ್ಕೂ ವ್ಯಾಸಭಾರತವೇ ಪ್ರೇರಣೆ ಹಾಗೂ ಆಕರ. ಪಂಪ ಮತ್ತು ಕುಮಾರವ್ಯಾಸ ವ್ಯಾಸವಿರಚಿತ ಮಹಾಭಾರತದ ಕಥೆಯನ್ನು ಹೇಳಲು ಹೊರಟರಾದರೂ ತಮ್ಮ ಅನುಕೂಲಕ್ಕನುಗುಣವಾಗಿ ಮಹಾಭಾರತದ ಕಥೆಗಳನ್ನು ಹಿಗ್ಗಿಸಿ, ಕುಗ್ಗಿಸಿ ರಚಿಸಿರುವುದನ್ನು ಕಾಣಬಹುದು. ಪಂಪನ ವಿಕ್ರಮಾರ್ಜುನವಿಜಯಂ ಮತ್ತು ಕುಮಾರವ್ಯಾಸನ ಕರ್ಣಾಟಕ ಭಾರತ ಕಥಾಮಂಜರಿ ಕೃತಿಗಳು ಕನ್ನಡ ಸಾಹಿತ್ಯ ಪರಂಪರೆಯಲ್ಲಿಯೇ ಮಹೋನ್ನತ ಕೃತಿಯಾಗಿದೆ. ವ್ಯಾಸಭಾರತವನ್ನು ಇಬ್ಬರು ಕವಿಗಳು ತಮ್ಮ ದೃಷ್ಟಿಕೋನಗಳಿಗನುಗುಣವಾಗಿ ಬಳಸಿಕೊಂಡಿರುವುದರಿಂದ ಅವರ ಕೃತಿಗಳ ಸ್ವರೂಪವು ಬೇರೆ ಬೇರೆಯಾಗಿದೆ. ಇವೆಲ್ಲಕ್ಕೂ ಭಿನ್ನವಾದದ್ದು ಜನಪದಮಹಾಭಾರತ. ಅಜ್ಞಾತ ಕವಿಯ ಈ ಕೃತಿಯಲ್ಲಿ ಯಾವುದೇ ಲೌಕಿಕ ಹಿತಾಶಕ್ತಿಯಾಗಲೀ ಸ್ವಧರ್ಮೀಯ ಆಶಯವಾಗಲೀ ಕಂಡುಬರದೆ ಮಹಾಭಾರತದ ಕಥೆಯನ್ನು ಜನಸಾಮಾನ್ಯರಿಗೆ ಮುಟ್ಟಿಸುವುದೇ ಮೂಲ ಆಶಯವಾಗಿರುವುದನ್ನು ಕಾಣಬಹುದು. ಆತ ಮಹಾಭಾರತದ ಕಥೆಯನ್ನು ತನ್ನ ಶಕ್ತಿಸಾಮರ್ಥ್ಯ ಹಾಗೂ ಭಾವಸಾಮರ್ಥ್ಯಕ್ಕನುಗುಣವಾಗಿ ಹಿಗ್ಗಿಸುತ್ತಾ ತನ್ನ ಪ್ರಾದೇಶಿಕ ಹಾಗೂ ಭೌಗೋಳಿಕ ಪರಿಮಿತಿಗಳಿಗನುಗುಣವಾಗಿ ಬದಲಾಯಿಸಿಕೊಂಡಿದ್ದಾನೆ.

ಪ್ರಸ್ತುತ ಜನಪದ ಮಹಾಭಾರತವನ್ನು ಬೆಟ್ಟದಬೀಡು ಸಿದ್ದಶೆಟ್ಟಿಯವರು ಹಾಡಿದ್ದು, ಪಿ.ಕೆ.ರಾಜಶೇಖರ ಅವರು ಸಂಗ್ರಹಿಸಿದ್ದಾರೆ. ಇದುವರೆಗೂ ಕನ್ನಡದಲ್ಲಿ ದೊರೆತ್ತಿರುವ ಜನಪದ ಮಹಾಭಾರತಗಳಲ್ಲಿ ಪಿ.ಕೆ.ಆರ್.ರವರು ಸಂಗ್ರಹಿಸಿರುವ ಮಹಾಭಾರತವೇ ಸಂಪೂರ್ಣ ಮಹಾಭಾರತವಾಗಿದೆ. ಇದಕ್ಕೂ ಮೊದಲು ಸಂಗ್ರಹಿಸಿರುವ ಮಹಾಭಾರತದ ಕಥೆಯಲ್ಲಿ ಕೆಲವು ಪ್ರಸಂಗಗಳಿಗೆ ಮಾತ್ರ ಸೀಮಿತವಾದುದಾಗಿದ್ದವು. ಅವುಗಳಿಗೂ ಹಾಗೂ ಸಿದ್ದಶೆಟ್ಟಿಯವರು ಹಾಡಿರುವ ಮಹಾಭಾರತಕ್ಕೂ ಕೆಲಮಟ್ಟಿಗೆ ಸಾಮ್ಯ ಹಾಗೆಯೇ ಬಹುಮಟ್ಟಿಗೆ ವ್ಯತ್ಯಾಸವಿರುವುದನ್ನು ಕಾಣಬಹುದು.

ಹೀಗಾಗಿ ಕಥಾವಸ್ತುವಿನಲ್ಲೂ ಅಗಾಧತೆಯಿರುವುದನ್ನು ಕಾಣಬಹುದು. ಜನಪದ ಕವಿಗೆ ಎಲ್ಲವನ್ನು ಮಹಾಭಾರತದ ಕಥೆಯಲ್ಲಿ ಸೇರಿಸಿ ಶಿವ ನಮ್ಮ ಪರಮದೈವವಾದ ಕಾರಣ ಪಾಂಡವರು ಶಿವನ ಅಂಶದವರು. ಅವರ ಪತ್ನಿಯಾದ ದ್ರೌಪದಿ ಪಾರ್ವತಿಯೇ ಎಂದು ಭಾವಿಸಿ, ಕೌರವರು ರಾಕ್ಷಸ ವಂಶಸ್ಥರು ಎಂಬುದಾಗಿ ಸಮೀಕರಿಸಿ ಹಾಡಿದ್ದಾನೆ.

ಹೀಗಾಗಿ ಪಂಪನ ವಿಕ್ರಮಾರ್ಜುನ ವಿಜಯದ ಕಥಾವಸ್ತುವಿಗೂ ಕುಮಾರವ್ಯಾಸನ ಕರ್ಣಾಟಭಾರತ ಕಥಾಮಂಜರಿ ಕಥಾವಸ್ತುವಿಗೂ ಜನಪದ ಮಹಾಭಾರತದ ಕಥಾವಸ್ತುವಿಗೂ ಭಿನ್ನತೆಯಿದೆ. ಈ ಮೂರು ಕೃತಿಗಳ ಕಥಾವಸ್ತು ಮತ್ತು ವಿನ್ಯಾಸದಲ್ಲಿನ ಭಿನ್ನತೆಗಳನ್ನು ತೌಲನಿಕವಾಗಿ ಈ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

**ಜನಪದ ಮಹಾಭಾರತದ ಕಥಾವಸ್ತು ವಿನ್ಯಾಸ:**

ಪಂಪಭಾರತ ಮತ್ತು ಕುಮಾರವ್ಯಾಸಭಾರತಕ್ಕಿಂತ ಭಿನ್ನವಾದುದು ಜನಪದ ಮಹಾಭಾರತ ಎನ್ನಬಹುದು. ಪಂಪ ತನ್ನ ಕಾವ್ಯದಲ್ಲಿ ತನ್ನ ದೈವವನ್ನು ಕುಮಾರವ್ಯಾಸ ತನ್ನ ಆರಾಧ್ಯ ದೈವವಾದ ವೀರನಾರಾಯಣನನ್ನು ಪ್ರಾರ್ಥಿಸಿರುವಂತೆ ಜನಪದ ಮಹಾಭಾರತದ ಅಜ್ಞಾತ ಕವಿಯು ಶಿಷ್ಟದೇವತೆಗಳಾದ ಗಣೇಶ ಮತ್ತು ಶಾರದಾಂಬೆಯ ಜೊತೆಗೆ ತನ್ನ ಮನೆದೇವರುಗಳಾದ ಮಂಡ್ಯದ ಲಿಂಗಯ್ಯ, ಕಪ್ಪಡಿ ರಾಚಪ್ಪ, ಚಿಕ್ಕಲೂರು ಸಿದ್ದಪ್ಪಾಜಿ, ದೊಡ್ಡಮ್ಮತಾಯಿಯನ್ನು ನೆನೆಯುವುದನ್ನು ಕಾಣಬಹುದು. 'ಓಂ ಪ್ರಥಮದಲ್ಲಿ ಓಂ ಪೂರ್ವದಲ್ಲಿ ಮಹಾಭಾರತದ ಕಥೆಯ ಬೀಜವು ಭೂಮಿಗೆ ಬಿದ್ದು ಮರವಾಗಿ ಬೆಳೆದು ಬಗೆ ಬಗೆಯ ರುಚಿಯ ಫಲಗಳ ಕೊಟ್ಟಿತು' ಎಂಬ ಮಾತಿನಲ್ಲಿ ಜನಪದ ಕವಿ ಮಹಾಭಾರತವನ್ನು ಒಂದು ಚರಿತ್ರೆಯಾಗಿ ನೋಡುವುದಕ್ಕಿಂತ ಮಾನವ ಇತಿಹಾಸದ ಕಥೆಯಾಗಿ ಪರಿಭಾವಿಸಿರುವುದನ್ನು ಗ್ರಹಿಸಬಹುದು. ಮಹಾಭಾರತದ ಪ್ರಾಚೀನತೆ ಮತ್ತು ಸ್ವಾರಸ್ಯಗಳನ್ನು ಈ ಮಾತುಗಳು ಸೊಗಸಾಗಿ ನಿರೂಪಿಸುತ್ತದೆ. 'ಗುರುಕೊಟ್ಟ ಜೋಳಿಗೆ ತುಂಬಿಕೊಂಡಿರುವೆನು' ಎಂಬ ಮಾತು ಪರಂಪರೆಯನ್ನು ಧ್ವನಿಸಿದರೆ 'ಶಿವಕೊಟ್ಟ ನೆನಪನು ನಂಬಿಕೊಂಡಿರುವೆನು' ಎಂಬುದು ಕಂಠಸ್ಥ ಸಂಪ್ರದಾಯವನ್ನು ಪ್ರತಿನಿಧಿಸುವುದನ್ನು ಕಾಣಬಹುದು. ಕಥೆಯ ಲಿಪಿಕಾರ ಗಣಪತಿಯಾದರೂ ಕಥಾರಚನೆಗೆ ನೀಡುವ ಕಾರಣ ಭಿನ್ನ. ವ್ಯಾಸರು ಹೇಳಿದ ಕಥೆಯನ್ನು ಶೀಘ್ರವಾಗಿ ಬರೆದ ಗಣಪನಿಗೆ ನವರತ್ನ ಮಾಲೆ ಬಹುಮಾನವಾಗಿ ಲಭಿಸುತ್ತದೆ.

ಮಹಾಭಾರತದ ಮೂಲ ಪುರುಷನಾದ ಶಂತನು ಜನನದ ವಿಚಾರವೂ ಭಿನ್ನವಾಗಿದೆ. ದೇವತೆಗಳ ಪೈಪೋಟಿಯಿಂದ ಗಂಗೆಯ ಶಾಪ, ಮಲೀನ ನೀರಿನ ಪ್ರೋಕ್ಷಣೆಯಿಂದ ಸಿಟ್ಟುಗೊಂಡ ಶನಿದೇವ ಗಂಗೆಗೆ ನೀಡಿದ ಶಾಪವೇ ಮಹಾಭಾರತಕ್ಕೆ ಬುನಾದಿಯಾಗುತ್ತದೆ. ಬ್ರಹ್ಮನ ಸಾಂತ್ವನದಿಂದ ಗಂಗೆ ಭೂಲೋಕದಲ್ಲಿ ಜನಿಸಿದಂತೆ ಶಿವನೂ ಕೂಡ ಭೂಲೋಕದಲ್ಲಿ ಜನಿಸುತ್ತಾನೆ. ಮಹಾಭಾರತದ ಕಥೆ ಲಕ್ಷ್ಮಿ, ಸರಸ್ವತಿಯರ ಶ್ರೇಷ್ಠತೆಯಿಂದ ಸ್ವಯಂ ಘೋಷಣೆಯಿಂದ ಆರಂಭಗೊಳ್ಳುತ್ತದೆ. ಶಕ್ತಿ–ಸಂಪತ್ತು–ಅರಿವು ಈ ಮೂರು ಅಂಶಗಳೂ ಪ್ರಪಂಚದಲ್ಲಿನ ಅಸ್ತಿತ್ವಕ್ಕೆ ಅನಿವಾರ್ಯವಾದವುಗಳೇನೋ ನಿಜ, ಆದರೆ ಇವುಗಳು ಪಾವಿತ್ರ್ಯರಹಿತವಾದಲ್ಲಿ ದುರ್ಬಳಕೆಯಾಗುತ್ತದೆ ಎಂಬ ಸಂಗತಿ 'ಶಿವಗಂಗೆ ಪರ್ವದಲ್ಲಿ ಮೂಡಿಬಂದಿದೆ. ಈ ಮೂರರಲ್ಲಿ ಕೇವಲ ಒಂದು ಅಂಶವನ್ನು ಪ್ರಧಾನವೆಂದು ಪರಿಭಾವಿಸುವುದರಿಂದಾಗುವ ದುರಂತಗಳನ್ನು ಕಂಡಿರುವ ಮನುಷ್ಯನ ಸಂದರ್ಭಗಳಲ್ಲಿ ಈ ಮೂರೂ ಮುಪ್ಪುರಿಯಾದಲ್ಲಿ ಸಂಭವಿಸಬಹುದಾದ ಘೋರತೆಯನ್ನು ನಿವಾರಿಸಬೇಕಾದರೆ ಈ ಮೂರಕ್ಕೂ ಪಾವಿತ್ರ್ಯ ಬೇಕೆಂಬ ಜನಪರ ತಾತ್ವಿಕ ಚಿಂತನೆ ಗಮನಾರ್ಹವೆನಿಸುತ್ತದೆ. ಜೊತೆಗೆ ಶಿವನ ಪತ್ನಿಯಾದ ಗಂಗೆ ಮಾನವ ಮಾತ್ರನಾದ ಶಂತನುವಿಗೆ ಹೆಂಡತಿಯಾಗುವುದನ್ನು ಜನಪದ ಮನುಷ್ಯ ಪ್ರಶ್ನಿಸುವಂತಿದೆ. ಇದರಿಂದ ಶಿವನೇ ಶಾಂತಚಕ್ರವರ್ತಿಯಾಗಿ ಭೂಮಿಯಲ್ಲಿ ಜನಿಸಬೇಕಾಗುತ್ತದೆ. ಜನಪದರಲ್ಲಿ ದೇವಾನುದೇವತೆಗಳನ್ನು ಮಾನವ ಸ್ವಭಾವಗಳ ನಡತೆಗೆ ಇಳಿಸುವ ಮಾನವರನ್ನು ದೇವತೆಗಳನ್ನಾಗಿ ಏರಿಸುವ ಪ್ರಕ್ರಿಯೆ ಸಾಮಾನ್ಯವಾದುದಾಗಿದೆ.

ಮುಂದೆ ಶಂತನು ಮದುವೆಯಾಗುವ ಮತ್ಸ್ಯಗಂಧಿಯ ಕಥೆ ಜನಪದರಲ್ಲಿ ಭಿನ್ನವಾದ ಕಥೆಯಾಗಿದೆ. ತಪಗೈಯುತ್ತಿದ್ದ ಮಚೇಂದ್ರನಾಥನನ್ನು ನೋಡಿ ಅಪಹಾಸ್ಯಗೈಯುವುದಕ್ಕಾಗಿ ಆತನ ಕೊರಳಿಗೆ ಸತ್ತ ಹಾವನ್ನು ಹಾಕುವುದು ಇದರಿಂದ ಕುಪಿತನಾದ ತಪಸ್ವಿ ಭೂಲೋಕದಲ್ಲಿ ಮೀನಿನ ಹೊಟ್ಟೆಯಲ್ಲಿ ಹುಟ್ಟಿ ದುರ್ಗಂಧದೇವಿ ಎಂಬ ಹೆಸರನ್ನು ಪಡೆಯುವಂತೆ ಶಪಿಸುವುದು ಶಾಪ ವಿಮೋಚನೆಗೆ ತಪಸ್ವಿಯನ್ನು ಕೂಡುವುದಿಂದ ನಿವಾರಣೆಯಾಗುವುದು ಎಂದು ನುಡಿಯುವ ಮಾತು ಮುಂದೆ ಆಕೆ ತನ್ನ ಶಾಪ ವಿಮೋಚನೆಗೆ ಸ್ವಇಚ್ಛೆಯಿಂದ ಪರಾಶರ ಮುನಿಯ ಜೊತೆ ಕೂಡುವಂತೆ ಪ್ರೇರೇಪಿಸುವ ಕಥೆ ಜನಪದರದಾಗಿದೆ. ಹೀಗೆ ಶಾಪಹೊತ್ತ ದುರ್ಗಂಧದೇವಿಯೇ ಪರಾಶರ ಮುನಿಯ ಸಾಂಗತ್ಯದಿಂದ ದುರ್ಗಂಧವನ್ನು ನೀಗಿಕೊಂಡು ಸುಗಂಧದೇವಿಯಾಗುವಳು. ಅವರಿಬ್ಬರ ಸಮ್ಮಿಲನದಿಂದ ಜನಿಸುವ ಮಗುವಿಗೆ ವೇದವ್ಯಾಸನೆಂದು ನಾಮಕರಣ ಮಾಡುವ ಸಂಗತಿಗಳು ವ್ಯಾಸಭಾರತಕ್ಕಿಂತ ಭಿನ್ನವಾಗೇನೂ ಕಂಡುಬರುವುದಿಲ್ಲ.

ಶಂತನು ಮತ್ತು ಸುಗಂಧದೇವಿಯ ವಿವಾಹ ಹಿರಿಯ ಪುತ್ರನ ಪ್ರತಿಜ್ಞೆಯಿಂದ ನೆರವೇರುವುದು ಇಲ್ಲೆಲ್ಲಾ ಗಾದೆಗಳ ಬಳಕೆಯನ್ನು ಕಾಣಬಹುದು. ತಂದೆಯ ಆಸೆಯನ್ನು ಈಡೇರಿಸಲು ಹೊರಟ ಮಗನನ್ನು ಕಾಮದೇವ ತಡೆಯಲು ಪ್ರಯತ್ನಿಸಿದಾಗ ಸಿಟ್ಟುಗೊಂಡ ಹಿರಿಯಮಗ ಕಾಮನನ್ನು ಸುಟ್ಟು ಅವನ ಭಸ್ಮವನ್ನು ಹಣೆಗಿಟ್ಟುಕೊಂಡ. ಇದರಿಂದ ಅವನಿಗೆ ಭೀಷ್ಮನೆಂಬ ಹೆಸರಾಯಿತ್ತೆಂದು ಜನಪದರು ಭಾವಿಸಿರುವುದು ವಿಶೇಷವಾಗಿದೆ. ಮುಂದೆ ಸುಗಂಧದೇವಿಯ ಮಗನಾದ ವಿಚಿತ್ರವೀರ್ಯನ ಸಾವು ಜನಪದ ಮಹಾಭಾರತದಲ್ಲಿ ಭಿನ್ನವಾಗಿದೆ. ಚಿತ್ರಸೇನನ ಸಾವಿನಿಂದ ನೊಂದ ತಾಯಿ ಮತ್ತು ನಾದನಿಯನ್ನು ಭೀಷ್ಮ ಬೆಟ್ಟಕೋಟೆಯ ಗಿರಿಗೆ ಕರೆದ್ಯೊಯ್ದು ನಾರಾಯಣಸ್ವಾಮಿಯ ದರ್ಶನದಿಂದ ಮನಶಾಂತಿ ಕಂಡುಕೊಳ್ಳುವಂತೆ ಹೇಳಲು ಅದರಂತೆ ನಡೆಯುತ್ತಿದ್ದ ತಾಯಿಯನ್ನು ಅನುಮಾನಿಸಿ ಪರೀಕ್ಷಿಸಿ ಸತ್ಯದ ಅರಿವಾದ ನಂತರ ಅನುಮಾನಿಸಿದ್ದಕ್ಕೆ ತಕ್ಕ ಶಿಕ್ಷೆ ಎಂದು ಬೆಟ್ಟದಿಂದ ಹಾರಿ ಪ್ರಾಣ ಬಿಡುವುದು ಜನಪದ ಮಹಾಭಾರತದಲ್ಲಿ ಮಾತ್ರ ಕಂಡುಬರುವ ಪ್ರಸಂಗವಾಗಿದೆ.

ಇನ್ನು ದುರ್ಯೋಧನನ ಜನನ ಜನಪದ ಮಹಾಭಾರತದಲ್ಲಿ ಇತರ ಎಲ್ಲಾ ಮಹಾಭಾರತಕ್ಕಿಂತ ಭಿನ್ನವಾಗಿದೆ. ಹಿಂದಿನ ಜನ್ಮದಲ್ಲಿ ಸುವರ್ಣಕೇಶಿ ತಮ್ಮ ಸ್ವೇತಕೇಶಿ ಇವರ ಗುರುವಾದ ಒಂಕಾರಕೇಶಿಗಳ ಉಪಟಳವನ್ನು ಸೈರಿಸಲಾರದೇ ವಿಷ್ಣು ಮೋಹಿನಿ ವೇಷದಿಂದ ಪರಸ್ಪರರಲ್ಲಿ ಕಾದಾಟ ತಂದು ಅವರನ್ನು ಸಂಹರಿಸುವುದು. ಸುವರ್ಣಕೇಶಿಯ ನಾಗರುಸಿಯ ಕಣ್ಣನ್ನು ಚುಚ್ಚಲು ಕುಪಿತನಾದ ಮುನಿ ಮುಂದಿನ ಜನ್ಮದಲ್ಲಿ ಕುರುಡನಾಗಲಿ ಎಂದು ಶಪಿಸುವುದು ಆತನೇ ಈ ಜನ್ಮದಲ್ಲಿ ಧೃತರಾಷ್ಟ್ರನಾಗಿ ಜನಿಸಿದವನು. ಹಾಗೆಯೇ ಋಷಿಯ ಶಾಪದಿಂದಲೇ ಕೌರವರ ಜನನ ಅವರ ಸಂಹಾರಕ್ಕಾಗಿ ದೇವಾನುದೇವತೆಗಳು ಪಾಂಡವರಾಗಿ ಜನಿಸಿದರೆಂಬ ಕಥೆಯನ್ನು ಅವಲೋಕಿಸಿದರೆ ಕೌರವ ಪಾಂಡವರ ಕಥೆಗೆ ಪುರಾಣದ ಮಹತ್ವವನ್ನು ನೀಡುವ ಪ್ರಯತ್ನ ಜನಪದದ್ದಾಗಿರಬಹುದು ಎನಿಸುತ್ತದೆ.

ದ್ರೌಪದಿಯ ಜನನಕ್ಕೆ ಇದೇ ರೀತಿಯ ಕಥೆ ಇದ್ದು ಪಾರ್ವತಿಯ ಅಂಶವೇ ದ್ರೌಪದಿಯಾಗಿ ಜನಿಸಿದ್ದಾಳೆಂದು ಶಿವನ ಅಂಶವೇ ಪಾಂಡವರಾಗಿ ಜನಿಸಿ ದ್ರೌಪದಿಯನ್ನು ವಿವಾಹವಾದನೆಂಬ ಕಥೆಯ ಭಸ್ಮಾಸುರನ ಕಥೆಯನ್ನು ಹೋಲುತ್ತದೆ. ಮಹಾಭಾರತದ ಕಥೆಗೆ ಸಂಬಂಧಪಟ್ಟಂತೆ ಹೊಸ ವಿಚಾರಗಳನ್ನು ಅದು ವಾಸ್ತವಕ್ಕೆ ಹತ್ತಿರವಿರುವಂತೆ ಚಿತ್ರಿಸಿರುವುದನ್ನು ಕಾಣಬಹುದಾಗಿದೆ.

ಮುಂದೆ ಅಂಬಿಕೆ, ಅಂಬಾಲಿಕೆಯರು ವ್ಯಾಸನನ್ನು ಕಂಡಿದ್ದು, ಗಂಗಾತೀರದ ಬಸವ ಗುಡಿಯಲ್ಲಿ ಜನಪದರಿಗೆ ಬಸವ ಪೂಜನೀಯ ದೇವರು ಆತನಿರುವ ಗುಡಿ ಶ್ರೇಷ್ಠ. ಕರ್ಣನ ಜನನವು ಕೂಡ ಜನಪದರಲ್ಲಿ ವಿಶಿಷ್ಟವಾಗಿದ್ದು ಭಿನ್ನ ರೂಪವನ್ನು ಪಡೆದಿದೆ. ಇನ್ನು ಕುಂತಿಯ ಜನನ ಸೀತೆಯ ಜನನದಂತೆ ಭೂಮಿಯಲ್ಲಿ ಹುಟ್ಟಿದವಳು. ಹಾಗೆಯೇ ಆಕೆ ಮೈಸೂರಿನ ಭೋಜರಾಜ ದಂಪತಿಗಳಿಗೆ ಭೂಮಿಯಲ್ಲಿ ದೊರೆತವಳು. ಕುಂತಿಯಿಂದ ದೇಶಕ್ಕೆ ಕುನ್ತಲವಾಯಿತ್ತೆಂದು ಕುಂತಿಯೇ ಕೊಂತಮ್ಮ ಆದಳೆಂಬ ನಂಬಿಕೆ. ಮೈಸೂರಿನ ಸುತ್ತಮುತ್ತ ಈಗಲೂ ಕುಂತಿಪೂಜೆ ನಡೆಯುತ್ತಿರುವುದು ಈ ಕಥೆಗೆ ಪೂರಕವಾಗಿದೆಯೆನ್ನಬಹುದು.

ಹೀಗೆ ಪಾಂಡವರು ಮತ್ತು ಕೌರವರ ತಂದೆ ತಾಯಿಯರನ್ನು ಜನಪದರು ತಮ್ಮ ಬುದ್ಧಿಮಟ್ಟಕ್ಕೆ ನಿಲುಕುವಂತೆ ಹಾಡುತ್ತಾ ಬಂದಿರುವುದನ್ನು ಕಾಣಬಹುದು. ಮುಂದೆ ಪಾಂಡುವಿಗೆ ಶಾಪಕೊಡುವುದು ಮುನಿಯಲ್ಲ ಪಾರ್ವತಿ. ಹಾಗೆಯೇ ಶಕುನಿಯ ಪಾತ್ರವೂ ಕೂಡ ಭಿನ್ನವಾಗಿರುವುದು ಜನಪದ ಮಹಾಭಾರತದ ವೈಶಿಷ್ಟ್ಯ. ಶಕುನಿ ಪದದ ನಿಷ್ಪತ್ತಿಯನ್ನು ತೋರಿಸಿರುವ ರೀತಿ ಪಂಪ ಕುಮಾರವ್ಯಾಸರಲ್ಲಿ ಕಾಣಲಾಗುವುದಿಲ್ಲ. ಇಂದಿಗೂ ರಂಗಭೂಮಿಯಲ್ಲಿ ಶಕುನಿ ಪಾತ್ರವನ್ನು ಜನಪದರ ಈ ದೃಷ್ಟಿಕೋನದಿಂದಲೇ ಪರಿಭಾವಿಸುವುದನ್ನು ಕಾಣಬಹುದಾಗಿದೆ.

ದ್ರೋಣರು ತನ್ನ ಶಿಷ್ಯಂದಿರ ಸಾಮರ್ಥ್ಯವನ್ನು ಪರೀಕ್ಷಿಸಿದ ರೀತಿ ಪಂಪ, ಕುಮಾರವ್ಯಾಸರಿಗಿಂತ ಜನಪದರಲ್ಲಿ ಭಿನ್ನವಾಗಿದೆ. ಇಬ್ಬರ ಕಾವ್ಯಗಳಲ್ಲಿ ಶಸ್ತ್ರ ಪ್ರದರ್ಶನ ನಡೆದರೆ ಜನಪದ ಮಹಾಭಾರತದಲ್ಲಿ ಕಾಶಿ ತೀರ್ಥವನ್ನು ತರುವಂತೆ ಹೇಳಲಾಗಿದೆ. ಆ ಕಾರ್ಯ ಕೌರವರಿಂದ ಸಾಧ್ಯವಾಗದಿದ್ದಾಗ ಅರ್ಜುನ ಕೃಷ್ಣನ ಕರುಣೆಯಿಂದ ಹಾರೋ ಚಾಪೆ ಪಡೆದು ಕಾಶಿ ತೀರ್ಥವನ್ನು ತರುವನು. ಇಲ್ಲೆಲ್ಲಾ ಜನಪದರು ತಮ್ಮ ಸಾಮರ್ಥ್ಯಕ್ಕನುಗುಣವಾಗಿ ಕಥೆಯನ್ನು ಬದಲಾವಣೆ ಮಾಡಿಕೊಂಡಿದ್ದಾರೆ.

ಪಂಪ, ಕುಮಾರವ್ಯಾಸರಲ್ಲಿ ಕಂಡುಬರದೆ ಕೇವಲ ಜನಪದ ಮಹಾಭಾರತಗಳಲ್ಲಿ ಮಾತ್ರ ಕಂಡುಬರುವ ಪ್ರಸಂಗವೆಂದರೆ ಗಜನೋಂಪಿವ್ರತ. ಗಾಂಧಾರಿ ಗಜನೋಂಪಿ ವ್ರತಕ್ಕಾಗಿ ಕೆಬ್ಬೆ ಮಣ್ಣಿನಲ್ಲಿ ಆನೆ ಮಾಡಿದರೆ ಮುಂದೆ ಕುಂತಿ ಇಂದ್ರನೋಲಗದ ಐರಾವತವನ್ನೇ (ಜೀವಂತ ಆನೆ) ಭೂಲೋಕಕ್ಕೆ ಮಕ್ಕಳಿಂದ ತರಿಸಿ ವ್ರತವನ್ನು ಪೂರೈಸುವಳು. ಹಾಗೆ ವ್ರತಕ್ಕಾಗಿ ಸತ್ತಿದ್ದ ಪಾಂಡುವನ್ನು ಭೂಲೋಕಕ್ಕೆ ಕರೆತರುವ ಕಲ್ಪನೆ, ಆತನನ್ನು ಮತ್ತೆ ಹಿಂದಿರುಗಿಸಲು ನಿರಾಕರಿಸುವ ಪ್ರಸಂಗ, ಇದರಿಂದ

ಬೇಸರಗೊಂಡ ಕೃಷ್ಣ 'ಇನ್ನು ಮುಂದೆ ಸತ್ತವರು ಕಾಗೆ ರೂಪದಲ್ಲಿ ಭೂಲೋಕಕ್ಕೆ ಬರಲಿ' ಎಂದು ಶಾಪ ಕೊಡುವುದು ಇವೆಲ್ಲಾ ಜನಪದ ಮಹಾಭಾರತದಲ್ಲಿ ಮಾತ್ರ ಕಾಣುವಂತಹದು. ದೈನಂದಿನ ಬದುಕಿನಲ್ಲಿ ಕಾಣುವ ಸಂಪ್ರದಾಯ ಆಚರಣೆಗಳನ್ನು ಪುರಾಣದ ಕಥೆಗೆ ಸೇರ್ಪಡೆಗೊಳಿಸುವ ಜನಪದ ಕವಿಯ ಪ್ರತಿಭೆಯನ್ನಿಲ್ಲಿ ಕಾಣಬಹುದು.

ಹಾಗೆಯೇ ದ್ರೌಪದಿ ಪಾಂಡವರ ಜೊತೆ ಒಂದೊಂದು ವರ್ಷ ಬಾಳಲು ನಾರದರು ಹೇಳುವ ನಿಯಮಗಳ ವಿಧಾನ ಜನಪದರಲ್ಲಿ ಕಾಣುವಂತಹದು. ಪಂಪ, ಕುಮಾವ್ಯಾಸರಲ್ಲಿ ಈ ರೀತಿ ಕಂಡುಬರುವುದಿಲ್ಲ. ಅವರು ಹೇಳುವ ನಿಯಮಗಳು ಬಹುಮಟ್ಟಿಗೆ ರೇಣುಕಾ ಕಥೆಯನ್ನು ಹೋಲುತ್ತವೆ ಎನ್ನಬಹುದು. ಬಹುಮಟ್ಟಿಗೆ ಈಗಲೂ ಬೆಂಗಳೂರಿನಲ್ಲಿ ನಡೆಯುವ ಕರಗ ಮಹೋತ್ಸವವನ್ನು ದ್ರೌಪದಿ ಕರಗವೆಂದೇ ಕರೆಯುವುದನ್ನು ಕಾಣಬಹುದು.

ಜನಪದ ಮಹಾಭಾರತದ ಮತ್ತೊಂದು ವೈಶಿಷ್ಟವೆಂದರೆ ಅರ್ಜುನ ಜೋಗಿಯಾಗುವುದು. ಪಂಪಭಾರತದಲ್ಲಾಗಲೀ, ಕುಮಾರವ್ಯಾಸಭಾರತದಲ್ಲಾಗಲೀ ಕಾಣದಿರುವ ಈ ಕಥೆ ಕರ್ನಾಟಕದ ಜನಪದರಿಗೆ ವಿಶಿಷ್ಟವಾದುದೇನೋ ಎಂಬಂತೆ ಚಿತ್ರಣಗೊಂಡಿದೆ. ಹಾಗೆಯೇ ಕಾವ್ಯದಲ್ಲಿ ಉಲ್ಲೇಖಗೊಂಡಿರುವ ಚುಂಚನಗಿರಿ, ಕಾಶಿ ಮುಂತಾದ ಪ್ರದೇಶಗಳ ಹೆಸರನ್ನು ಕಾಣಬಹುದಾಗಿದೆ. ಏಳುಸಮುದ್ರದಾಚೆಗಿನ ಎಡತಿಟ್ಟಿನಲ್ಲಿದ್ದ ಕಾಪಾಲಿಸಿದ್ದ ಭೂದೇರನಾಥ, ಶಕುನಿಯ ಸಹಪಾಠಿ ಕೊನುಗಯ್ಯ ಈ ಎಲ್ಲರೂ ಕಾಪಾಲಿ ಅಥವಾ ನಾಥ ಪಂಥಕ್ಕೆ ಸಂಬಂಧಿಸಿದಂತಿದ್ದಾರೆ. ಭೂದೇರನಾಥ ಸ್ಮಶಾನದಲ್ಲಿ ಮಾಂತ್ರಿಕ ಕಾರ್ಯದಲ್ಲಿ ನಿರತನಾಗಿದ್ದಾಗಲೇ ಶಕುನಿ ಅವನನ್ನು ಆಶ್ರಯಿಸಿದ ಕಥೆಯೂ ನೂತನವಾದುದ್ದೇ ಆಗಿದೆ. ಅರ್ಜುನ ಚುಂಚನಗಿರಿ ಭೈರವನಲ್ಲಿ ದೀಕ್ಷೆ ಪಡೆದರೂ ಕಾಶಿ ವಿಶ್ವೇಶ್ವರನಾಥನ ಸಲಹೆಯಂತೆ ಕಾಪಾಲ ಸಿದ್ದನನ್ನು ಕಂಡು ಕಿನ್ನರಿ ವಾದ್ಯವನ್ನು ಪಡೆಯುತ್ತಾನೆ. ಆ ವಾದ್ಯವನ್ನು ಪದ್ಮಾವತಿ ಪಟ್ಟಣದ ಅರಸಿ ಪದ್ಮಾವತಿಯ ಅವಯವಗಳಿಂದ ತಯಾರಿಸಿದ್ದು ಅರ್ಜುನನೂ ಕಾಪಾಲ ಜೋಗಿಯಾಗಿಯೇ ಮಣಿಪುರಕ್ಕೆ ಹೋಗಿ ಚಿತ್ರಕುಸುಮಾಲೆಯನ್ನು ಕಾಣುತ್ತಾನೆ. ಈ ಹಿನ್ನಲೆಯಲ್ಲಿ ಪರಿಭಾವಿಸಿದಾಗ 'ಈ ಜನಪದ ಮಹಾಭಾರತವನ್ನು ಕಾಪಾಲಿ ಅಥವಾ ನಾಥಪಂಥದ ಮಹಾಭಾರತವೆಂದು'[೧] ಸಂಗ್ರಹಕಾರರು ಹೇಳಿದ್ದಾರೆ.

ಜನಪದ ಕವಿ ಗಾಯಕರಾದ ಸಿದ್ದಶೆಟ್ಟರು ಒಕ್ಕಲಿಗ ಸಮುದಾಯದವರ ಬಗ್ಗೆ ವಿಶೇಷ ಪ್ರೀತಿ ಅಭಿಮಾನವನ್ನಿಟ್ಟುಕೊಂಡಿರುವುದು ಕಾವ್ಯದಲ್ಲಿ ಗೋಚರವಾಗುತ್ತದೆ. ಜೋಗಿಯ ಗಾಯನಕ್ಕೆ ಮನಸೋತ ಮುದ್ದೇಗೌಡರ ಸೊಸೆ ದೇವಾಜಮ್ಮ ತಾನು ಕತ್ತರಿಸುತ್ತಿದ್ದ ಸೋರೆಕಾಯಿಗೆ ಬದಲಾಗಿ ತೊಡೆಯ ಮೇಲಿದ್ದ ಮಗುವಿನ ಕಾಲನ್ನೇ ಕತ್ತರಿಸುತ್ತಾಳೆ. ಈ ಪ್ರಸಂಗದಿಂದಾಗಿ ಒಂದೇ ಕಾಲಿನ ಮಗು ಒಕ್ಕಾಲಿಗ -> ಒಕ್ಕಲಿಗ ಎಂದಾಯಿತ್ತೆಂದು ಹೇಳುವ ಮತ್ತು ಒಕ್ಕಲಿಗರು ಮನೆಗೊಬ್ಬ ಮಗನನ್ನಾದರೂ ಜೋಗಿ ಬಿಡಬೇಕು ಎನ್ನುವ ಅರ್ಜುನ ಮಾತಿನಿಂದ ಈ ಸಮುದಾಯದವರಿಗೆ ಚುಂಚನಗಿರಿ ಮಠದ ಭೈರವ ಆರಾಧ್ಯ ದೈವವಾಯಿತ್ತೆಂದು ಹೇಳುವ ಕಥೆ ವಿನೂತನವಾದುದ್ದಾಗಿದೆ. ಕುಂತಿ ಜಮೀನನಲ್ಲಿ ದುಡಿಯುತ್ತಿದ್ದ ಕುಂತಿಭೋಜನಿಗೆ 'ಹಿಟ್ಟೊತ್ಕೊಂಡು' ಹೋಗುವ ಸನ್ನಿವೇಶ, ಭೀಮ ಏಕಚಕ್ರ ನಗರದ ಗೌಡರ ದರಕಾಸ್ ಭೂಮಿಯನ್ನು ಉತ್ತು ಬಿತ್ತು ಬರುವ ಪ್ರಸಂಗ ಬಲರಾಮ ನೇಗಿಲನ್ನು ಹೊತ್ತು ತಿರುಗಿತ್ತಿದ್ದ ಎಂಬ ಕೃಷಿ ಸಂಸ್ಕೃತಿಯ ಪ್ರತೀಕವಾಗಿ ಬಂದಿರುವ 'ಜನಪದ ಮಹಾಭಾರತ ವ್ಯಾಸಭಾರತದ ಪ್ರತಿರೂಪವಲ್ಲ ಇದೊಂದು ಈ ನೆಲದ ಮಹಾಭಾರತ'[3] ಎಂದು ಹೇಳಲು ಅಡ್ಡಿಯಿಲ್ಲ ಎಂಬ ಒಂದು ಹೇಳಿಕೆಯು ಉಂಟು.

ಜನಪದ ಮಹಾಭಾರತ ಕಾವ್ಯದಲ್ಲಿ ಬರುವ ಹಲವಾರು ವ್ಯಕ್ತಿ ಹಾಗೂ ಸ್ಥಳನಾಮಗಳಿಗೆ ವಿವರಣಾತ್ಮಕ ಕಥೆಗಳನ್ನು ಹೇಳುವುದು ಇಲ್ಲಿಯ ಇನ್ನೊಂದು ವೈಶಿಷ್ಟ್ಯವೆನ್ನಬಹುದು. ಶಬ್ದಸಾಮ್ಯದಿಂದ ಅರ್ಥ ಹುಡುಕುವ ಜನಪದರ ಪ್ರತಿಭೆ ಮೆಚ್ಚುವಂತಾಹದು. ಭೀಷ್ಮನ ಹೆಸರಿನ ಅರ್ಥವನ್ನು ಕುರಿತು ಕಾಮನ ಭಸ್ಮ ಧರಿಸಿದ್ದರಿಂದ ಭೀಷ್ಮ ಎಂಬ ಹೆಸರು ಬಂತ್ತೆಂಬ ನಿಷ್ಪತ್ತಿಯನ್ನು ಹೇಳಲಾಗಿದೆ. ಹಾಗೆಯೇ ಕರುಣದಿಂದ ಬದುಕಿದವನಾಗಿ ಕರ್ಣನಾದ ಎಂಬುದಾಗಿಯೂ ಪಾರ್ವತಿ ಉಲೂಪಿಗೆ ಬಾಡದ ಕುಸುಮ ಮಾಲೆ ಕೊಟ್ಟಿದ್ದರಿಂದ ಅವಳಿಗೆ ಕುಸುಮಾಲೆ ಎಂದು ಹೆಸರಾಯಿತ್ತೆಂದೂ, ಭೀಮ-ಉರಿಸಿಂಗಿಯರ ಪುಟ್ಟ ಕಂದ ತಂದೆಯನ್ನು ಭೀಮ ಭದ್ರವಾಗಿ ತನ್ನ ಬಾಹುಗಳಿಂದ ಹಿಡಿದುಕೊಂಡಿದ್ದರಿಂದ ಆ ಮಗುವಿಗೆ ಭದ್ರಬಾಹು ಎಂದು ಹೆಸರಾಯಿತ್ತೆಂದು ಗಾಯಕ ಅರ್ಥ ಮೂಲವನ್ನು ಹೇಳಿದ್ದಾನೆ. ಹಾಗೆಯೇ ಅನೇಕ ಸ್ಥಳನಾಮಗಳಿಗೂ ಹಿನ್ನಲೆಗಳುಳ್ಳ ಕಥೆಗಳನ್ನು ಹೆಣೆಯಲಾಗಿದೆ.

ಪಂಪ, ಕುಮಾರವ್ಯಾಸರಲ್ಲಿ ಕಾಣದಿರುವ ಜನಪದ ಮಹಾಭಾರತದಲ್ಲಿ ಕಾಣುವ ಪ್ರಸಂಗವೆಂದರೆ ಓತಿ ಭೀಷ್ಮರಿಗೆ ಶಾಪ ಕೊಡುವ ಪ್ರಸಂಗ ಮಾಡಿದ ತಪ್ಪಿಗಾಗಿ ಶಿಕ್ಷೆಯನ್ನು ಯಾರಾದರೂ ಸರಿಯೇ ಅನುಭವಿಸಿಬೇಕೆಂಬ ಧೋರಣೆ ಇಲ್ಲಿ ವ್ಯಕ್ತವಾಗಿದೆ. ಕುರುಕ್ಷೇತ್ರ ಯುದ್ಧದಲ್ಲಿ

ಭೀಷ್ಮರು ಪಾರ್ಥನಿಂದ ಸೋಲಲನ್ನಪ್ಪಬೇಕಾದ ಸಂದರ್ಭ ಬಂದಾಗ ಓತಿಕ್ಯಾತನ ಶಾಪವನ್ನು ನೆನೆದುಕೊಂಡು ಇದು ತಮ್ಮ ತಪ್ಪಿಗಾಗುತ್ತಿರುವ ಶಿಕ್ಷೆ ಎಂದು ಭಾವಿಸಿ ಅನುಭವಿಸಲು ಮಾನಸಿಕ ಸಿದ್ದತೆ ಹೊಂದುವುದು ಭೀಷ್ಮರ ಔನತ್ಯಕ್ಕೆ ನಿದರ್ಶನವಾಗಿದೆ. ಇದು ದೇವ-ದೇವತೆಗಳ ಶಾಪವೇ ಶಾಪವಲ್ಲ ಸಾಮಾನ್ಯ ಒಂದು ಕ್ರಿಮಿಯು ಕೂಡ ಶಾಪ ನೀಡುವ ಶಕ್ತಿ ಹೊಂದಿರುವುದು ಅಂದಿನ ಜನಪದರ ಶಕ್ತಿ ಸಾಮರ್ಥ್ಯದ ದ್ಯೊತಕ.

ಪಂಪ, ಕುಮಾರವ್ಯಾಸ ಭಾರತಗಳಲ್ಲಿ ಕವಿಗಳು ಯಾವುದಾದರೊಂದು ಪಾತ್ರವನ್ನು ವಿಶೇಷವಾಗಿ ಚಿತ್ರಿಸಿರುವುದು ಸರ್ವೇಸಾಮಾನ್ಯ. ಆದರೆ ಜನಪದ ಕವಿ ಹಾಗೇ ಯಾವುದೇ ಪಾತ್ರದ ಪರ ವಕಾಲತ್ತು ವಹಿಸದೆ ಸಮಭಾವದಲ್ಲಿ ಎಲ್ಲವನ್ನು ಚಿತ್ರಿಸಿದ್ದಾನೆ. ಹಾಗಾಗೀ ಯಾವುದೇ ಪಾತ್ರ ಜನಪದ ಮಹಾಭಾರತದಲ್ಲಿ ಪರಮ ಪವಿತ್ರ ಮಾನವ ದೌರ್ಬಲ್ಯದ ಸಾಮಾನ್ಯತೆಯಲ್ಲಿ ನಡೆಯುವುದು ವಿಶೇಷವೆನಿಸಿದೆ. ಇದಕ್ಕೆ ಕೃಷ್ಣನ ಪಾತ್ರವೂ ಹೊರತಲ್ಲ. ಕೃಷ್ಣನಿಗೆ ಪಂಚ ಪಾಂಡವರು ಎಂದರೆ ಪಂಚಪ್ರಾಣಗಳು ಎಂದು ಮತ್ತೆ ಮತ್ತೆ ಹೇಳಿದರೂ ಪಾಂಡವರ ಮಕ್ಕಳ ವಿಚಾರದಲ್ಲಿ ಕೃಷ್ಣನ ನಿಲುವು ಭಿನ್ನವಾಗಿಯೇ ಚಿತ್ರಣಗೊಂಡಿದೆ. ಅಭಿಮನ್ಯು, ನಾಗಾರ್ಜುನ ಮತ್ತು ಭದ್ರಬಾಹು ಈ ಮೂವರ ವಿಚಾರದಲ್ಲೂ ಕೃಷ್ಣನ ಕುತಂತ್ರ ವಿಕಾರವಾದುದಾಗಿದೆ. ಅಭಿಮನ್ಯು ಜರಣ, ಅರ್ಧ ಕೃಷ್ಣ ಪರ್ವ, ನಾಗಾರ್ಜುನ ಪರ್ವ, ಭದ್ರಬಾಹು ಪ್ರಸಂಗಗಳು ಇದಕ್ಕೆ ನಿದರ್ಶನವಾಗಿದೆ. ಕೃಷ್ಣನ ಪರಮತ್ವಕ್ಕೆ ಕೊಡಲಿ ಏಟು ಹಾಕುವ 'ಸ್ವಾಮಿ ಸ್ವಾದುರ ಮಾವನ್ನ ಹ್ಯಾಗೆ ನೋಡ್ಕೋಬೆಂಕತ ಕೃಷ್ಣನಿಂದ್ಲೇ ಕಲಿತಿದ್ದೇನೆ' ಎನ್ನುವ ಅಭಿಮನ್ಯುವಿನ ಮಾತು ಕೃಷ್ಣನು ತನ್ನ ಸೋದರ ಮಾವ ಕಂಸನನ್ನು ಕೊಂದ ವಿಷಯಕ್ಕೆ ನೆಗೆಯುತ್ತದೆ. ಈ ಹಿನ್ನಲೆಯಲ್ಲೇ ಕೃಷ್ಣನನ್ನು ಅಭಿಮನ್ಯುವಿನಿಂದ 'ಅರ್ಧ ಎಲೆ' ಎಂದು ಜನಪದರು ಹೇಳಿಸುವುದು ಸತ್ಯವನ್ನು ಯಾವುದೇ ಮುಲಾಜಿಯಿಲ್ಲದೆ ಹೇಳುವ ಧೈರ್ಯಕ್ಕೆ ನಿದರ್ಶನವಾಗಿದೆ. ಕೃಷ್ಣನ ಬಗ್ಗೆ ಪೂರ್ವಾಗ್ರಹವಿಲ್ಲದೆ ವರ್ತಿಸುವ ವಿಧಾನ ವಿಶೇಷವೆನಿಸಿದೆ. ಅಲ್ಲದೆ ಕೃಷ್ಣನ ಸ್ವಾರ್ಥಕ್ಕೆ ಸಮರ್ಥನೆಯಾಗಿದೆ. ಉಲೂಪಿಯ ಮಗ ನಾಗಾರ್ಜುನನನ್ನು ಇಂಥದೇ ತಂತ್ರದಿಂದ ಅರ್ಜುನನಿಂದಲೇ ಅಂತ್ಯಗೊಳಿಸುವ ಕೃಷ್ಣನ ಸ್ವಾರ್ಥ ಭದ್ರಬಾಹು ಪ್ರಸಂಗದಲ್ಲಿಯೂ ಅತ್ಯಂತ ಕ್ರೂರವಾಗಿದೆ. ಈ ಪ್ರಸಂಗಗಳು ಪಂಪನಲ್ಲಾಗಲೀ, ಕುಮಾರವ್ಯಾಸನಲ್ಲಾಗಲೀ ಕಂಡುಬರುವುದಿಲ್ಲ. ಭದ್ರಬಾಹುವಿನ ಕಥಾಸೃಷ್ಟಿ ಜನಪದರ ಸೋಪಜ್ಞಶೀಲ ಸೃಜನಶೀಲತೆಗೆ ಸಾಕ್ಷಿಯಾಗಿದೆ. ಹಾಗೆಯೇ ತನಗೇ ಗಂಡಾಂತರಕಾರಿಯಾಗಲಿರುವ ಭದ್ರಬಾಹುವನ್ನು ಸ್ವಯಂ ಆತನ ತಂದೆ ಭೀಮನಿಂದ ಕೊಲ್ಲಿಸುವ ಕೃಷ್ಣ ಮತ್ತೊಮ್ಮೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿ ಯಶಸ್ವಿಯಾಗುತ್ತಾನೆ. ಹಾಗಾಗೀ ಜನಪದ ಮಹಾಭಾರತದಲ್ಲಿ ಕೃಷ್ಣನು ಅಸ್ತಿತ್ವ ಸ್ಥಾಪನೆಗೆ

ಪ್ರಯತ್ನಿಸುತ್ತಾನೆ ಎನ್ನುವುದಕ್ಕಿಂತ ತನ್ನ ಅಸ್ತಿತ್ವವನ್ನು ಮೆರೆಯಲು ಯತ್ನಿಸಿ ಯಶಸ್ಸು ಗಳಿಸುತ್ತಾನೆ. ಇಂಥ ವರ್ತನೆಗಳಲ್ಲಿ ಕೃಷ್ಣ ಜೀವ ವಿರೋಧಿ ವ್ಯಕ್ತಿಯಾಗಿ ನಡೆದುಕೊಳ್ಳುತ್ತಾನೆ. ಈ ಹಿನ್ನಲೆಯಲ್ಲಿ ಪರಿಭಾವಿಸಿದರೆ ವ್ಯಾಸಭಾರತ, ಪಂಪಭಾರತ ಹಾಗೂ ಕುಮಾರವ್ಯಾಸಭಾರತಗಳಲ್ಲಿ ಚಿತ್ರಿಸಿರುವ ಕೃಷ್ಣನ ಬಗೆಗಿನ ಭ್ರಮೆ-ಭಕ್ತಿ-ಭಾವನೆಗಳನ್ನು ಜನಪದ ಮಹಾಭಾರತ ಬದಲಾಯಿಸುತ್ತದೆ.

ಜನಪದ ಮಹಾಭಾರತ ಕಾವ್ಯ ದ್ವೇಷ ಮತ್ಸರಗಳು ಹಾಗೂ ಅವುಗಳಿಂದಾಗುವ ಅಪಾಯವನ್ನು ಧ್ವನಿಸುತ್ತದೆ. ಪಾವಿತ್ರವೇ ಪರಮಶ್ರೇಷ್ಠ ಎಂದ ಗಂಗಾ ಮಾತೆಯ ಮೇಲೆ ರೋಷಗೊಳ್ಳುವ ಆದಿಶಕ್ತಿ ಲಕ್ಷ್ಮೀ, ಸರಸ್ವತಿಯರ ಮತ್ಸರವು ಗಂಗೆ ಭೂಮಿಯಲ್ಲಿ ಜನಿಸಲು ಹೇತುವಾಗಿ ಅದೇ ಮಹಾಭಾರತಕ್ಕೆ ಬೀಜಾಂಕುರಕ್ಕೆ ಭೂಮಿಕೆಯಾಗುತ್ತದೆ. ಈ ಮಹಾಕಾವ್ಯದಲ್ಲಿ ಹೀಗೆ ದ್ವೇಷದಿಂದ ಪ್ರಾರಂಭವಾಗುವ ನಾಗರುಸಿಯನ್ನು ಹಿಂಸಿಸಿದ ಸುವರ್ಣಕೇಶಿ ಹಾಗೂ ಓಂಕಾರಗುರುನೇ ಧೃತರಾಷ್ಟ್ರ, ಪಾಂಡು, ವಿದುರ ಮತ್ತು ನೂರೊಂದು ಜನ ಕೌರವರಾಗಿ ಜನಿಸುತ್ತಾರೆ. ಕೌರವರು ಜನಿಸುವಾಗಲೇ ದ್ವೇಷದಿಂದ ಕೂಡಿದ್ದು ಬುಸುಗುಡುವ ದುರ್ಯೋಧನನ ಮೈಯಲ್ಲಿ ನಾಗರಹುರುಪುಗಳುಳ್ಳ ದೇಹವಾಗಿದ್ದು ಹುಟ್ಟಿದಾಗಲೂ ಅವನು ಹಾವಿನಂತೆ ಹಠಸಾಧಿಸುತ್ತಾನೆ. ಮತ್ಸರ ಇಡೀ ಜೀವನವನ್ನೇ ಬಲಿತೆಗೆದುಕೊಳ್ಳುತ್ತದೆ. ಗಾಂಧಾರಿಯಲ್ಲಿಯೂ ಈ ಮತ್ಸರ ಗಜಗೌರಿ ನೋಂಪಿಯ ಸಂದರ್ಭದಲ್ಲಿ ಪ್ರಕಟಗೊಳ್ಳುತ್ತದೆ. ಕುಂತಿ ತನ್ನ ಮಕ್ಕಳ ಪ್ರಭಾವದಿಂದ ಸ್ವರ್ಗದ ಐರಾವತವನ್ನೇ ಭೂಮಿಗಿಳಿಸಿಕೊಂಡು ಗಜಗೌರಿ ನೋಂಪಿ ಮಾಡಿದಾಗ ಅವರ ಹೊಟ್ಟೆಕಿಚ್ಚು ಮತ್ತೂ ಹೆಚ್ಚಾಗುತ್ತದೆ. ದ್ರುಪದ-ದ್ರೋಣರ ಪ್ರಕರಣದಲ್ಲೂ ಇಂತಹದೇ ದ್ವೇಷ ಪ್ರತೀಕಾರದ ನೆವದಲ್ಲಿ ಮಹಾಭಾರತದ ದಾಯಾದಿ ಕಲಹಕ್ಕೆ ಬುನಾದಿಯಾಗುತ್ತದೆ.

ಕರ್ಣನ ಜನನಕ್ಕೆ ಕಾರಣವಾಗುವ ಸಹಸ್ರ ಕವಚದ ಕಥೆ ಜನಪದ ಮಹಾಭಾರತದಲ್ಲಿ ಸುಧೀರ್ಘವಾಗಿರುವುದಲ್ಲದೇ ಇದಕ್ಕೆ ಮೂಲವಾದ ಬ್ರಹ್ಮನ ಅಹಂಭಾವದ ಘಟಾನಾವಳಿಗಳು ಆಶ್ಚರ್ಯಗಳ ಆಗರವಾಗುತ್ತದೆ. ಮತಿಗಳ ಅರಿವಿನಲ್ಲಿ ಮನುಷ್ಯ ಜೀವನ ಸಾಗಿಸಬೇಕೆಂಬ ತತ್ವವಿಲ್ಲಿ. ಅಳವಟ್ಟಿದೆ 'ಸೃಷ್ಟಿಕರ್ತನಿಗೂ ಆಂಕಾರ ಸಲ್ಲದೆಂಬ ನಿಲುವು' ಇಲ್ಲಿದೆ. ದೇವತೆಗಳ ಮಾನವೀಕರಣ ಗೊಳಿಸುವ ಪ್ರವೃತ್ತಿ ಜನಪದರಲ್ಲಿ ಕಂಡುಬರುತ್ತದೆ. ಇಲ್ಲಿಯೂ ಬ್ರಹ್ಮ ಮಾನವ ದೌರ್ಬಲ್ಯದ ಪ್ರತೀಕವೇ ಆಗಿದ್ದಾನೆ. ಇಲ್ಲಿ ಬರುವ ಬ್ರಹ್ಮ-ಶಿವರ ಸಮರವನ್ನು ಆರ್ಯ ದ್ರಾವಿಡ ಸಂಘರ್ಷದ ಬಗೆಯೆಂಬಂತೆ ಭಾವಿಸಬಹುದು.

ಜನಪದ ಮಹಾಭಾರತದ ಕಥಾಹಂದರದೊಳಿಗೆ ಜನಪದ ಗಾಯಕ ತಮ್ಮಂಥ ಹತ್ತಾರು ಪಾತ್ರಗಳನ್ನು ಸೇರಿಸಿಕೊಂಡಿರುವುದು ಅತ್ಯಂತ ಪ್ರಮುಖವಾದ ವೈಶಿಷ್ಟ್ಯವಾಗಿದೆ. ಪಾಂಡವರಿಗಾಗಿ ಅರಮನೆಯನ್ನು ನಿರ್ಮಿಸಿಕೊಡುವ ಸಿದ್ದಪ್ಪಾಚಾರಿ, ಕರ್ಣನ ಸಾಕು ತಂದೆ ಅಂಬಿಗರ ಚೌಡಯ್ಯ, ಏಕಚಕ್ರಪುರದಲ್ಲಿ ಪಾಂಡವರಿಗೆ ಆಶ್ರಯ ನೀಡಿದ ಕುಂಬಾರ ಗುಂಡಯ್ಯ, ಭೀಮನು ಭೂಮಿಯನ್ನು ಹದಗೊಳಿಸಲು ಕೂಲಿಗಾಗಿ ಕರೆಯುವ ಮುದ್ದೇಗೌಡ, ಪಾಂಡುರಾಜನ ಸ್ವರ್ಗಪ್ರಾಪ್ತಿಯ ಸಂದರ್ಭದಲ್ಲಿ ಕಂಡುಬರುವ ಈರಮ್ಮ, ಆಕೆಯ ತಂದೆ ಮಡಿವಾಳ ಮಾಚಯ್ಯ ಕಲಿಪ್ರಭಾವದ ಪರ್ವದಲ್ಲಿ ಬರುವ ಬೋರೆಗೌಡ ಮುಂತಾದ ಪಾತ್ರಗಳನ್ನು ಇಲ್ಲಿ ಹೆಸರಿಸಬಹುದು. ಇಂಥ ಪಾತ್ರಸೃಷ್ಟಿಯಿಂದ ಜನಪದರು ಮಹಾಭಾರತದೊಡನೆ ಆತ್ಮೀಯವಾದ ಸಂಬಂಧವನ್ನು ಏರ್ಪಡಿಸಿಕೊಳ್ಳುತ್ತಾರೆ. ಪುರಾಣದಲ್ಲಿ ಲೌಕಿಕ ಪಾತ್ರಗಳನ್ನು ಸೇರಿಸುವ ಮೂಲಕ ಜನಪದ ಕವಿಗಳು ಸಮಕಾಲೀನ ಸಮಾಜವನ್ನು ಕಾವ್ಯದ ಮೂಲಕ ಕಟ್ಟಿಕೊಡುವ ಪ್ರಯತ್ನವನ್ನು ಕಾಣಬಹುದು. ಆ ಮೂಲಕ ಪುರಾಣ ಪಾತ್ರಗಳ ಜೊತೆ ಲೌಕಿಕ ವ್ಯಕ್ತಿಗಳ ಸಂಬಂಧವೇರ್ಪಡಿಸುವುದು ವಿಶೇಷವಾದ ಪ್ರಯೋಗವೆಂದೇ ಹೇಳಬಹುದು. ಹಾಗಾಗೀ ಜನಪದರಿಗೆ ಮಹಾಭಾರತ ಯಾವುದೋ ದೂರದ ಕಥೆಯಾಗದೇ ಅವರ ಜೀವನದ ಕಥೆಯಂತೆಯೇ ನಿರೂಪಿತವಾಗುತ್ತ ಸಾಗುತ್ತದೆ. ಇದೊಂದು ಬಗೆಯಲ್ಲಿ ಮಹಾಭಾರತ ಪರಿವೇಶದಲ್ಲಿ ಚಾಲನೆಗೊಂಡ ಜನಪದ ಜೀವನ ಚಿತ್ರಣವೇ ಆಗಿದೆ.

ಕುಂತಿಯ ಉದರದಲ್ಲಿ ಜನಿಸಿದರೂ ವಿಧಿಯಾಟದಿಂದ ಅಂಬಿಗರ ಚೌಡಯ್ಯನ ಸಾಕು ಮಗನಾಗಿ ಬೆಳೆಯುವ ಕರ್ಣನ ಹುಟ್ಟು ಹಬ್ಬದ ಆಚರಣೆ ದಮನಗೊಂಡ ಪಾತ್ರಗಳಿಗೆ ಜನಪದರು ನೀಡುವ ಉನ್ನತ ಸ್ಥಾನಕ್ಕೆ ನಿದರ್ಶನವಾಗಿದೆ. ಕರ್ಣ ಕೌರವರ ಪ್ರಥಮ ಭೇಟಿಯ ಸನ್ನಿವೇಶ ಜನಪದ ಗಾಯಕನ ವಿಶಿಷ್ಟ ಕಲ್ಪನಾ ಸಾಮರ್ಥ್ಯ ಹಾಗೂ ಹೊಸ ಸನ್ನಿವೇಶ ಸೃಷ್ಟಿಸುವ ಸೃಜನಾತ್ಮಕ ಪ್ರತಿಭೆಗೆ ಸಾಕ್ಷಿಯಾಗಿದೆ. ಕರ್ಣನ ಬಗೆಗೆ ಕೌರವನಿಗೆ ವಿಶೇಷ ಅಕ್ಕರೆ ಅಭಿಮಾನ ಮೂಡಲು ಕಾರಣವಾದದ್ದು ಅವನನ್ನು ರಕ್ಷಿಸಿದ ಕಾರಣದಿಂದ. ಈ ಸಂದರ್ಭದಲ್ಲಿ ವ್ಯಕ್ತವಾಗಿರುವ 'ಕಲಿತ ವಿದ್ಯೆ ಸಂಕಷ್ಟದಲ್ಲಿರುವವರನ್ನು ರಕ್ಷಿಸುವುದಾಕ್ಕಾಗಿ ಎಂಬ ಕರ್ಣನ ಧೋರಣೆ ಜನಪದರ ಜೀವಪರ ನಿಲುವಿಗೆ ನಿದರ್ಶನವಾಗುತ್ತದೆ. ಶಿಕ್ಷಿತರೇ ಸಾಮಾನ್ಯರನ್ನು ಕೊಲ್ಲುತ್ತಿರುವ ಪ್ರಸ್ತುತದ ಸಂದರ್ಭದಲ್ಲಿ ಇದೊಂದು ಮೌಲ್ಯಿಯುತವಾದ ಪಾಠವಾಗುತ್ತದೆ.

ಶಕುನಿಯ ನಿದರ್ಶನದಂತೆ ದುರ್ಯೋಧನ ದಾನಶೂರನೆಂದು ಬೋರ್ಡ್ ಹಾಕಿಕೊಂಡರೂ ಕರ್ಣನ ದಾನವೇ ಶ್ರೇಷ್ಠವೆಂಬುದು ಮನವರಿಕೆಯಾದಾಗ ನಾಚಿ ತಾನೇ ಹಿಂದೆ ಸರಿಯುವ ಉದಾತ್ತತೆಯನ್ನು ದುರ್ಯೋಧನನಲ್ಲಿ ಜನಪದರು ಕಂಡಿದ್ದಾರೆ. ಈ ಸನ್ನಿವೇಶ ನಿರ್ಮಾಣದಿಂದ ಕರ್ಣನ ದಾನ ಗುಣವನ್ನು ಪಂಪಭಾರತ, ಕುಮಾರವ್ಯಾಸಭಾರತಕ್ಕಿಂತಲೂ ಪರಿಣಾಮಕಾರಿ ಮೂಡಿ ಬಂದಿದೆ.

ದಾನ ಶೂರನೆಂದು ಖ್ಯಾತನಾದ ಕರ್ಣನ ಜನ್ಮರಹಸ್ಯಕ್ಕೆ ಸಂಬಂಧಿಸಿದಂತೆ ಪಂಪ ಹೇಳುವ ಸತ್ಯಂತಪ ಋಷಿಯ ಪ್ರಸಂಗದೊಡನೆ ಸಾಮ್ಯವಿರುವ ಕಥೆಯೊಂದನ್ನು ಜನಪದ ಮಹಾಭಾರತದಲ್ಲಿಯೂ ಬರುತ್ತದೆ. ಶಕುನಿಯ ಸ್ನೇಹಿತ ಮಲೆಯಾಳಿ ಮಾಂತ್ರಿಕ ಕೊನಗಯ್ಯ ಅಂಜನ ವಿದ್ಯೆಯಿಂದ ಕರ್ಣನ ಜನ್ಮ ವೃತ್ತಾಂತವನ್ನು ದುರ್ಯೋಧನನಿಗೆ ತೋರಿಸುತ್ತಾನೆ. ಪಂಪನಲ್ಲಿರುವ ಈ ಪ್ರಸಂಗ ಕನ್ನಡದಲ್ಲಿ ಯಾವುದೋ ಮೂಲದಿಂದ ಬಂದು ಜನಪದರಲ್ಲಿ ಅದೊಂದು ವಿಭಿನ್ನ ಪಾಠವಾಗಿರಬಹುದು. ಇಲ್ಲಿ ತನ್ನ ಜನ್ಮರಹಸ್ಯವನ್ನರಿತ ಕರ್ಣನ ಅಂತರಾಳದ ತಳಮಳವನ್ನು ಜನಪದ ಗಾಯಕನ ಪ್ರತಿಭೆ ಅರ್ಥಪೂರ್ಣವಾಗಿ ಅನಾವರಣಗೊಳಿಸಿದೆ.

ಶಿಷ್ಟ ಭಾರತಗಳಲ್ಲಿ ಪ್ರಾಸಂಗಿಕವಾಗಿರುವ ಕೃಷಿಯ ಪ್ರಾಮುಖ್ಯತೆಯನ್ನು ಜನಪದ ಮಹಾಭಾರತದಲ್ಲಿ ಪ್ರಧಾನವಾಗಿ ಚಿತ್ರಿಸಲಾಗಿರುವುದನ್ನು ಕಾಣಬಹುದು. ಕುಂತಿಭೋಜರಾಜನ ಸಮೇತ ಶೂರರೆಲ್ಲರೂ ಹೊಲಗದ್ದೆಗಳಲ್ಲಿ ದುಡಿಯುತ್ತಿದ್ದರೆಂಬ ಚಿತ್ರಣಗಳು ಈ ಕಾವ್ಯದಲ್ಲಿ ಮೂಡಿಬಂದಿದೆ. ದೇಶವನ್ನಾಳುವ ರಾಜರೂ ಕೃಷಿಯನ್ನು ಮಾಡುವ ಮೂಲಕ ಕೃಷಿ ಪ್ರಾಧಾನ್ಯತೆಯನ್ನು ಉಜ್ವಲಗೊಳಿಸಲಾಗಿದೆ. ಇದಕ್ಕಿಂತಲೂ ವಿಶಿಷ್ಟವಾದದ್ದು ಕುಬೇರನ ಪ್ರಸಂಗ, ಶಿಷ್ಟ ಸಾಹಿತ್ಯದಲ್ಲಿ ಕುಬೇರನು ಸಂಪತ್ತಿನ ದೊರೆಯಾದರೆ ಜನಪದರು ಕಾಣಿಸುವ ಕುಬೇರ ಧಾನ್ಯ ಪ್ರಧಾನ ನಿಲುವಿಗೆ ಸಾಕ್ಷಿಯಾಗಿದೆ. ಕುಬೇರನನ್ನು ಕಾಣಲು ಭೀಮ ಬಂದಾಗ ಕುಬೇರ ಗೋವುಗಳ ಸಗಣಿಯಲ್ಲಿದ್ದ ಧಾನ್ಯಗಳನ್ನು ಆರಿಸುತ್ತಿದ್ದುದ್ದನ್ನು ಮನಸ್ಸಿನಲ್ಲಿಯೇ ಅಸಹ್ಯಪಟ್ಟು ಗೊಣಗಿಕೊಂಡ ಭೀಮನಿಗೆ ಬೆಳ್ಳಿ ಬಂಗಾರವನ್ನು ಉಣಬಡಿಸುವುದು ಜನಪದರ ಅನ್ನ ಮಹತ್ವವನ್ನು ತಿಳಿಸುತ್ತದೆ.

ರಾಜಸೂಯಯಾಗ ಪ್ರಸ್ತಾಪ ಸಂದರ್ಭದಲ್ಲಿ ಪಾಂಡುವಿಗೆ ಸ್ವರ್ಗ ಪ್ರವೇಶ ನಿಂತಿರುವುದಕ್ಕೆ ಕಾರಣ ನೀಡುತ್ತಾ ನಾರದ ಹೇಳುವ 'ಪಾಂಡುರಾಜ ಜನೋಪಕಾರಿ ಕೆಲಸ ಮಾಡಲಿಲ್ಲ'. ಆದ್ದರಿಂದಲೇ ಆತನಿಗೆ ಸ್ವರ್ಗಪ್ರಾಪ್ತಿಯಿಲ್ಲ ಎನ್ನುವ ಮಾತು ರಾಜ ಹಾಗೂ ರಾಜಕಾರಣಿಗಳನ್ನೇ

ಉದ್ದೇಶಿಸಿ ಹೇಳಿರುವಂತಿದೆ. ಜನಹಿತಕಾರಿ ಅಲ್ಲದ ರಾಜನನ್ನು ಪುರಾಣ ಪರಿವೇಷದಲ್ಲಿ ಟೀಕಿಸುವ ತಿರಸ್ಕರಿಸುವ ಪ್ರತಿಭಟನಾ ಪ್ರವೃತ್ತಿಯನ್ನು ಈ ಕಾವ್ಯದಲ್ಲಿ ಕಾಣಬಹುದು. ಪಾಂಡುರಾಜನ ಸ್ವರ್ಗಪ್ರಾಪ್ತಿ ಪ್ರಸಂಗವು ವಿನೂತನವೂ ವಿಶಿಷ್ಟವೂ ಆಗಿದ್ದು ಜನಪದರ ಜನಸಾಮಾನ್ಯರ ಕಾಳಜಿಗೆ ಜ್ವಲಂತ ನಿದರ್ಶನವಾಗಿದೆ. ಜನಸಾಮಾನ್ಯರ ಸಂತಸ-ನೆಮ್ಮದಿಗಳಲ್ಲಿ ಆಳುವವರ ಏಳ್ಗೆ ಇದೆ ಈ ದಿಸೆಯಲ್ಲಿ ಶ್ರಮಿಸದ ದೊರೆಗಳನ್ನು ರಾಜಕಾರಣಿಗಳನ್ನು ಇತಿಹಾಸ ಕ್ಷಮಿಸುವುದಿಲ್ಲವೆಂಬ ನಿಲುವು ಇಲ್ಲಿದೆ.

ಪಂಪ, ಕುಮಾರವ್ಯಾಸರ ಭಾರತಗಳಲ್ಲಿ ಚಿತ್ರಾಂಗದೆ-ಉಲುಪಿಯರ ಪ್ರೇಮ, ವಿರಹ ಪ್ರಲಾಪಗಳು ಅಷ್ಟೊಂದು ಮುಖ್ಯವೆನಿಸುವುದಿಲ್ಲ. ಹೆಣ್ಣಿನ ನೋವಿಗಲ್ಲಿ ಮಹತ್ವ ಅಷ್ಟಕಷ್ಟೆ ಎನ್ನಬಹುದು. ಆದರೆ ಜನಪದ ಮಹಾಭಾರತದಲ್ಲಿ ಚಿತ್ರಾಂಗದೆ-ಉಲುಪಿ(ಕುಸುಮಾಲೆ)ಯರ ಪ್ರೇಮ ಪ್ರಲಾಪ ಮತ್ತು ಅದರ ನಿವಾರಣೆಗೆ ಹೆಚ್ಚು ಗಮನ ನೀಡಲಾಗಿದೆ.

ಅರ್ಜುನ ಜೋಗಿ ಬಿರುದುಗಳನ್ನು ಪಡೆಯುವ ಸಂದರ್ಭದಲ್ಲಿ ಕಿನ್ನುಡಿಯನ್ನು ಪಡೆದುಕೊಳ್ಳುವುದು ಜನಪದ ಕಥೆಯಂತಿದ್ದೂ ಆಕರ್ಷಕವಾಗಿದೆ. ತಾನು ಜೋಗಿಣಿಯಾಗಿ ಬರುವೆನೆಂದು ದ್ರೌಪದಿ ಹೇಳಿದಾಗ ನಿರಾಕರಿಸುವ ಸಂದರ್ಭದಲ್ಲಿ ಹೆಣ್ಣಿನ ಮಾತನ್ನು ಕೇಳದ ಪುರುಷರ ಬಗೆಗಿನ ಅಸಹನೆ ದ್ರೌಪದಿಯ ಮಾತುಗಳಲ್ಲಿ ವ್ಯಕ್ತವಾಗಿದೆ. 'ಹೆಣ್ಣನ್ನಾಗಿ ಹುಟ್ಟಿಸಿದ ಗನ್ನೇಕಾರ ವಿಧಿಯ ಕಣ್ಣು ಇಂಗಲಿ' ಎಂಬ ದ್ರೌಪದಿ ಶಾಪದಲ್ಲಿ ಹೆಣ್ಣು ಪುರುಷನಿಂದಾಗಿ ಅನುಭವಿಸಬೇಕಾಗಿ ಬರುವ ಸಂಕಟಗಳಿಗೆ ಪ್ರತಿಯಾಗಿ ಮಿಡಿದ ಬಗೆಯನ್ನು ನೋಡಬಹುದು.

ಅರ್ಜುನ ಜೋಗಿಯ ಸಂಚಾರ ಸಂದರ್ಭದಲ್ಲಿ ಕನ್ನಡೇತರ ಭಾಷೆಗಳಾದ ಉರ್ದು, ತೆಲುಗು, ತಮಿಳು ಭಾಷೆಗಳಲ್ಲಿ ಹಾಡಿರುವುದು ಒಂದು ರೀತಿಯಲ್ಲಿ ಜನಪದ ಗಾಯಕನ ಬಹುಭಾಷಾ ಪ್ರೌಢಿಮೆಯನ್ನು ಹೇಳಿಕೊಳ್ಳುವ ಸಂದರ್ಭವಾದರೆ ಮತ್ತೊಂದೆಡೆ ಎಲ್ಲಾ ಭಾಷಿಕರನ್ನು ತಮ್ಮೆಡೆಗೆ ಸೆಳೆಯುವ ಉದ್ದೇಶವಿರಬಹುದು. ಇಲ್ಲಿರುವ ಭಾಷಾ ಸಾಮರಸ್ಯ ಹಾಗೂ ಮತೀಯ ಸೌಹಾರ್ದಗಳು ಜನಪದರ ಉದಾರ ಮನಸ್ಸನ್ನು ಪರಿಶುದ್ಧ ಹೃದಯವನ್ನು ಮೆಚ್ಚುವಂಥಾಗಿದೆ. ಇದೇ ಸಂದರ್ಭದಲ್ಲಿ ಜೋಗಪ್ಪ ಬೇರಲ್ಲ, ಅಲ್ಲಾ ಬೇರಲ್ಲ ಎನ್ನುವ ಮಾತು ಬಳಕೆಯಾಗಿರುವುದು ಜನಪದರ ಕೋಮು ಸೌಹಾರ್ದದ ಸಂಕೇತಗಳಂತಿವೆ.

ಹಾಗೆಯೇ ಭೀಮನ ಮಗನಾದ ಘಟೋತ್ಕಚನನ್ನು ಕುರಿತು ಜನಪದ ಮಹಾಭಾರತದಲ್ಲಿ ಗ್ಯಾನಿ ಗಟೋತ್ಕಜ ಎಂದು ಕರೆಯಲಾಗಿದೆ. ಹೀಗೆ ಶಿಷ್ಟ ಭಾರತದಲ್ಲಿ ಅಲಕ್ಷ್ಯಕ್ಕೆ ಗುರಿಯಾಗಿರುವ ಪಾತ್ರ ಪ್ರಸಂಗಗಳು ಈ ಕಾವ್ಯದಲ್ಲಿ ಮಹತ್ವ ಪಡೆದುಕೊಳ್ಳುತ್ತವೆ. ಇಂಥ ಘಟನೆಗಳನ್ನು ಗಮನಿಸುವಾಗ ಕುವೆಂಪು ಅವರು ಶ್ರೀರಾಮಾಯಣದರ್ಶನಂ ಮಹಾಕಾವ್ಯದಲ್ಲಿ ಅಲಕ್ಷಿತ ಪಾತ್ರಗಳನ್ನು ಮುಖ್ಯವಾಹಿನಿಗೆ ತಂದ ಬಗೆ ನೆನಪಿಗೆ ಬರುತ್ತದೆ.

ಸಂಬ್ರಾಸುರನ ಪ್ರಸಂಗದಲ್ಲಿ 'ಧರ್ಮಿಷ್ಟರಾದ ಪಾಂಡವರನ್ನು ಬಲಿಕೊಡುತ್ತಿದ್ದರೆ ಸುಮ್ಮೆ ಇದ್ದಿಯಲ್ಲ ಅಂತ್ಹೇಳಿ ದೇವಿ ಇಗ್ರಾನೇ ಕಿತ್ತಾಕಿ ಚಾಕುಲಿ ಚಾಚಿಟ್ಟು ಕೂರುವ ಗಟೋತ್ಕಚನ' ಚಿತ್ರ ಅಪರೂಪದ್ದು ಎನ್ನಬಹುದು. ದೇವರ ಪರ ಕಾಳಜಿಗಿಂತ ಜೀವಪರ ಕಾಳಜಿ ಇಲ್ಲಿ ಮುಖ್ಯವಾಗಿದೆ. ಪಾಂಡವರು ಏಕಚತ್ರನಗರದಲ್ಲಿ ಭಿಕ್ಷೆ ಬೇಡಿ ಬದುಕದೇ ವ್ಯವಸಾಯ ವೃತ್ತಿಯನ್ನಾಧರಿಸಿ ಜೀವನ ಸಾಗಿಸುವುದು ಕಾಯಕ ಮೌಲ್ಯವನ್ನು ಪ್ರತಿಪಾದಿಸುತ್ತದೆ. ಅಪರಿಗಹ್ರದ ಧೋರಣೆಯನ್ನು ಈ ಕಾವ್ಯದಲ್ಲಿ ಕಾಣಬಹುದು. ಒಟ್ಟಾರೆ ಈ ಪ್ರಸಂಗದಲ್ಲಿ ಜೀವನ ಧರ್ಮವೇ ಮೈದಾಳಿದೆ ಎನ್ನಬಹುದು. ಜೀವನದಲ್ಲಿ ಸಂಕಷ್ಟಗಳು ಬಂದಾಗ ಕಸಿವಿಸಿಪಡದೆ ಅದನ್ನು ಸ್ವೀಕರಿಸುತ್ತಾ ಜೀವನ ಎದುರಿಸುವ ಪಾಠಗಳು ಇಲ್ಲಿವೆ.

ಜನಪದ ಮಹಾಭಾರತದಲ್ಲಿ ದ್ರೌಪದಿಸ್ವಯಂವರ ಪಂಪ, ಕುಮಾರವ್ಯಾಸಭಾರತಕ್ಕಿಂತ ಭಿನ್ನವಾಗಿದೆ. ಮತ್ಸಯಂತ್ರ ಭೇದನ ಎರಡೂ ಕಾವ್ಯಗಳಲ್ಲಿ ಕಂಡು ಬಂದರೆ ಈ ಪ್ರಸಂಗ ಜನಪದ ಮಹಾಭಾರತದಲ್ಲಿ ವಿಶಿಷ್ಟವಾಗಿದ್ದೂ ವಿಭಿನ್ನವಾದ್ದದೂ ಆಗಿದೆ. ಪಾರ್ಥನ ಪತ್ತೆಗೆ ಶಬ್ದವೇಧೀಯನ್ನು ಆಧಾರವಾಗಿರಿಸಿಕೊಂಡಿದ್ದು ಹೆಚ್ಚು ಸಮಂಜಸವೆನಿಸುತ್ತದೆ. ಇದಕ್ಕಾಗಿ ಸೃಷ್ಟಿಸಲಾಗಿರುವ ಮಾರೀಚ ಕಾಗೆ, ಅಂಗಗೊರಬನ ಕಥೆ ಜನಪದ ಕವಿಯ ಕಲ್ಪನಾ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ. ಅಂಗಗೊರಬ ರಾಕ್ಷಸನಾದರೋ ಮನ್ಮಥನ ಸೋದರ ಚಿನ್ಮಥನಾಗಿ ಇಂದ್ರನ ಶಾಪದಿಂದ ರಾಕ್ಷಸನಾಗಿದ್ದು ಅರ್ಜುನನಿಂದ ಶಾಪವಿಮೋಚನೆಯಾಗುವ ಕಥೆ ಕುತೂಹಲಕಾರಿಯಾಗಿದೆ.

ಜರಾಸಂದನ ಕಥೆಯೂ ಪಂಪ, ಕುಮಾರವ್ಯಾಸರಿಗಿಂತ ಜನಪದ ಮಹಾಭಾರತದಲ್ಲಿ ಭಿನ್ನವಾದ ಕಲ್ಪನೆಯೊಂದಿಗೆ ಕುತೂಹಲಭರಿತವಾಗಿದೆ. ಜರೆಯಿಂದ ಅವನಿಗೆ ಜರಾಸಂಧ ಹೆಸರೂ ಬಂದರೂ ಅವನು ಒಬ್ಬನಾಗಿಯೂ ಇಬ್ಬರಾಗುವುದು. ಭೂಮಿಯ ಮೇಲೆ ಅವನಿಗೆ ಸಾವಿಲ್ಲವಾಗಿ ಆಕಾಶದಲ್ಲಿ ಅವನ ಒಂದು ದೇಹಕ್ಕೆ ಮತ್ತೊಂದು ದೇಹ ತಾಕಿ ಪುಡಿ ಪುಡಿಯಾಗುವುದು ಆ ಪುಡಿಗಳು ಭೂಮಿಯನ್ನು ತಾಕಿದರೆ ಜರಾಸಂಧ ಮತ್ತೆ ರೂಪುಗೊಳ್ಳುತ್ತಾನೆಂದು ವಾಯುದೇವನ

ನೆರವಿನಿಂದ ಅವನ ದೇಹದ ಕಣಕಣಗಳೆಲ್ಲ ಕಡಲಿಗೆ ಬೀಳುವಂತೆ ಮಾಡುವುದು- ಬಿದ್ದ ಆ ಚೂರುಗಳೆಲ್ಲ ಜರಾಸಂಧನವಾದ್ದರಿಂದ ಅವು ಜಾರ್ಗಲ್ಲು ಮೀನಾಗುವುದು ಈ ಎಲ್ಲವೂ ಭಿನ್ನವಾಗಿದೆ.

ಪಂಪ, ಕುಮಾರವ್ಯಾಸ ಭಾರತದಲ್ಲಿ ಕಾಣದೇ ಜನಪದ ಮಹಾಭಾರತದಲ್ಲಿ ಕಾಣುವ ಮತ್ತೊಂದು ಪ್ರಸಂಗವೆಂದರೆ ಪಾರ್ವತಿ ಅರ್ಜುನನ ಬೆನ್ನನ್ನು ನೋಡಬೇಕೆಂದು ಬಯಸುವ ಪ್ರಸಂಗ. ಶಿಷ್ಟ ಮಹಾಭಾರತದಲ್ಲಿ ಅರ್ಜುನ ಇಂದ್ರಕೀಲ ಪರ್ವತದಲ್ಲಿ ತಪಸ್ಸನ್ನಾಚರಿಸಿ ಶಿವನನ್ನು ಮೆಚ್ಚಿಸಿ ಪಾಶುಪತಾಸ್ತ್ರವನ್ನು ಪಡೆಯುವ ಕಥೆಯಿದ್ದರೆ, ಜನಪದರಲ್ಲಿ ತಪಸ್ಸು ಮಾಡುತ್ತಿದ್ದ ಅರ್ಜುನನಿಗೆ ವರ ಪ್ರದಾನ ಮಾಡಲು ಹೊರಟ ಶಂಕರನೊಂದಿಗೆ ಪಾರ್ವತಿಯು ಹೊರಡುವಳು. ಕಾರಣ ಅರ್ಜುನನ ಬೆನ್ನ ನೋಡುವ ಆಸೆಯಿಂದ. ಅದೇನೆಂದರೆ ಅರ್ಜುನನಿಗೆ ಬೆನ್ನೇ ಇಲ್ಲ ಅವನಿಗೆ ದೇಹದ ಮುಂಭಾಗದಂತೆಯೇ ವಕ್ಷಸ್ಥಲವಿದೆಯೆಂಬ ಕಲ್ಪನೆ ಬಹುಶಃ ಅರ್ಜುನ ಯಾರಿಗೂ ಬೆನ್ನು ತೋರಿಸಿದವನಲ್ಲ ಎಂಬ ನುಡಿಗಟ್ಟಿಗೆ ಹುಟ್ಟಿಕೊಂಡ ಕಥೆಯಾಗಿರಬಹುದು. ಇಂಥ ವಿಶಿಷ್ಟವಾದ ಬೆನ್ನನ್ನು ನೋಡಬೇಕೆಂದು ಬಯಸಿದ ಪಾರ್ವತಿ ಶಿವನೊಡನೆ ಬೇಡತಿಯಾಗಿ ಬಂದಳಂತೆ.

**ಅರ್ಜುನ ಅಂದಾರೆ**
**ನೀವು ಹಿಂದೊಮ್ಮೆ ಹೇಳಿದ್ದಿರಿ**
**ಅವನಿಗೆ ಬೆನ್ನು ಇಲ್ಲಾಂತ**
**ಅವ್ನ ಎರಡು ಕಡೆ ಎದೆಯಂತೆ**
**ಇಂಥ ಶಲೀರದವನು ಅಂತ**
**ನೀವೆ ನನಗೆ ಹೇಳಿದ್ದಿರಿ**
**ಎದೆಯೂ ಎದೆಯಾಗಿರೋದು**
**ಬೆನ್ನು ಎದೆಯಾಗಿರೋದು**
**ಲೋಕದಲ್ಲೇ ಇಲ್ಲವಲ್ಲ**
**ಇಂಥ ವಿಚಿತ್ರ ಶಲೀರವ**
**ನಾನು ನೋಡಬೇಕು ಸ್ವಾಮಿ**
**(ಜ.ಭಾ. ಪು. ೩೫೯)**

ಹಾಗಾಗಿಯೇ ಶಿವ ಅಂಗಾತವಾಗಿ ಬಿದ್ದು ಅವನ ಮೇಲೆ ಅರ್ಜುನ ಬಿದ್ದಾಗ ಪಾರ್ವತಿ ಅವನ ಬೆನ್ನನ್ನು ನೋಡುತ್ತಾಳೆ.

ಶಿವನು ಕಿರಾತನ ವೇಷದಲ್ಲಿ ಬಂದಿರುವುದು ಅರ್ಜುನ ಅರಿತಾಗ ಪಶ್ಚಾತಾಪದಿಂದ ಕೈ ಕಾಲು ಕತ್ತರಿಸಿಕೊಳ್ಳಲು ಮುಂದಾದಾಗ ತಡೆದ ಶಿವ ಇದಕ್ಕೆ ಕಾಲ ಕೂಡಿ ಬರುತ್ತದೆ. ನೀನು ಮುಂದಿನ ಜನ್ಮದಲ್ಲಿ ವಿಕ್ರಮರಾಜನಾಗಿ ಹುಟ್ಟಿದಾಗ ನಿನ್ನ ಕೈಕಾಲು ಕತ್ತರಿಸಲಾಗುತ್ತದೆ ಎಂದು ಸಮಾಧಾನ ಪಡಿಸುತ್ತಾನೆ. ಬಹುಶಃ ಜನಪದ ಗಾಯಕ ವಿಕ್ರಮನನ್ನು ಅರ್ಜುನನ ಪಾತ್ರದೊಂದಿಗೆ ನೆಯ್ದಿರುವುದನ್ನು ನೋಡಿದರೆ ವಿಕ್ರಮಾರ್ಜುನ ವಿಜಯಂ ಕಾವ್ಯ ಅಥವಾ ರಾಜವಿಕ್ರಮ ಅಥವಾ ಶನಿಪ್ರಭಾವವೆಂಬ ಪೌರಾಣಿಕ ನಾಟಕದ ಪ್ರಭಾವವಿರುವುದನ್ನು ಊಹಿಸಬಹುದು ಅರ್ಜುನ-ಕಿರಾತರ ಸಂವಾದ ನಾಟಕೀಯ ಮೆರಗಿನಿಂದ ಕೂಡಿದೆ. ಅರ್ಜುನನಿಗೆ ಬಿದ್ದ ಪೆಟ್ಟುಗಳನ್ನು ಆದ ಗಾಯಗಳನ್ನು ನೋಡಿ ನೊಂದು ಯುದ್ಧ ಸಾಕೆಂದು ಶಿವನಿಗೆ ಪಾರ್ವತಿ ಸನ್ನೆ ಮಾಡುವುದು ಆಕೆಯ ಹೆಂಗರುಳಿಗೆ ಸಾಕ್ಷಿಯಾಗಿರುವಂತೆ ಜನಪದರ ಅಂತಃಕರಣಕ್ಕೆ ಸಾಕ್ಷಿಯಾಗಿದೆ.

ಪಂಪ ಭಾರತದಲ್ಲಿ ದ್ರೌಪದಿಯ ಅಕ್ಷಯವಸ್ತ್ರ ಪ್ರಸಂಗ ಇಲ್ಲವೇ ಇಲ್ಲ ಎನ್ನುವಷ್ಟರ ಮಟ್ಟಿಗೆ ಉಲ್ಲೇಖಗೊಂಡಿದ್ದರೆ ಕುಮಾರವ್ಯಾಸ ಭಾರತದಲ್ಲಿ ಅದು ಕಾಣಿಸಿಕೊಳ್ಳುತ್ತದೆ. ಆದರೆ ಅಕ್ಷಯವಸ್ತ್ರವನ್ನು ದ್ರೌಪದಿಗೆ ಕೃಷ್ಣ ನೀಡಲು ಕಾರಣವಾದ ಘಟನೆ ಮಾತ್ರ ಜನಪದರದು. ಇದು ಕೃಷ್ಣನ ಪೂರ್ವ ನಿಯೋಜಿತ ಎಂಬಂತೆ ಚಿತ್ರಿತವಾಗಿದೆ. ಈ ಪ್ರಸಂಗ ಕೃಷ್ಣನ ಕರುಳ ಕಾರುಣ್ಯದ ಪ್ರತೀಕದಂತಿದ್ದು ಆಕೆಯ ವ್ಯಕ್ತಿತ್ವದ ಹೊಸತೊಂದು ಮುಖವನ್ನು ಅನಾರಣಗೊಳಿಸುತ್ತದೆ.

ಭೀಷ್ಮರಿಗೆ ಓತಿ ಶಾಪಕೊಟ್ಟಂತೆ, ಭೀಮ ಇಲ್ಲಿ ನಾಯಿಗಳಿಗೆ ಶಾಪ ಕೊಡುತ್ತಾನೆ. ಈ ಎರಡು ಪ್ರಸಂಗಗಳು ಜನಪದ ಮಹಾಭಾರತದಲ್ಲಿ ಮಾತ್ರ ಕಾಣುವಂಥದ್ದು. ಸತ್ತು ಕೆಟ್ಟವರಿಗೆ ಅನ್ನ ಹಾಕಿದಾಗ ಕಾಗೆಗಳ ಆಗಮನಕ್ಕಾಗಿ ಕಾಯುವುದಾದರೂ ಏಕೆಂಬುದಕ್ಕೆ ವಿವರಣೆ ನೀಡಲಾಗಿದೆ. ಇದು ಜನಪದರ ನಂಬಿಕೆಗೆ ಕೊಡುವ ವಿವರಣಾತ್ಮಕ ಕಥೆಯಾಗಿದೆ.

ದುರ್ಯೋಧನನ್ನು ಗಂಧರ್ವರು ಹೊತ್ತೊಯುತ್ತಿರುವಾಗ ಅವನನ್ನು ಬಿಡಿಸಿ ತರದಿದ್ದರೆ 'ನನ್ನ ಪ್ರಾಣವನ್ನೇ ಬಿಡುತ್ತೇನೆಂದು ಹೇಳುವ ಧರ್ಮರಾಯನ ಬಾಂಧವ್ಯ, ವ್ಯಕ್ತಿತ್ವ ಪಂಪಭಾರತ, ಕುಮಾರವ್ಯಾಸಭಾರತಕ್ಕಿಂತಲೂ ಉನ್ನತ ಮಾನವೀಯತೆಯನ್ನೇ ಮೆರೆಯುತ್ತದೆ. ಗಂಧರ್ವ ಕಟ್ಟುಗಳು ಪತಿವ್ರತೆಯ ಪಾದ ಸೋಂಕಿನಿಂದ ಬಿಡಿಸಿಕೊಳ್ಳುವ ಸನ್ನಿವೇಶ ಚಿತ್ರಣದಲ್ಲಿ ಉಳಿದ ಭಾರತಗಳು ಎಲ್ಲೋ ಒಂದೆಡೆ ಭಾನುಮತಿಯನ್ನು ಅವಮಾನಿಸಿದೆ ಎನಿಸುತ್ತದೆ. ಆದರೆ ಜನಪದರು ಈ ಅಂಶದತ್ತ ಗಮನಹರಿಸಿ ಭಾನುಮತಿಯ ಪಾತಿವ್ರತ್ಯವನ್ನು ಎತ್ತಿ ಹಿಡಿದಿದ್ದಾರೆ.

ಜನಪದ ಮಹಾಭಾರತದಲ್ಲಿ ಅಂತರಾಳ ಪರೀಕ್ಷೆ ಪರ್ವ ಒಂದು ವಿಶಿಷ್ಟ ಸನ್ನಿವೇಶವನ್ನೊಳಗೊಂಡಿದೆ. ವ್ಯಕ್ತಿಗಳ ಅಂತರಂಗದ ಸೂಕ್ಷ್ಮತೆಗಳನ್ನು ಹೊರಹಾಕುವ ಒಂದು ವಿಭಿನ್ನ ಪ್ರಯತ್ನವಿಲ್ಲಿದೆ ದ್ರೌಪದಿಯ ಅಂತರಂಗದ ಆಸೆಯನ್ನು ಇಲ್ಲಿ ನಿರೂಪಿಸಲಾಗಿದೆ. ಇದ್ದುದ್ದನ್ನು ಕದ್ದು ಮುಚ್ಚದೆ ಹೇಳಿಕೊಳ್ಳುವುದು ಜನಪದರ ಸಹಜ ಪ್ರವೃತ್ತಿಯಲ್ಲೊಂದು. ಇದನ್ನು ದ್ರೌಪದಿ ಪಾತ್ರದ ಮೂಲಕ ಅನಾವರಣಗೊಳಿಸಲು ಪ್ರಯತ್ನಿಸಲಾಗಿದೆ. ಯಕ್ಷ ಪ್ರಶ್ನೆಯ ಸಂದರ್ಭದಲ್ಲಿ ಜನಪದರ ತಾತ್ವಿಕ, ಅಧ್ಯಾತ್ಮಿಕ ವಿಚಾರಗಳು ಪ್ರಸ್ತಾಪಿತವಾಗುತ್ತವೆ.

ದ್ರೌಪದಿ ವಸ್ತ್ರಾಪಹರಣದ ನೆನಪು ಭೀಮನ ಮನಸ್ಸಿನಲ್ಲಿ ನಿರಂತರವಾಗಿರುವಂತೆ ಮಾಡಲು ಕೃಷ್ಣ ಸೃಷ್ಟಿಸಿದನೆಂದು ಹೇಳಿರುವ ಈರುಳ್ಳಿ ಕಥೆ ಜನಪದರ ಅದ್ಭುತ ಕಲ್ಪನಾಶಕ್ತಿಗೆ ಸಾಕ್ಷಿಯಾಗಿದೆ. ತಮ್ಮ ದೈನಂದಿನ ಅನುಭವವನ್ನೇ ಪುರಾಣಕ್ಕೆ ಸಂಬಂಧಿಸಿದ ಕಥೆಯಾಗಿ ಹೆಣದಿರುವುದು ಸೊಗಸಾಗಿದೆ.

ದ್ರೌಪದಿಯ ವಿರಹದಲ್ಲಿ ಬೇಯುತ್ತ ಸ್ವಯಂ ಧೈರ್ಯ ತುಂಬಿಕೊಳ್ಳುವ ಕೀಚಕನನ್ನು ಚಿತ್ರಿಸುವಲ್ಲಿ ಜನಪದ ಗಾಯಕನ ಪ್ರತಿಭೆ ವಿಶೇಷವೆನಿಸುತ್ತದೆ. ಭೀಮ ಕೀಚಕನನ್ನು ಕೊಲ್ಲುವ ಸನ್ನಿವೇಶ ಭೀಕರವಾಗಿ ಮೂಡಿ ಬಂದಿದೆ. ಈ ಪ್ರಸಂಗ ಬಹುಮಟ್ಟಿಗೆ ಕುಮಾರವ್ಯಾಸಭಾರತದ ಕಥೆಯೊಂದಿಗೆ ಸಾಮ್ಯ ಹೊಂದುತ್ತದೆಂದು ಹೇಳಬಹುದು.

೧೮ ದಿನ ಯುದ್ಧವಾಗುವ ೧೮ ಅಕ್ಷೋಹಿಣಿ ಸೈನ್ಯ ನಾಶವಾಗುವುದಕ್ಕೆ ಸಂಬಂಧಿಸಿದಂತೆ ಮಾರ್ಕಂಡೇಯನ ಪುರಾಣವನ್ನು ಹೇಳುವಲ್ಲಿ ಜನಪದ ಗಾಯಕನ ಸಂವಿಧಾನ ಕೌಶಲ ಮೆಚ್ಚುವಂಥದ್ದು ಮಾನವ ನಾಶಕ್ಕಾಗಿ ಹಾತೊರೆದು ನಿಂತಿರುವ ಯುದ್ಧ ಸಂದರ್ಭದಲ್ಲಿ ಮಾನವಸೃಷ್ಟಿಯ ಮಹತ್ವವನ್ನು ಹೇಳುವ ಈ ಕಥೆಯ ಜೋಡಣೆ ಮಾರ್ಮಿಕವಾಗಿದೆ. ಸಾವಿಗೆ ಹೆದರದ ಆದರೆ ಸಾರ್ಥಕ ಜೀವನ ಪ್ರೀತಿಯು ಜನಪದರ ಆಶಯವೂ ಈ ಕಥೆಯಲ್ಲಿ ಮೂಡಿಬಂದಿದೆ.

ಸೀಲಾನದಿ ಪರ್ವ ಜನಪದ ಮಹಾಭಾರತದ ಒಂದು ವಿಶಿಷ್ಟ ಸಂರಚನೆಯಾಗಿದೆ. ಹೆಸರು ತಿಳಿಯದ ಹಿಮವತ್ ಪರ್ವತ. ಅದರ ಮೇಲೆ ನಡೆಯುವ ವಿಧಾನ ಅದಕ್ಕೊಂದು ದೈವತ್ವದ ಸ್ಪರ್ಶ ಯಾವ ಶಿಷ್ಟಕವಿಯ ಕಲ್ಪನೆಗಳಿಗೂ ಕಡಿಮೆಯಿಲ್ಲದಂತೆ ಜನಪದ ಕವಿಯ ಸೃಜನಶೀಲ ಮನಸ್ಸು ದುಡಿದಿರುವುದನ್ನು ಕಾಣಬಹುದು. ಒಬ್ಬೊಬ್ಬರ ಸಾವಿನ ಸಂದರ್ಭದಲ್ಲೂ ಧರ್ಮರಾಯ ನೀಡುವ

ಕಾರಣಗಳು ಇಡಿ ಜನಪದ ಮಹಾಭಾರತ ಕಥೆಯನ್ನೇ ಮರು ನೆನಪಿಸುವ ರೀತಿಯಲ್ಲಿ ಹರಳುಗೊಂಡಿದೆ. ನೊಂದು ಬೆಂದು ಬಸವಳಿದ ಪಾಂಡವರಿಗೆ ಸಹಾಯ ಮಾಡುವ ವನದೇವಿಯನ್ನು ವರ್ಣಿಸುವಾಗ ಅಂದು ಜನತೆಯಲ್ಲಿದ್ದ ಕಾಡಿನ ಕಲ್ಪನೆ ಸಮೃದ್ಧಿಯ ಸಂಕೇತಗಳನ್ನು ಪ್ರತಿಬಿಂಬಿಸುತ್ತದೆ. ಇವು ಜನಪದ ಬದುಕಿನ ಸಮೃದ್ಧವಾದ ಕಾಲವನ್ನು ನೆನಪಿಸುವಂತಹ ಕಥೆಯಾಗಿದೆ. ಪ್ರಕೃತಿಯ ವರ್ಣನೆ ಸಹಜವಾಗಿ ಮೂಡಿಬಂದಿದೆ. ಧರ್ಮರಾಯ ನಡೆದಾಡಿದ ಸ್ಥಳ ಧರ್ಮಸ್ಥಳವಾಗುವ ಪರಿ ಬೆರಗು ಮೂಡಿಸುತ್ತದೆ.

ನರಕದಲ್ಲಿ ದುರ್ಯೋಧನ ನರಳಾಡುತ್ತಿರುವುದನ್ನು ಕಂಡು ಮರುಗಿದ ಧರ್ಮರಾಯ ತನ್ನ ಧರ್ಮವನ್ನು ಧಾರೆಯೆರೆದು ಕೌರವನನ್ನು ಸ್ವರ್ಗ ಸೇರಿಸುವ ಇರಾದೆಯನ್ನು ವ್ಯಕ್ತಪಡಿಸುವುದು ಧರ್ಮರಾಯನ ಘನವ್ಯಕ್ತಿತ್ವಕ್ಕೆ ಸಾಕ್ಷಿ. ಇನ್ನೊಬ್ಬನ ಸಂಕಟಕ್ಕೆ ಮರುಗದ ಮನುಷ್ಯ ಮಾನವನೇ ಅಲ್ಲ. ಅವನನ್ನು ಸಂಕಟದಿಂದ ಪಾರು ಮಾಡುವುದಕ್ಕಾಗಿ ತಾವು ಸ್ವಯಂ ಅರ್ಜಿಸಿದುದ್ದನ್ನು ಕಳೆದುಕೊಳ್ಳುವುದು ಮಾನವೀಯತೆ ಎಂಬುದನ್ನು ಜನಪದ ಕವಿ ಇಲ್ಲಿ ಸಮರ್ಥವಾಗಿ ಪ್ರತಿಪಾದಿಸಿರುವುದನ್ನು ಕಾಣಬಹುದು.

ಜನಪದ ಮಹಾಭಾರತ ಅಂತಿಮವಾಗಿ ಸ್ವರ್ಗದಲ್ಲಿ ಎಲ್ಲರೂ ಒಂದಾದರು ಎಂಬ ಮಾತಿನೊಂದಿಗೆ ಮುಕ್ತಾಯವಾಗುವುದು ಸರ್ವರ ಸುಖವನ್ನು ಬಯಸುವ ಜನಪದ ಜೀವನದೃಷ್ಟಿಗೆ ಉದಾಹರಣೆಯಾಗಿದೆ. ಜನಪದ ಮಹಾಭಾರತದ ರಚನೆಯಲ್ಲಿ ಜನಪದ ಪ್ರತಿಭೆ ವಿಷಯ ನಿರೂಪಣೆಯಲ್ಲಿ ಸರಳತೆ–ಸಹಜತೆಗೆ ಹೆಚ್ಚು ಗಮನಕೊಟ್ಟಿದೆ. ಅದನ್ನು ಹೆಚ್ಚು ಕಾವ್ಯಾತ್ಮಕಗೊಳಿಸುವ ಪ್ರವೃತ್ತಿ ಕಂಡುಬರುವುದಿಲ್ಲ. ಇದು ಎಲ್ಲಾ ಜನಪದ ಕಾವ್ಯಗಳಿಗೂ ಸಂಬಂಧಿಸಿದ ಮಾತು ಕೂಡ ಆಗಿದೆ.

ಕಾವ್ಯದ ಆರಂಭದಲ್ಲಿ ಕರ್ಣನಿಗೆ ಕೌರವನಿಂದ ದೊರೆತ ಸಹಕಾರದಿಂದ ಆದ ಸಂತಸವನ್ನು ತಿಳಿಸಿಕೊಡುವಲ್ಲಿ ಕೊಡುವ ಹೋಲಿಕೆಗಳು ಸೊಗಸಾಗಿವೆ. ಚಿತ್ರಕುಸುಮಾಲೆಯರು ತಮ್ಮ ವಿರಹವೇದನೆಯನ್ನು ನಿವೇದನೆ ಮಾಡಿಕೊಳ್ಳುವ ಸಂದರ್ಭದಲ್ಲಿ ಜನಪದರ ವಿಶಿಷ್ಟ ಪ್ರತಿಭೆ ಕಾಣಬಹುದು. ಸಂದೇಶವಾಹಕವಾಗಿ ಗಿಳಿಗಳನ್ನು ಬಳಸಿಕೊಳ್ಳುವ ತಂತ್ರ ಜಾನಪದೀಯವಾಗಿದ್ದು ಪರಿಣಾಮದ ಉದ್ದೇಶದಲ್ಲಿ ಸಾರ್ಥಕವಾಗಿ ಬಳಕೆಯಾಗಿದೆ.

'ಅತ್ಯಂತ ಜನಪ್ರಿಯವಾದ ಮಹಾಭಾರತಕತೆಯನ್ನು ತಮ್ಮದೇ ಆದ ಬಗೆಗಳಲ್ಲಿ ಹೇಳಲಾಗಿದೆ. ಪಾತ್ರ ಘಟನೆಗಳನ್ನು ತಮ್ಮ ತಮ್ಮ ರುಚಿ ಮತ್ತು ಮೌಲ್ಯಗಳಿಗನುಸಾರವಾಗಿ ಬಿಡಿಸಿಕೊಳ್ಳಬಹುದು. ಹಾಗೆ ಬಿಡಿಸಿಕೊಳ್ಳುವಾಗ ಆ ಚಾಕಟ್ಟಿನೊಳಗಡೆ ಬರುವ ವಿವರಗಳು ಕೆಲವೊಮ್ಮೆ ಮೂಲದ ಚೌಕಟ್ಟು, ಹೊಸದೊಂದು ಆಲೋಚನಾ ಕ್ರಮ ನಿರ್ಮಾಣವಾಗಬಹುದು ಶಿಷ್ಟರಿಗೆ ಪರಿಚಿತವಾಗಿರುವ ಪಂಚಮವೇದದ ದೃಶ್ಯಾವಳಿಗಳನ್ನು ಬದಲಾಯಿಸಬಹುದು ಮಾತ್ರವಲ್ಲದೆ ನಮ್ಮ ದೃಶ್ಯೇಂದ್ರಿಯಗಳನ್ನು ಬದಲಾಯಿಸಿಬಿಡುತ್ತದೆ. ಜನಪದ ಭಾರತದ ಪಾತ್ರಗಳು ತಮ್ಮ ಪುರಾಣದ ಮಹಾನ್‌ಪೋಪಾಕುಗಳನ್ನು ತೆಗೆದುಹಾಕಿ ದೈನಿಕದ ಎಲ್ಲದರಲ್ಲಿ ಒಂದಾಗುತ್ತದೆ'[೩] ಎಂಬ ಎಚ್.ಎಸ್. ಶಿವಪ್ರಕಾಶ್ ಅವರ ಮಾತುಗಳು ಜನಪದ ಮಹಾಭಾರತಕ್ಕೆ ಸೂಕ್ತವಾಗಿದೆನ್ನಬಹುದು.

**ಪಂಪಭಾರತದ ಕಥಾವಸ್ತು ವಿನ್ಯಾಸ:**

ಪಂಪ ಮೂಲತಃ ವೈದಿಕ ಪರಂಪರೆಗೆ ಸೇರಿದವನಾಗಿದ್ದರೂ ಆತನ ತಂದೆ ಭೀಮಪ್ಪಯ್ಯ ಧರ್ಮದಲ್ಲೆಲ್ಲಾ ಜೈನಧರ್ಮವೇ ಶ್ರೇಷ್ಠವೆಂದು ಭಾವಿಸಿ ಆ ಧರ್ಮಕ್ಕೆ ಮತಾಂತರನಾದನೆಂದು ಪಂಪನೇ ತನ್ನ ಕಾವ್ಯದಲ್ಲಿ ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಪಂಪ ವೇದ ವೇದಾಂಗ ಪಾರಂಗತರಾಗಿ ಕೀರ್ತಿ ಶಾಲಿಗಳೂ ಗುಣಶಾಲಿಗಳೂ ಅದವರ ಮನೆತನದಲ್ಲಿ ಜನಿಸಿದ. ಇವನು ತನ್ನ ಮೂವತೊಂಬತ್ತನೆಯ ವರ್ಷದವರೆಗೂ ವಿದ್ಯಾರ್ಜನೆಯಲ್ಲಿ ತೊಡಗಿ ಮುಂದೆ ತನ್ನ ಎರಡು ಮಹಾಕಾವ್ಯಗಳನ್ನು ರಚಿಸಲು ಬೇಕಾದ ಪಾಂಡಿತ್ಯವನ್ನು ಗಳಿಸಕೊಂಡಿರಬೇಕು. ಸುಪ್ರಸಿದ್ಧರಾದ ದೇವೇಂದ್ರಮುನಿಗಳಿಂದ ಜಿನಧರ್ಮದ ಪರಿಚಯ ಮಾಡಿಕೊಂಡನಲ್ಲದೆ ಜೈನತೀರ್ಥಂಕರರ ಅರ್ಧಮಾಗದಿ, ಅಪಭ್ರಂಶ ಕಾವ್ಯಗಳ ಪರಿಚಯವನ್ನು ರಾಮಾಯಣ, ಮಹಾಭಾರತ ಮುಂತಾದ ಕಾವ್ಯಗಳನ್ನು ಅಭ್ಯಾಸ ಮಾಡಿರಬೇಕು. ಇವುಗಳ ಜೊತೆಗೆ ಲಲಿತಕಲೆಗಳಲ್ಲಿಯೂ ಪಂಪನಿಗೆ ಪ್ರಾವೀಣ್ಯವಿದ್ದು ಅಗಾಧ ಪಾಂಡಿತ್ಯವನ್ನು ಪಡೆದುಕೊಂಡೇ ಕಾವ್ಯರಚನೆಗೆ ಕೈ ಹಾಕಿದನೆನ್ನಬಹುದು.

ವ್ಯಾಸಭಾರತದಲ್ಲಿ ಪಂಪನ ಚಿತ್ತವನ್ನಾಕರ್ಷಿಸಿದ ಪ್ರಮುಖ ಅಂಶಗಳೆಂದರೆ ಕುತೂಹಲಜನಕವಾದ ಹಾಗೂ ವಿಸ್ಮಯವನ್ನುಂಟುಮಾಡುವ ದುರಂತ ಕಥೆ. ಆ ಕಥೆಯ ಅಂತರ್ಗತವಾಗಿ ಪ್ರವಹಿಸುವ ನೈತಿಕ ಭಾವನೆ ಅಲ್ಲಿನ ಪ್ರಮುಖ ಪಾತ್ರಗಳಲ್ಲಿ ಕಂಡು ಬರುವ ಉದಾತ್ತ ವ್ಯಕ್ತಿತ್ವ ಹಾಗೂ ನೈತಿಕ ಮಹೋನ್ನತಿ ಇವೆಲ್ಲವುಗಳಿಗಿಂತ ವಿಶೇಷವಾಗಿ ಅವನ ಮನಸ್ಸನ್ನು ಸೂಜಿಗಲ್ಲಿನಂತೆ ಸೆಳೆದು ಕೊಂಡುದೆಂದರೆ ಅದರಲ್ಲಿನ ರಾಗಾದ್ವೇಷಾದಿಗಳಿಂದ ತುಂಬಿ ತುಳುಕುವ

ಮಾನವ ಸ್ವಭಾವ ಚಿತ್ರಣ. ಮಾನವ ಭಾವಾವೇಶಗಳ ಸಂಘರ್ಷ. ಆ ಸಂಘರ್ಷದಿಂದ ಒಡಮೂಡುವ ಮಾನವತೆಯ ಆದರ್ಶ. ಅದರಲ್ಲಿ ಬರುವ ಒಂದೊಂದು ಪಾತ್ರವೂ ಅವನಿಗೆ ಒಂದೊಂದು ವಿಶೇಷ ಗುಣಗಳಿಂದ ಕೂಡಿದ ಸಜೀವ ಮೂರ್ತಿಯಾಗಿ ಕಂಡಿತು.

**ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ**
**ಬಲದೊಳ್ ಮದ್ರೇಶನತ್ಯುನ್ನತಿಯೊಳಮರಸಿಂಧೂದ್ಭವಂ ಚಾಪವಿದ್ಯಾ**
**ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ**
**ರ್ಮಲ ಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ॥**
**(ಪ.ಭಾ. ೧೪-೬೪)**

ಇವರುಗಳು ಮಾತ್ರವಲ್ಲದೇ ಕೃಷ್ಣನ ಪಾತ್ರವಾಗಲೀ ಉತ್ತರಕುಮಾರನ ಪಾತ್ರವಾಗಲಿ ಪಂಪನಿಗೆ ಉದಾತ್ತವಾಗಿಯೇ ಕಂಡಿದೆ. ಮಹಾಭಾರತದ ಇಂತಹ ಆದರ್ಶ ಅಂಶಗಳೇ ಪಂಪನ ಚಿತ್ತಾವನ್ನಾಕರ್ಷಿಸಿ ವಿಕ್ರಮಾರ್ಜುನ ವಿಜಯದಂತಹ ಕಾವ್ಯರಚನೆಗೆ ಪ್ರೇರಣೆಯನ್ನು ಒದಗಿಸಿರಬಹುದು.

ಪಂಪಮಹಾಭಾರತ ಗ್ರಂಥಕ್ಕೆ ಮಾರುಹೋದಂತೆಯೇ ಅದರ ಕರ್ತೃವಾದ ವ್ಯಾಸ ಮಹರ್ಷಿಗಳ ವ್ಯಕ್ತಿತ್ವಕ್ಕೂ ಪ್ರತಿಭೆಗೂ ಮಾರುಹೋಗಿರುವುದನ್ನು ಕಾಣಬಹುದು. 'ವ್ಯಾಸಮುನೀಂದ್ರ ರುಂದ್ರವಚನಾಮೃತವಾರ್ಧಿಯನೀಸುವೆಂ ಕವಿವ್ಯಾಸನೆನೆಂಬ ಗರ್ವಮೆನಗಿಲ್ಲ' ಎಂಬ ಅವನ ಮಾತಿನಲ್ಲಿಯೇ ಸಹಜ ವಿಧೇಯತೆಯೂ ವಿನಮ್ರತೆಯೂ ಮಹಾಭಾರತವನ್ನು ಕನ್ನಡದಲ್ಲಿ ಪುನರ್‌ರಚಿಸಲು ತಾನು ಸಮರ್ಥನೆಂಬ ದೃಢವಾದ ಆತ್ಮವಿಶ್ವಾಸವೂ ಇರುವುದು ಅರಿವಾಗುತ್ತದೆ. ಪಂಪನಿಗಿಂತ ಹಿಂದೆ ಭಾರತವನ್ನಾಧರಿಸಿ ಕನ್ನಡದಲ್ಲಿ ಬರೆದ ಕೃತಿಗಳು ಇದ್ದವಾದರೂ ಸಮಗ್ರಭಾರತ ಬಹುಶಃ ಇದ್ದಿರಲಾರದು. ಬೃಹತ್ ಭಾರತಕಥೆಯನ್ನು ಸಮಗ್ರವಾಗಿ ಹಾಗೂ ಸಮರ್ಪಕವಾಗಿ ಕನ್ನಡಕ್ಕೆ ತರುವ ಸಾಹಸಕಾರ್ಯವನ್ನು ಹಿಂದಿನ ಕವಿಗಳು ಮಾಡಿರಲಾರರು. 'ಕತೆ ಪಿರಿದಾದೊಡಂ ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತ ಭಾರತಮನಪೂರ್ವಮಾಗೆ ಸಲೆ ಪೇಟ್ದ ಕವೀಶ್ವರರಿಲ್ಲ ವರ್ಣಕಂ ಕತೆಯೊಳೊಡಂಬಡಂ ಪಡೆಯೆ ಪೇಟ್ದೊಡೆ ಪಂಪನೇ ಪೇಟ್ಗುಂ' ಎಂದು ಅರಿಕೇಸರಿಯ ಆಸ್ಥಾನದ ಕವಿಗಳು ಹೊಗಳುವಲ್ಲಿ ಪಂಪನೇ ಹೇಗೆ ಆ ಕಾರ್ಯಕ್ಕೆ ದಕ್ಷನಾಗಿದ್ದ ಎಂಬುದು ಸೂಚಿತವಾಗುತ್ತದೆ.

ಜೊತೆಗೆ ಮಹಾಭಾರತ ಗ್ರಂಥ ರಚನೆಯ ಸಿದ್ಧತೆಯಲ್ಲಿದ್ದ ಪಂಪನಿಗೆ ತನ್ನ ಆಶ್ರಯದಾತನೂ ಆತ್ಮೀಯ ಸ್ನೇಹಿತನೂ ಆದ ಅರಿಕೇಸರಿಯಿಂದಲೂ ಪ್ರೇರಣೆ ಪ್ರೋತ್ಸಾಹ ದೊರೆಯಿತು. 'ಸಮಸ್ತ ಭಾರತವನ್ನು ಯಾವ ನರೇಂದ್ರರೂ ಅಕ್ಕರೆಯಿಂದ ಹೇಳಿಸುವುದೂ ಇಲ್ಲ. ಕವೀಂದ್ರರೂ ಪೂರ್ಣವಾಗಿ

ಹೇಳುವುದಿಲ್ಲ. ಹೇಳಿಸುವುದಾದರೆ ನೀನೇ ಹೇಳಿಸಬೇಕು' ಎಂದು ಭಿನ್ನವಿಸಿಕೊಂಡಾಗ ಅರಿಕೇಸರಿ ಪಂಪನನ್ನು ಕರೆಸಿ ಗ್ರಂಥವನ್ನು ರಚಿಸಬೇಕೆಂದು ಹೇಳಿದಾಗ ಆತ ಸಮಗ್ರ ಭಾರತ ರಚನೆಗೆ ತೊಡಗಿದನೆನ್ನಬಹುದು.

ವೈದಿಕ ಧರ್ಮೀಯರಿಗೆ ಮಹಾಭಾರತ ಒಂದು ಪೂಜನೀಯ ಧಾರ್ಮಿಕ ಗ್ರಂಥವಾದರೆ ಜೈನನಾದ ಪಂಪನಿಗೆ ಮಹಾಭಾರತದಲ್ಲಿ ಬರುವ ತತ್ತ್ವೋಪದೇಶ ಧರ್ಮಜಿಜ್ಞಾಸೆಗಳು ಮುಖ್ಯವಾಗುವುದಿಲ್ಲ. ಅದರಲ್ಲಿ ಕಂಡುಬರುವ ಕಥಾನಕ, ಪಾತ್ರಸೃಷ್ಟಿ, ಕಲಾ ಕೌಶಲ್ಯಗಳಷ್ಟೇ ಅವನಿಗೆ ಪ್ರಮುಖವಾದ್ದರಿಂದ ಮಹಾಭಾರತ ಅವನಿಗೆ ಲೌಕಿಕ ನಿಷ್ಠೆ ಮಾತ್ರವೇ ಆಗಿರುವುದನ್ನು ಕುರಿತಂತೆ 'ಬೆಳಗುವೆನಿಲ್ಲಿ ಲೌಕಿಕಮನ್' ಎಂದೇ ಹೇಳುತ್ತಾ ಕಾವ್ಯರಚನೆಯಲ್ಲಿ ತೊಡಗುತ್ತಾನೆ. ಹಾಗಾಗಿ ಮಹಾಭಾರತದಲ್ಲಿ ತನಗೆ ಧಾರ್ಮಿಕ ಶದ್ಧೆಗಿಂತ ಲೌಕಿಕ ಭಾವನೆ ಮಾತ್ರವೇ ಇದ್ದುದರಿಂದ ಕಥೆಯನ್ನು ಅದರಲ್ಲಿ ಬರುವ ಸನ್ನಿವೇಶಗಳನ್ನು ಪಾತ್ರಗಳನ್ನು ತನ್ನ ಅಭಿರುಚಿಗಳಿಗನುಗುಣವಾಗಿ ಮಾರ್ಪಾಡಿಸಿಕೊಳ್ಳುವ ಸ್ವಾತಂತ್ರ್ಯ ಪಡೆದುಕೊಂಡಿದ್ದಾನೆ. ಪಂಪನಿಗಿಂತ ಹಿಂದೆ ಭಾಸ, ಭಾರವಿ, ಭಟ್ಟನಾರಾಯಣ ಮೊದಲಾದ ವೈದಿಕ ಧರ್ಮದ ಕವಿಗಳೇ ಕಥೆಯಲ್ಲಾಗಲೀ ಸನ್ನಿವೇಶ ರಚನೆಯಲ್ಲಾಗಲೀ ಪಾತ್ರಚಿತ್ರಣದಲ್ಲಾಗಲೀ ಅನೇಕ ಬದಲಾವಣೆಗಳನ್ನು ಮಾಡಿಕೊಂಡಿರುವುದನ್ನು ಪಂಪ ಗಮನಿಸಿದ್ದಾನೆ.

**ಕಥಾ ವಿನ್ಯಾಸದಲ್ಲಿ ಮಾರ್ಪಾಡುಗಳು:**

ವ್ಯಾಸಮಹಾಭಾರತದಲ್ಲಿ ಸಾವಾಕಾಶವಾಗಿ ಕಥೆಯಲ್ಲೂ ಮುಂದುವರೆಯುವ ಕಥೆಯಲ್ಲಿ ಮಧ್ಯೆ ಮಧ್ಯೆ ಬರುವ ಧರ್ಮದರ್ಶನ, ಮತಶ್ರದ್ಧೆ ಸಂಪ್ರದಾಯ ಆಚರಣೆಗಳು ನೀತಿ ಬೋಧನೆ, ಉಪಾಖ್ಯಾನಗಳು ಪಂಪನಿಗೆ ಅಪ್ರಸ್ತುತವಾದವು. ಹಾಗೆಯೇ ಕೃಷ್ಣ ಪರಮಾತ್ಮವನ್ನು ಕುರಿತ ವಿಸ್ಮಯ ಕಥಾಪ್ರಸಂಗಗಳೂ ಅವನಿಗೆ ಅಪ್ರಸ್ತುತವಾದ ಕಾರಣ ಮುಖ್ಯಕಥೆಯನ್ನಷ್ಟೇ ಅವನು ಆರಿಸಿಕೊಂಡಿದ್ದಾನೆ. ಹಾಗಾಗಿ ವ್ಯಾಸಭಾರತದ ಆದಿಪರ್ವದ ಆರಂಭದಲ್ಲಿರುವ ನೂರು ಅಧ್ಯಾಯಗಳಲ್ಲಿ ಬರುವ ಪೀಠಿಕಾಭಾಗ ಅರಣ್ಯಪರ್ವದಲ್ಲಿ ಭೀಮನಿಗೆ ಆಂಜನೇಯ ಬೋಧಿಸುವ ಚಾತುರ್ವರ್ಣ ಧರ್ಮ, ವಿದುರನೀತಿ, ಯಯಾತಿಯ ಉಪಾಖ್ಯಾನ, ಶಕುಂತಲೆಯ ಉಪಾಖ್ಯಾನ, ಸಾವಿತ್ರಿಯ ಉಪಾಖ್ಯಾನ, ಮುಂತಾದ ಕಥೆಗಳು, ಕೃಷ್ಣನ ಮಹಾತ್ಮೆಯನ್ನು ಸಾರುವ. ದ್ರೌಪದಿಗೆ

ಅಕ್ಷಯ ವಸ್ತ್ರಪ್ರದಾನ ಮಾಡುವ, ದೂರ್ವಾಸಾತಿಥ್ಯ, ವಿಶ್ವರೂಪದರ್ಶನ, ಗೀತೋಪದೇಶ ಮೊದಲಾದ ಅನೇಕ ಪ್ರಸಂಗಗಳನ್ನು ಪಂಪ ಕೈಬಿಟ್ಟಿದ್ದಾನೆ.

ಹಾಗೆಯೇ ವ್ಯಾಸಭಾರತದಲ್ಲಿ ಕಂಡುಬರುವ ಅಥವಾ ಪ್ರಾಸಂಗಿಕವಾಗಿ ಹೆಸರಿಸುವಂತಹ ಘಟನೆಗಳನ್ನು ಪಂಪ ಔಚಿತ್ಯಕ್ಕನುಗುಣವಾಗಿ ಬಳಸಿಕೊಂಡಿದ್ದಾನೆ. ಅವುಗಳಲ್ಲಿ ವಸಂತ ಪರ್ವತದ ವರ್ಣನೆ, ಶತಶೃಂಗ ಪರ್ವತದ ವರ್ಣನೆ, ಬನವಾಸಿಯ ವರ್ಣನೆ ಮುಂತಾದ ಋತುಗಳ ವರ್ಣನೆ, ಜಲಕ್ರೀಡೆಯ ವರ್ಣನೆ, ಖಾಂಡವದಹನ ಮೊದಲಾದ ವರ್ಣನೆಗಳನ್ನು ತುಂಬ ಮನೋಜ್ಞವಾಗಿ ಸಂದರ್ಭೋಚಿತವಾಗಿ ವರ್ಣಿಸಿರುವುದನ್ನು ಕಥೆಯಲ್ಲಿ ಕಾಣಬಹುದು. ಸುಭದ್ರಾ ವಿವಾಹವಾಗಿ ಅಭಿಮನ್ಯುವಿನ ಜನನಾನಂತರ ಖಾಂಡವವನ ದಹನಕ್ಕೆ ಪೂರ್ವಭಾವಿಯಾಗಿ ವಿಸ್ತಾರವಾದ ಬೇಟೆಯ ವರ್ಣನೆಯನ್ನು ಅಳವಡಿಸಿದ್ದಾನೆ. ಸುಭದ್ರೆಯ ಮದುವೆಗೆ ಮೊದಲು ವಿಸ್ತಾರವಾದ ಸೂಳೆಗೇರಿಯ ವರ್ಣನೆಯನ್ನು ಕಟ್ಟಿಕೊಟ್ಟಿದ್ದಾನೆ. ಹೀಗೆ ಪಂಪ ಮೂಲ ಮಹಾಭಾರತದಲ್ಲಿಲ್ಲದ ಅನೇಕ ನೂತನ ಪ್ರಸಂಗಗಳನ್ನು ಕಥೆಯಲ್ಲಿ ಸೇರಿಸಿದ್ದಾನೆ.

ಮೂಲ ಮಹಾಭಾರತದಲ್ಲಿ ಸವಿಸ್ತಾರವಾಗಿರುವ ಕಥಾಸಾರವನ್ನು ಪಂಪ ಸಾರಸಂಗ್ರಹ ರೂಪದಲ್ಲಿ ರಸವತ್ತಾಗಿ ಚಿತ್ರಿಸಿದ್ದಾನೆ. ನಿದರ್ಶನಕ್ಕೆ ಭೀಷ್ಮನ ಜನನ ವೃತ್ತಾಂತ, ಅಂಬೆಯ ಪ್ರಸಂಗ ಮೊದಲಾದವುಗಳನ್ನು ನೋಡಬಹುದು. ಭೀಷ್ಮನ ಜನ್ಮ ವೃತ್ತಾಂತ ಮೂಲ ಮಹಾಭಾರತದಲ್ಲಿ ಆರು ಅಧ್ಯಾಯಗಳಲ್ಲಿ ವರ್ಣಿತವಾಗಿದೆ. ಅದರಲ್ಲಿ ಬರುವ ಬ್ರಹ್ಮನ ಶಾಪ, ಅಷ್ಟವಸುಗಳಿಗೆ ವಶಿಷ್ಟನ ಶಾಪ, ಶಂತನ ಜನನ. ಗಂಗೆಯು ಭೂಮಿಯಲ್ಲಿ ಜನಿಸಿ ಶಂತನುವಿಗೆ ಮಡದಿಯಾದ್ದದು, ಅವರಿಬ್ಬರ ಒಪ್ಪಂದ ಮೊದಲಾದ ಭೀಷ್ಮ ಜನನ ಪೂರ್ವಕ್ಕೆ ಸಂಬಂಧಿಸಿದ ವಿವರಗಳು ಪಂಪನಿಗೆ ಅಪ್ರಸ್ತುತವಾದ ಪ್ರಸಂಗಗಳಾಗಿ ಕಂಡಿದ್ದು ಭೀಷ್ಮನ ವ್ಯಕ್ತಿತ್ವವೆಷ್ಟೋ ಅಷ್ಟೇ ಅವನಿಗೆ ಬೇಕಾದ್ದು. ಹಾಗಾಗಿ ಪಂಪನು 'ಶಂತನುವಿಗೂ ಗಂಗಾಕಾಂತೆಗೂ ವಸಿಷ್ಟನ ಶಾಪ ಭ್ರಾಂತಿಯಲ್ಲಿ ನಿರ್ಜಿತಕಂತುವೋ ಎನ್ನುವಂತೆ ಗಾಂಗೇಯ ಹುಟ್ಟಿದ' ಎಂಬ ಒಂದೇ ವಾಕ್ಯದಲ್ಲಿ ವಿವರಗಳನ್ನು ತೇಲಿಸಿ ಪ್ರಕೃತಕ್ಕೆ ಬರುತ್ತಾನೆ. ಅಂತೆಯೇ ೨೪ ಅಧ್ಯಾಯಗಳಿಂದ ಕೂಡಿದ ಒಂದು ಬೃಹತ್ ಉಪಾಖ್ಯಾನದಂತಿರುವ ಅಂಬೆಯ ಕಥೆಯನ್ನು ಭೀಷ್ಮನ ವ್ಯಕ್ತಿತ್ವ ಪ್ರದರ್ಶನಕ್ಕೆ ಆಸ್ಪದವಾಗುವಂತೆ ರಸವತ್ತಾದ ಕೆಲವೇ ಮಾತುಗಳಲ್ಲಿ ಸಂಗ್ರಹಿಸಿದ್ದಾನೆ. ಹಾಗೆಯೇ ಹಿಡಿಂಬವಧೆ, ಬಕವಧೆ ಮೊದಲಾದ ಪ್ರಸಂಗಗಳನ್ನು ಕ್ಷಿಪ್ರವಾಗಿ ಮುಗಿಸಿಕೊಂಡು ಮುಂದುವರೆಸಿದ್ದಾನೆ.

ವ್ಯಾಸಭಾರತದಲ್ಲಿ ಪ್ರಾಸಂಗಿಕವಾಗಿ ಪ್ರಸ್ತಾಪವಾಗಿರುವ ಸಂಗತಿಗಳನ್ನು ಪಂಪ ಸಂದರ್ಭೋಚಿತವಾಗಿ ವಿಸ್ತರಿಸಿರುವುದನ್ನು ಕಾಣಬಹುದು. ವ್ಯಾಸಮಹರ್ಷಿಗಳ ಕೈಯಲ್ಲಿ ಎಲ್ಲೋ ಒಂದೆರಡು ಮಾತುಗಳಲ್ಲಿ ತೇಲಿಸಿ ಹೋಗುವ ಪ್ರಕೃತಿಯ ವರ್ಣನೆ ಅಥವಾ ಮಾನವ ಸ್ವಭಾವದ ವರ್ಣನೆಗಳು ಪಂಪನ ಕೈಯಲ್ಲಿ ಸವಿಸ್ತಾರವಾಗಿ ನಯನ ಮನೋಹರವಾದ ಭಾವಗೀತೆಗಳಾಗಿ ಕಂಗೊಳಿಸುವುದನ್ನು ಕಾಣಬಹುದು.

ಪಂಪನು ಕೆಲವೆಡೆಗಳಲ್ಲಿ ತನ್ನ ಕಥಾನಕಕ್ಕೆ ಔಚಿತ್ಯವೆನಿಸುವಂತೆ ಹಲವಾರು ಪ್ರಸಂಗಗಳನ್ನು ಸ್ಥಳಾಂತರ ಮಾಡಿಕೊಂಡಿರುವುದುಂಟು. ಉದಾಹರಣೆಗೆ: ಉದ್ಯೋಗ ಪರ್ವದ ಕೊನೆಯಲ್ಲಿ ಬರುವ ಅಂಬೋಪಾಖ್ಯಾನದ ಕಥೆಯನ್ನು ಆದಿ ಪರ್ವದ ಭಾಗದಲ್ಲೇ ಅಳವಡಿಸಿಕೊಂಡಿದ್ದಾನೆ. ಭೀಷ್ಮನ ವ್ಯಕ್ತಿತ್ವವನ್ನು ಉಜ್ವಲಗೊಳಿಸುವ ಸಲುವಾಗಿ ಆ ಕಥೆ ಉದ್ಯೋಗ ಪರ್ವದ ಅಂತ್ಯದಲ್ಲಿ ಬರುವುದಕ್ಕಿಂತಲೂ ಭೀಷ್ಮನ ಭೀಷ್ಮಾಪ್ರತಿಜ್ಞಾವಸರದಲ್ಲಿ ಬರುವುದು ಉಚಿತವಾಗಿ ಕಾಣುತ್ತದೆ.

ವ್ಯಾಸಭಾರತದಲ್ಲಿ ವ್ಯಾಯಾಮ ರಂಗದಲ್ಲಿ ಮಕ್ಕಳ ಯುದ್ಧ ವಿದ್ಯಾಪ್ರದರ್ಶನದ ಅನಂತರ ದ್ರೋಣನು ದ್ರುಪದನ ಗರ್ವಭಂಗ ಮಾಡಿದ ಪ್ರಸಂಗ ಬರುತ್ತದೆ. ಆದರೆ ಪಂಪ ಪ್ರಾರಂಭದಲ್ಲೇ ದ್ರುಪದನ ಮೇಲಿನ ಸೇಡನ್ನು ತೀರಿಸಿ ಅನಂತರ ಮಕ್ಕಳಿಂದ ಯುದ್ಧ ವಿದ್ಯಾ ಪ್ರದರ್ಶನ ಮಾಡಿಸುವುದು ಕಂಡುಬರುತ್ತದೆ.

ಸನ್ನಿವೇಶ ಪ್ರಸಂಗಗಳಲ್ಲಿಯೂ ಪಂಪ ಬದಲಾವಣೆ ಮಾಡಿಕೊಂಡಿರುವುದನ್ನು ಕಾಣಬಹುದು. ದ್ರೋಣ ದ್ರುಪದ ಪ್ರಸಂಗ, ದ್ರೌಪದಿ ವಿವಾಹ, ಸುಭದ್ರಾರ್ಜುನರ ಪ್ರಣಯ, ಪಗಡೆಯಾಟ, ದ್ರೌಪದಿಯ ಮುಡಿಪ್ರಸಂಗ ಮೊದಲಾದ ಪ್ರಮುಖ ಸನ್ನಿವೇಶಗಳಲ್ಲೆಲ್ಲ ತನ್ನ ಅಂದಿನ ಲೌಕಿಕಾಭಿರುಚಿಗನುಗುಣವಾಗಿ ಹಲವಾರು ಬದಲಾವಣೆಗಳನ್ನು ಮಾಡಿಕೊಂಡಿದ್ದಾನೆ.

ಪಾತ್ರವರ್ಗದಲ್ಲಿಯೂ ಪಂಪನು ಅನೇಕ ರೀತಿಯಲ್ಲಿ ಬದಲಾವಣೆ ಮಾಡಿಕೊಂಡಿದ್ದಾನೆ. ವ್ಯಾಸಭಾರತದಲ್ಲಿ ಮಬ್ಬಾಗಿರುವ ಕೆಲವು ಪಾತ್ರಗಳೆಲ್ಲವೂ ಪಂಪನಲ್ಲಿ ಹೊಸ ಜೀವಕಳೆಯಿಂದ ಕಂಗೊಳಿಸುತ್ತವೆ. ಅರ್ಜುನನಿಗೆ ಉನ್ನತ ಹಾಗೂ ವಿಶಿಷ್ಟ ಸ್ಥಾನವನ್ನು ಕೊಟ್ಟು ಅವನ ಶೌರ್ಯ ಪರಾಕ್ರಮಗಳನ್ನು ವರ್ಣಿಸುವುದೇ ಪಂಪನ ಮೂಲ ಉದ್ದೇಶವಾಗಿದೆ. ವ್ಯಾಸರಲ್ಲಿ ಅಷ್ಟೊಂದು ಪ್ರಮುಖ ಪಾತ್ರವೆನಿಸದ ಕರ್ಣನ ಪಾತ್ರವನ್ನು ಪಂಪ ನಾಯಕನಾದ ಅರ್ಜುನನಿಗೆ ಪ್ರತಿನಾಯಕನಾಗಿ

ಚಿತ್ರಿಸಿದ್ದಾನೆ. ತಾಯಿ ಪ್ರೀತಿವಾತ್ಸಲ್ಯದಿಂದ ತಿರಸ್ಕೃತನಾಗಿ ಕುಲಹೀನನೆಂದು ಎಲ್ಲರಿಂದಲೂ ಅವಕೃಪೆಗೊಳಗಾಗಿ ಇಂದ್ರನ ಬೇಡಿಕೆಯಿಂದಲೂ ಪರಶುರಾಮರ ಶಾಪದಿಂದ ಶಕ್ತಿಗುಂದಿದವನಾಗಿ, ಕೊನೆಗೆ ಕೃಷ್ಣ ಕುಂತಿಯರ ಮಾತಿನ ಬಲೆಗೆ ಸಿಕ್ಕಿ ಧರ್ಮಸಂಕಟಕ್ಕೊಳಗಾಗಿ ವಿಧಿಯಾಟಕ್ಕೆ ಮಣಿಯಬೇಕಾದರೂ ನ್ಯಾಯಮಾರ್ಗದಿಂದ ಹಿಮ್ಮೆಟ್ಟದೆ ಸತ್ಯ ಪರಾಕ್ರಮ ತ್ಯಾಗ ಗುಣಗಳನ್ನು ಮೆರೆದು ತನ್ನ ಒಡೆಯನಿಗಾಗಿ ಜೀವವನ್ನು ತೊರೆದ ಕರ್ಣನ ಪಾತ್ರವನ್ನು ಪಂಪ ಸಹೃದಯರಲ್ಲಿ ಸಹಾನುಭೂತಿಯುಂಟಾಗುವಂತೆ ಚಿತ್ರಿಸಿದ್ದಾನೆ. ಕರ್ಣನ ಉದಾತ್ತಗುಣಗಳಲ್ಲಿ ಮೈಮರೆತ ಪಂಪ ಕ್ಷಣಕಾಲ ತನ್ನ ನಾಯಕನಾದ ಅರ್ಜುನನ್ನು ಮರೆತು

**ನೆನಯದಿರಣ್ಣ ಭಾರತದೊಳಿಂ ಪೆಱರಾರುಮನೊಂದೆ ಚಿತ್ತದಿಂ**
**ನೆನೆವೊಡೆ ಕರ್ಣನಂ ನೆನೆಯ ಕರ್ಣನೊಳಾರ್ ದೊರೆ ಕರ್ಣನೇಱು ಕ**
**ರ್ಣನ ಕಡು ನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕ**
**ರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ**
**(ಪ.ಭಾ. ೧೨-೨೧೭)**

ಎಂದು ಹೃದಯಪೂರ್ವಕವಾಗಿ ಕೊಂಡಾಡಿದ್ದಾನೆ. ಭಾರತವು ನಿಜವಾಗಿಯೂ ಕರ್ಣನ ಪಾತ್ರದಿಂದ ಕರ್ಣರಸಾಯನವಾಗಿದೆ. ಹಾಗೆಯೇ ವ್ಯಾಸಭಾರತದಲ್ಲಿ ಕೇವಲ ದುಷ್ಟನೆನಿಸಿದ ದುರ್ಯೋಧನನು ತನ್ನ ಅಂತ್ಯಕಾಲದಲ್ಲಿ ಮಾನವಸಹಜವಾದ ಸದ್ಗುಣಗಳನ್ನು ಮೆರೆದು ಸಹೃದಯರ ಕರುಣೆಗೆ ಒಳಗಾಗುತ್ತಾನೆ. ಹೀಗೆ ಪಂಪನಲ್ಲಿ ಬರುವ ಒಂದೊಂದು ಪಾತ್ರವೂ ಒಂದೊಂದು ವಿಶಿಷ್ಟ ಗುಣಗಳಿಂದ ಕೂಡಿ ಲಲಿತ ಸುಂದರವಾಗಿ ಕಂಗೊಳಿಸುತ್ತವೆ.

ಒಟ್ಟಾರೆಯಾಗಿ ಹೇಳುವುದಾದರೆ ವ್ಯಾಸಭಾರತವೆಂಬ ಬೃಹದಾರಣ್ಯದಲ್ಲಿ ಸ್ವೇಚ್ಛೆಯಗಿ ಬೆಳೆದಿರುವ ಬೇಡವಾದ ಗಿಡಮರಬಳ್ಳಿಗಳನ್ನು ಕಡಿದು ನಯನ ಮನೋಹರವಾದ ಉದ್ಯಾನವನವನ್ನಾಗಿಸುವಂತೆ ಪಂಪ ಮೂಲ ಮಹಾಭಾರತದಲ್ಲಿ ತನಗೆ ಬೇಡವಾದ ಅಂಶಗಳನ್ನು ಕೈಬಿಟ್ಟು ಅವಶ್ಯವಾದ ಅಂಶಗಳನ್ನು ಮಾತ್ರ ಎರಕಹೊಯ್ಯುವಂತೆ ಸಾರವತ್ತಾಗಿ ಸಂಗ್ರಹಿಸಿರುವುದನ್ನು ಡಿ.ಎಲ್.ಎನ್.ರವರು 'ಅದೊಂದು ಗೊಂಡಾರಣ್ಯ; ಅದನ್ನೊಂದು ಉದ್ಯಾನವನ್ನಾಗಿ ಪರಿವರ್ತಿಸಬೇಕೆಂಬುದು ಪಂಪನ ಸಂಕಲ್ಪ; ಅದರ ಫಲವೇ ವಿಕ್ರಮಾರ್ಜುನ ವಿಜಯಂ'[೪] ಎಂಬುದಾಗಿ ಹೇಳಿರುವುದು ಉಚಿತವಾಗಿಯೇ ಇದೆ. ಪಂಪ ತನ್ನ ಮತ್ತೊಂದು ಗ್ರಂಥವಾದ ಆದಿಪುರಾಣದಲ್ಲಿ ವಿಶೇಷ ಮತ ಪ್ರಕ್ರಿಯೆಗಳಿಂದ ನೀರಸವೆನಿಸುವ ಭಾಗಗಳುಳ್ಳ ಪೂರ್ವ ಪುರಾಣದ ಕಥೆಯನ್ನು ಸರಸವಾಗುವಂತೆ ಸಂಗ್ರಹಿಸಿ ಅವನ ಕೈ ಚೆನ್ನಾಗಿ ಪಳಗಿತ್ತು. ಹಾಗಾಗಿ 'ಆದಿವಂಶಾವತಾರ ಸಂಭವಂ, ರಂಗಪ್ರವೇಶಂ ಜತುಗೇಹಾದಾಹಂ, ಹಿಡಿಂಬವಧೆ, ಬಕಾಸುರವಧೆ, ದ್ರೌಪದಿ ಸ್ವಯಂವರ,

ವೈವಾಹಂ' ಮೊದಲಾದ ಮಹಾಭಾರತದಲ್ಲಿ ಬರುವ ಪ್ರಮುಖ ಸನ್ನಿವೇಶಗಳನ್ನೆಲ್ಲ ವರ್ಗಿಕರಿಸಿಕೊಂಡು ಪೆಱವುಮುಪಾಖ್ಯಾನ ಕಥೆಗಳೊಳಮೊಂದುಂ ಕುಂದಲೀಯದೆ ನಾಟಕದ ದೃಶ್ಯದಂತೆ ಒಂದರ ಅನಂತರ ಒಂದು ಸನ್ನಿವೇಶವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ. 'ನಿಸರ್ಗ ಸಹಜ ಶೋಭೆಯಿಂದ ಕೂಡಿದ್ದ ಮಹೋನ್ನತವಾದ ಕೋಡುಗಲ್ಲು, ಶಿಲ್ಪಿಯ ಕೈ ಚಳಕದಿಂದ ಗೊಮ್ಮಟೇಶ್ವರನಾಗಿ ನಿಂತಂತೆ ವ್ಯಾಸಭಾರತ ಪಂಪನ ಕೈಯಿಂದ ವಿಕ್ರಮಾರ್ಜುನ ವಿಜಯವಾಗಿ ಮಾರ್ಪಟ್ಟಿದೆ'[3] ಎಂಬ ವಿದ್ವಾಂಸರ ಅಭಿಪ್ರಾಯ ಔಚಿತ್ಯಪೂರ್ಣವಾಗಿದೆ.

**ಪಂಪಭಾರತದ ನಾಯಕ:**

ಮೂಲ ಮಹಾಭಾರತ ಮಹಾಕಾವ್ಯವು ಚಂದ್ರವಂಶದ ಎಲ್ಲಾ ರಾಜಮನೆತನದ ಇತಿಹಾಸವನ್ನು ಒಳಗೊಂಡಿದೆ. 'ಮಹಾಭಾರತದಲ್ಲಿ ಬರುವ ಪ್ರಮುಖ ವ್ಯಕ್ತಿಗಳಲ್ಲಿ ಒಬ್ಬೊಬ್ಬನೂ ಒಂದೊಂದು ಕಥಾಪ್ರಸಂಗದಲ್ಲಿ ನಾಯಕನಾಗಿಯೇ ಕಂಡು ಬರುತ್ತಾನೆ. ಒಟ್ಟಾರೆ ಕಥೆಯಲ್ಲಿ ನಿರ್ಧಿಷ್ಟವಾಗಿ ಇವನೇ ನಾಯಕನೆಂದು ಯಾರನ್ನೂ ಹೇಳಲಾಗದು. ಒಂದು ವೇಳೆ ಹೇಳಬೇಕಾದರೆ ಪಾಂಡವರನ್ನು ನಾಯಕರೆಂದು ದುರ್ಯೋಧನಾದಿ ಕೌರವರನ್ನು ಪ್ರತಿನಾಯಕರೆಂದು ಹೇಳಬೇಕಾಗುತ್ತದೆ. ಆದರೆ ಭಾರತದ ಸಂಗ್ರಹವನ್ನು ದೃಷ್ಟಿಯಲ್ಲಿಟ್ಟು ಪಂಪನಿಗೆ ಅದು ಅಷ್ಟೊಂದು ಸಮಂಜಸವಾಗಿ ತೋರಲಿಲ್ಲ. ಹಾಗಾಗಿ ಪಾಂಡವರಲ್ಲಿ ಒಬ್ಬನನ್ನು ನಾಯಕನನ್ನಾಗಿಯೂ ಕೌರವರಲ್ಲಿ ಒಬ್ಬನನ್ನು ಪ್ರತಿನಾಯಕನನ್ನಾಗಿಯೂ ಆರಿಸಕೊಳ್ಳುವ ನಿರ್ಧಾರ ಮಾಡಿದನೆಂದು'[4] ಡಿ.ಎಲ್.ಎನ್.ರವರು ಹೇಳಿರುವುದು ಉಚಿತವಾಗಿಯೇ ಇದೆ. ಮಹಾಭಾರತದಲ್ಲಿ ವ್ಯಾಸರು ಪಾಂಡವಮಧ್ಯಮನಾದ ಅರ್ಜುನನಿಗೆ ಸ್ವಲ್ಪ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಿರುವುದನ್ನು ಕಂಡ ಪಂಪನಿಗೆ ಅರ್ಜುನನನ್ನೇ ತನ್ನ ಕಾವ್ಯಕ್ಕೆ ನಾಯಕನನ್ನಾಗಿಸುವ ನಿರ್ಧಾರ ಸರಿಯೆನಿಸಿತು. ಕೌರವ ಪಕ್ಷದಲ್ಲಿ ಅರ್ಜುನನಿಗೆ ಪ್ರತಿಸ್ಪರ್ಧಿಯಾಗಿದ್ದ ಕರ್ಣನೊಬ್ಬನನ್ನೇ ಪ್ರತಿನಾಯಕನನಾಗಿ ಚಿತ್ರಿಸಿರುವುದನ್ನು ಕಾಣಬಹುದು.

ಪಂಪ ಅರ್ಜುನನ್ನು ತನ್ನ ಕಾವ್ಯದ ನಾಯಕನನ್ನಾಗಿಸಿಕೊಂಡಿದರಿಂದ ಕಾವ್ಯದುದ್ದಕ್ಕೂ ಅವನ ಪಾತ್ರಕ್ಕೆ ಆದ್ಯತೆ ನೀಡಿ ಅದಕ್ಕೆ ಪೂರಕವಾಗುವ ಸನ್ನಿವೇಶ ಹಾಗೂ ಪ್ರಸಂಗಗಳನ್ನು ವಿಸ್ತರಿಸಿ ಉಳಿದ ಭಾಗಗಳನ್ನು ಸಂಗ್ರಹಿಸಿಯೇ ತೇಲಿಸಿಯೇ ಕಥೆಯನ್ನು ಮಾರ್ಪಾಡು ಮಾಡಿಕೊಂಡಿದ್ದಾನೆ. ಉಪಾಖ್ಯಾನಗಳಲ್ಲಿ ಒಂದನ್ನು ಕುಂದಲೀಯದಂತೆ ಸಮಸ್ತ ಭಾರತವನ್ನು ಹೇಳಬೇಕೆಂದು ನಿರ್ಧರಿಸಿದ

ಪಂಪನಿಗೆ ಆ ಕಾರ್ಯ ಅಷ್ಟು ಸರಳವಾಗಿಲ್ಲದಿದ್ದರೂ ತನ್ನ ಪ್ರತಿಭಾ ಸಾಮರ್ಥ್ಯದಿಂದ ಅದನ್ನು ನಿರ್ವಹಿಸಿ ಯಶಸ್ಸು ಸಾಧಿಸಿದ್ದಾನೆ.

ಪಂಪಭಾರತ ಕಾವ್ಯವು ಅರ್ಜುನನ ಜನನದಿಂದ ಆರಂಭವಾಗಿ ಅರ್ಜುನನ ಪಟ್ಟಾಭಿಷೇಕದಿಂದ ಮುಕ್ತಾಯವಾಗುತ್ತದೆ. ಪಾರ್ಥನಿಗಿಂತ ಹಿರಿಯರಾಗಿದ್ದ ಧರ್ಮರಾಯ ಭೀಮರಿದ್ದರೂ ಪಂಪ ಅರ್ಜುನನಿಗೇ ರಾಜ್ಯಾಭಿಷೇಕ ಮಾಡಿಸುತ್ತಾನೆ. ವ್ಯಾಸಭಾರತದ ಪರ್ವ ವಿಭಾಗಗಳನ್ನನುಸರಿಸದೆ ಕವಿ ಅರ್ಜುನನ ಚರಿತ್ರೆಗೆ ಸಂಬಂಧಿಸಿದ ಮುಖ್ಯಸಂಗತಿಗಳನ್ನು ಗಮನದಲ್ಲಿಟ್ಟುಕೊಂಡು ಆಶ್ವಾಸಗಳನ್ನು ವಿಂಗಡಿಸಿದ್ದಾನೆ. ಅಲ್ಲದೆ ಆಶ್ವಾಸಾಂತ್ಯಕ್ಕೆ ಅರ್ಜುನನ ಸಂಗತಿ ಬಾರದೆಡೆಗಳಲ್ಲೂ ಹೇಗಾದರೂ ಅವಕಾಶ ಕಲ್ಪಿಸಿಕೊಂಡು ಅರ್ಜುನನ ಪರಾಕ್ರಮದ ವರ್ಣನೆಯನ್ನು ಮಾಡಿಯೇ ಆಶ್ವಾಸವನ್ನು ಅಂತ್ಯಗೊಳಿಸುತ್ತಾನೆ. ಪ್ರತಿಯೊಂದು ಆಶ್ವಾಸದ ಆದಿ ಹಾಗೂ ಅಂತ್ಯದಲ್ಲಿ ಒಂದೊಂದು ಪದ್ಯದಲ್ಲಿ ಅರ್ಜುನನ ಗುಣಗಾನ ಬರುವುದುಂಟು. ಉಳಿದ ಕಥಾಭಾಗಕ್ಕಿಂತ ಅರ್ಜುನನಿಗೆ ಸಂಬಂಧಿಸಿದ ಕಥಾಭಾಗಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿದ್ದಾನೆ. ಧರ್ಮರಾಯ, ಭೀಮರ ಜನನ ವರ್ಣನೆಗೆ ನಾಲ್ಕೈದು ಪದ್ಯಗಳನ್ನು ಬಳಸಿದ್ದರೆ, ಅರ್ಜುನನ ಜನನ ವರ್ಣನೆ ವಿಸ್ತಾರವಾಗಿ ಬರುತ್ತದೆ. ಪಂಪ ದೊಡ್ಡ ದೊಡ್ಡ ಕಥಾಭಾಗಗಳನ್ನೇ ಹತ್ತಾರು ಮಾತುಗಳಲ್ಲಿ, ವಾಕ್ಯಗಳಲ್ಲಿ ಅಡಕಗೊಳಿಸಿದ್ದಾನೆ. ಅರ್ಜುನ ಸುಭದ್ರೆಯರ ಪ್ರಣಯವನ್ನು ಮಾತ್ರ ಅತಿ ವಿಸ್ತಾರವಾಗಿ ವರ್ಣಿಸಿದ್ದಾನೆ. ಅರ್ಜುನನೇ ಕಥಾನಾಯಕನಾಗಿ ಅವನ ವಿಕ್ರಮವನ್ನೂ ವಿಜಯಂವನ್ನೂ ವರ್ಣಿಸುವುದೇ ಪಂಪನ ಗುರಿಯಾದುದರಿಂದ ಅವನ ಕಾವ್ಯ ವಿಕ್ರಮಾರ್ಜುನ ವಿಜಯಂವಾಗಿದೆ.

ಕನ್ನಡದಲ್ಲಿ ಸಂಗ್ರಹವಾದ ಸಮಸ್ತಭಾರತವಷ್ಟೇ ಪಂಪನ ಉದ್ದೇಶವಾಗಿರಲಿಲ್ಲ. ಅವನಿಗೆ ತನ್ನ ಆಶ್ರಯದಾತನಾದ ಅರಿಕೇಸರಿಯನ್ನು ಹೊಗಳಬೇಕೆಂಬ ಮತ್ತೊಂದು ಉದ್ದೇಶವೂ ಇತ್ತು. 'ಅರಿಕೇಸರಿಗೂ ಪಂಪನಿಗೂ ಇದ್ದ ಮೈತ್ರಿ ಆಶ್ರಯದಾತ ಮತ್ತು ಆಶ್ರಿತರ ಸಂಬಂಧ ಮಾತ್ರವಾಗಿರದೆ, ಆತ್ಮೀಯತೆಯಿಂದ ಕೂಡಿದ ಸ್ನೇಹ ಸಂಬಂಧವಾಗಿತ್ತು'[2] ಎಂದು ತೀ.ನಂ.ಶ್ರೀ. ಹೇಳಿರುವುದು ಸಮಂಜಸವಾಗಿಯೇ ಇದೆ. ತನಗೆ ಆಶ್ರಯವಿತ್ತು ಗೌರವ ತೋರಿಸಿದಂತಹ ಅಸದೃಶವಾದ ಸ್ನೇಹಕ್ಕೆ ಪ್ರತಿಯಾಗಿ ಪಂಪ ತನ್ನ ಕಾವ್ಯದಲ್ಲಿ ಅರಿಕೇಸರಿಯನ್ನು ಕೀರ್ತಿಸಿ ಅವನಿಗೆ ಕೃತಜ್ಞತೆಯ ಕಾಣಿಕೆಯನ್ನು ಅರ್ಪಿಸಲು ಬಯಸಿದ. ತನ್ನ ಒಡೆಯನ ಕೀರ್ತನೆಗಾಗಿ ಅವನು ಪ್ರತ್ಯೇಕವಾದ ಸ್ವತಂತ್ರ ಕೃತಿಯೊಂದನ್ನೇ ಬರೆಯಬಹುದಾಗಿತ್ತಾದರೂ ಹಾಗೆ ಬರೆದ ಕೃತಿ ಧೀರ್ಘಕಾಲ ಉಳಿಯಲಾರದೆಂದು ಅವನಿಗನಿಸಿರಬೇಕು. ಮಹಾಭಾರತವಾದರೆ ನಿರಂತರವಾಗಿ ನಿತ್ಯನೂತನವಾಗಿ ಜನಾನುರಾಗಕ್ಕೆ

ಪಾತ್ರವಾಗಿರುವ ಕೃತಿ. ತನ್ನ ಒಡೆಯನ ವಿಷಯವನ್ನು ಅದರ ಕಥೆಯೊಡನೆ ಮಿಶ್ರಗೊಳಿಸಿಬಿಟ್ಟರೆ ಶಾಶ್ವತವಾಗಿ ಉಳಿಯುವುದೆಂದು ಭಾವಿಸಿರಬೇಕು. ಅಲ್ಲದೆ ತನ್ನ ಮೊದಲ ಕೃತಿಯಾದ 'ಆದಿಪುರಾಣ' ಧಾರ್ಮಿಕ ಕಾವ್ಯವಾದುದರಿಂದ ಅದರಲ್ಲಿ ಅನ್ಯ ಧರ್ಮೀಯನಾದ ಅರಿಕೇಸರಿಯ ಲೌಕಿಕ ವಿಷಯವನ್ನು ಪ್ರಸ್ತಾಪಿಸಲು ಅವಕಾಶ ದೊರೆಯಲಿಲ್ಲ. ಮಹಾಭಾರತ ಕಥೆ ಪಂಪನಿಗೆ ಕೇವಲ ಲೌಕಿಕವೆನಿಸಿದುದರಿಂದ ಅದರಲ್ಲಿ ಅವನ ವಿಷಯವನ್ನು ಒಡಮೂಡಿಸಲು ಹಿಂಜರಿಯಲಿಲ್ಲ. ಹಾಗಾಗಿ ವಿಕ್ರಮಾರ್ಜುನ ವಿಜಯದಲ್ಲಿ ಅರಿಕೇಸರಿಯನ್ನು ಅಭೇದ ಕಲ್ಪನೆಯಿಂದ ಅರ್ಜುನನಿಗೆ ಸಮೀಕರಿಸಿ ಅವನ ಬಿರುದುಗಳನ್ನೆಲ್ಲ ಅರ್ಜುನನಿಗೆ ಆರೋಪಿಸಿ ಅವನ ಸಾಹಸದ ಮಹಿಮೆಯನ್ನು ಅರ್ಜುನನ ಹಿರಿಮೆಗರಿಮೆಗಳೊಡನೆ ಸಮನ್ವಯಗೊಳಿಸಿದ್ದಾನೆ.

ಐತಿಹಾಸಿಕ ದೃಷ್ಟಿಯಿಂದ ಗಮನಿಸಿದರೆ ಪಂಪ ಬಾಳಿಬದುಕಿದ ಕಾಲ ವೀರಯುಗವಾದ್ದರಿಂದ ಅರ್ಜುನನ ಕಥೆಯೊಡನೆ ಅರಿಕೇಸರಿಯ ಕಥೆಯನ್ನು ಹೆಣೆಯಬೇಕಾದರೆ ಪಂಪನ ಕಾಲದ ಚಾರಿತ್ರಿಕ ಸಂಗತಿಗಳ ಪ್ರಭಾವವೂ ಕಾರಣವೆನ್ನಬಹುದು. ಆಗ ಕರ್ನಾಟಕದಲ್ಲಿ ಒಂದೆಡೆಯಲ್ಲಿ ರಾಷ್ಟ್ರಕೂಟರು, ಮತ್ತೊಂದೆಡೆಯಲ್ಲಿ ಪೂರ್ವಚಾಲುಕ್ಯರು ಆಳುತ್ತಿದ್ದರು. ಗಂಗರು ಹಾಗೂ ಚೋಳರ ನಡುವೆ ಆಗಾಗ್ಗೆ ಕದನಗಳು ನಡೆಯುತ್ತಿದ್ದವು. ಹಾಗೆಯೇ ರಾಷ್ಟ್ರಕೂಟರು ಮತ್ತು ಚಾಳುಕ್ಯರ ನಡುವೆ ಯುದ್ಧಗಳಾಗುತ್ತಿದ್ದವು. ಅಂದಿನ ಪ್ರಜೆಗಳಲ್ಲಿ ಮಹಾಭಾರತಕಾಲದಲ್ಲಿದ್ದಂತೆಯೇ ಸಾಹಸಪ್ರಿಯತೆ ಶೌರ್ಯೋತ್ಸಾಹಗಳು ನೆಲಸಿದ್ದವು. 'ಪ್ರತಿಭಟಿಸಿ ನಿಂತ ಶತ್ರು ಸಮೂಹವನ್ನು ಮುರಿದು ನಾಶಮಾಡದೆಯೂ ಶರಣು ಹೊಕ್ಕವರನ್ನು ಕಾಪಾಡದೆಯೂ ಸತ್ಪಾತ್ರದಲ್ಲಿ ದಾನಮಾಡದೆಯಾ ಬಾಳುವ ಅಲ್ಪಮನುಷ್ಯ ಅಜಾಂಡವೆಂಬ ಅತ್ತಿಯ ಹಣ್ಣಿನಲ್ಲಿರುವ ಹುಳುವಲ್ಲದೆ ಮನುಷ್ಯನೆನಿಸಿಕೊಳ್ಳುವನೇ' ಎನ್ನುವುದು ಆಗಿನ ವೀರ ಜೀವನದ ಧ್ಯೇಯವಾಗಿತ್ತು. ಪಂಪನು ಕವಿಯೂ ಕಲಿಯೂ ಆಗಿ ಪ್ರಸಿದ್ಧನಾಗಿದ್ದುದರಿಂದ ಅರಿಕೇಸರಿಯೊಡನೆ ಅನೇಕ ಯುದ್ಧಗಳಲ್ಲಿ ಭಾಗವಹಿಸಿ ಶತ್ರುನಾಯಕರನ್ನು ಮುರಿದೋಡಿಸಿ ಮಹಾಕಲಿಯೆಂದೂ ಹೆಸರು ಪಡೆದಿದ್ದ. ಅವನ ಆಶ್ರಯದಾತ ಅರಿಕೇಸರಿ ಒಬ್ಬ ಸಾಮಂತರಾಜನಾಗಿದ್ದರೂ ಮಹಾಪರಾಕ್ರಮಿಯಾಗಿದ್ದು ಅನೇಕ ಯುದ್ಧಗಳಲ್ಲಿ ವಿಜಯಶಾಲಿಯಾಗಿದ್ದ. ಅಲ್ಲದೆ ಅರಿಕೇಸರಿಯ ಶೌರ್ಯ ಪ್ರತಾಪಗಳನ್ನು ಕಂಡ ಪಂಪನಿಗೆ ಮಹಾಭಾರತದ ಅರ್ಜುನನ ನೆನಪಾಗಿರಬೇಕು. ಹಾಗಾಗಿ 'ಈ ಕಥೆಯೊಳ್ ತಗುಳ್ಚಿ ಪೋಲಿಪೊಡೆ ಎನಗಟ್ಟಿಯಾದುದು ಗುಣಾರ್ಣವಭೂಭುಜನಂ ಕಿರೀಟಿಯೊಳ್' ಎಂದು ಹೇಳಿದ್ದಾನೆ.

ಜೊತೆಗೆ ಅರಿಕೇಸರಿಯ ಜೀವನ ಚರಿತ್ರೆಯಲ್ಲಿ ಕಂಡುಬರುವ ಕೆಲವು ಘಟನೆಗಳು, ಸನ್ನಿವೇಶಗಳು ಮಹಾಭಾರತದ ಅರ್ಜುನನ ಪಾತ್ರಕ್ಕೆ ಹೊಂದಿಕೊಳ್ಳುತ್ತವೆ. ರಾಷ್ಟ್ರಕೂಟ ವಂಶದವರಿಗೂ ಅವರ ಸಾಮಂತರಾಜರಾಗಿದ್ದ ಅರಿಕೇಸರಿಯ ವಂಶದವರಿಗೂ ಕೊಳುಕೊಡೆಯ ಸಂಬಂಧವಿತ್ತು. ಅರಿಕೇಸರಿಯು ಇಂದ್ರರಾಜನ ತೋಳತೊಟ್ಟಿಲಿನಲ್ಲಿ ಬೆಳೆದನೆಂದು ಪಂಪ ಹೇಳುವುದನ್ನು ನೋಡಬಹುದು.

**ಮಂದ್ರಾಂಭೋದಿಪರೀತ ಮ**
**ಹೀಂದ್ರರೊಳಿನ್ನೀಸುರೇಂದ್ರಭಾನುರ ಚಕ್ರದೊ**
**ಳಿಂದ್ರಂ ತಾನೆನೆ ಸಲೆನೆಗ**
**ಳ್ದಿಂದೇಂದ್ರನ ತೋಳೆ ತೊಟ್ಟಿಲಾಗಿರೆ ಬಳೆದಂ**
**(ಪ.ಭಾ. ೧-೪೪)**

ಅರಿಕೇಸರಿಯ ತಾಯಿಯೂ ರಾಷ್ಟ್ರಕೂಟವಂಶಕ್ಕೆ ಸೇರಿದವಳೆಂದು ತೋರುತ್ತದೆ. ರಾಷ್ಟ್ರಕೂಟರು ಯದುವಂಶದವರಾದ್ದರಿಂದ ಅರಿಕೇಸರಿಯ ತಾಯಿಯೂ ಕುಂತಿಯಂತೆಯೇ ಯದುವಂಶೀಯಳಾದಳು. ಅರಿಕೇಸರಿ ರಾಷ್ಟ್ರಕೂಟರ ಮೂರನೆಯ ಇಂದ್ರರಾಜನ ಮಗಳಾದ ರೇವಕನಿರ್ಮಡಿ (ಲೋಕಾಂಬಿಕೆ)ಯನ್ನು ಮದುವೆಯಾಗಿದ್ದ. ಲೋಕಾಂಬಿಕೆಯು ಸುಭದ್ರೆಯಂತೆ ಯದುವಂಶೀಯಳು. ಅರ್ಜುನನಂತೆ ಅರಿಕೇಸರಿಯೂ ಲೋಕಾಂಬಿಕೆಯನ್ನು ಅವಳ ಬಂಧುಗಳ ಇಚ್ಛೆಗೆ ವಿರೋಧವಾಗಿ ಅಪಹರಿಸಿ 'ಪ್ರಿಯಗಳ್ಳ'ನೆನಿಸಿಕೊಂಡಿರಬೇಕು. ಈ ಎಲ್ಲಾ ಕಾರಣಗಳೇ ಪ್ರೇರಕವಾಗಿ ಪಂಪ, 'ಸಂದ ಅರ್ಜುನನೊಳ್ ಪೋಲ್ದಿ ಈ ಕಥಾಭಿತ್ತಿಯನುನಯದಿಂ ಪೇಟಲೆಂದೆತ್ತಿಕೊಂಡೆಂ' ಎಂದಿರುವುದನ್ನು ಗಮನಿಸಬಹುದು.

ಈ ಹಿನ್ನಲೆಯಿಂದ ಅರಿಕೇಸರಿಯನ್ನು ಅಭೇದ ಕಲ್ಪನೆಯಿಂದ ಹೋಲಿಸಿರುವುದರಿಂದ ಕಾವ್ಯದಲ್ಲಿ ತಲೆಯೆತ್ತುವ ಹಲವಾರು ಸಂಗತಿಗಳು ಪಂಪನ ಧ್ಯೇಯೋದ್ದೇಶವನ್ನು ಪ್ರಧಾನವಾಗಿ ಅವಲೋಕಿಸುವವರಿಗೆ ಅಸಮಂಜಸವೆನಿಸಲಾರದಾದರೂ ಮೂಲ ಮಹಾಭಾರತದ ಕಥೆ ಮತ್ತು ಪಾತ್ರ ಸಂಯೋಜನೆಗಳ ಹಿನ್ನಲೆಯಲ್ಲಿ ನೋಡಿದಾಗ ಸರಿಯೆನಿಸುವುದು. ಕೆಲವೆಡೆಗಳಲ್ಲಿ ಅರಿಕೇಸರಿಯ ಬಿರುದು ಬಾವಲಿಗಳನ್ನು ಪಂಪ ಅರ್ಜುನನಿಗೆ ಆರೋಪಿಸುವಾಗ ಅವು ಅವನಿಗೆ ಅನ್ವರ್ಥವಾಗುದರಿಂದ ಅಷ್ಟು ಆಭಾಸವಾಗಲಾರವು. ಹಾಗೆಯೇ ಅರ್ಜುನನಿಗೆ ಯೌವನ ಪ್ರಾಪ್ತವಾದಾಗ ಅವನ ರೂಪಲಾವಣ್ಯಗಳನ್ನು ವರ್ಣಿಸುವಲ್ಲಿ ಕವಿ ಅರಿಕೇಸರಿಯ ಅನೇಕ ಬಿರುದುಗಳನ್ನೆತ್ತಿಕೊಂಡು ಅವುಗಳಿಗೆ ಸಾಮಂಜಸ್ಯವನ್ನು ಕಲ್ಪಿಸಿರುವುದು ಅನಗತ್ಯವೆನಿಸಿದರೂ ಅಷ್ಟಾಗಿ ಅಸಹಜವೆನಿಸದು. ಆದರೆ ಅರ್ಜುನನ ಜನನವಾದಾಗ ದೇವಸಭೆಯೂ ಬ್ರಹ್ಮಸಭೆಯೂ ಒಟ್ಟುಗೂಡಿ

ಅಷ್ಟೋತ್ತರ ಶತನಾಮಗಳನ್ನಿಡುತ್ತಾ ಕುರುವಂಶದಲ್ಲಿ ಜನಿಸಿದನೆಂದೂ ಪ್ರಸಿದ್ಧನಾದ ಅರ್ಜುನನನ್ನು ಚಾಳುಕ್ಯ ವಂಶೋದ್ಭವನೆಂದೂ ಇಂದ್ರನೊಡನೆ ಅರ್ಧಾಸನವೇರಿದ ತ್ರಿಲೋಕವೀರನಾದ ಅವನನ್ನು 'ಸಾಮಂತ ಚೂಡಾಮಣಿ' ಎಂದು ವರ್ಣಿಸಿರುವುದು ಕೃಷ್ಣನು ದೌತ್ಯಕ್ಕಾಗಿ ಹಸ್ತಿನಾವತಿಗೆ ಬಂದಿದ್ದಾಗ ಅರ್ಜುನನ ಪರಾಕ್ರಮವನ್ನು ವರ್ಣಿಸುತ್ತಾ ಚಾಳುಕ್ಯಕುಳತಿಳಕನಪ್ಪ ವಿಜಯಾದಿತ್ಯಂಗೆ ಗೋವಿಂದರಾಜಂ ಮುಳಿಯೆ ತಳರದೆ ಪೆಱಗಿಕ್ಕಿ ಕಾದ ಶರಣಾಗತ ಜಳನಿಧಿಯ ಪೆಂಪುವುಗೊಜ್ಜಿಗನೆಂಬ ಸಕಲ ಚಕ್ರವರ್ತಿ ಬೆಸೆಸೆ ದಂಡುವಂದ ಮಹಾಸಾಮಂತರಂ ಮರಲಿಜಿದು ಗೆಲ್ದಿ ಸಾಮಂತ ಚೂಡಾಮಣಿಯ ಬೀರಮುಮಂ... ಮೊದಲಾಗಿ ಹೇಳುವುದು ಥಟ್ಟನೆ ಸಹೃದಯರ ಗಂಟಲನ್ನು ಹಿಂಡಿದಂತಾಗುತ್ತದೆ. ಅದರಲ್ಲೂ ಕರ್ಣನಿಂದ ಹೊಡೆತ ತಿಂದುಬಂದ ಧರ್ಮರಾಯ ನೊಂದು ಅರ್ಜುನನ ಪರಾಕ್ರಮವನ್ನು ಸಂದೇಹಿಸಿದಾಗ ಅವನನ್ನು ಸಮಾಧಾನ ಪಡಿಸುತ್ತಾ ಪಾಂಡು ಕುಂತಿಯರ ಮಗನೆಂದು ಪ್ರಖ್ಯಾತನಾದ ಅರ್ಜುನನೇ ತನ್ನ ಅಣ್ಣನ ಎದುರಿನಲ್ಲಿಯೇ 'ನರಸಿಂಗಂಗಂ ಜಾಕಬ್ಬರಸಿಗಮಳವೊದವೆ ಪುಟ್ಟಿ ಪುಟ್ಟಿಯಂ ಅರಿಕೇಸರಿಯನೆ ನೆಗಟ್ದು ಅರಾತಿಯ ಸರಿದೊರೆಗಂ ಬಂದೆನಪ್ಪೊಡಾಗಳ್‌ನಗರೇ' ಎನ್ನುವುದು ಓದುಗರಿಗೆ ದಿಗ್ಭ್ರಮೆಯನ್ನುಂಟು ಮಾಡುತ್ತದೆ. ಹಾಗೆಯೇ ಅಂತ್ಯದಲ್ಲಿ ಅರ್ಜುನನಿಗೆ ಪಟ್ಟಾಭಿಷೇಕವಾಗುವುದು ಅಷ್ಟಾಗಿ ಅಪ್ರಿಯವೆನಿಸುವುದಿಲ್ಲವಾದರೂ ಭಾರತ ಯುದ್ಧಕ್ಕೆ ಸ್ವಯಂ ಪ್ರೇರಕ ಶಕ್ತಿಯಾಗಿದ್ದು ದ್ಯೂತ ಪ್ರಸಂಗದಲ್ಲಿ ಮತ್ತು ಅರಣ್ಯವಾಸ ಅಜ್ಞಾತವಾಸಗಳಲ್ಲಿ ನಿರಂತರವಾಗಿ ಕಡುಕಷ್ಟ ದುಃಖವನ್ನೇ ಅನುಭವಿಸಿದ ದ್ರೌಪದಿಗೆ ಸುಖಪಡಬೇಕಾದ ಕಾಲದಲ್ಲಿ ಪಟ್ಟದ ರಾಣಿಯ ಪದವಿ ದೊರೆಯುವ ಬದಲು ಅನಾಯಾಸವಾಗಿ ಸುಭದ್ರೆಗೆ ದೊರೆಯುವುದು ಅಸಮರ್ಪಕವೆನಿಸುತ್ತದೆ.

**ಪಂಪನ ಕಲೆಗಾರಿಕೆ:**

ವ್ಯಾಸ ವಿರಚಿತವಾದ ಮಹಾಭಾರತವೊಂದು ವಿಶ್ವಕೋಶ ಸದೃಶವಾದ ಕೃತಿ. ಬೃಹತ್ತು ಹಾಗೂ ಮಹತ್ತು ಎರಡರಲ್ಲೂ ಅಪ್ರತಿಮವಾದದ್ದು. ಅದರದು ಸಂಕೀರ್ಣ ಸ್ವರೂಪವಾಗಿದ್ದ ಕಾವ್ಯ. ಪುರಾಣ, ಇತಿಹಾಸ, ಧರ್ಮಗ್ರಂಥ ಇತ್ಯಾದಿಗಳೆಲ್ಲವೂ ಆಗಿದ್ದು ಅದೊಂದು ಮೇರೆಯರಿಯದ ಅಗಾಧವಾದ ಒಂದು ಮಹದರಣ್ಯದಂತಿರುವ ಕಾವ್ಯ. ಅದರಲ್ಲಿ ಉಚಿತ, ಅನುಚಿತವ್ಯಾವುದೂ ಇಲ್ಲ. ಸಮಗ್ರದೃಷ್ಟಿಕೋನದಿಂದ ಪರಿಭಾವಿಸುವವರಿಗೆ ಎಲ್ಲವೂ ಉಚಿತವೇ ಆಗಿದೆ. ಆದರೆ ಪರಿಮಿತದೃಷ್ಟಿಯಿಂದ ನೋಡುವವರ ದೃಷ್ಟಿಕೋನಕ್ಕನುಗುಣವಾಗಿ ಕೆಲವುಭಾಗ ಉಚಿತವಾಗಿಯೂ, ಉಳಿದ ಭಾಗ ಅನುಚಿತವಾಗಿಯೂ ಕಾಣಬಹುದು. ಪಂಪನ ಪರಿಮಿತವಾದ ದೃಷ್ಟಿಗೆ ಉಚಿತವೆನಿಸಿದ ಭಾಗಗಳನ್ನು ಮಾತ್ರ ಅವನ ಕಾವ್ಯದಲ್ಲಿ ಕಾಣಬಹುದಾಗಿದೆ. ಹಾಗಾದ ಮಾತ್ರಕ್ಕೆ ವಿಕ್ರಮಾಜುನ ವಿಜಯ

ಆ ಭಾಗಗಳ ಪ್ರತಿಕೃತಿಯಾಗಲೀ ಯಥಾವತ್ತಾದ ಅನುವಾದಿತವಾಗಲೀ ಅಲ್ಲ. ಆ ಭಾಗಗಳು ಪಂಪನ ಪ್ರತಿಭೆಯ ಪ್ರಭಾವಕ್ಕೊಳಗಾಗಿ ಹೆಚ್ಚು ರಸಾನ್ವಿತವಾಗಿ ಹೊರಹೊಮ್ಮಿದೆ. ಮಹಾಭಾರತದ ಉದ್ದಕ್ಕೂ ಅಲ್ಲಲ್ಲಿ ಇಲ್ಲೇನೋ ಕೊರತೆಯಿದೆಯೇನೋ ಸಾಲದು ಎಂದು ಯೋಚಿಸುತ್ತಾ ನಿಲ್ಲುವಂತಹ ಎಡೆಯಲ್ಲಿ ಪಂಪ ತನ್ನ ಪ್ರತಿಭೆಯ ಕುಂಚದಿಂದ ಅಲ್ಲೊಂದು ಇಲ್ಲೊಂದು ರಸೋದ್ದೀಪನಕಾರೀ ರೇಖೆಯನ್ನೆಳೆದು ಮುಕ್ತಾಯದ ಮೆರುಗಿಟ್ಟು ಪರಿಪೂರ್ಣತೆಯನ್ನು ಸಾಧಿಸುತ್ತಾನೆ.

ಪಂಪನಲ್ಲಿ ಸೂರ್ಯೋದಯ, ಸೂರ್ಯಾಸ್ತಗಳಾಗಲೀ, ಚಂದ್ರೋದಯಗಳು, ಕತ್ತಲು ಹರಿದು ಬೆಳಕಾಯಿತು, ದಿನ ಕಳೆದು ಇರುಳಾಯಿತ್ತೆಂಬ ಅಂಶವನ್ನು ಸೂಚಿಸುವುದಕ್ಕೆ ಮಾತ್ರವೇ ಬಳಸಿಲ್ಲ. ಅವು ಕಥಾಜೀವನದೊಡನೆ ಬೆರೆತು ಅರ್ಥಪೂರ್ಣವಾಗಿ ಮತ್ತು ಧ್ವನಿಪೂರ್ಣವಾಗಿ ಬಂದಿವೆ. ಪಾಂಡವರು ಹಸ್ತಿನಾವತಿಯಿಂದ ವಾರಣಾವತಕ್ಕೆ ಹೊರಡಬೇಕಾದ ದಿನ ಸೂರ್ಯ 'ನೀನು ಉದಿತೋದಿತನ್ನೈ ನಿನಗೆ ಉದಯದ ಮೇಲೆ ಉದಯ' ಎಂದು ಪ್ರಸಿದ್ಧನಾದ ಅರ್ಜುನನಿಗೆ ಅಭ್ಯುದಯವನ್ನೇ ಕೋರುವ ಹಾಗೆ ಉದಯಾಚಲದ ಮೇಲಿನಿಂದ ಉದಿಸಿದನಂತೆ (೨–೬೩), ಬಕವಧೆಯ ದಿನ 'ನೇಸಱ್ ಮೂಡಿದುದು ಬಕಂಗೆ ಮಿಟ್ಟು ಮೂಡುವ ತೆಱದಿಂ' (೩–೨೭). ವ್ಯಾಯಾಮ ರಂಗದಲ್ಲಿ ಯುದ್ಧವಿದ್ಯಾ ಪ್ರದರ್ಶನ ಮುಗಿದ ಮೇಲೆ ಕೌರವ ಪಾಂಡವರೆಲ್ಲರೂ ಅವರವರ ಬೀಡಿಗೆ ಹಿಂತಿರುಗಿದ ಮೇಲೆ ಆದ ಚಂದ್ರೋದಯವನ್ನು ನೋಡಿದರೆ 'ಪ್ರಸಿದ್ಧವಾದ ತನ್ನ ವಂಶವನ್ನು ವೃದ್ಧಿಗೊಳಿಸುವ ಗುಣಾರ್ಣವನೊಡನೆ ನಿಷ್ಕಾರಣವಾಗಿ ಸೆಣಸಲೆಂದಿದ್ದ ದುರ್ಯೋಧನನ ಮೇಲೆ ಮುಳಿಸಿನಿಂದ ಚಂದ್ರನು ಕಣ್ಣನ್ನು ಕೆಂಪಗೆ ಮಾಡಿಕೊಂಡನೋ ಎನ್ನುವಂತಿತ್ತಂತೆ' (೨–೮೮). ಇವೇ ಅಲ್ಲದೆ ಉಳಿದೆಡೆಗಳಲ್ಲಿ ಬರುವ ವರ್ಣನೆಗಳಲ್ಲಿ ಬರುವ ವರ್ಣನೆಯೂ ಸುಂದರವಾಗಿದೆ.

ಪಂಪ ಮಹಾಕವಿಯ ನಿಸರ್ಗ ವರ್ಣನೆಯಂತೆಯೇ ಅವನ ವ್ಯಕ್ತಿ ಚಿತ್ರಣದ ವರ್ಣನೆಯೂ ಅತ್ಯಂತ ಮನೋಹರವಾಗಿದೆ. ಕುಂತಿಯ ಪುತ್ರದೋಹಳ ಗರ್ಭವತಿಯಾದ ಕುಂತಿಯ ರೂಪಲಾವಣ್ಯ, ಪಾಂಡುವಿನ ನಿಧನ, ಮಾದ್ರಿಯ ದುಃಖ, ಪಾಂಡವರ ಯೌವನಾವಸ್ಥೆ, ದ್ರುಪದನ ಮೇಲೆ ದ್ರೋಣನ ಸೇಡು, ಕರ್ಣನ ತ್ಯಾಗದ ವೀರದ ಮಾತುಗಳು, ಸುಭದ್ರಾರ್ಜುನರ ಕಣ್ಬೇಟ, ವಿರಹ ಮತ್ತು ಶೃಂಗಾರ. ದ್ರೌಪದಿಯ ಕೇಶಾಪಕರ್ಷಣ ಪ್ರಸಂಗಗಳಲ್ಲಿ ಭೀಮಾರ್ಜುನರ ರೋಷಾವೇಶ, ಕೀಚಕನ ಅದಮ್ಯ ಮನೋಜ ಪರಿತಾಪ, ಕದನತ್ರಿಣೇತ್ರನ ಯುದ್ಧ ವೈಖರಿ ಮುಂತಾದ ಪಾತ್ರಗಳ ಮನದಲ್ಲಿ ಉದಿಸುವ ವಿವಿಧ ಭಾವಾವೇಶಗಳನ್ನು ಕವಿ ರಸಾರ್ದ್ರವಾಗುವಂತೆ ಮಾರ್ಮಿಕವಾಗಿ ಚಿತ್ರಿಸಿದ್ದಾನೆ.

ಕಥೆಯಲ್ಲಿ ಬರುವ ಕೆಲವು ಸನ್ನಿವೇಶ ಹಾಗೂ ಪ್ರಸಂಗಗಳನ್ನು ಪಂಪ ಅಲ್ಪಸ್ವಲ್ಪ ಬದಲಾವಣೆಗೆಯ ಮೂಲಕ ಹೆಚ್ಚು ಸುಂದರಗೊಳಿಸಿ ರಸಪರಿಪೋಷಕವಾಗುವಂತೆ ಪರಿವರ್ತಿಸಿದ್ದಾನೆ. ವ್ಯಾಸಭಾರತದಲ್ಲಿ ಪಾಂಡು-ಕಿಂದಮನಿಂದ ಶಾಪಗ್ರಸ್ತನಾಗಿ ತಪಸ್ಸನ್ನಾಚರಿಸುತ್ತಾ ಶತಶೃಂಗದಲ್ಲಿ ನೆಲೆಸಿರುವಾಗ ತನಗೆ ಪುತ್ರಸಂತಾನವಿಲ್ಲದುದಕ್ಕೆ ಸ್ವಯಂ ದುಃಖಿಸುತ್ತಾನೆ. ಗಾಂಧಾರಿ ವ್ಯಾಸರ ಅನುಗ್ರಹದಿಂದ ಗರ್ಭಿಣಿಯಾದ ಮೇಲಂತೂ ಅವನ ಪುತ್ರಾಪೇಕ್ಷೆ ಇಮ್ಮಡಿಗೊಳ್ಳುತ್ತದೆ. ಪಿತೃಋಣಗಳನ್ನು ತೀರಿಸುವುದಕ್ಕಾಗಿ ತನಗೆ ಸಮಾನ ಕುಲದ ಜ್ಞಾತಿಯಿಂದಾಗಲೀ ಉತ್ತಮ ದ್ವಿಜರಿಂದಾಗಲೀ ಸಂತಾನ ಪಡೆಯುವಂತೆ ಕುಂತಿಯನ್ನು ಒತ್ತಾಯ ಪಡಿಸುತ್ತಾನೆ. ಆದರೆ ಜಿತೇಂದ್ರಿಯನಾಗಿ ಬ್ರಹ್ಮರ್ಷಿಯ ಸಮಾನನಾಗಿದ್ದ ಪಾಂಡು ಸಂತಾನಕ್ಕಾಗಿ ಪ್ರಲಾಪಿಸಿದನೆಂದರೆ ಅಸಹಜವೆನಿಸುತ್ತದೆಂದು ಅದರ ಬದಲು ಹೆಣ್ಣಿಗೆ ಸಂತಾನಾಪೇಕ್ಷೆಯಾಗುವುದು ಸಹಜ. ಹಾಗಾಗಿ ಪಂಪ ಆ ಸನ್ನಿವೇಶವನ್ನು ಕೊಂಚ ಬದಲಾಯಿಸಿ ಕುಂತಿಯೇ ಅಪೇಕ್ಷೆ ಪಡುವಂತೆ ಮಾಡಿರುವುದು ಔಚಿತ್ಯಪೂರ್ಣವಾಗಿದೆ. ಅದರಲ್ಲೂ ಓರಗಿತ್ತಿಯಾದ ಗಾಂಧಾರಿ ಗರ್ಭಿಣಿಯಾಗಿರುವಾಗ ತಾನು ಆಗದಿದ್ದರೆ ಅವಳಿಗೆಷ್ಟು ವ್ಯಥೆಯಾಗಿರಬೇಕು. ಪಂಪಭಾರತದಲ್ಲಿ ಅವಳ ಮಕ್ಕಳಿಲ್ಲದ ವ್ಯಥೆ ನಿಜವಾಗಿಯೂ ಮರ್ಮಸ್ಪರ್ಶಿಯಾಗಿದೆ. ಯುದ್ಧದಲ್ಲಿ ಶತ್ರುರಾಜರನ್ನು ತರಿದೊಟ್ಟುವಂತಹ ಬೇಡುವವರಿಗೆ ಕಸದ ಲೆಕ್ಕದಿಂದ ಧನವನ್ನು ದಾನಮಾಡುವಂತಹ ಪರಾಕ್ರಮವನ್ನು ದಿಗಂತಕ್ಕೆ ಹರಡುವಂತಹ ರಾಜ ಮಕ್ಕಳನ್ನು ಕೊಡದೆ 'ನಾಡೆನೋಯಿಸಿದಪ್ಪುದು ಇಕ್ಷುಪುಷ್ಪವೊಲ್ ಎನ್ನಯ ನಿಷ್ಫಲ ಪುಷ್ಪದರ್ಶನಂ' ಎಂದು ಚಿಂತಿಸುತ್ತಾಳೆ.

ವ್ಯಾಸಭಾರತದಲ್ಲಿ ಬರುವ ಪಾಂಡುರಾಜನ ನಿಧನದ ಸನ್ನಿವೇಶದಲ್ಲಿ ಪಂಪ ತುಸು ಬದಲಾವಣೆಯೊಂದಿಗೆ ಮತ್ತಷ್ಟು ಮನಮೋಹಕವಾಗಿ ಚಿತ್ರಿಸಿದ್ದಾನೆ. ಮಾದ್ರಿಯ ತಾರುಣ್ಯಭರಿತವಾದ ಗರ್ವ, ಕ್ರೀಡಾನುಶೀಲತೆ, ಶೃಂಗಾರಪ್ರಿಯತೆ ಎಂತಹ ಸಂಯಮಶಾಲಿಯ ಮನಸ್ಸನ್ನೂ ಚಂಚಲಗೊಳಿಸುವಂತಹ ಮಾದಕತೆಯುಳ್ಳ ಅವಳನ್ನು ಪಾಂಡುರಾಜ ಆಕಸ್ಮಿಕವಾಗಿ ಉದ್ಯಾನವನದಲ್ಲಿ ನೋಡಿ ವಿವಶನಾಗಿ ಮೃತ್ಯುದೇವತೆಯನ್ನಪ್ಪಿದಂತೆ ಅವಳನ್ನಪ್ಪಿ ನಿಧನನಾಗುವುದನ್ನು ಪಂಪ ಸಹಜ ಸುಂದರವಾಗಿಸಿದ್ದಾನೆ.

ವ್ಯಾಸಭಾರತದಲ್ಲಿ ದೇವೇಂದ್ರನಿಗೆ ಖಾಂಡವವನದಲ್ಲಿ ತನ್ನ ಸ್ನೇಹಿತನಾದ ತಕ್ಷಕ ಅವನ ಪರಿವಾರದೊಡನೆ ಆ ವನದಲ್ಲಿ ತನ್ನ ಸಂರಕ್ಷಣೆಗೊಳಿಗಾಗಿದ್ದುದರಿಂದ ಹೆಚ್ಚು ಆಸಕ್ತಿ ವಹಿಸುವುದಕ್ಕೆ ಕಾರಣವಾಗುತ್ತದೆ. ಅದೊಂದು ಬರೀ ವ್ಯಾವಹಾರಿಕವಾದ ಕಾರಣವಾದರೆ ಪಂಪ ಅದನ್ನೇ

ಮನೋಜ್ಞಗೊಳಿಸಿದ್ದಾನೆ. ಪಂಪನ ಇಂದ್ರನಿಗೆ ಆ ವನದಲ್ಲಿ ಸಹಜತೆಗಿಂತ ಮಿಗಿಲಾದ ಪ್ರೀತಿಯಿತ್ತು. ಆ ವನವನ್ನು ತನ್ನ ಸಹಧರ್ಮಿಣಿಗಿಂತಲೂ ಹೆಚ್ಚೆಂದು ಪರಿಭಾವಿಸಿ ಸಂರಕ್ಷಿಸುತ್ತಿದ್ದೆ. ಒಮ್ಮೆ ಶಚೀದೇವಿ ಸುತ್ತಾಡಿಕೊಂಡು ಬಂದು ವನವನ್ನು ನೋಡಿ ಹೂಬಿಟ್ಟ ಮಾವಿನ ಮರವನ್ನು ನೆಮ್ಮಿ ಬೆಳೆದಿದ್ದ ಅಶೋಕವಲ್ಲರಿಯ ಚಿಗುರೊಂದನ್ನು ಕೊಯ್ದು ಪ್ರೀತಿಯಿಂದ ತನ್ನ ಸೋರ್ಮುಡಿಯಲ್ಲಿ ಸಿಕ್ಕಿಸಿಕೊಳ್ಳಲು ಇಂದ್ರನು ಆ ಕ್ಷಣವೇ ಅವಳನ್ನು ತಡೆದನಂತೆ. ಇದರಿಂದ ಇಂದ್ರನಿಗೆ ಆ ವನದ ಮೇಲಿದ್ದ ಮಮತೆ ಪ್ರೀತಿ ಎಷ್ಟೆಂದು ಅರಿವಾಗದೇ ಇರದು. ವಿರಾಟನ ಪತ್ನಿಯಾದ ಸುದೇಷ್ಣೆಯ ಪಕ್ಕದಲ್ಲಿದ್ದ ದ್ರೌಪದಿಯನ್ನು ಕಂಡ ಕಾಮಜ್ವರಪೀಡಿತನಾದ ಕೀಚಕ 'ಆವುಪಾಯದೊಳಾದೊಡಂ ನೆರೆದಲ್ಲದಿನ್ನಿರೆನೀಕೆಯೊಳ್' ಎಂದು ನಿರ್ಧರಿಸುತ್ತಾನೆ. ಅನಂತರ ಸಂಕೇತಸ್ಥಾನದಲ್ಲಿ ಅವನನ್ನೆದುರಿಸಿದ ಭೀಮಸೇನ ಅವನನ್ನು ಬಳೆಯ ಪೇಟಿನಾನೆ ಮೆಟ್ಟಿದಂತೆ ನುರ್ಚುನೂಱಿಪ್ಪಿನಮವುಂಕಿ ಪಿಡಿದಡಸಿಯಗುರ್ವು ಪರ್ವ ಬೇಸಿ ಗುಣಣೆಯ ಕಂಭಂಗಳೊಳಂ ಕೇರ್ಗಳೊಳಮಾಸ್ಫೋಟಿಸಿ ತಾಟಿಸಿದಾಗಳ್, ಬಿಸುನೆತ್ತರ್ ನೆಣನಡಗೆ ಎಲ್ವು ಸಮಸ್ತಂ ಸುರಿಯೆ ಕೈಗೆ ತೊವಲುಳಿಯುವಂತೆ ಕೀಚನನ್ನು ಸಂಹರಿಸಿದನೆಂಬುದನ್ನು ಪಂಪ ವರ್ಣಿಸಿದ್ದಾನೆ.

ಪಂಪ ತನ್ನ ಕಾವ್ಯದಲ್ಲಿ ವಾಸ್ತವತೆಯ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವುದನ್ನು ಕಾಣಬಹುದು. ೧೮ ದಿನದ ಕುರುಕ್ಷೇತ್ರ ಸಮರಾಂಗಣದಲ್ಲಿ ಉಗ್ರಭೂತನಿಕರವು ಬೇಯುವ ಶವಗಳನ್ನು ಚಕ್ಕಮೊಕ್ಕಮೆಂದು ಕಡಿದು ಕೈ ಬೇಯೆ ಬಾಯ್ ಬೇಯೆ ತಿನ್ನುತ್ತಿದ್ದವಂತೆ. ಕನಲಿಕೆಂಡದ ಮೇಲೆ ಹಳೆಯ ಬೇವಿನೆಣ್ಣೆಯಲ್ಲಿ ತೊಯ್ಯಿದಿಟ್ಟ ಬೆಳ್ಳುಳ್ಳಿಯ ಕಂಪಿನಂತೆ ಬೇಯುವ ಹೆಣಗಳ ಕಂಪು ನಾರುತ್ತಿತ್ತಂತೆ. ಇದಕ್ಕಿಂತ ಭೀಭತ್ಸ ದೃಶ್ಯವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ ಎಂದರೆ ತಪ್ಪಾಗಲಾರದು.

ಪಂಪ ತನ್ನ ಸಮಕಾಲೀನದಲ್ಲಿದ್ದ ಗಾದೆಗಳನ್ನು ನಾಣ್ನುಡಿಗಳನ್ನು ಸಂದರ್ಭೋಚಿತವಾಗಿ ಬಳಸಿಕೊಳ್ಳುವುದರ ಮೂಲಕ ಕಾವ್ಯವನ್ನು ಪರಿಣಾಮಕಾರಿಯಾಗುವಂತೆ ಚಿತ್ರಿಸಿದ್ದಾನೆ. ದುರಹಂಕಾರಿಯಾಗಿದ್ದ ದ್ರುಪದನಿಗೆ ದ್ರೋಣ ಹೇಳುವ ಮಾತು 'ಜಲಕ್ಕನೀಗಳಜೆದಂ ಸಿರಿಕಳ್ಳುಡವುಟ್ಟಿತೆಂಬುದಂ' ಭೀಮನನ್ನು ಹಿಡಿದು ತಿನ್ನಲು ಬಂದಾ ಹಿಡಿಂಬೆಯ ಸ್ಥಿತಿ 'ಪಡೆನೋಡಲ್ ಬಂದವರಂ ಗುಡಿವೊರಿಸಿದರೆಂಬುದಾಯ್ತಂ.' ಶಿಶುಪಾಲನ ದೃಷ್ಟಿಯಲ್ಲಿ ರಾಜಸೂಯ ಯಾಗಾಂತ್ಯದಲ್ಲಿ ಧರ್ಮಜ ಕೃಷ್ಣನಿಗೆ ಅಗ್ರಪೂಜೆಯನ್ನು ಕೊಟ್ಟುದು ಹೇಗಾಯಿತೆಂದರೆ 'ತಣಿಯುಂಡಮರ್ದಂ ಗೋಮೂತ್ರದಿಂದೆ ಬಾಯ್ಪೂಸಿದವೋಲ್' ಎಂದೂ ಸಂಧಾನಕ್ಕೆಂದು ಬಂದ ಕೃಷ್ಣ ದುರ್ಯೋಧನನಿಗೆ ಪಾಂಡವ ಕೌರವರ ವೈಮನಸ್ಸನ್ನು ಕುರಿತು 'ಕಾಯ್ದ ಬೆನ್ನೀರ್ ಮನೆ ಸುಡದು ಎಂಬೊಂದು

ನುಡಿಯವ್ರೋಲ್' ಎನ್ನುವುದು ಔಚಿತ್ಯಪೂರ್ಣವಾಗಿದೆ. ಮೊದಲು ಆಡಂಬರದ ಮಾತುಗಳನ್ನಾಡಿ ಯದ್ಧರಂಗದಿಂದ ಹಿಮ್ಮೆಟ್ಟಿದ ಕರ್ಣನನ್ನು ಹಂಗಿಸುತ್ತಾ ಅರ್ಜುನ 'ಮಾತು ಲೇಸಣ್ಣ ಸೆಟ್ಟಿಯ ಬಳ್ಳಂಕಿರಿದೆಂಬುದೊಂದು ನುಡಿಯಂನಿಕ್ಕುವಂ ಮಾಡಿದೈ' ಎನ್ನುತ್ತಾನೆ. ಹೀಗೆ ಹಲವಾರು ನಾಣ್ನುಡಿಗಳನ್ನು ಪಂಪ ತನ್ನ ಕಾವ್ಯದಲ್ಲಿ ಬಳಸಿಕೊಂಡು ಪರಿಣಾಮಕಾರಿಯಾಗಿಸಿದ್ದಾನೆ.

ಪಂಪನದು ಅನಾಯಾಸ ಕವಿತ್ವವಾಗಿದ್ದು ಆತ ಒಂದು ಪದ್ಯದಲ್ಲೇ ಒಂದು ಮಾತಿನಲ್ಲೇ ಇಡೀ ಒಂದು ಪ್ರಪಂಚದಷ್ಟು ಭಾವನೆಗಳನ್ನು ತುಂಬಬಲ್ಲ ನಿಪುಣ. ಆದರೆ ಮಾತಿನಲ್ಲಿ ಮಿತಿಯನ್ನು ಸಾಧಿಸಿದ್ದಾನೆಂದಷ್ಟೇ ಹೇಳಿದರೆ ಕವಿಗೆ ಅಪಚಾರವೆಸಗಿದಂತಾಗುತ್ತದೆ. ಅರ್ಜುನನ್ನು ಸ್ತುತಿಸುವೆಡೆಗಳಲ್ಲಿ ಶಿಶುಪಾಲ ಕೃಷ್ಣನನ್ನು ನಿಂದಿಸುವ ಸಂದರ್ಭದಲ್ಲಿ ಅವನ ಮಾತಿನ ಧಾರಳವನ್ನು ಕಾಣಬಹುದು. ಆದರೆ 'ಕಲೆಯಲ್ಲಿ ಮಿತತ್ವಕ್ಕಿಂತಲೂ ಔಚಿತ್ಯ ಹೆಚ್ಚಿನ ಮೂಲತ್ವ. ನಿಜವಾಗಿ ಔಚಿತ್ಯದಲ್ಲಿ ಮಿತ ಅಡಕವಾಗಿದೆ'[೮] ಎಂಬ ಎಸ್.ವಿ. ರಂಗಣ್ಣನವರ ಮಾತು ಮನನೀಯವಾಗಿದೆ. ಒಟ್ಟಾರೆಯಾಗಿ ಹೇಳುವುದಾದರೆ ಪಂಪನ ಶೈಲಿ ಉಚಿತವಾದ ಮಿತತ್ವದಿಂದ ಕೂಡಿದ್ದು ಹಿತಮಿತಮೃದು ವಚನನ್ ಎಂಬುದಕ್ಕೆ ಪೂರಕವಾಗಿದೆಯೆನ್ನ ಬಹುದು.

**ಕುಮಾರವ್ಯಾಸಭಾರತದ ಕಥಾವಸ್ತು ವಿನ್ಯಾಸ:**

ಕುಮಾರವ್ಯಾಸಭಾರತಕ್ಕೂ 'ವ್ಯಾಸಭಾರತವೇ' ಮೂಲ ಆಕರವೆಂಬುದು ಸರ್ವ ಸಮ್ಮತ ವಿಚಾರವೇ ಆಗಿದೆ. ೧೮ ಪರ್ವಗಳ ಸಮಗ್ರ ಭಾರತದ ಕಥಾವಿನ್ಯಾಸವನ್ನು ಅಳವಡಿಸಿಕೊಳ್ಳದೆ ದಶಪರ್ವಗಳಿಗೆ ಮಾತ್ರ ತನ್ನ ಕಾವ್ಯವನ್ನು ಮಿತಗೊಳಿಸಿ ಕುರುಕ್ಷೇತ್ರ ಸಮರದ ಅನಂತರ ಧರ್ಮರಾಜನ ಸಿಂಹಾಸನಾರೋಹಣದೊಡನೆ ತನ್ನ ಕಾವ್ಯದ ಕಥೆಯನ್ನು ಅಂತ್ಯಗೊಳಿಸುವ ಚೌಕಟ್ಟನ್ನು ನಿರ್ಮಿಸಿಕೊಂಡಿದ್ದಾನೆ. ಕುಮಾರವ್ಯಾಸಭಾರತ ಕಾವ್ಯದ ಕಥಾಸಂವಿಧಾನವನ್ನು ಅವಲೋಕಿಸುವ ಮೊದಲು ಕವಿ ಕಾವ್ಯ ರಚಿಸಲು ನಡೆಸಿದ ಪೂರ್ವಸಿದ್ಧತೆಯನ್ನು ಗ್ರಹಿಸುವುದು ಸೂಕ್ತ. ಕವಿ ವಿಜಯನಗರ ಸಾಮ್ರಾಜ್ಯದ ಸಮಕಾಲೀನನಾಗಿದ್ದರಿಂದ ಆ ಸಾಮ್ರಾಜ್ಯದ ಭವ್ಯ ಪರಂಪರೆಯನ್ನು ರಾಜವೈಭವವನ್ನು, ಸಂಸ್ಕೃತಿಯ ಸತ್ವವನ್ನು ಹೀರಿಕೊಳ್ಳುವುದು ಸಾಧ್ಯವಾಯಿತು. ಬಹು ವಿಷಯತಜ್ಞನಾಗಿದ್ದ ಕುಮಾರವ್ಯಾಸ ಜ್ಯೋತಿಷ್ಯ, ಸ್ಮೃತಿ, ವೇದಗಳು, ವೇದಾಂಗಗಳು ಸಕಲ ಶಾಸ್ತ್ರಗಳು, ಕಾವ್ಯಾಲಂಕಾರಾದಿ ಲಕ್ಷಣಗ್ರಂಥಗಳನ್ನು ಆಳವಾಗಿ ಅಧ್ಯಯನ ಮಾಡುವುದರ ಜೊತೆಗೆ ಪ್ರಸಿದ್ಧ ಕಾವ್ಯಗಳ ಅರಿವನ್ನು ಪಡೆದಿದ್ದನು. ಪಂಪಭಾರತದ ಜೊತೆಗೆ ಮರಾಠ ಸಾಹಿತ್ಯದ ಪರಿಚಯವೂ

ಅವನಿಗಿದ್ದಿರುವ ಸಾಧ್ಯತೆಯಿದೆ. ವ್ಯಾಸಭಾರತವಂತೂ ಅವನಿಗೆ ಪವಿತ್ರ ಗ್ರಂಥವಾಗಿತ್ತಲ್ಲದೆ ಕರತಲಾಮಲಕವಾಗಿದ್ದಿತು. ಇವುಗಳಿಗೆಲ್ಲ ಬೆನ್ನೆಲುಬಾಗಿ ಅವನಿಗಿದ್ದ ದೈವದತ್ತವಾದ ಪ್ರತಿಭೆಯೂ, ಆಳವಾದ ಜೀವನಾನುಭವವೂ ಕಾವ್ಯರಚನೆಗೆ ಪ್ರೇರಣೆ ನೀಡಿದವು. ಕುಮಾರವ್ಯಾಸ ತನ್ನನ್ನು ಯೋಗೀಂದ್ರನೆಂದು ಕರೆದುಕೊಂಡಿರುವುದೇ ಅಲ್ಲದೆ ತನ್ನನ್ನು ಶುಕರೂಪನೆಂದೂ ಸಂಬೋಧಿಸಿಕೊಂಡಿರುವುದು ತನಗೆ ವ್ಯಾಸನಲ್ಲಿರುವ ಪೂಜ್ಯಭಾವನೆಯನ್ನು ಅಭಿಮಾನವನ್ನು ಸೂಚಿಸುವುದರ ಜೊತೆಗೆ ಮಹಾಭಾರತವನ್ನು ಪುನಃ ರಚಿಸಲು ತನಗೆ ಯೋಗ್ಯತೆಯಿದೆ ಎಂಬುದನ್ನು ಸಾಬೀತುಗೊಳಿಸುವಂತಿದೆ.

ಕುಮಾರವ್ಯಾಸನಿಗೆ 'ಮಹಾಭಾರತ' ಧಾರ್ಮಿಕವಾದ ಪವಿತ್ರಗ್ರಂಥ. ಪಂಪನಂತೆ ಮಹಾಭಾರತ ಅವನ ದೃಷ್ಟಿಯಲ್ಲಿ ಕೇವಲ ಲೌಕಿಕ ಕಾವ್ಯವಾಗದೆ ಪಂಚಮವೇದ. ಶ್ರೀಕೃಷ್ಣನ ಪಾರಮ್ಯವನ್ನು ಇಳೆಗೆ ತಿಳಿಸುವ ಮಹಾನ್ ಕಾವ್ಯ. ಹರಿಯ ಬಸಿರಲ್ಲಿ ಅಖಿಲ ಲೋಕಗಳು ಅಡಗಿರುವಂತೆ ಈ ಭಾರತ ಶರಧಿಯಲ್ಲಿ ಅನೇಕ ಪುರಾಣ ಶಾಸ್ತ್ರಗಳಡಗಿವೆ. ಹಾಗಾಗಿ ಪರಮಭಕ್ತಿಯಿಂದ ಈ ಕಾವ್ಯವನ್ನು ಯಾವ ನರರು ಅವಧರಿಸಿ ಕೇಳುತ್ತಾರೆಯೋ ಅಂಥವರ ದುರಿತಾಂಕುರದ ಬೇರಿನ ಬೇಗೆ ನೀಗುವುದು. ಹಲವು ಜನ್ಮದ ಪಾಪರಾಶಿಯ ತೊಳೆವ ಜಲ ಮಹಾಭಾರತದ ಮಹಿಮೆಯೆಷ್ಟೆಂದರೆ ಭಾರತದಲ್ಲಿ ಒಂದಕ್ಷರವನ್ನು ಕೇಳಿದರೂ ಸಾಕು: ವೇದಪಾರಾಯಣದ ಫಲ, ಗಂಗಾದಿತೀರ್ಥಸ್ನಾನ ಫಲ, ಮುಂತಾದ ಫಲಗಳು ದೊರೆಯುತ್ತವೆಯಂತೆ; ಅದರ ಮಹಿಮೆಯನ್ನರಿಯದೆ ಅದನ್ನು ತೆಗಳಿದರೆ ಅದರ ಘನತೆಗೇನೂ ಕುಂದುಬಾರದು:

**ಚೋರ ನಿಂದಿಸಿ ಶಶಿಯ ಬೈದಡೆ**
**ಕ್ಷೀರವನು ಕ್ಷಯರೋಗಿ ಹಳಿದರೆ**
**ವಾರಣಾಸಿಯ ಹೆಳವ ನಿಂದಿಸಿ ನಕ್ಕರೇನಹುದು**
**ಭಾರತ ಕಥನ ಪ್ರಸಂಗವ**
**ಕ್ರೂರ ಕರ್ಮಿಗಳೆತ್ತಬಲ್ಲರು**
**ಘೋರ ರೌರವವನ್ನು ಕೆಡಿಸುಗು ಕೇಳ್ದ ಸಜ್ಜನರ**
**(ಕ.ಭಾ.ಕ. ಆ.ಪ. ೧-೨೨)**

ಈ ಹಿನ್ನಲೆಯಿಂದ ಮಾನವನ ಉದ್ಧಾರಕ್ಕಾಗಿಯೇ ಮಹಾಭಾರತ ಕಾವ್ಯವನ್ನು ರಚಿಸಲಾಗಿದೆ ಎಂಬುದು ಕುಮಾರವ್ಯಾಸನ ಖಚಿತವಾದ ನಂಬಿಕೆ. ಕುಮಾರವ್ಯಾಸ ಭಗವದ್ಭಕ್ತ ಹಾಗೂ ಗದುಗಿನ ವೀರನಾರಾಯಣನ ಪರಮಸೇವಕ. ಮಹಾಭಾರತವು ಭಗವಂತನ ಕಥೆಯಾಗಿರುವುದರಿಂದ ಅದು ಅವನಿಗೆ ಹೆಚ್ಚು ಮಹತ್ವದ್ದಾಗಿದೆ. ನರಮಾನವರ ಬದುಕಿಗೆ ಪ್ರೇರಕವೂ ಪೋಷಕವೂ ಆದ ಭಗವಂತನ

ಲೀಲೆಯನ್ನು ಮಹಿಮೆಯನ್ನು ಮಹಾಭಾರತದಲ್ಲಿ ಅವನು ಕಂಡುಕೊಂಡಿದ್ದಾನೆ. ಅವನಿಗೆ ಮಹಾಭಾರತದಲ್ಲಿ ಪಾಂಡವ-ಕೌರವ ಕಥೆ ಆನುಷಂಗಿಕವಾಗಿದ್ದು ದುಷ್ಟಶಿಕ್ಷಣಕ್ಕಾಗಿ, ಭಕ್ತರ ಉದ್ಧಾರಕ್ಕಾಗಿ ಶ್ರೀಕೃಷ್ಣನಾಗಿ ಅವತರಿಸಿದ ಭಗವಂತನು ತನ್ನ ಭಕ್ತರಾದ ಪಾಂಡವರನ್ನು ಸೇರಿ, ದುಷ್ಟರಾದ ಕೌರವರೇ ಮೊದಲಾದವರನ್ನು ನಿಗ್ರಹಿಸಿ ತನ್ನ ಲೀಲೆಯನ್ನು ಮಹಿಮೆಯನ್ನು ಮೆರೆದ ಕಥೆಯಾಗಿದೆ. ಆದ್ದರಿಂದಲೇ ಅದು ಅವನಿಗೆ 'ಮಹಾಭಾರತ'ವೆನ್ನುವುದಕ್ಕಿಂತಲೂ 'ಶ್ರೀಕೃಷ್ಣಚರಿತಾಮೃತ' ಎನ್ನುವುದೇ ಪ್ರಿಯವಾಗಿದೆ. ಶ್ರೀಕೃಷ್ಣನೇ ಕುಮಾರವ್ಯಾಸನ ಮಹಾಭಾರತ ಕಥೆಯ ಸಂಚಾಲಕನಾಗಿದ್ದಾನೆ. ಅಂತೆಯೇ ನಾರಣಪ್ಪನಿಗೆ ಕಾವ್ಯರಚಿಸಲು ಪ್ರೇರಕಶಕ್ತಿಯೂ ಆಗಿದ್ದಾನೆ. 'ವೀರ ನಾರಾಯಣನೇ ಕವಿ ಲಿಪಿಕಾರ ಕುಮಾರವ್ಯಾಸ' ಎಂದೇ ಹೇಳಿಕೊಂಡಿರುವುದನ್ನು ಗಮನಿಸಬಹುದು.

ಕುಮಾರವ್ಯಾಸನೇ ತನ್ನ ಕಾವ್ಯದ ಕಥಾವಸ್ತುವನ್ನು ಕುರಿತು

**ತಿಳಿಯ ಹೇಳುವೆ ಕೃಷ್ಣ ಕಥೆಯನ್ನು**
**ಇಳೆಯ ಜಾಣರು ಮೆಚ್ಚುವಂತಿರೆ**
**ನೆಲೆಗೆ ಪಂಚಮ ಶೃತಿಯನೇರೆವೆನು ಕೃಷ್ಣ ಮೆಚ್ಚಲಿಕೆ**
**ಹಲವು ಜನ್ಮದ ಪಾಪರಾಶಿಯ**
**ತೊಳೆವ ಜಲವಿದು ಶ್ರೀಮದಾಗಮ**
**ಕುಲಕೆ ನಾಯಕ ಭಾರತಾಕೃತಿ ಪಂಚಮಶ್ರುತಿಯ**
**(ಕ.ಭಾ.ಕ. ಆ.ಪ. ೧-೧೩)**

ಮುಂದುವರಿದು 'ಇದು ವಿಚಾರಿಸೆ ಬರಿಯ ತೊಳಸಿಯ ಉದಕದಂತಿರೆ ಇಲ್ಲಿ ನೋಳ್ಪುದು ಪದುಮನಾಭನ ಮಹಿಮೆ, ಧರ್ಮವಿಚಾರ ಮಾತ್ರವನು' ಎಂದು ಬಿನ್ನೈಸಿಕೊಂಡಿದ್ದಾನೆ. 'ಪದದ ಪ್ರೌಢಿಯ ನವರಸಂಗಳ ಉದಿತವೆನುವಭಿಧಾನ ಭಾವವ ಬೆದಕಲಾಗದು ಬಲ್ಲ ಪೌಡರುಂ ಈ ಕಥಾಂತರಕೆ' ಎಂದು ಸಹೃದಯರಲ್ಲಿ ನಿವೇದಿಸಿಕೊಂಡಿದ್ದಾನೆ.

ಕುಮಾರವ್ಯಾಸನ ದೃಷ್ಟಿಯಲ್ಲಿ ಕಲೆಗಾಗಿ ಕಲೆ ಅಲ್ಲದೆ ಕಲೆ ಎನ್ನುವುದು ಆತ್ಮೋದ್ಧಾರಕ್ಕಾಗಿ ಮಾನವನ ಉದ್ಧಾರಕ್ಕಾಗಿ ಎಂಬ ನಿಲುವು ಅವನದು. ಮಹಾಭಾರತದ ಕಾವ್ಯವನ್ನು ಕನ್ನಡದಲ್ಲಿ ಹಾಡಿ, ಪದುಮನಾಭನ ಮಹಿಮೆಯನ್ನು ಸಾರಿ, ಧರ್ಮವಿಚಾರವನ್ನು ಪ್ರಸಾರ ಮಾಡಿ ತನ್ನ ಆತ್ಮೋದ್ಧಾರವನ್ನು ಸಾಧಿಸಿಕೊಳ್ಳುವುದಲ್ಲದೆ ಜನತೆಯ ಉದ್ಧಾರವನ್ನು ಮಾಡಬೇಕೆಂಬ ಧ್ಯೇಯೋದ್ದೇಶ ಮುಖ್ಯವಾಗಿದೆ. ಅವನ ಕಾವ್ಯದಲ್ಲೆಲ್ಲ ಕಲಾತ್ಮಕತೆ ತುಂಬಿ ತುಳುಕುತ್ತಿದ್ದರೂ ಅದರ ಹಿನ್ನಲೆಯಲ್ಲಿ ಧರ್ಮದೃಷ್ಟಿ ಭಗವದ್ಭಕ್ತಿ ಮತ್ತು ಋಷಿದರ್ಶನಗಳು ಏಕಸೂತ್ರತೆಯಿಂದ

ವ್ಯಾಪಿಸಿಕೊಂಡಿವೆ. ಮನುಷ್ಯ ಶಕ್ತಿ ದೈವಶಕ್ತಿಯ ಎದುರು ನಿಲ್ಲಲಾರದು. ಆದರೆ ಅದೇ ಮಾನುಷ ಶಕ್ತಿ ದೈವಶಕ್ತಿಯನ್ನು ಒಲಿಸಿ ಗೆಲ್ಲಬಲ್ಲದು ಎಂಬ ದರ್ಶನವನ್ನು ಕುಮಾರವ್ಯಾಸ ತನ್ನ ಗ್ರಂಥದಲ್ಲಿ ಸಾಧಿಸಿದ್ದಾನೆ.

**ಕಾವ್ಯದ ವಸ್ತು ಕೃಷ್ಣ ಪರಾತ್ಪರ:**

ಕವಿ ಕುಮಾರವ್ಯಾಸನಿಗೆ ಶ್ರೀಕೃಷ್ಣ ಪರಮಾತ್ಮನೆ ಪರಾತ್ಪರ ದೈವ ಹಾಗೂ ಪರಬ್ರಹ್ಮ ಸ್ವರೂಪ. ದುಷ್ಟರನ್ನು ಶಿಕ್ಷಿಸಿ ಭೂಭಾರವನ್ನು ಹರಿಸಿ ಭಕ್ತ ಜನರನ್ನು ಸಂರಕ್ಷಣೆ ಮಾಡುವುದಕ್ಕಾಗಿಯೇ ತನ್ನ ಲೀಲಾ ವಿನೋದಾರ್ಥವಾಗಿ ನರರೂಪವನ್ನು ತಾಳಿರುವ ಅಂಶವನ್ನು ಹೆಜ್ಜೆ ಹೆಜ್ಜೆಗೂ ಎಲ್ಲರ ಬಾಯಲ್ಲಿ ಹೇಳಿಸಿರುವುದನ್ನು ಕಾಣಬಹುದು. ವಿಶ್ವರೂಪ ದರ್ಶನ ಮಾಡಿಸಿದ ಸಂದರ್ಭದಲ್ಲಿ ದುರ್ಯೋಧನ 'ಈತನಂತರ್ಯಾಮಿ ಜೀವವ್ರಾತದಲಿ ಜನಜನಿತವಿದು. ಜಗವೀತನಾಜ್ಞೆಯೊಳೊವುದು' (ಉದ್ಯೋಗ ೯-೬೬) ಎಂದೂ ಜಂಗಮನ ಸ್ಥಾವರಕೆ ಚೈತನ್ಯಾಂಗರಕ್ಷನು, ಘನಕೆ ಘನ ಅಣುವಿಂಗೆ ತಾನಣುವೆನಿಪ ಪರತರ ವಸ್ತು ನೋಡೀತ ಎಂದೂ (ಉ.ಪ. ೯-೩೦) ಇಳಿದನವನಿಗೆ ಧಾರುಣಿಯ ಹೊರೆಗೆಳೆಯಲೋಸುಗವಿಲ್ಲ ನಮ್ಮೊಳಗೊಳಗೆ ವೈರವ ಬಿತ್ತಿ ಬರಿಕೈವನು ಮಹಾಬಲವ ಎಂದು ಹೇಳಿರುವುದನ್ನು ನೋಡಬಹುದು.

ಅಭಿಮನ್ಯುವಿನ ಜನನಾನಂತರ ಯಾದವ ಪರಿವಾರದೊಡನೆ ಇಂದ್ರಪ್ರಸ್ಥಕ್ಕೆ ಬಂದ ಕೃಷ್ಣನನ್ನು ಕುರಿತು ಕುಮಾರವ್ಯಾಸ:

**ಅರಸಿ ಕಾಣವು ವೇದತತಿ ತಾ**
**ನರಸಿ ಬಂದನು ಭಕ್ತರನು ತನ**
**ಗೆರಗಿ ಮೆಚ್ಚಿಸಲರಿಯರಜ ರುದ್ರಾಮರೇಶ್ವರರು**
**ಎರಗುವನು ಯಮಜಂಗೆ ತನ್ನನು**
**ಕುರುಹುಗಾಣವು ವೇದ ಶಿರವಿದು**
**ಮರವೆಯೋ ಹರಿಬಂದು ಕಂಡನು ಧರ್ಮನಂದನನ**

**(ಕ.ಭಾ.ಕ. ಆ.ಪ. ೨೦-೬)**

ಮತ್ತೊಮ್ಮೆ ವನದಲ್ಲಿದ್ದ ಪಾಂಡವರನ್ನು ಕಾಣಲು ಕೃಷ್ಣ ಪರಿವಾರದೊಡನೆ ಹೋಗಿದ್ದ ಸಂದರ್ಭದಲ್ಲಿ 'ಅರಸಿ ಹರಿಯ ಆಮ್ನಾಯತತಿ ಕುಕ್ಕರಿಸಿದವು ಮುನಿಗಳ ಸಮಾಧಿಗೆ ಕರುಬುವವರಾವಲ್ಲ, ಕಾಣರು, ನಖದ ಕೊನೆಗಳನು. ಅರಸ ತಾನೇ ಹರಿ ಹರಿದು ತನ್ನೆರಕದವರನು ಬಿಡದೆ ಸಲಹುವ ಕರುಣವೆಂತುಟೊ ರಾಯ ಗದುಗಿನ ವೀರ ನಾರಾಯಣನ' (ಆ. ೧೫-೩೧) ಎನ್ನುತ್ತಾನೆ.

ಭೀಮ ಜರಾಸಂಧರ ಕಾಳಗ ನಡೆಯುತ್ತಿರುವಾಗ ಅಂತ್ಯದಲ್ಲಿ ಕೃಷ್ಣನಿಗೆ ಮಾಗಧನ ಅಂತಸ್ಸತ್ವ ಕುಂದಿದುದರ ಅರಿವಾಯಿತು. ಅದನ್ನು ಕಂಡ ಜನಮೇಜಯ 'ಅರಿವುದರಿದೆ; ಚರಾಚರಗಳ ಹೊರಗೊಳಗು ತಾನಲ್ಲದಿಲ್ಲ ಇದನ್ನರಿಯನೇ ಶಿವ' (ಸ. ೨-೧೧೫) ಎಂದು ನಗುನಗುತ್ತಾ ಹೇಳಿಕೊಳ್ಳುತ್ತಾನೆ.

**ಕಾವ್ಯದ ಸೂತ್ರಧಾರಿಯಾಗಿ ಕೃಷ್ಣ**

ಕುಮಾರವ್ಯಾಸಭಾರತದಲ್ಲಿ ಕೃಷ್ಣನದು ನಾಯಕನ ಪಾತ್ರ. ಅಷ್ಟೇ ಅಲ್ಲದೆ ಇಡೀ ಕಾವ್ಯದ ಸೂತ್ರಧಾರಿಯೂ ಆಗಿದ್ದಾನೆ. ಸಮಸ್ತವು ಕೃಷ್ಣನ ಪ್ರೇರಣೆಯಿಂದಲೇ ನಡೆಯುತ್ತದೆ. ಕಥೆಯ ಯಾವ ಪ್ರಮುಖ ಘಟನೆಯಲ್ಲೂ ವ್ಯಕ್ತವಾಗಿಯೋ ಅವ್ಯಕ್ತವಾಗಿಯೋ ಅವನ ಕೈವಾಡವಿಲ್ಲದಿಲ್ಲ. ಅವನು 'ಕಪಟ ನಾಟಕ ಸೂತ್ರಧಾರಿ'. ಅವನು ಸೂತ್ರಗಳನ್ನು ಹೇಗೆ ಹೇಗೆ ಎಳೆಯುತ್ತಾನೋ ಹಾಗೆ ಕಥೆಯ ಪಾತ್ರಗಳೆಲ್ಲವೂ ಕುಣಿಯುತ್ತವೆ. ಆ ಮರ್ಮವನ್ನರಿತಿದ್ದ ದುರ್ಯೋಧನ ಹೀಗೆನ್ನುತ್ತಾನೆ:

**ಎನ್ನ ಹೃದಯದೊಳಿರ್ದು ಮುರಿವನು**
**ಗನ್ನದಲಿ ಸಂದಿಯನು ರಿಪುಗಳೊ**
**ಳಿನ್ನು ತನ್ನವರವರೊಳಿರ್ದಾ ನುಡಿವನಾ ಹದಿನ**
**ಭಿನ್ನನಂತಿರೆ ತೋರಿ ಭಿನ್ನಾ**
**ಭಿನ್ನನೆಸಿಯೆ ಮೆರೆವ ತಿಳಿಯಲ**
**ಭಿನ್ನನೈ ಮುರವೈರಿ ನಾವಿನ್ನಂಜಲೇಕೆಂದ**
**(ಕ.ಭಾ.ಕ. ಉ.ಪ. ೯-೭೧)**

ಜನಪದ ಪ್ರದರ್ಶನ ಕಲೆ ಸೂತ್ರದ ಗೊಂಬೆಯಾಟದಲ್ಲಿ ಗೊಂಬೆಗಳ ಚಲನವಲನಗಳು ಮಾತ್ರ ಪ್ರೇಕ್ಷಕರಿಗೆ ಗೋಚರವಾಗುತ್ತವೆಯಷ್ಟೇ. ಆದರೆ ಆ ಚಲನವಲನಗಳಿಗೆ ಪ್ರೇರಕನಾದ ಸೂತ್ರಧಾರ ಕಾಣಿಸಿಕೊಳ್ಳದೆ ರಂಗದ ಹಿಂಭಾಗದಲ್ಲಿರುವಂತೆ ಕುಮಾರವ್ಯಾಸಭಾರತದಲ್ಲಿ ಶ್ರೀಕೃಷ್ಣನು ನಿರ್ಲಿಪ್ತನಂತೆ ದೂರ ದೂರವೇ ಇದ್ದರೂ ಅವ್ಯಕ್ತವಾಗಿ ತನ್ನ ಪ್ರಭಾವವನ್ನು ಬೀರಿ ತನ್ನ ಕೆಲಸಕಾರ್ಯಗಳನ್ನು ಸಾಧಿಸುತ್ತಾನೆ. ಅವನು ಧರ್ಮರಾಜನ ರಾಜಸೂಯಕ್ಕೆ ಹೋದದ್ದು ಸುಮ್ಮನೆ ಭಾವನ ಮನೆಯ ರಾಜವೈಭೋಗವನ್ನು ಅನುಭವಿಸುವುದಕ್ಕಲ್ಲ. ದುಷ್ಟ ನಿಗ್ರಹಕ್ಕೆ ದಾರಿ ಸುಗಮ ಮಾಡುವುದೆ. ಅಲ್ಲಿನ ರಾಜಕಾರ್ಯದ ನೆಲೆಯನ್ನರಿತು ಅಕ್ರೂರಾದಿ ಸಚಿವರೊಡನೆ 'ಶಿಶುಪಾಲ ಕಂಸನ-ಇಂತಿವರ ಕೊಲುವಡೆ ಇದುಹಃ ನಮ್ಮ ಭಾವನನಿಳಯದ ಉತ್ಸವ ಸೌಮಿನತ್ಯವ ಬಳಸುವರೆ ಹರಿವುದು ಮನೋರಥಸಿದ್ಧಿವೆಮಗೆ' (ಸ. ೨೭) ಎಂದು ಪೀಠಿಕೆ ಹಾಕಿಕೊಂಡೇ ಅಲ್ಲಿಗೆ ಹೊರಡುತ್ತಾನೆ. ಮುಂದೆ ಅಂತೆಯೇ ಜರಾಸಂಧ, ಶಿಶುಪಾಲರನ್ನು ಕೊಂದೇ ತನ್ನ ಮನೋರಥವನ್ನು ಸಾಧಿಸಿಕೊಳ್ಳುತ್ತಾನೆ.

ಹನ್ನೆರಡು ವರ್ಷ ವನವಾಸ ಒಂದು ವರ್ಷ ಅಜ್ಞಾತವಾಸದ ಅನಂತರ ಕೌರವರೊಡನೆ ರಾಜ್ಯ ವಿಷಯಕ್ಕೆ ಸಂಧಾನದ ಪ್ರಶ್ನೆ ಎದ್ದಾಗ ಕೃಷ್ಣನ ರಾಯಭಾರ ತಯಾರಾಗುತ್ತದೆ. ಆಗ ಧರ್ಮರಾಯನಾದಿಯಾಗಿ ಭೀಮಾರ್ಜುನರೆಲ್ಲರೂ ಸಂಧಿಯೇ ಸಾಕೆಂದಾಗ ಕೃಷ್ಣ ಅಳುಕಿ 'ಯಮನಂದನನ ನುಡಿ ಸಂಧಾನದಲಿ ಸಂಜನಿಸಿತಾದೊಡೆ ಕಾಣೆನವನಿಯ ಹೊರಗೆ ಹರಿವುಗಳ' ಎಂದು ತನ್ನಲ್ಲೇ ಅಂದುಕೊಂಡು ಬೇಕೆಂತಲೇ ದ್ರೌಪದಿಯನ್ನು ಅಲ್ಲಿಗೆ ಕರೆಸಿ ಅವಳ ಪ್ರಚೋದನೆಯಿಂದ ಭೀಮ ತಾನಾಗಿ ಮತ್ತೆ ಯುದ್ಧವನ್ನೇ ಬಯಸುವಂತೆ ಮಾಡುತ್ತಾನೆ. ದುರ್ಯೋಧನನ ಬಳಿಗೆ ಅವನು ಸಂಧಾನಕೆಂದು ಹೊರಡುವುದು ಒಂದು ನೆಪಮಾತ್ರವಷ್ಟೇ. ಏಕೆಂದರೆ ಅವನು ಹಸ್ತಿನಾವತಿಗೆ ಪಯಣ ಬೆಳೆಸಲಿದ್ದಾಗ ಭೀಮ ಅವನನ್ನು 'ಹಗೆಯಲಿ ಕಲಹವನು ಮಸೆ' ಎಂದು ಬೇಡಿದಾಗ ಆಗಲೆಂದು ಅವನಿಂದ ನಂಬುಗೆಗೊಂಡು ಹಿಂತಿರುಗುತ್ತಾನೆ. ದ್ರೌಪದಿಯು ಅವನಿಂದ 'ಕಾಳಗವನ್ನೇ ಬಲಿದು ತಹೆನು' ಎಂದು ವಚನ ತೆಗೆದುಕೊಳ್ಳುತ್ತಾಳೆ. ಅಷ್ಟು ಸಾಲದೆ ಕೃಷ್ಣ ದ್ರೌಪದಿಗೆ ವಸುದೇವ ದೇವಕಿಯರ ಮೇಲೆ ಆಣೆಯಿಟ್ಟು 'ನಾವು ಸಂಧಿಯ ನೆವದಲಿ ಅವದಿರ ಭಾವವನು ಕಲಿಮಾಡಿ, ಕೋಪವ ತೀವಿ ಸಂಧಿಯ ಮುರಿದು ಬರೆವು ಇದ ನಂಬು ನೀನು' ಎಂದು ಭರವಸೆಕೊಟ್ಟು ಅವಳಿಂದ ಬೀಳ್ಕೊಳ್ಳುತ್ತಾನೆ. ಮುಂದೆ ಹಾಗೆಯೇ ವಿದುರನ ಆತಿಥ್ಯವನ್ನು ಸ್ವೀಕರಿಸುವುದರ ಮೂಲಕ ದುರ್ಯೋಧನನ್ನು ಕೆರಳಿಸಿ, ವಿದುರನಿಂದ ಧನುರ್ಭಂಗ ಮಾಡಿಸಿ, ಹಿತರಕ್ಷಕನಂತೆ ನಟಿಸಿ ಮುಖಭಂಗ ಮಾಡಿ ದುರ್ಯೋಧನನನ್ನು ಮತ್ತಷ್ಟು ಉದ್ರೇಕಗೊಳಿಸಿ ಸಂಧಿಯನ್ನು ಮುರಿದು, ಅತ್ತ ದುರ್ಯೋಧನನ ಬಲಗೈಯಾಗಿದ್ದ ಕರ್ಣನೊಡನೆಯೂ ಮತ್ತೊಂದು ನಾಟಕ ಮಾಡಿ ಅವನ ಮನಸ್ಸನ್ನು ಹದಗೆಡಿಸಿ ಅವನನ್ನು ನಿರ್ವೀರ್ಯಗೊಳಿಸಿ ಹಿಂತಿರುಗುತ್ತಾನೆ. ಕಾವ್ಯದ ಕಡೆತನಕ ದುಷ್ಟರನ್ನು ನಿರ್ಮೂಲನೆಗೊಳಿಸಿ ಪಾಂಡವರನ್ನು ವಿಜಯಿಗಳನ್ನಾಗಿ ನೆಲೆಗೊಳಿಸುವವರೆಗೂ ಇಂತಹ ನಾಟಕಗಳು ನಡೆಯುತ್ತಲೇ ಇರುತ್ತವೆ.

ಕೃಷ್ಣನ ಸಂಧಿ ಪ್ರಸ್ತಾಪದ ವಿಷಯ ಕೇವಲ ನಾಟಕವೆಂದು ದುರ್ಯೋಧನನಿಗೆ ತಿಳಿದ ವಿಚಾರವೇ ಆಗಿರುತ್ತದೆ. ಹಿತೈಷಿಗಳೊಂದಿಗೆ ಆಲೋಚಿಸಿ, ಕೃಷ್ಣನನ್ನು ಹುರಿನೇಣುಗಳಿಂದ ಬಂಧಿಸುವ ಏರ್ಪಾಡು ಮಾಡುತ್ತಾನೆ.

ಅರ್ಜುನ ದುರ್ಯೋಧನರಿಬ್ಬರೂ ಕೃಷ್ಣನ ಬಳಿ ಸಹಾಯಕ್ಕೆ ಬಂದಾಗ ಅರ್ಜುನನಿಗೆ ಅವನ ಪ್ರಾರ್ಥನೆಯಂತೆ ತನ್ನನ್ನೇ ಕೊಟ್ಟು ಉಳಿದ ಯಾದವಬಲವನ್ನೆಲ್ಲ ದುರ್ಯೋಧನನಿಗೆ ಕೊಟ್ಟು

ಕಳುಹಿಸಿದಾಗ ದುರ್ಯೋಧನ ಕೃಷ್ಣನನ್ನು ಪಾಂಡವ ಪ್ರಿಯನೆಂದು ಹಂಗಿಸಿ 'ನೀ ಹೊಕ್ಕಿರಿಯಲಾಗದು ಕೃಷ್ಣ' ಎಂದು ಎಚ್ಚರಿಸಿ ಹೋಗುತ್ತಾನೆ.

ಇಡೀ ಕಾವ್ಯದಲ್ಲಿ ಶ್ರೀಕೃಷ್ಣನ ಮಾಯೆಗೆ ಒಳಗಾಗದ ವ್ಯಕ್ತಿಯಿಲ್ಲ. ಹಾಗೂ ಸನ್ನಿವೇಶವಿಲ್ಲ. ಶಸ್ತ್ರ ಪ್ರದರ್ಶನದ ಗರಡಿಯಲ್ಲಿ ಕರ್ಣಾರ್ಜುನರ ನಡುವೆ ಹೋರಾಟವೇ ಕೈಗಟ್ಟಿದಾಗ ಕರ್ಣನೂ ತನ್ನ ಮಗನೇ ಎಂದರಿತ ಕುಂತಿ ಉಭಯಸಂಕಟಕ್ಕೆ ಸಿಲುಕಿ 'ಎನ್ನ ಮಗನೆನೆ ಬಂದುದಿಲ್ಲಿ. ಅದು ತನ್ನ ವಶವೆ! ವಿಷ್ಣುಮಾಯೆಯ ಭಿನ್ನಣವಲೇ' ಎಂದು ತನ್ನಲ್ಲಿ ತಾನೇ ಮೂರ್ಛಾಪನ್ನಳಾಗುತ್ತಾಳೆ (ಆ. ೭-೫೩). ಮತ್ಸ್ಯಯಂತ್ರ ಭೇದನದ ಸಂದರ್ಭದಲ್ಲಿ ಪಾಂಡವರು ಬದುಕಿಲ್ಲವೆಂದು ತಿಳಿದಿದ್ದ ಹಿರಿಯ ಸಹೋದರ ಬಲರಾಮನಿಗೆ, ಬ್ರಾಹ್ಮಣರ ನಡುವಿನಿಂದ ಎದ್ದು ಬರುತ್ತಿದ್ದ ಅರ್ಜುನನನ್ನು ಕೃಷ್ಣ ತೋರಿಸಿದಾಗ ಬಲರಾಮ 'ಶಿವ ನೀನೆನಿತು ಮಾಯಸಿದ್ದ'ನೆಂದು ಆಶ್ಚರ್ಯಚಕಿತನಾಗುತ್ತಾನೆ.

**ಕುಮಾವ್ಯಾಸಭಾರತದ ಕೃಷ್ಣ ಭಕ್ತಿ:**

ಕುಮಾರವ್ಯಾಸಭಾರತದಲ್ಲಿ ಕವಿ ತನ್ನ ಆರಾಧ್ಯದೈವವಾದ ಕೃಷ್ಣಭಕ್ತಿಯ ಸ್ತೋತ್ರವನ್ನು ಆದಿಯಿಂದ ಅಂತ್ಯದವರೆಗೂ ಅಳವಡಿಸಿಕೊಂಡಿದ್ದಾನೆ. ಅದು ಭಕ್ತಿಯ ವಿವಿಧ ಪ್ರಕಾರಗಳೂ ವಿವಿಧ ಅವಸ್ಥೆಗಳೂ ನಿದರ್ಶನಪೂರ್ವಕವಾಗಿ ವ್ಯಕ್ತಪಡಿಸಿದ್ದಾನೆ. ಕಾವ್ಯದಲ್ಲಿ ಕೃಷ್ಣ ಭಕ್ತಿಯ ಮಹಿಮೆಯನ್ನು ಇಷ್ಟೆಂದು ಕರಾರುವಕ್ಕಾಗಿ ಹೇಳಲಾಗದು. ಕೃಷ್ಣ ಭಕ್ತರಾಗಿ ಕೃಷ್ಣ ಸ್ತುತಿಮಾಡಿ ಕೃಷ್ಣನ ಕೃಪೆಗೆ ಪಾತ್ರರಾದವರ ಸುಖ ಸೌಭಾಗ್ಯಗಳಿಗೆ ಮಿತಿಯಿಲ್ಲ. ಕೃಷ್ಣ 'ಶರಣಜನಸುರಧೇನು' ಭಕ್ತರ ಬಂದು ಓವಿ ಭಜಿಸಲು ತನ್ನ ಬೀರುವದೇವ, ಭಕ್ತರಿಗಾಗಿ ಅವನು ಏನು ಮಾಡಲೂ ಸಿದ್ಧನಾಗುತ್ತಾನೆ. ವೈರೋಚನಿಯ ಪಡಿಹಾರಿಕೆಯನ್ನು ಮಾಡಿದ. ಅಂತೆಯೇ 'ಕಿರೀಟಿಯ ಮನೆಯ ಬಂಡಿಯಬೋವ'ನೂ ಆಗುತ್ತಾನೆ. ಭಕ್ತರನ್ನು ಅವನು ತನ್ನವರೆಂದು ಭಾವಿಸುವಂತೆಯೇ ಅವರ ಶತ್ರುಗಳನ್ನು ತನ್ನ ಶತ್ರುಗಳೆಂದೇ ಭಾವಿಸಿ ಅವರನ್ನು ನಿರ್ಮೂಲಗೊಳಿಸುತ್ತಾನೆ. ಇನ್ನು ತನ್ನನ್ನು ವಿರೋಧಿಸಿ ನಿಂತವರನಂತೂ ಹೇಳಹೆಸರಿಲ್ಲದಾಗುವಂತೆ 'ಕೃಷ್ಣಂಗೆ ಮುನಿದವರೇಸು ದಿನ ಬದುಕುವರು' (ಸ. ೧೦-೮೦) ಎಂದು ಕುಮಾರವ್ಯಾಸ ಹೇಳಿರುವುದನ್ನು ಗಮನಿಸಬಹುದು: ಸಂಜಯನೊಡನೆ ಕೃಷ್ಣನೇ ಒಮ್ಮೆ

ಭಂಟನಹೆ ಬಕುತರಿಗೆ ನೆನೆವರು
ನಂಟರೆಮಗೊಲಿದಂತೆ ಹೊಗಳಿದ
ರೆಂಟು ಮಡಿಹಿಗ್ಗುವೆವು ಮೆಚ್ಚವು ತರ್ಕಸಾಧಕರ
ಉಂಟಾ ಪಾಂಡವರೈವರಲಿ ಬಲು
ನಂಟತನ ಮರೆಯೇತಕೈವರ
ಕಂಟಕರು ನಮಗಾದ ಕಂಟಕರೆಂದು
(ಕ.ಭಾ.ಕ. ಉ.ಪ. ೫-೮)

ನುಡಿಯುತ್ತಾನೆ.

ದುರ್ಯೋಧನನ ದುಷ್ಪ್ರೇರಣೆಯಿಂದ ಯುಧಿಷ್ಠಿರನನ್ನು ಅಪಮಾನಪಡಿಸಲೆಂದು ಬಂದಿದ್ದ ದೂರ್ವಾಸ, ಅತ್ತ ದ್ರೌಪದಿಯ ಮೊರೆಕೇಳಿ ಕೃಷ್ಣ ಬಂದನೆಂದು ತಿಳಿದಾಗ 'ಬಂದನೇ ಗೋವಿಂದ? ಭಕುತರ ಬಂಧುವಲ್ಲಾ! ಆತನೊಳು ಮನಸಿಗೆ ಸಂದಮನುಜರ ಸೆಣಸೆ ಮಾಣಿ ಪರಾಕು ಭುವನದಲಿ' (ಅ ೧೬-೪೨) ಎನ್ನುತ್ತಾ ಕೃಷ್ಣನ ದರ್ಶನಕ್ಕೆ ಬರುತ್ತಾನೆ.

ದ್ರೌಪದಿಯ ಸ್ವಯಂವರದ ಅನಂತರ ಮೊದಲ ಬಾರಿಗೆ ಕೃಷ್ಣ ಸಕಲ ಯಾದವರೊಂದಿಗೆ ಆಗಮಿಸಿ ಕುಂತಿಯನ್ನು ನೋಡಿದಾಗ ತನ್ನೈವರು ಮಕ್ಕಳಿಗೂ ಯಾದವರ ಪರಿಚಯ ಮಾಡಿಕೊಟ್ಟು ಅವರನ್ನು 'ಕೈನೆಗಹಿ ಕಮಲೋದರನ ಕೈಯಲೆ ಕೊಟ್ಟಾಳಾ ಕುಂತಿ' (ಆ ೧೭-೬) ಅಂದಿನಿಂದ ಪಾಂಡವರು ಆತ್ಮೀಯರಾಗುತ್ತಾರೆ. ಪಾಂಡವರನ್ನು ತನ್ನ ಪ್ರಾಣವೆಂದು ಅವನೇ ಅಭಿಮಾನದಿಂದ ಹೇಳಿಕೊಳ್ಳುತ್ತಾನ್ನಲ್ಲದೆ ಅವರನ್ನು ಕೊನೆಯವರೆಗೂ ಕಾಪಾಡುತ್ತಾನೆ. ಕೃಷ್ಣನು ಎಷ್ಟು ದೊಡ್ಡ ದೈವವೋ ಪಾಂಡವರು ಅವನಿಗೆ ಅಷ್ಟು ವಿನೀತರಾದ ಸೇವಕರಂತಾಗುತ್ತಾರೆ. ತನ್ನಲ್ಲಿ ದೇವತನ ಲಯವಿಲ್ಲವೆಂದು ಕೃಷ್ಣ ಅರ್ಜುನನೊಡನೆ ಪರಿಹಾಸವಾಗಿ ನುಡಿಯುತ್ತಾನೆ. ದೂರ್ವಾಸಾತಿಥ್ಯದಲ್ಲಿ ಧರ್ಮರಾಜನ ಮಾನ ಉಳಿಸಿದ್ದು, ದ್ಯೂತಸಭೆಯಲ್ಲಿ ದ್ರೌಪದಿಗೆ ಅಕ್ಷಯವಸ್ತ್ರ ಪ್ರದಾನ ಮಾಡಿದುದು ಕೃಷ್ಣನ ಭಕ್ತ ರಕ್ಷಣೆಯ ಜ್ವಲಂತ ನಿದರ್ಶನಗಳು.

ಖಾಂಡವದಹನ ಪ್ರಸಂಗದಲ್ಲಿ ಅಗ್ನಿಗೆ ಭಾಷೆಕೊಟ್ಟ ಅರ್ಜುನನನ್ನು ಕೃಷ್ಣ ಹಂಗಿಸಿದಾಗ ಅವನು ಕೊಡುವ ಉತ್ತರ ಹೀಗಿದೆ 'ಭಂಗವೇಕೈ ಕೃಷ್ಣ? ಭಯಭಂಗವುಂಟೇ ನಿನ್ನ ಕೃಪೆಯಿರಲು' (ಆ ೨೦-೧೮) ಎನ್ನುತ್ತಾನೆ. ರಾಜಸೂಯಯಾಗವನ್ನು ಕೈಗೊಳ್ಳುವ ವಿಷಯವನ್ನು ಆಲೋಚಿಸಲೆಂದು ಧರ್ಮರಾಯ ಕೃಷ್ಣನನ್ನು ಬರಮಾಡಿಕೊಂಡಾಗ ಕೃಷ್ಣನು ಅವನನ್ನು 'ದಾನವರ ಕೌರವರ ವೈರದೊಳೇನು ವಿಗ್ರಹವಿಲ್ಲವೇ' ಎಂದು ಕೇಳಿದಾಗ ಧರ್ಮರಾಯ 'ದನುಜರಲಿ ಕುರುಸೇನೆಯಲಿ

ಭಯವೆನಗೆ ಭಾರಿಯೆ? ನಿಮ್ಮ ಘನಪದವನಜವಿದು ಸೀಸಕವಲೇ ತನ್ನುತ್ತಮಾಂಗದಲಿ' (ಸ.ಪ. ೨-೧೧) ಎನ್ನುವುದನ್ನು ನೋಡಬಹುದು.

ರಾಜಸೂಯಯಾಗ ಮುಗಿದ ಅನಂತರ ಬಂಧುಬಾಂಧವರೆಲ್ಲ ನಿರ್ಗಮಿಸಿದ ಅನಂತರ ಕೃಷ್ಣ ಪಾಂಡವರೊಡನೆ ಏಕಾಂತದಲಿ ಸಂಭಾಷಣೆಯಲ್ಲಿ ತೊಡಗಿದ್ದಾಗ ಧರ್ಮರಾಯ 'ದೇವ ನಿಮ್ಮಡಿಯಂಘ್ರಿಕಮಲವನಾವ ನೆನೆವನವಂಗೆ ತುಸುವಲ್ಲಾ ವಿರಿಂಚಾದ್ಯ ಮುರಪದವಿ? ಇದು ನಿಗಮಸಿದ್ಧವಲೆ? ನಾವು ಸಾಕ್ಷಾದಮಳಮೂರ್ತಿಸುಧಾವಸೇಚನ ದುತಕಿಲ್ಬಿವರಾವುದರಿದ್ಯೆಬೊಪ್ಪನವರಿಗೆ ಶಕ್ರಪದವೆಂದ' (ಸ. ೧೧-೧೪) ಎನ್ನುತ್ತಾನೆ. ಅಜಗರದಿಂದ ಭೀಮ ಬಿಡುಗಡೆ ಹೊಂದಿ ಹಿಂತಿರುಗಿದಾಗ ಯುಧಿಷ್ಠಿರ 'ಅಪಾಯದ ಜಲಧಿಗಳು ಬತ್ತುವುವು ಯದುಕುಲತಿಲಕರ ಗದುಗಿನ ವೀರನಾರಾಯಣನ ಕರುಣದಲಿ' (ಅ ೧೩-೨೨) ಎಂದು ಹೇಳುತ್ತಾನೆ.

ಅನಾಥ ರಕ್ಷಕನೂ ಆಪದ್ಬಾಂಧವನೂ ಆದ ಶ್ರೀಕೃಷ್ಣ ತನಗೆ ಅನನ್ಯಶರಣನ್ ಆತ ಭಕ್ತವತ್ಸಲರನ್ನು ಎಂದಿಗೂ ಕೈಬಿಡದೆ ಕಾಪಾಡುತ್ತಾನೆ. ಅವರ ಜವಾಬ್ದಾರಿಗಳೂ ಮಾನಾಪಮಾನಗಳೂ ಅವನಿಗೆ ಸೇರಿದುದು 'ಆಳಿನೊಂದಪಮಾನ ಆಳ್ದನಿಗೆ' (ಸ ೧೪-೧೩೧) ಆದುದರಿಂದ ಶ್ರೀಕೃಷ್ಣನು ಭಕ್ತರ ಕೈಬಿಟ್ಟರೆ ಅವನಿಗೇ ಅವಮಾನವಾದಂತಾಗುತ್ತದೆ. ಹಾಗಾಗೀ ಭಕ್ತರಿಗೆ ನಿರ್ಭಯ ಭಕ್ತರಿಗಿರುವ ಸ್ವಾತಂತ್ರ್ಯ ಅವನಿಗೆ ಇಲ್ಲವೆನಿಸಬಹುದು. ಭಕ್ತಿಯ ಮಹಿಮೆ ಅಂಥದು. ಭೀಷ್ಮನ ಭಕ್ತಿ ಇದಕ್ಕೊಂದು ನಿದರ್ಶನ. ಕೃಷ್ಣನೇ ಕೋಪಗೊಂಡು ಚಕ್ರಹಿಡಿದು ಭೀಷ್ಮನ ಮೇಲೆ ಎರಗಿದಾಗ 'ನಿಮಗಾವು ಹೆದರೆವು ನಾಮಧಾರಿಗಳತುಳಬಲರು' (ಭಿ. ೬-೪೩) ಎಂದು ಗರ್ವಪಟ್ಟು 'ಭಂಗವಲ್ಲದು ನಿನ್ನ ಘನತೆಗೆ ಡಿಂಗರಿಗರೇ ಮಿಗಿಲು ನಿನಗೆಯು ನಿನ್ನಯ ಹಂಗನೊಲ್ಲೆನು ಮುಕುತಿಪಥದೊಳು ಅಭಂಗ ಪೆಂಡೆಯದಾಳಲ್ಯೆ ನಿಮ್ಮಡಿಯ ಸಿರಿನಾಮ' (ಭಿ. ೬-೪೪) ಎಂದು ವಾದಿಸಿ 'ದಿಟ ಕೊಲುವ ಮನವೇ ಬಿಸುಡು ಚಕ್ರವನೆನ್ನ ಕಾಯದಲಿ, ಅಳಿಕಿ ಕೂದಲು ಹರಿದಂದಾರೆ ಬಳಿಕ ನಾ ಡಿಂಗರಿಗನಲ್ಲ ಈ ಕಳವಳಿಕೆ ನಾನಂಜುವನೆ? ದೇವ ಮರಳು' (ಭಿ. ೬-೪೫) ಎಂದು ಸವಾಲು ಹಾಕುತ್ತಾನೆ. ಆಗ ಕೃಷ್ಣ ಚಕ್ರವನ್ನು ಬಿಸುಟು ರಥದ ಕಡೆಗೆ ಹೆಜ್ಜೆ ಹಾಕುತ್ತಾನೆ.

ಕುಮಾರವ್ಯಾಸಭಾರತದಲ್ಲಿ ಕೃಷ್ಣ ಮಹಿಮೆಗೆ ಒಳಾಗಾಗದ ವ್ಯಕ್ತಿಗಳೇ ಇಲ್ಲವೆನ್ನಬಹುದು. ಸಮಸ್ತ ಪಾತ್ರಗಳೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಕೃಷ್ಣನ ಪರಮಭಕ್ತರೇ ಅಥವಾ ಕೃಷ್ಣನ ಮಹಿಮೆಯನ್ನರಿತು ಅದಕ್ಕೆ ಮಣಿಯತಕ್ಕವರೇ ಆಗುವಂತೆ ಕುಮಾರವ್ಯಾಸ ಚಿತ್ರಿಸಿರುವುದನ್ನು

ಕಾವ್ಯದುದ್ದಕ್ಕೂ ಕಾಣಬಹುದು. ಹಾಗೆಯೆ ದ್ರುಪದರಾಜ ತನ್ನ ಮಗಳ ಮದುವೆಯ ಬಗ್ಗೆ ಚಿಂತಿಸುತ್ತಾ 'ಪಾಂಡುರಾಯರನು ತೋರಿಸನೆ ಗದುಗಿನ ವೀರನಾರಾಯಣ' (ಆ. ೧೩-೬೮) ಎಂದು ಚಿಂತಿಸುತ್ತಾನೆ.

ಧೃಷ್ಟದ್ಯುಮ್ನ ತನ್ನ ತಂಗಿ ದ್ರೌಪದಿಯ ಸ್ವಯಂವರದ ಸಂದರ್ಭದಲ್ಲಿ ದ್ರೌಪದಿಗೆ ರಾಜರುಗಳ ಪರಿಚಯವನ್ನು ಮಾಡಿಕೊಡುತ್ತಾ ಕೃಷ್ಣನನ್ನು ತೋರಿಸಿ 'ಇತ್ತ ನೋಡಾ ತಂಗಿ ಯದುಭೂಪೋತ್ತಮನನ್ನು ಅಮರಾರಿಕದಳೀಮತ್ತದಂತಿಯ, ನಿಖಿಳನಿಗಮಾವಳಿ, ಶಿರೋಮಣಿಯ...' ಎಂಬಿತ್ಯಾದಿಯಾಗಿ ವರ್ಣಿಸುತ್ತಾನೆ (ಆ ೧೩-೧೯, ೬೦) ಆಗ ದ್ರೌಪದಿ 'ಭಕುತಿಯ ಭಾವರಸದಲ್ಲಿ ನೆನೆದು ಹೋಂಪುಳಿವೋಗಿ ರೋಮಾಂಚನದ ಮೈಯಿಬ್ಬಿನಲಿ ತನುಪುಳಕಾಂಬುಪೂರದಲ್ಲಿ ಮನದೊಳಗೆ ವಂದಿಸಿದಳು' (ಅ ೧೩-೬೧). ಮತ್ಸ್ಯಯಂತ್ರ ಭೇದನದ ಸಂದರ್ಭದಲ್ಲಿ 'ಕೃತಕ ಧನುವನು ಮುರಿದು ದೃಪದನ ಸುತೆಯ ಮುಂದಲೆವಿಡಿದು ತಹೆನು' ಎಂದು ಬಲರಾಮ ತನ್ನ ಆಸನವನ್ನಿಳಿದಾಗ ಕೃಷ್ಣ ಅವನನ್ನು ತಡೆದು, ಪಾಂಡವರು ಇನ್ನು ಜೀವಂತರಾಗಿದ್ದಾರೆಂದೂ ಅವರೇ ದ್ರೌಪದಿಗೆ ಪತಿಗಳಾಗುವರೆಂದೂ ಹೇಳಿ ಅಚ್ಚರಿಗೊಳಿಸಿದನು.

ಕೃಷ್ಣನ ಅನುಮತಿಯಿಲ್ಲದೆ ಅಥವಾ ಕೃಷ್ಣನಾಮಸ್ಮರಣೆಯಿಲ್ಲದೆ ಪಾಂಡವರಂತೂ ಯಾವ ಕಾರ್ಯಕ್ಕೂ ಕೈ ಹಾಕುವುದಿಲ್ಲ. ಧರ್ಮರಾಯನಿಗೆ ರಾಜಸೂಯಯಾಗವನ್ನು ಕೈಗೊಳ್ಳಲು ಎಲ್ಲರಿಂದ ಬೆಂಬಲ ದೊರೆತರೂ ಸಾಲದು 'ಗೋವಿಂದ ಮತದಲಿ ತೂಗಿನೋಡುವೆವಿದರ ತೂಕವನು' ಎನ್ನುತ್ತಾನೆ. ಉತ್ತರೆ ಅಭಿಮನ್ಯುಗಳ ವಿವಾಹ ಪ್ರಸ್ತಾಪ ಬಂದಾಗ 'ಎಮಗೆ ಪರಮಸ್ವಾಮಿ ಎಮ್ಮತ್ಸವದನೆಲೆ, ಎಮ್ಮೈವರಸು ಯಾದವ ಶಿರೋಮಣಿ ಕೃಷ್ಣಭಿಮತವೆ ಎಮ್ಮ ಮತ' (ವಿ ೧೦-೨೩) ಎನ್ನುವುದನ್ನು ಕಾಣಬಹುದು.

ಹೀಗೆ ಇಡೀ ಕಾವ್ಯವನ್ನೇ ಕೃಷ್ಣಮಯವನ್ನಾಗಿ ಕವಿ ನಿರೂಪಿಸಿದ್ದಾನೆ. ಕುಮಾರವ್ಯಾಸನ ದೃಷ್ಟಿಯಲ್ಲಿ ಕೃಷ್ಣಪಾರಮ್ಯ, ಕೃಷ್ಣಮಹಿಮೆ, ಕೃಷ್ಣಲೀಲೆ, ಕೃಷ್ಣನಾಮಸಂಕೀರ್ತನೆ ಇವುಗಳೇ ಪ್ರಧಾನವಾಗಿರುವುದರಿಂದ ಅವುಗಳಿಗೆ ಆಸ್ಪದ ಕೊಡುವ ಕಥಾಭಾಗಕ್ಕೆ ಹೆಚ್ಚು ಗಮನ ಕೊಟ್ಟು ಮೂಲದ ಉಳಿದ ಕಥಾಭಾಗವನ್ನು ಅವನು ಗೌಣವಾಗಿ ಕಂಡಿದ್ದಾನೆ. ಕೃಷ್ಣವಿಷಯಕ್ಕೆಡೆ ಕೊಡದ ಕಥಾಸನ್ನಿವೇಶಗಳನ್ನು ಒಂದೋ ಅವನು ಪೂರ್ಣವಾಗಿ ಕೈ ಬಿಡುತ್ತಾನೆ. ಇಲ್ಲವೇ ಕಥಾಧಾರೆಗೆ ಭಂಗಬರದಂತೆ ಕೆಲವೇ ಮಾತುಗಳಲ್ಲಿ ಸಂಗ್ರಹಿಸಿ ನಾಗಾಲೋಟದಿಂದ ಮುಂದುವರೆಯುತ್ತಾನೆ.

ವ್ಯಾಸಭಾರತದಲ್ಲಿ ಸುಧೀರ್ಘವಾಗಿ ಬರುವ ಭೀಷ್ಮ ಜನನ ವೃತ್ತಾಂತವೂ ಇಲ್ಲಿ ಒಂದೂವರೆ ಪದ್ಯದಲ್ಲೇ ಮುಗಿಸಲಾಗಿದೆ (ಆ ೨-೨೧). ಪಾಂಡವ ಕೌರವರ ವಿದ್ಯಾಭ್ಯಾಸಾದಿಗಳನ್ನಾದರೂ ವಿವರವಾಗಿ ವರ್ಣಿಸುವ ಅಕ್ಕರೆ ಕವಿಗಿಲ್ಲ. ಆತುರಾತುರವಾಗಿಯೇ ಮುಂದುವರೆಸಿದ್ದಾನೆ. 'ಸೆಣಸಿದೊಡೆ ಏಕಲವ್ಯನ ಬೆರಳಕೊಂಡನು'-ಇಷ್ಟರಲ್ಲೇ ಏಕಲವ್ಯನ ಕಥೆಯನ್ನೆಲ್ಲಾ ಮುಗಿಸಲಾಗಿದೆ. ಅದೇ ಕೃಷ್ಣಪಾರಮ್ಯ ಪ್ರತಿಪಾದನೆಗೆ ಅವಕಾಶ ದೊರೆತರಂತೂ ನಾರಾಣಪ್ಪ ಸಾವಧಾನವಾಗಿ ಮುಂದುವರಿಯುತ್ತಾನೆ. ಕಾವ್ಯವನ್ನು ವಿಸ್ತರಿಸುತ್ತಾ ಹೋಗುತ್ತಾನೆ. ವ್ಯಾಸಭಾರತದಲ್ಲಿ ಸಂಕ್ಷಿಪ್ತವಾಗಿರುವ ಅಕ್ಷಯವಸ್ತ್ರಪ್ರದಾನ ಪ್ರಸಂಗವನ್ನು ವಿಸ್ತರಿಸಿರುವುದೇ ಅದಕ್ಕೆ ನಿದರ್ಶನವೆನ್ನಬಹುದು. ಕೃಷ್ಣಭಕ್ತಿಗೆ ಆಸ್ಪದವಿಲ್ಲದೆಡೆಯೂ ಕವಿ ತನ್ನ ಕಾವ್ಯದಲ್ಲಿ ಹೇಗೋ ಅವಕಾಶ ಕಲ್ಪಿಸಿಕೊಳ್ಳುತ್ತಾನೆ.

ಕುಮಾರವ್ಯಾಸನಿಗೆ ಕೃಷ್ಣನ ನಾಮಸ್ಮರಣೆ ಕೇಳಿದ ಕೂಡಲೆ ಭಾವೋದ್ರೇಕ ಉಂಟಾಗುತ್ತದೆ. ಎಂದರೆ ತಪ್ಪಾಗಲಾರದು. ಕೃಷ್ಣನು ಕಾಣಿಸಿಕೊಳ್ಳುವ ಸನ್ನಿವೇಶ ಬಂದಿತೆಂದರೆ ರಸಾವೇಶದಿಂದ ಕಾವ್ಯವಾಹಿನಿ ತಾನೇ ತಾನಾಗಿ ಉಕ್ಕಿಹರಿಯುತ್ತದೆ. ಕೃಷ್ಣನ ಆಗಮನ ಯಾವ ಸಂದರ್ಭದಲ್ಲಿಯೇ ಆಗಲಿ ಅದು ಅವನಿಗೆ ಸಾಮಾನ್ಯ ವಿಷಯವಲ್ಲ. ಪರಾತ್ಪರ ವಸ್ತುವಿನ ಸಂದರ್ಶನ ಸುಲಭ ಸಾಧ್ಯವೇ. ಅವನನ್ನು ಕಾಣಬಯಸುವ ಸ್ವಾಗತಿಸುವ ಸ್ತುತಿಸಿ ಕೃತಾರ್ಥರಾಗುವ ಜನಗಳ ಸಂಭ್ರಮ ಮುಗಿಲು ಮುಟ್ಟುತ್ತದೆ. ಇಂತಹ ವಿಷಯಗಳನ್ನು ಸಂಕ್ಷಿಪ್ತಗೊಳಸಲು ಕವಿಗೆ ಮನಸ್ಸು ಒಪ್ಪದೆ ಸಹಜವಾಗಿಯೇ ಕಾವ್ಯವನ್ನು ವಿಸ್ತರಿಸುತ್ತಾ ಹೋಗುತ್ತಾನೆ. ಅಂತೆಯೇ ವಿದುರನ ಮನೆಯಿಂದ ದುರ್ಯೋಧನನ ಸಭೆಗೆ ಹೊರಟ ಕೃಷ್ಣನನ್ನು ಕುರಿತು,

**ಕಂಜಸಂಭವ ಪಿತನು ಬಂದನು**
**ನಂಜಿನಲಿ ಪವಡಿಸುವವ ಬಂದನು**
**ಕುಂಜರನ ಮೊರೆಗೇಳಿ ಸಲಹಿದ ದೇವನಿದೆ ಬಂದ**
**ಅಂಜನಾಸುತನೊಡೆಯ ಬಂದನು**
**ಅಂಜಿದಸುರನಿಗಭಯವಿತ್ತವ**
**ಭಂಜನೆಗೆ ಬಲುದೈವ ಬಂದನು ನೃಪತಿಯರಮನೆಗೆ**

(ಕ.ಭಾ.ಕ. ಉ.ಪ. ೮-೫೧)

ಎಂಬುದಾಗಿ ಅವನು ಬಂದನೆಂಬ ವಿಷಯವನ್ನೇ ನಾಲ್ಕು ಪದ್ಯಗಳಲ್ಲಿ ವಿಸ್ತರಿಸುತ್ತಾನೆ. ಇನ್ನು ಕೃಷ್ಣನನ್ನು ಸ್ತುತಿಸುವ ಸನ್ನಿವೇಶ ಬಂದಲ್ಲಿ ಎಷ್ಟೆಷ್ಟು ವಿಧವಾಗಿ ಅವನ ಮಹಿಮೆ, ವರ್ಣನೆ ಮಾಡಿದರೂ ಅವನಿಗೆ ಅತೃಪ್ತಿಯೇ. ಅಂತಹ ಎಡೆಗಳಲ್ಲಿ ಕಾವ್ಯವು ವಿಸ್ತರಿಸುತ್ತಾ ಹೋಗುತ್ತದೆ.

ನಿದರ್ಶನಕ್ಕೆ ಶಿಶುಪಾಲವಧೆ, ಅಕ್ಷಯವಸ್ತ್ರಪ್ರದಾನ, ದುರ್ಯೋಧನನೋಡನೆ ಸಂಧಾನಗಳ ಸನ್ನಿವೇಶಗಳನ್ನು ಅವಲೋಕಿಸಬಹುದು.

ಕುಮಾರವ್ಯಾಸನಿಗೆ ಮಹಾಭಾರತವನ್ನು ಕೃಷ್ಣಚರಿತಾಮೃತವನ್ನಾಗಿಸಬೇಕೆಂಬುದು ಮೂಲ ಉದ್ದೇಶವಾಗಿದ್ದರೂ ಲೌಕಿಕ ದೃಷ್ಟಿಯನ್ನು ಅವನು ಬಿಟ್ಟಿಲ್ಲವೆನ್ನಬಹುದು. ತನ್ನ ಕಾವ್ಯ ಪಾರಮಾರ್ಥಿಕ ದೃಷ್ಟಿಯುಳ್ಳವರಿಗೆ ಮಾತ್ರವೇ ಅಲ್ಲದೆ ಎಲ್ಲ ಸ್ತರದ ವ್ಯಕ್ತಿಗಳಿಗೂ ಪ್ರಿಯವಾಗಬೇಕು. ಅದು ಕಾವ್ಯಕ್ಕೆ ಗುರು ಆಗಬೇಕೆಂಬುದು ಅವನ ಹೆಬ್ಬಯಕೆ:

**ಅರಸುಗಳಿಗಿದು ವೀರ ದ್ವಿಜರಿಗೆ**
**ಪರಮ ವೇದದಸಾರ ಯೋಗೀ**
**ಶ್ವರರ ತತ್ವ ವಿಚಾರ ಮಂತ್ರಿ ಜನಕ್ಕೆ ಬುದ್ಧಿಗುಣ**
**ವಿರಹಿಗಳ ಶೃಂಗಾರ ವಿದ್ಯಾ**
**ಪರಿಣತರಲಂಕಾರ ಕಾವ್ಯಕ್ಕೆ**
**ಗುರುವೆನಲು ರಚಿಸಿದ ಕುಮಾರವ್ಯಾಸಭಾರತವ**
**(ಕ.ಭಾ.ಕ. ಆ.ಪ. ೧-೧೯)**

ಎಂದು ಕವಿ ತನ್ನ ಕಾವ್ಯದ ವಸ್ತು ವಿನ್ಯಾಸವನ್ನು ಕುರಿತು ವಿವಿಧ ಅಭಿರುಚಿಯುಳ್ಳ ಜನರಿಗೆ ವಿವಿಧ ವಿಷಯಗಳನ್ನು ದೊರಕಿಸಲೆಂದು ಅವನು ಮೊದಲೇ ನಿಯೋಜಿಸಿಕೊಂಡಿದ್ದಾನೆ. ಆ ಯೋಜನೆಗನುಸಾರವಾಗಿ ಮೂಲದ ಕಥಾಭಾಗಗಳನ್ನಾಯ್ದುಕೊಂಡು ವಿಶದೀಕರಿಸುತ್ತಾನೆ.

ಕುಮಾರವ್ಯಾಸಭಾರತ ಸಂವಿಧಾನದ ದೃಷ್ಟಿಯಿಂದ ಮುಖ್ಯವಾಗಿ ಮೇಲಿನ ಪದ್ಯವನ್ನು ಗಮನಿಸಬೇಕು. ವಿಶಾಲಾರ್ಥದಲ್ಲಿ ಕುಮಾರವ್ಯಾಸನ ಕಾವ್ಯದ ಉದ್ದೇಶವನ್ನು ಇದು ವ್ಯಕ್ತಪಡಿಸುತ್ತದೆ. ನಿಜವಾಗಿ ಕಾವ್ಯ ಇದೆಲ್ಲವನ್ನೂ ಒಳಗೊಂಡಿದೆ. ಭಕ್ತಜನರ ಪಾರಾಯಣಕ್ಕಾಗಿ ತಾನು ಕುಮಾರವ್ಯಾಸಭಾರತವನ್ನು ರಚಿಸುತ್ತಿದ್ದೇನೆಂದು ಬಹಳಷ್ಟು ಸಲ ಹೇಳಿಕೊಂಡಿದ್ದರೂ ತನ್ನ ಕೃತಿಯಲ್ಲಿರುವುದು ಅದಷ್ಟೇ ಅಲ್ಲ ತನ್ನ ಉದ್ದೇಶವೂ ಅಷ್ಟು ಮಾತ್ರವೇ ಅಲ್ಲ ಎಂಬುದು ಅವನಿಗೆ ತಿಳಿದ ವಿಚಾರವೇ ಆಗಿದೆ. ಭಿನ್ನ ರುಚಿಯ ಲೋಕಸಮಸ್ತವನ್ನು ಆದಷ್ಟೂ ತಣಿಸಬೇಕೆಂಬುದು ಅವನ ಧ್ಯೇಯೋದ್ದೇಶವಾಗಿದೆ. ಭಾರತಕಥೆಯ ವೈವಿಧ್ಯಮಯತೆಯ ಮೂಲಕ ಈ ಧ್ಯೇಯವನ್ನು ಸಾಧಿಸುವುದೇ ಅವನ ಉದ್ದೇಶವಾಗಿದೆ.

ರಾಜಪುತ್ರರ ಪೌರುಷ ಸಾಧನೆಯ, ದ್ವೇಷಾಸೂಯೆಯ ಯುದ್ಧ ಪರಂಪರೆಯ ಕಥೆ ಇದಾದುದರಿಂದ ಸಾಹಸಿ ಜನರನ್ನು ಮೆಚ್ಚಿಸುವ ವೀರರಸ ಪ್ರತಿಪಾದನೆಗೆ ಕಾವ್ಯದಲ್ಲಿ ಅವಕಾಶವುಂಟು. ನ್ಯಾಯಾನ್ಯಾಯ, ಧರ್ಮ–ಅಧರ್ಮ ವಿಚಕ್ಷಣತೆ ಕೃತಿಯುದ್ದಕ್ಕೂ ತುಂಬಿಕೊಂಡಿರುವುದರಿಂದ ಭಾರತ ಕಥೆ ಕೃಷ್ಣನ ಮಹಿಮೆಯನ್ನು ಸಾರುವ ಕಥೆಯೇ ಆಗಿರುವುದರಿಂದ ತತ್ವಾರ್ಥ ಪ್ರತಿಪಾದನೆಯನ್ನು ಮಾಡುವ ಭಗವದ್ ಲೀಲಾವಿಲಾಸವನ್ನು ಅರುಹುವ ವೇದ ಗ್ರಂಥಗಳ ಸಾರ ಇಲ್ಲಿ ಭಟ್ಟಿಯಿಳಿದಿದೆ.

ಈ ಹಿನ್ನಲೆಯಿಂದ ಭಾರತ ಕಥೆಯನ್ನು ಅಧ್ಯಯನ ಮಾಡುವುದರಿಂದ ವೇದಾಧ್ಯಯನ ಮಾಡಿದಷ್ಟೇ ಪ್ರಯೋಜನ ಲಭಿಸುತ್ತದೆ. ವಿದುರ ಸಂಜಯ ದೌಮ್ಯ ನಾರದರಂತಹವರಿಂದ ನೀತಿಶಾಸ್ತ್ರ ನಿರೂಪಣೆ ಅಲ್ಲಲ್ಲಿ ಎಡೆಪಡೆದುಕೊಳ್ಳುವುದರಿಂದ ರಾಜಕಾರ್ಯದಲ್ಲಿ ನೆರವಾಗುವ ಮಂತ್ರಿಜನಕ್ಕೆ ರಾಜತಂತ್ರ ಕುಶಲತೆಯನ್ನು ಬೆಳಸುತ್ತಿದೆ. ಭಾರತ ಕೃತಿ ಒಂದು ಕಲಾಕೃತಿಯೂ ಆಗಿರುವುದರಿಂದ ಅದರಲ್ಲಿ ಶೃಂಗಾರಾದಿ ಕೋಮಲ ಭಾವನೆಗಳು ಸೇರಿ ರಸಿಕ ಜನರನ್ನು ತಣಿಸುತ್ತದೆ. ರೂಪಕಾಲಂಕಾರಗಳು ಉಪಮಾದಿ ಶಬ್ದಾರ್ಥ ವೈಚಿತ್ರಗಳೂ ತಕ್ಕಮಟ್ಟಿಗೆ ಬಂದಿರುವುದರಿಂದ ಕಾವ್ಯಶಾಸ್ತ್ರ ಪರಿಣಿತರ ಅಧ್ಯಯನಕ್ಕೆ ಗ್ರಾಸವನ್ನೊದಗಿಸುತ್ತದೆ. ಹಾಗಾಗಿ 'ಕರ್ಣಾಟಭಾರತ ಕಥಾ ಮಂಜರಿ'ಯ ಮೂಲೋದ್ದೇಶ ಪಾರಮಾರ್ಥಿಕ ಸಾಧನೆಯಾದರೂ ಅದು ಲೌಕಿಕವನ್ನು ಕಡೆಗಣಿಸಿದ ಕಾವ್ಯವಲ್ಲ. ಸಮಕಾಲೀನ ಬದುಕಿನ ಬೌದ್ಧಿಕ ಅಪೇಕ್ಷೆಗಳನ್ನು ಅರ್ಥಮಾಡಿಕೊಂಡು ಲೌಕಿಕರನ್ನು ಸಂತೃಪ್ತಿಗೊಳಿಸುತ್ತಾ ಪಾರಮಾರ್ಥಿಕರ ಸಾಧನೆಗೆ ಸಹಕಾರಿಯಾಗುವುದು ಕುಮಾರವ್ಯಾಸನ ಉದ್ದೇಶ್ವಾಗಿದೆ ಎನ್ನಬಹುದು.

ಕುಮಾರವ್ಯಾಸಭಾರತ ಕಥೆಯ ಬಗೆಗೆ ಗ್ರಹಿಸಿದ ಈ ಎಲ್ಲಾ ಪರಿಭಾವನೆಗಳು ಕವಿಗೆ ಮೀಸಲಾದುವಲ್ಲ ಹಾಗೂ ಅವನಿಂದಲೇ ಮೊದಲ್ಗೊಂಡವೂ ಅಲ್ಲವೆನ್ನಬಹುದು. ವ್ಯಾಸಭಾರತದಲ್ಲಿಯೇ ಇವು ಸೇರ್ಪಡೆಯಾದವುಗಳೇ ಆಗಿವೆ. ವೈಶಂಪಾಯನ ಮುನಿಯಿಂದ ಸಂಗ್ರಹರೂಪವಾಗಿ ಭಾರತ ಕಥೆಯನ್ನು ಕೇಳಿದ ಜನಮೇಜಯ ಆ ಕೂತುಹಲವನ್ನು ವ್ಯಕ್ತಪಡಿಸುವ ಮಾತುಗಳಲ್ಲಿ ಭಾರತ ಕಥೆಯ ವಸ್ತು ಸ್ವರೂಪವೂ ಅದರ ಮಹತ್ವವೂ ಸೂಚಿತವಾಗಿರುವುದನ್ನು ಕಾಣಬಹುದು.

ಪಾಂಡವರು ಧರ್ಮಗಳನ್ನೆಲ್ಲಾ ಬಲ್ಲವರೆಂದೂ ಅವರಲ್ಲಿ ಜೇಷ್ಠನಾದ ಯುಧಿಷ್ಠಿರ ಧಾರ್ಮಿಕರಲ್ಲಿ ಶ್ರೇಷ್ಠನೆಂದೂ ಅವರ ಕಥೆ ಒಂದು ಪುಣ್ಯ ಚಿತ್ರವೆಂದೂ ಇಲ್ಲಿ ವರ್ಣಿತವಾಗಿರುವುದು

ಗಮನಿಸಬೇಕಾದ ಅಂಶ. ದುರ್ಯೋಧನಾದಿಗಳು ದುಷ್ಟ ಸ್ವಭಾವದವರೆಂದೂ ಅವರು ಪಾಂಡವರಿಗೆ ಅನೇಕ ವಿಧವಾದ ಕಷ್ಟಗಳನ್ನು ಕೊಟ್ಟರೆಂದೂ ಧರ್ಮವಂತರೂ ಅತ್ಯಂತ ಪರಾಕ್ರಮಿಗಳು ಆದಂತಹ ಪಾಂಡವರು ಅವುಗಳನ್ನೆಲ್ಲಾ ಅತ್ಯುಂತ ಸಂಯಮದಿಂದ ಸಹಿಸಿಕೊಂಡರೆಂದೂ ಇಲ್ಲಿ ಹೇಳಲಾಗಿದೆ. ಅಂದರೆ ಭಾರತಕಥೆ ಧರ್ಮಾಧರ್ಮಗಳ ಮೇಲಾಟದ ಕಥೆ ಎಂದಂತಾಗುತ್ತದೆ. ಪರಂಪರೆ ರೂಪಿಸಿದ ಈ ಅಭಿಪ್ರಾಯವನ್ನು ಕುಮಾರವ್ಯಾಸ ಬಳಸಿಕೊಂಡಿದ್ದಾನೆ. ಅವನು ಮಾಡಿದಿಷ್ಟು ಧರ್ಮಿಷ್ಠನೂ, ಧೀರಸಹಿಷ್ಣುವೂ ಆದ ಧರ್ಮರಾಯನ ನಾಯಕತ್ವವನ್ನು ಕೃಷ್ಣನಿಗೆ ವರ್ಗಾಯಿಸಿದ್ದು ಆ ಮೂಲಕ ಭಾರತ ಕಥೆಯನ್ನು ಕೃಷ್ಣ ಕಥೆ ಕೃಷ್ಣನ ಮಹಿಮಾತಿಶಯದ ಕಥೆ ಎಂದು ಸಾರಿಸಲಾಯಿತ್ತು. ಜಿ.ಎಸ್.ಶಿವರುದ್ರಪ್ಪನವರು ಕುಮಾರವ್ಯಾಸನ ವೈಶಿಷ್ಟತೆಯನ್ನು ಕುರಿತು 'ನಾಯಕ ಯಾರೆಂದು ನಿರ್ಧಿಷ್ಟವಾಗಿ ಗುರುತಿಸಲು ಅಸಾಧ್ಯವಾದ ವ್ಯಾಸಭಾರತದ ಕಥಾವಸ್ತುವನ್ನು ಕೃಷ್ಣಕೇಂದ್ರಿತ ಚೌಕಟ್ಟಿಗೆ ತಂದದ್ದು ಕುಮಾರವ್ಯಾಸನ ವಿಶಿಷ್ಟತೆಯಾಗಿದೆ'[10] ಎಂದು ಗುರುತಿಸಿದ್ದಾರೆ.

**ಕುಮಾರವ್ಯಾಸನ ಕಲೆಗಾರಿಕೆ:**

ಕುಮಾರವ್ಯಾಸನನ್ನು ರೂಪಕ ಸಾಮ್ರಾಜ್ಯಚಕ್ರವರ್ತಿ ಎಂದು ಎಸ್.ವಿ. ರಂಗಣ್ಣನವರು ಕರೆದಿದ್ದಾರೆ. ಈ ಬಿರುದು ಸಹಾ ರೂಪಕಾಲಂಕಾದಲ್ಲಿದೆ, ಕವಿ ತನ್ನ ವಿಶಿಷ್ಟವಾದ ಅಭಿವ್ಯಕ್ತಿ ಪ್ರಕಾರವನ್ನು ರೂಪಿಸಿಕೊಳ್ಳುವಲ್ಲಿ ಭಾಷೆಯೊಂದಿಗೆ ಚಕ್ಕಂದವಾಡುತ್ತ, ಅನುಸಂಧಾನ ಮಾಡುತ್ತ, ಜಗಳವಾಡುತ್ತ ತನ್ನ ಉದ್ದೇಶ ಹಾಗೂ ಪರಿಕಲ್ಪನೆಗಳಿಗೆ ಹೊಂದುವ ಹಾಗೆ ಅದನ್ನು ಪಳಗಿಸಿ ಅದಕ್ಕೊಂದು ವಿಶಿಷ್ಟರೂಪ ಆಕಾರ ನೀಡಿ ತನ್ನ ಅನುಭವದ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಮಾಡಿಕೊಂಡಿದ್ದಾನೆ. ಯಾವ ಸಮರ್ಥ ಕವಿ ತನ್ನ ಕಾಲದ ವ್ಯವಹಾರಿಕ ಭಾಷೆಯನ್ನಾಗಲೀ ಇಲ್ಲವೇ ಕಾವ್ಯ ಭಾಷೆಯನ್ನೆ ಆಗಲಿ ಇದಕ್ಕಿದ್ದಂತೆ ನೇರವಾಗಿ ಅನುಸರಿಸುವುದಿಲ್ಲ. ಅದನ್ನು ಕಟ್ಟುವ ಕಟ್ಟಿ ಮುರಿಯುವ ಕ್ರಿಯೆ ಪ್ರಕ್ರಿಯೆಗಳಿಗೆ ಒಳಪಡುತ್ತ ಅದಕ್ಕೊಂದು ವಿಶಿಷ್ಟ ವ್ಯಕ್ತಿತ್ವ ಕ್ಷಮತೆಯನ್ನು ನೀಡಿರುತ್ತಾನೆ. ಇಂತಹ ಕಲೆ ಎಲ್ಲರಿಗೂ ಸಿದ್ಧಿಸುವುದಿಲ್ಲ. ಕುಮಾರವ್ಯಾಸನಂತಹ ಪ್ರತಿಭಾವಂತ ಕವಿಗಳಲ್ಲಿ ಮಾತ್ರ ಲೀಲಾಜಾಲವಾಗಿ ಬಳಕೆಯಾಗುತ್ತದೆ. ಭಾಷೆ ಸಾಹಿತ್ಯದ ಮಾಧ್ಯಮವಷ್ಟೇ ಅಲ್ಲ. ಅದು ಭಾಷೆಯ ಎಲ್ಲ ಅಂಶವನ್ನು ಬಳಸಿಕೊಳ್ಳುವ ಏಕೈಕ ಕಲೆ. ಕವಿ ತನ್ನ ಒಂದು ಕೃತಿಯಲ್ಲಿ ವಸ್ತುವಿನ ನೆಪದಲ್ಲಿ ಸಮಕಾಲೀನ ಭಾಷೆಯ ಮೂಲಕ ಅಂತರಂಗಕ್ರಿಯೆ ಪ್ರಕ್ರಿಯೆಗಳಿಗೆ ಅನಿಸಿಕೆ, ಆಲೋಚನೆಗಳಿಗೆ, ಕಾಲಾತೀತ ಭಾವನೆಗಳಿಗೆ ಕಲಾತ್ಮಕ ಅಭಿವ್ಯಕ್ತಿಯನ್ನು ಸೃಷ್ಟಿಸಿಕೊಡುತ್ತಾನೆ.

ರೂಪಕ ಎಂಬುದು ಒಂದು ಅಭಿವ್ಯಕ್ತಿ ವಿಧಾನ. ಅಮೂರ್ತವಾದ ಕವಿಯ ಭಾವಾನುಭಾವಗಳು, ಚಿಂತನೆ ಆಲೋಚನೆಗಳು ಮೂರ್ತರೂಪ ತಾಳಿ ಭಾಷೆಯಲ್ಲಿ ಕ್ರಿಯಾತ್ಮಕವಾಗಿ ಅಭಿವ್ಯಕ್ತಗೊಳ್ಳಬೇಕಾದರೆ ಓದುಗನ ಇಂದ್ರಿಯಗಮ್ಯ ಅನುಭವಗಳಿಗೆ ನಿಲುಕುವಂತಾಗಬೇಕಾದರೆ ಅದು ರೂಪಕವಿಧಾನದ ಅಭಿವ್ಯಕ್ತಿಯಲ್ಲಿ ಮಾತ್ರ ಸಾಧ್ಯವಾಗುತ್ತದೆ. ಈ ರೂಪಕ ವಿಧಾನದಲ್ಲಿ ಭಾಷೆಯ ಪ್ರತಿಯೊಂದು ಅಂಗೋಪಾಂಗವೂ ಮೂರ್ತತೆಯ ಅನುಭವವನ್ನು ನೀಡುತ್ತದೆ. ಅಷ್ಟೇ ಅಲ್ಲದೇ ಈ ರೂಪಕ ವಿಧಾನ ವಾಚ್ಯಾರ್ಥದಿಂದ ಮೇಲೇರಿ ಲಕ್ಷಣ ಹಾಗೂ ವ್ಯಂಗ್ಯಾರ್ಥದ ನೆಲೆಯಲ್ಲಿ ವ್ಯವಹರಿಸುವಂಥದು.

ಹೀಗಾಗಿ ಕಾವ್ಯಭಾಷೆ ಇಲ್ಲಿ ಹರಳುಗಟ್ಟುತ್ತ ಕ್ರಿಯಾಶೀಲಾವಾಗುತ್ತ ಧ್ವನಿಪೂರ್ಣವಾಗುವುದನ್ನು ಕುಮಾರವ್ಯಾಸಭಾರತದಲ್ಲಿ ಗಮನಿಸಬಹುದು. ಪ್ರತ್ಯಕ್ಷ ಪ್ರತೀಕಗಳನ್ನು ಬಳಸಿಕೊಳ್ಳುತ್ತ ಅಮೂರ್ತವಾದುದನ್ನು ಕಾಣುವ ಮಾನವ ಪ್ರಜ್ಞೆಯ ಸಾಮರ್ಥ್ಯಕ್ಕೆ ರೂಪಕ ವಿಧಾನ ಅತ್ಯಂತ ಗಮನಾರ್ಹವಾದ ನಿದರ್ಶನ. ಪ್ರತಿಯೊಂದು ಹೊಸ ಅನುಭವ ಅಥವಾ ವಸ್ತುವಿನ ಬಗೆಗೆ ಅನಿಸಿಕೆ ಇಲ್ಲವೇ ಹೊಸ ವಿಚಾರ, ಆಲೋಚನೆ ನೀಡುವಾಗ ಪರಿಚಿತ, ಅತ್ಯಂತ ಸಮೀಪದ ಅನುಭವವನ್ನು ಇಲ್ಲವೇ ವಿಚಾರಗಳ ಮೂಲಕ ಕೆಲವು ರೂಪಕೋಕ್ತಿಗಳನ್ನು ಉದ್ದೀಪಿಸುವುದು ಸಹಜವಾಗಿದೆ.

ರೂಪಕಗಳ ಸೃಷ್ಟಿಗೆ ಮುಖ್ಯವಾಗಿ ಸ್ವಂತ ಪ್ರತಿಭೆಯ ವೈಯಕ್ತಿಕ ಧೋರಣೆಗಳು, ಉಳಿದ ಅಲಂಕಾರ ಅಥವಾ ಅಭಿವ್ಯಕ್ತಿ ವಿಧಾನಗಳಂತೆ ಇದನ್ನು ಬೇರೆಯವರಿಂದ ಎರವಲು ಪಡೆಯಲು ಅಥವಾ ಕಲಿಯಲು ಸಾಧ್ಯವಾಗುವುದಿಲ್ಲ. ಜಗತ್ತಿನ ಹಲವಾರು ವಸ್ತುಗಳಲ್ಲಿ ಅತ್ಯಂತ ಸೂಕ್ಷ್ಮವಾಗಿ ಕಂಡು ಕಾಣದಂತಿರುವ ಸಾಮ್ಯವನ್ನು ಗುರುತಿಸುವುದು ಹಾಗೂ ಅದನ್ನು ಆ ಭಾಷಾ ಪರಂಪರೆಯ ಮಾರ್ಗದಲ್ಲಿ ಮೂರ್ತೀಕರಿಸುವುದು ಸಾಮಾನ್ಯ ಕವಿಗಳಿಂದ ಸಾಧ್ಯವಿಲ್ಲ. ಸಾಮಾನ್ಯವಾಗಿ ಸಂಬಂಧವಿಲ್ಲದ ಎರಡು ವಸ್ತುಗಳಲ್ಲಿ ಕವಿಯ ರೂಪಕ ಪ್ರತಿಭೆ ತನ್ನ ಮಿಂಚುಗಳಿನ ಅದ್ಭುತ ಬೆಳಕಿನ ಮೂಲಕ ಸಾಮ್ಯವನ್ನು ಕಂಡು ಹಿಡಿಯುತ್ತದೆ. ಅವೆರಡನ್ನು ಬೆಸೆದು ಒಂದಾಗಿಸುತ್ತದೆ. ಹೀಗೆ ಮಹಾಕವಿಯ ಸತ್ವದ ಭಾಷೆ ಸಹಜವಾಗಿಯೇ ರೂಪಕವಾಗಿ ಜೀವಸತ್ವ ಪೂರಕವಾಗುತ್ತದೆ.

ಸಾಮಾನ್ಯವೆನ್ನಿಸುವ ನುಡಿಗಟ್ಟುಗಳು, ಗಾದೆಮಾತುಗಳು, ಲೋಕೋಕ್ತಿಗಳು ಕುಮಾರವ್ಯಾಸನ ರೂಪಕ ಪ್ರತಿಭೆಯ ಸಂಸ್ಪರ್ಶದಿಂದಾಗಿ ಅಚ್ಚ ಹೊಸ ಅರ್ಥವೈಭವವನ್ನು ಹೊಂದುತ್ತದೆ. ಸಂದರ್ಭ ಶ್ರೀಮಂತಿಕೆ ನೂತನ ಅಭಿವ್ಯಕ್ತಿ ಕ್ರಮ ಮತ್ತು ಧ್ವನಿ ಪರಂಪರೆಗಳ ಮೂಲಕ ಕಾವ್ಯತ್ವವನ್ನು

ಪಡೆದುಕೊಳ್ಳುವ ಹೇಳಿಕೆಗಳಲ್ಲಿ ಕವಿಯ ರೂಪಕ ಮನೋಭಾವ ಎದ್ದು ಕಾಣುತ್ತದೆ. ನಿದರ್ಶನಕ್ಕಾಗಿ ಕೆಲವನ್ನು ಗಮನಿಸಬಹುದು: 'ಮಾತು ಹಳಸದ ಮುನ್ನ ಕೈಗಳು ಸೋತು ತೆಗೆದವೆ?', 'ನಾಲಗೆಯ ಸಾಲವನೀಗ ಕೈಯಲ್ಲಿ ತಿದ್ದಿಕೊಡುವರೆ?', 'ಸಿಡಿಲ ಪೊಟ್ಟಣಗಟ್ಟಿ ಶಾಖವ ಕೊಡುವರೆ', 'ಅರರೆ ಕಂಗಳ ಧಾರೆ ಯಾವನ ಕೊರಳು ಕೊಯ್ಯದು', 'ಹಗೆಗಳಿಗೆ ತಂಪಾಗಿ ಬದುಕುವ ಮುಗುದರಿನ್ನಾರುಂಟು?', ಈ ಮುಂತಾದ ಪ್ರಶ್ನಾರ್ಥಕ ಹೇಳಿಕೆಗಳಲ್ಲಿ ಮಾತು ಪಡೆದುಕೊಂಡಿರುವ ತಿರುವು ಯಾರನ್ನೂ ಬೆರಗುಗೊಳಿಸುತ್ತದೆ.

ಈ ಕೆಲವು ಸರಳ ಹೇಳಿಕೆಗಳನ್ನು ಗಮನಿಸಬಹುದು:

'ಬೆಂದ ಹುಣ್ಣಲಿ ಸಾಸಿವೆಯ ಹಾಕದಿರು ಕಾಳಕೂಟದ ಕಮಲದುಂಬಿಗೆ ಪಥ್ಯವಲ್ಲ', 'ಹೆಬ್ಬುಲಿಯ ಹಿಂಡಿಗೆ ಹೋತ ಹೊಂಕರಿಸಿತು', 'ಪತಿಗಳೆನ್ನನು ಮಾರಿ ಧರ್ಮಸ್ಥಿತಿಯ ಕೊಂಡರು.' ಕುಮಾರವ್ಯಾಸನ ಇಂಥ ಹಲವು ಮಾತುಗಳು ಅವನ ಲೋಕಾನುಭವವನ್ನು ಹಾಗೂ ಭಾಷಾ ಪರಿಣತ ಪ್ರಜ್ಞೆಯನ್ನು ಸಾರಿ ಹೇಳುತ್ತವೆ. ಯಾವ ವಿಷಯ ವಿಚಾರವನ್ನು ನೇರವಾಗಿ ಹೇಳದೆ ಲಕ್ಷ್ಯಾರ್ಥದಲ್ಲಿ ಇಡೀ ಮಾತನ್ನು ಹೇಳುತ್ತಾ ವ್ಯಂಗ್ಯಾರ್ಥದಲ್ಲಿ ಲೀನವಾಗುವ ಹಾಗೆ ಭಾಷೆಯನ್ನು ಸಂಯೋಜಿಸಿದ್ದಾನೆ. ಸಾದೃಶ್ಯ ವೈದೃಶ್ಯ ಪರಿಕರಗಳೆಲ್ಲವನ್ನು ವ್ಯವಸ್ಥೆಗೊಳಪಡಿಸಿ ಅವುಗಳ ಸಂಬಂಧ ತಂತುಗಳನ್ನು ಶೃತಿಮಾಡಿ ಜೋಡಿಸಿದ ಕುಮಾರವ್ಯಾಸನ ಈ ವಿಧಾನ ಅಚ್ಚರೂಪಕ ಪ್ರತಿಭೆಯದು. ಈ ಭಾಷಾ ಪರಿಣಿತಿ ಹಾಗೂ ಪ್ರಯೋಗ ಸಿದ್ಧಿಗಳು ಬೆರಗುಗೊಳಿಸುವಂಥವುಗಳು. ಅವನ ಪಾಲಿಗೆ ಭಾಷೆ ಒಂದು ನಿರ್ಜೀವ ವಸ್ತುವಲ್ಲ; ಇಲ್ಲವೇ ಯಾಂತ್ರಿಕ ವಿಧಾನದ ಸೂತ್ರವೂ ಅಲ್ಲ. ಅದು ಜೀವಂತಿಕೆಯಿಂದ ಸ್ಪಂದಿಸುವ ಅದ್ಭುತಶಕ್ತಿ. ಹೀಗಾಗಿ ಆಡು ಮಾತಿನ ಸಂಪ್ರದಾಯದ ಭಾಷೆಯ, ಗ್ರಂಥಸ್ಥ ಭಾಷೆಯ ರಾಜಭಾಷೆಯ ಎಲ್ಲ ಸತ್ವಶಕ್ತಿಗಳು ಮೈಗೂಡಿ ಶ್ರೀಮಂತವಾದುದನ್ನು ಅವನ ಕಾವ್ಯದಲ್ಲಿ ಕಾಣುತ್ತೇವೆ.

ಕುಮಾರವ್ಯಾಸನ ರೂಪಕ ಅಭಿವ್ಯಕ್ತಿ ಪ್ರಕ್ರಿಯೆಯನ್ನು, ಅದರ ವೈವಿಧ್ಯತೆ ಹಾಗೂ ಬಹುಮುಖತೆಯನ್ನು ಇನ್ನೊಂದು ನಿಟ್ಟಿನಿಂದ ನಿರುಕಿಸಬಹುದು. ಒಂದೇ ಸಂದರ್ಭ ಮತ್ತು ವಸ್ತುವನ್ನು ವರ್ಣಿಸುವ ಪರಿ, ಅದರಲ್ಲಿ ಕವಿ ತೋರಿಸಿರುವ ಅಸಾಧಾರಣ ಭಾಷಾ ಕೌಶಲ್ಯ ಹಾಗೂ ಕಾವ್ಯಸೌಂದರ್ಯ ಸಾಮಾನ್ಯ ಕವಿಗಳಿಗೆ ನಿಲುಕುವಂಥದಲ್ಲ. ನಿದರ್ಶನಕ್ಕೆ ಕಮಲಿನಿ ಮನದೊಳುತ್ಸಾಹಿಸಲು ರವಿಯುದಯಾಚಲಕೆ ಬಂದ, ತಮದ ಗಂಟಲನೊಡೆದ ಹರುಷದ್ಯುಮಣಿ ಮಂಡಲ, ದಿನಪನುದಯಾಚಲದ ಚಾವಡಿಗೆ ಬರೆ, ತರಣಿ ತಿಮಿರಕೆ ತೆರಹುಗೊಟ್ಟನು ಹೀಗೆ

ಸುಮಾರು ಇಪ್ಪತ್ತೈದು ರೀತಿಗಳಲ್ಲಿ ಸೂರ್ಯೋದಯವನ್ನು ವರ್ಣಿಸಿದ್ದಾನೆ. ಸಾಂಪ್ರದಾಯಿಕ ಕವಿಸಮಯದ ಚಿತ್ರಗಳಂತೆ ಕಂಡರೂ ವೈವಿಧ್ಯ ಮಾತ್ರ ಗಮನಾರ್ಹವಾದುದು.

ಇತ್ತ ದಿನಕರಂಗಾಯಿತು ಬೀಡಸ್ತಾಚಲಾದ್ರಿಯಲಿ, ಅಬುಜಬಾಂಧ್ಯವನಿಳಿದನಸ್ತಾಚಲದ ತಪ್ಪಲ ತಾವರೆಯ ಬನಕೆ, ಪಡುವಣ ವಿಪುಲಸ್ತಂಭದೀಪಿಕೆಯಂತೆ ರವಿ ಮೆರೆದ- ಸೂರ್ಯನ ತುರಗ ಬಿಡುತದೆ ಪಶ್ಚಿಮಾದ್ರಿಯ ತಡಿಯ ತಪ್ಪಲಲಿ ಹೀಗೆ ಸುಮಾರು ಇಪ್ಪತ್ತೈದು ಬಗೆ ಬಗೆಯ ವಿವರಗಳಿಂದ ಕೂಡಿದ ಸೂರ್ಯಸ್ತದ ವರ್ಣನೆಯನ್ನು ಕಾಣಬಹುದು.

ಸಾವು ಅನಿವಾರ್ಯವಾದ ಜೀವನದ ವಸ್ತು. ಸಾವಿನ ವೈವಿಧ್ಯಮಯ ಚಿತ್ರಣಗಳನ್ನು ಕುಮಾರವ್ಯಾಸನಿಗಿಂತ ಹೇರಳವಾಗಿ ಕಟ್ಟಿಕೊಡುವ ಕವಿ ಇಲ್ಲವೇನೊ 'ಅಡ್ಡಬಿದ್ದರಿಬಲದ ಸುಭಟರಿಗಿತ್ತ ಅಮರಾವತಿಯ ಸಂಪದವ'. 'ನೃಪತಿ ಮಾರಿಯ ಬಾರಿಯ ತುತ್ತಾದನು', 'ಪದಾತಿವ್ರಾತದ ಪಾಣಿಗ್ರಹಣವನು ನಿರ್ವಾಣವಧುಗಳಲಿ' ಹೀಗೆ ಸಾವಿನ ವಿವರಣೆಯ ಚಿತ್ರಣಗಳನ್ನು ಸುಮಾರು ೬೫ ಭಿನ್ನ ರೂಪಗಳಲ್ಲಿ ಕುಮಾರವ್ಯಾಸನ ಕಾವ್ಯದಲ್ಲಿ ಮಾಡಿದೆ. ಈ ತೆರನಾದ ವೈವಿಧ್ಯ ಮಹಾಕಾವ್ಯದ ಬೃಹತ್ ಗಾತ್ರದ ಕಾವ್ಯಸಂದರ್ಭದಲ್ಲಿ ಅನಿವಾರ್ಯವೂ ಅವಶ್ಯಕವೂ ಅಗಿದೆಯೆನ್ನಬಹುದು.

ಈ ರೂಪಕ ಅಭಿವ್ಯಕ್ತಿ ವಿಧಾನದ ಮತ್ತೊಂದು ಮುಖ ಕವಿಯ ಅಲಂಕಾರ ಸೃಷ್ಟಿ ಕ್ರಿಯೆಯಲ್ಲಿ ಗಮನಾರ್ಹವಾಗಿ ಆಶ್ಚರ್ಯವೆಂಬಂತೆ ಬಳಕೆಯಾಗಿದೆ. ರೂಪಕಾಲಂಕಾರದ ಸರ್ವಸ್ವವನ್ನು ಸೂರೆಗೈಯುತ್ತ ಕಾವ್ಯ ಪ್ರತಿಭೆಯಲ್ಲಿ ಮೈವಡೆದಿದೆ. ಅಂತೆಯೇ ರೂಪಕವೇ ನಾರಾಣಪ್ಪ, ನಾರಾಣಪ್ಪನೇ ರೂಪಕವೆಂಬಂತೆ ಕಾವ್ಯದ ತುಂಬೆಲ್ಲಾ ರೂಪಕಾಲಂಕಾರವೇ ಬಳಕೆಯಾಗಿರುವುದನ್ನು ಕಾಣಬಹುದು.

ರಸ-ಧ್ವನಿ-ಔಚಿತ್ಯಗಳ ದೃಷ್ಟಿಯಿಂದ ಕುಮಾರವ್ಯಾಸನ ರೂಪಕಗಳು ಎಂದಿಗೂ ಅಪ್ರತಿಮವಾಗಿ ನಿಲ್ಲುತ್ತವೆ. ಕಾವ್ಯ ಗಾಯತ್ರಿಯ ಬಹುಮಹತ್ವದ ಈ ಮೂರು ಅಂಶಗಳು ಅವನ ರೂಪಕದ ಮೂಲಕ ಸದಾ ಜಾಗೃತವಾಗಿದೆ. ಏಕೆಂದರೆ ಕವಿಯಲ್ಲಿ ರೂಪಕ ಎನ್ನುವುದು ಪಾಂಡಿತ್ಯ ಪ್ರದರ್ಶನಕ್ಕಾಗಿ, ಇಲ್ಲವೇ ಚಮತ್ಕಾರ ವೈಭವಕ್ಕಾಗಿ ಮೂಡಿ ಬರುವ ಕೃತಕ ಅಲಂಕಾರ ಪ್ರಕಾರವಲ್ಲ, ಅದೊಂದು 'ಅಭಿವ್ಯಕ್ತಿ ಪ್ರಕಾರವೇ ಸೈ.' ಅವನ ಸಾಮಾನ್ಯ ಭಾಷೆಯೇ ರೂಪಕ. ಅದ್ಯದ ಒಂದೊಂದು ಪ್ರಾಸಸ್ಥಾನಕ್ಕೂ ರೂಪಕ ಬರುವುದುಂಟು. ಅದು ಅವನಿಗೆ ರಕ್ತಗತವಾಗಿದೆ. ಈ ರೂಪಕ ಕವಿಯ ಆಶಯವನ್ನು ಹೇಳ ಹೇಳುತ್ತಲೇ ಮತ್ತೊಂದು ಹೊಸ ಲೋಕದತ್ತ ಬೆರಳು ತೋರಿಸುತ್ತದೆ. ಹೀಗಾಗಿ ಈ ರೂಪಕವೆನ್ನುವುದು ಕುಮಾರವ್ಯಾಸನಲ್ಲಿ ಕಾವ್ಯದ ಮೂಲಾಂಶವೆನಿಸುತ್ತದೆ.

ಕುಮಾರವ್ಯಾಸ ತನ್ನ ವಿಶಿಷ್ಟ ಕಾವ್ಯಾಭಿವ್ಯಕ್ತಿಯ ಮೂಲಕ ತನ್ನದೇ ಆದ ಕಾವ್ಯಮಾರ್ಗವನ್ನು ಸಾಧಿಸಿದ ಭಾಷೆಯನ್ನು ಸಂಪ್ರದಾಯದ ಚೌಕಟ್ಟಿನೊಳಗೆ ಬಳಸದೆಯೇ ವಾಚ್ಯಾರ್ಥದ ಸೂತ್ರಗಳಿಂದ ಬಂಧಿತವಾಗಿದ್ದ ವ್ಯಾವಹಾರಿಕ ಭಾಷೆಗೆ ಅನೇಕ ಮಾರ್ಗಾಂತರಗಳ ಮೂಲಕ ಕಾವ್ಯದೀಕ್ಷೆಯನ್ನು ನೀಡಿ ಆ ಮೂಲಕ ರೂಪಕ ಅಭಿವ್ಯಕ್ತಿ ವಿಧಾನವೊಂದನ್ನು ಸೃಷ್ಟಿಸಿ ಕಾವ್ಯ ಭಾಷೆಯ ದಿಕ್ಕು-ದೆಸೆಗಳನ್ನೇ ಬದಲಾಯಿಸಿಬಿಟ್ಟಿರುವುದನ್ನು ಕಾಣಬಹುದು.

ಕುಮಾರವ್ಯಾಸ ಮಾತುಗಳ ಗಾರುಡಿಗ, ಈತನ ಕವಿತಾ ಪ್ರವಾಹದ ಭೋರ್ಗರೆತದಲ್ಲಿ ಸಾಧಾರಣ ಪದ, ಗಂಭೀರಪದ, ಅಚ್ಚಗನ್ನಡ ಪದ, ಸಂಸ್ಕೃತಪದ ಹೀಗೆ ಏನೆಲ್ಲ ತಾಳ ಮೇಳಗೊಂಡು ಸಜ್ಜಾಗುವ ಪರಿಯನ್ನು ಕಾಣುತ್ತೇವೆ. 'ಗಂಡರೋ ನೀವ್ ಷಂಡರೊ ಹೇಳೆಂದಳಿಂದುಮುಖಿ' 'ಒರಲಬೇಡೆಲವೋ ಕುನ್ನಿ ಈ ನಪುಂಸಕರೊಡನೆ ಹುಟ್ಟಿದ ನಾನು ಮೂಗುಳ್ಳವನೇ' ಎಂಬಂತಹ ಮಾತುಗಳನ್ನು ಕೇಳಿದಾಗ ಗ್ರಾಮ್ಯತೆ ಎನ್ನಿಸಿದರೂ ಕುಮಾರವ್ಯಾಸನ ಭಾಷಾ ಪ್ರೌಢಿಮೆಯನ್ನು ಮೆಚ್ಚದಿರಲಾಗುವುದಿಲ್ಲ. ಒಟ್ಟಾರೆ ಕುಮಾರವ್ಯಾಸನಿಗೆ ರೂಪಕ ಸಾಮ್ರಾಜ್ಯದ ಚಕ್ರವರ್ತಿ ಎಂದು ಕರೆದಿರುವುದು ಅತಿಶಯೋಕ್ತಿ ಎನಿಸುವುದಿಲ್ಲ.

**ಜನಪದಭಾರತ ಪಂಪಭಾರತ ಮತ್ತು ಕುಮಾರವ್ಯಾಭಾರತ**

ಮಹಾಭಾರತ ಕಾವ್ಯ ಸಾವಿರಾರು ವರ್ಷಗಳಿಂದ ಭಾರತೀಯರನ್ನು ಸೂಜಿಗಲ್ಲಿನಂತೆ ಆಕರ್ಷಿಸಿ ಅದರ ಸ್ವಭಾವ ಸಂಪ್ರದಾಯಗಳನ್ನು ರೂಪಿಸಿ ಅವರನ್ನು ಧರ್ಮದ ನೆಲೆಗಟ್ಟಿನ ಮೇಲೆ ನಿಲ್ಲಿಸಿ ಧರ್ಮಸಂಹಿತೆಯೆಂದೂ ಪಂಚಮವೇದವೆಂದೂ ಪ್ರಸಿದ್ಧವಾಗಿದೆ. ವಿಶ್ವ ಸಾಹಿತ್ಯದಲ್ಲೇ ಅದ್ವಿತೀಯ ಇತಿಹಾಸ ಕಾವ್ಯವಾಗಿದೆ. ಅತ್ಯಂತ ಜನಪ್ರಿಯತೆಯನ್ನು ಗಳಿಸಿದ ಮಹಾಭಾರತ ಅನೇಕ ಕವಿಗಳ ವಿದ್ವಾಂಸರ ಕೈಗಳಿಂದ ಬೆಳೆಯುತ್ತಾ ಇಂದಿನ ಬೃಹದಾಕಾರವನ್ನು ತಳೆದು ಅಸಂಖ್ಯಾತ ದಾರ್ಶನಿಕರು, ಸಾಧುಸಂತರು, ಕವಿಗಳು, ನಾಟಕಕಾರರು, ಶಿಲ್ಪಿಗಳು, ಚಿತ್ರಕಾರರುಗಳಿಗೆ ಮೂಲ ಸಾಮಾಗ್ರಿಯನ್ನೊದಗಿಸಿದೆ. ಪ್ರಾರಂಭದಿಂದ ಸಂಸ್ಕೃತ ಸಾಹಿತ್ಯದ ಪೋಷಣೆಯಿಂದ ಬೆಳೆದ ಕನ್ನಡದ ಕವಿಗಳೂ ಮಹಾಭಾರತದಿಂದ ತಮ್ಮ ಕಾವ್ಯಗಳಿಗೆ ವಸ್ತುಗಳನ್ನು ಆರಿಸಿಕೊಂಡಿದ್ದಾರೆ. ಪಂಪ, ಕುಮಾರವ್ಯಾಸರು ಮಹಾಭಾರತವನ್ನೇ ಅವಲಂಬಿಸಿ ತಮ್ಮದೇ ಆದ ರೀತಿಯಲ್ಲಿ ಕನ್ನಡದಲ್ಲಿ ಅದನ್ನು ಮರುಸೃಷ್ಟಿಸಿ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿದ್ದಾರೆ.

ಜನಪದ ಕವಿ ಮಹಾಭಾರತವನ್ನು ಒಂದು ಚರಿತ್ರೆಯಾಗಿ ಪರಿಭಾವಿಸದೇ ಮಾನವ ಇತಿಹಾಸದ ಕಥೆಯನ್ನಾಗಿ ಪರಿಭಾವಿಸಲಾಗಿದೆ. ಓಂ ಪ್ರಥಮದಲ್ಲಿ ಮಹಾಭಾರತದ ಕಥೆಯ ಬೀಜವು ಭೂಮಿಗೆ ಬಿದ್ದು ಮರವಾಗಿ ಬೆಳೆದು ಬಗೆ ಬಗೆ ರುಚಿಯ ಫಲಗಳ ಕೊಟ್ಟಿತು ಎಂಬ ಮಾತಿನಲ್ಲಿ ಈ ವಿಚಾರ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಗುರು ಕೊಟ್ಟ ಜೋಳಿಗೆ ತುಂಬಿಕೊಂಡಿರುವೆನು ಎಂಬ ನುಡಿ ಪರಂಪರೆಯನ್ನು ಧ್ವನಿಸಿದರೆ ಶಿವ ಕೊಟ್ಟ ನೆನಪನ್ನು ನಂಬಿಕೊಂಡಿರುವೆನು ಎಂಬುದು ವಾಚಕ ಸಂಪ್ರದಾಯವನ್ನು ಪ್ರತಿನಿಧಿಸುತ್ತದೆ.

ಪಂಪ, ಕುಮಾರವ್ಯಾಸರು ಅಪ್ರತಿಮ ಪ್ರತಿಭಾವಂತರು ನಾನಾಕಲೆಗಳಲ್ಲಿ ಪ್ರಾವೀಣ್ಯತೆ ಗಳಿಸಿದವರು. ಇಬ್ಬರೂ ಪೂರ್ವ ಕವಿಗಳ ಕಾವ್ಯ ಪರಿಚಯವುಳ್ಳವರು ಹಾಗೂ ಆಳವಾದ ಲೋಕಾನುಭವವನ್ನು ಪಡೆದವರು. ಅನ್ಯರ ಕಾವ್ಯಗಳನ್ನು ಇಕ್ಕಿ ಮೆಟ್ಟುವಂತಹ ಕಾವ್ಯಕ್ಕೆ ಗುರುವಾಗಿಸುವಂತಹ ಮಹಾಕಾವ್ಯವೊಂದನ್ನು ರಚಿಸುವ ಸಾಮರ್ಥ್ಯ ರಚಿಸಬಲ್ಲೆವೆಂಬ ಆತ್ಮ ವಿಶ್ವಾಸವಿದ್ದವರು. ಇಬ್ಬರಿಗೂ ವ್ಯಾಸಭಾರತವೇ ಮೂಲ ಆಕರಗ್ರಂಥ ಅದರ ಕರ್ತೃವಿನ ವಿಷಯದಲ್ಲಿ ಸಮಾನ ಗೌರವ. ಆದರೆ ಕೃತಿಯ ನಿರ್ವಹಣೆಯಲ್ಲಿ ಮಾತ್ರ ಇಬ್ಬರ ದೃಷ್ಟಿಯೂ ಬೇರೆ ಬೇರೆ. ಜನಪದ ಮಹಾಭಾರತ ಇದಕ್ಕೆ ಹೊರತಲ್ಲವೆನ್ನಬಹುದು.

ಪಂಪಭಾರತದಲ್ಲಾಗಲೀ, ಕುಮಾರವ್ಯಾಸಭಾರತದಲ್ಲಾಗಲೀ ಅಥವಾ ಜನಪದ ಮಹಾಭಾರತದಲ್ಲಾಗಲೀ ಕಥೆಯನ್ನು ಕರ್ತೃಗಳು ಕಲ್ಪನೆಯಿಂದ ಚಿತ್ರಿಸಿಲ್ಲ. ವಿಶಾಲ ಬುದ್ಧಿಯೆಂದೇ ಪ್ರಖ್ಯಾತರಾದ ವ್ಯಾಸಮಹರ್ಷಿಗಳು ಮೊದಲೇ ಎಲ್ಲವನ್ನು ಅಣಿಗೊಳಿಸಿಬಿಟ್ಟಿದ್ದರು. ಅವರ ಕಾವ್ಯದಿಂದಲೇ ಮೂವರೂ ತಮ್ಮ ಅಭಿರುಚಿಗೆ ಅನುಗುಣವಾಗಿ ತಮ್ಮ ಸಾಮರ್ಥ್ಯ ನಿಲುಕುವಷ್ಟನ್ನು ಆರಿಸಿಕೊಂಡು ತಮ್ಮದೇ ಆದ ನೂತನ ರೀತಿಯಲ್ಲಿ ಕಥೆಯನ್ನು ಹೇಳಿದ್ದಾರೆ. ಆದ್ದರಿಂದ ಮೂವರ ಕಾವ್ಯಗಳಲ್ಲಿಯೂ ಕಾಣುವ ಕಥಾಸಂವಿಧಾನ, ಪಾತ್ರರಚನಾ ಕೌಶಲ್ಯಾದಿಗಳಲ್ಲಿ ವ್ಯಾಸರ ಅನುಸರಣೆಯನ್ನು ಕಾಣುತ್ತೇವೆ. ಇದನ್ನರಿತೇ ಮೂವರು ವ್ಯಾಸ ಮಹರ್ಷಿಗಳಿಗೆ ಶಿರಬಾಗಿ ಅನಂತರ ಕೃತಿರಚನೆಗೆ ಕೈಹಾಕಿದ್ದಾರೆ.

ಕನ್ನಡದ ಆದಿಕವಿಯಾದ ಪಂಪ ಜೈನನಾದ್ದರಿಂದ ಜಿನಭಕ್ತ. ನಾರಾಣಪ್ಪ ಕೃಷ್ಣಭಕ್ತ. ಪಂಪನದು ಮಹಾಭಾರತದ ವಿಷಯದಲ್ಲಿ ಕೇವಲ ಲೌಕಿಕ ಶ್ರದ್ದೆಯಾದರೆ ನಾರಾಣಪ್ಪನದು ಆಧ್ಯಾತ್ಮಿಕ ಶ್ರದ್ದೆ ಪಂಪ ತನ್ನ ಆಶ್ರಯದಾತನನ್ನು ಮೆಚ್ಚಿಸುವುದಕ್ಕೆ ಕಾವ್ಯರಚಿಸಿದರೆ ನಾರಾಣಪ್ಪ ಶ್ರೀ ಕೃಷ್ಣ ಪ್ರೇರಿತನಾಗಿ ಶ್ರೀಕೃಷ್ಣ ಪ್ರೀತ್ಯಾರ್ಥವಾಗಿ ಆತ್ಮೋದ್ದಾರ ಹಾಗೂ ಲೋಕೋದ್ದಾರಕ್ಕಾಗಿ ಕಾವ್ಯ ರಚಿಸಿದ್ದಾನೆ. ಪಂಪ ತನ್ನ

ಕಾವ್ಯದಲ್ಲಿ ಅರ್ಜುನನ ಮಹಿಮೆಗಳನ್ನು ಪ್ರಧಾನವಾಗಿ ಕಂಡಿದ್ದರಿಂದ ಕಾವ್ಯದ ಎಲ್ಲಾ ಘಟನಾವಳಿಗಳನ್ನು ಹಿಡಿದಿಟ್ಟಿರುವ ಸೂತ್ರ ಅರ್ಜುನನ ಸಾಹಸ ಚಿತ್ರಣ. ನಾರಾಣಪ್ಪನಿಗೆ ಕೃಷ್ಣ ಮಹಿಮೆಯಾದ್ದರಿಂದ ಅವನ ಕಾವ್ಯ ಸೂತ್ರ ಕೃಷ್ಣಭಕ್ತಿ ಇಬ್ಬರೂ ಸ್ವತಂತ್ರವಹಿಸಿ ಮೂಲದಿಂದ ಸಾಕಷ್ಟು ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಅರ್ಜುನನ ಪ್ರಾಮುಖ್ಯದಿಂದ ಪಂಪ ಕಥೆಯನ್ನು ಬದಲಾಯಿಸಿಕೊಂಡಿದ್ದರೆ, ನಾರಾಣಪ್ಪ ಕೃಷ್ಣ ಪಾರಮ್ಯದಿಂದ ಬದಲಾಯಿಸಿಕೊಂಡಿದ್ದಾನೆ. ಪೀಠಿಕಾಭಾಗಗಳು. ಕೌರವಪಾಂಡವರ ಜನನವರೆಗಿನ ಕಥೆ ಹಿಡಿಂಬ ಬಕಾವಧಾ ಪ್ರಸಂಗಗಳು ಅರ್ಜುನ ಪ್ರಾಮುಖ್ಯವಿಲ್ಲದುದ್ದರಿಂದ ಪಂಪನಿಗೂ, ಕೃಷ್ಣ ಪ್ರಾಮುಖ್ಯವಿಲ್ಲದುದರಿಂದ ಕುಮಾರವ್ಯಾಸನಿಗೂ ಅಪ್ರಸ್ತುತವಾದುದರಿಂದ ಇಬ್ಬರೂ ಕ್ಷಿಪ್ರಗತಿಯಲ್ಲಿ ಸಾಗುತ್ತಾರೆ. ಆದರೆ ಜನಪದ ಮಹಾಭಾರತದಲ್ಲಿ ಮೇಲಿನ ಪ್ರಸಂಗಗಳು ವಿಸ್ತಾರವಾಗಿಯೇ ವಿವರಿಸಲಾಗಿದೆ. ಮೂಲ ಮಹಾಭಾರತದಲ್ಲಿ ಬರುವ ಏಕಲವ್ಯನ ಪಾತ್ರವನ್ನು ಮೂರು ಮಹಾಕಾವ್ಯಗಳಲ್ಲೂ ಕೈ ಬಿಡಲಾಗಿದೆ. ಅದು ಅರ್ಜುನನ ವ್ಯಕ್ತಿತ್ವಕ್ಕೆ ಧಕ್ಕೆಯನ್ನುಂಟು ಮಾಡುವಂಥದಾದುದರಿಂದ ಪಂಪ ಆ ಪಾತ್ರವನ್ನು ಹೆಸರಿಸುವುದಿಲ್ಲ. ಕೃಷ್ಣ ಪಾರಮ್ಯಕ್ಕೆಡೆಯಿಲ್ಲದ ಕಾರಣ ಕುಮಾರವ್ಯಾಸನು ಸುಮ್ಮನೆ ಹೆಸರಿಸಿದ್ದಾನೆ. ಜನಪದದಲ್ಲಿ ಆ ಪಾತ್ರ ಕವಿಗೆ ಬೇಕಿಲ್ಲದಿರುವುದರಿಂದಲೋ ಅಥವಾ ಅಜ್ಞಾನದಿಂದಲೋ ಆ ಪ್ರಸಂಗವೇ ಬಂದಿಲ್ಲ. ಜರಾಸಂಧವಧೆ ಪಂಪನಲ್ಲಿ ಅತಿ ಸಂಗ್ರಹವಾಗಿ ಬಂದರೆ ಕುಮಾರವ್ಯಾಸನಲ್ಲಿ ಅದ್ಭುತವಾಗಿ ವಿಸ್ತರಿಸಲ್ಪಟ್ಟಿದೆ. ಜನಪದ ಮಹಾಭಾರತದಲ್ಲಿ ಅದಕ್ಕೆ ವಿನೂತನವಾದ ಕಥೆಯಿತ್ತು ಅದನ್ನು ಅಂತಿಮವಾಗಿ ಮೀನಿಗೆ ಸಮೀಕರಿಸಿ ವಿಶಿಷ್ಟವಾಗಿ ಚಿತ್ರಿಸಲಾಗಿದೆ.

ಪಂಪ, ಕುಮಾರವ್ಯಾಸರಿಬ್ಬರೂ ಶೃಂಗಾರಪ್ರಿಯರು. ಸರಸಿಗಳು ಗಿರಿವನಗಳ ವರ್ಣನೆ ಋತು ವರ್ಣನೆ ಮುಂತಾದ ವರ್ಣನೆಗಳಲ್ಲಿ ಸಿದ್ಧಹಸ್ತರು. ಆದರೆ ಪ್ರಕೃತಿ ವರ್ಣನೆಯಲ್ಲಿ ಪಂಪನಿಗಿರುವಷ್ಟು ಆಸಕ್ತಿ ಕುಮಾರವ್ಯಾಸನಿಗಿಲ್ಲ. ಎಷ್ಟು ಬೇಕೋ ಅಷ್ಟನ್ನು ಮಾತ್ರ ಬಳಸುತ್ತಾನೆ. ಮಾನವ ಸ್ವಭಾವದ ಚಿತ್ರಣದ ವರ್ಣನೆಯಲ್ಲಿ ಒಬ್ಬರು ಮತ್ತೊಬ್ಬರಿಗೆ ಹೊಯ್‌ಕೊಯಾಗಿ ಕಂಡು ಬರುತ್ತಾರೆ. ಜನಪದ ಮಹಾಭಾರತದಲ್ಲಿ ಪ್ರಕೃತಿ ಮಾನವ ಪ್ರಕೃತಿ ವರ್ಣನೆಗಳಲ್ಲಿ ಪಂಪ, ಕುಮಾರವ್ಯಾಸರಿಗೆ ಸರಿಸಮನಾಗಿ ವರ್ಣೀಸಲಾಗಿದೆ.

ಪಂಪನು ಅತ್ಯದ್ಭುತವಾಗಿ ಚಿತ್ರಿಸಿದಂತಹ ಸನ್ನಿವೇಶವನ್ನು ತಾನು ಮೀರಿಸಲಾರೆನೆನ್ನಿಸಿದೆಡೆಗಳಲ್ಲಿ ಕುಮಾರವ್ಯಾಸ ಒಂದೆರಡು ಪದ್ಯಗಳಲ್ಲಿ ತೇಲಿಸಿ ಬಿಡುತ್ತಾನೆ. ಸುಭದ್ರಾ ಪರಿಣಾಯದ ಭಾಗವನ್ನು ಅದಕ್ಕೆ ನಿದರ್ಶನವಾಗಿ ಹೆಸರಿಸಬಹುದು. ಹಾಗೆಯೇ ಪಂಪನು ಹೆಚ್ಚು ಆಸ್ಥೆ

ವಹಿಸದ ಭಾಗವನ್ನು ನಾರಾಣಪ್ಪ ಅದ್ಭುತವಾಗಿ ವಿಸ್ತರಿಸುತ್ತಾನೆ. ಉದಾಹರಣೆಗೆ ದ್ರೌಪದೀ ಸ್ವಯಂವರ, ದ್ಯೂತ ಪ್ರಸಂಗ, ಊರ್ವಶಿ ವೃತ್ತಾಂತ, ಸೌಗಂಧಿಕಾಹರಣ ಮುಂತಾದವು. ಉತ್ತರನ ಪೌರುಷ ಭೀಮನ ವೃಕೋದರತ್ವ, ಬಕಾವಧಾ ಪ್ರಸಂಗ ಇತ್ಯಾದಿಗಳಲ್ಲಿ ನೋಡಬಹುದು. ಪಂಪನಲ್ಲಿ ಕಾಣದ ಕೃಷ್ಣ ಮಹಿಮೆಗೆ ಆಸ್ಪದವಾಗುವಂತಹ ಭಾಗಗಳನ್ನು ಕುಮಾರವ್ಯಾಸ ರಸಾವೇಶದಿಂದ ವಿಸ್ತರಿಸುತ್ತಾನೆ. ಉದಾಹರಣೆಗೆ ದ್ರೌಪದಿ ವಸ್ತ್ರಾಪಹರಣ, ದೂರ್ವಾಸಾತಿಥ್ಯ ಮುಂತಾದವು.

ಪಂಪ ಅರ್ಜುನನ ಪಾತ್ರವನ್ನು, ಕುಮಾರವ್ಯಾಸ ಕೃಷ್ಣನ ಪಾತ್ರವನ್ನು ಔನತ್ಯಕ್ಕೇರಿಸಿ ಆ ಪಾತ್ರಗಳನ್ನೇ ತಮ್ಮ ತಮ್ಮ ಕಾವ್ಯಗಳ ನಾಯಕರಾಗಿ ಮಾಡಿಕೊಂಡಿದ್ದರೆ, ಜನಪದ ಮಹಾಭಾರತದಲ್ಲಿ ಇಂತಹ ಯಾವುದೇ ಪಾತ್ರದ ಪರ ವಕಾಲತ್ತು ವಹಿಸದೆ ಸಮಭಾವದಲ್ಲಿ ಎಲ್ಲವನ್ನು ಚಿತ್ರಿಸಲಾಗಿದೆ. ಹಾಗಾಗಿ ಯಾವುದೇ ಪಾತ್ರವಿಲ್ಲೀ ಪರಮ ಪವಿತ್ರ ಎನಿಸಿಕೊಳ್ಳದೆ ಮಾನವ ದೌರ್ಬಲ್ಯದ ಸಾಮಾನ್ಯತೆಯಲ್ಲಿ ಚಲಿಸುವುದು ವಿಶಿಷ್ಟವೆನಿಸಿದೆ. ಕೃಷ್ಣ, ಅರ್ಜುನ ಭೀಮರ ಪಾತ್ರಗಳು ಇದಕ್ಕೆ ಹೊರತೇನಲ್ಲ. ಕೃಷ್ಣ ಪಾಂಡವರ ಪಕ್ಷಪಾತಿ ಎನ್ನಿಸಿದ್ದರೂ ಅವರ ಮಕ್ಕಳ ವಿಚಾರದಲ್ಲಿ ಅವನ ನಿಲುವು ಭಿನ್ನವಾಗಿರುವುದನ್ನು ಗಮನಿಸಬಹುದು. ಇಲ್ಲಿ ಕೃಷ್ಣನ ಬಗ್ಗೆ ಪೂರ್ವಾಗ್ರಹವಿಲ್ಲದೆ ವರ್ತಿಸುವ ವಿಧಾನ ವಿಶೇಷವೆನಿಸುತ್ತದೆ. ಜೊತೆಗೆ ಕೃಷ್ಣನ ಸ್ವಾರ್ಥಕ್ಕೆ ಸಾಕ್ಷಿಯಾಗಿದೆ. ಉಲೂಪಿಯ ಮಗ ನಾಗಾರ್ಜುನನ್ನು ಇಂಥದೇ ತಂತ್ರದಿಂದ ತಂದೆ ಅರ್ಜುನನಿಂದಲೇ ಮುಗಿಸುವ ಕೃಷ್ಣನ ಸ್ವಾರ್ಥ ಭದ್ರಬಾಹು ಪ್ರಸಂಗದಲ್ಲಿಯೂ ಅತ್ಯಂತ ಕ್ರೂರವಾಗಿದೆ. ಭದ್ರಬಾಹುವಿದ ಕಥಾ ಸೃಷ್ಟಿ ಜನಪದ ಕವಿಯ ಸೃಜನಶೀಲತೆಗೆ ಸಾಕ್ಷಿಯಾಗಿದೆ. ತನಗೇ ಗಂಡಾಂತರಕಾರಿಯಾಗಲಿರುವ ಭದ್ರಬಾಹುವನ್ನು ಆತನ ತಂದೆ ಭೀಮನಿಂದ ಕೊಲ್ಲಿಸುತ್ತಾ ಮತ್ತೊಮ್ಮೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿ ಯಶಸ್ವೀಯಾಗುತ್ತಾನೆ. ಹಾಗಾಗಿ ಜನಪದ ಮಹಾಭಾರತದ ಕೃಷ್ಣನು ಪಾಂಡವರ ಅಸ್ತಿತ್ವ ಸ್ಥಾಪಿಸುವುದಕ್ಕೆ ಪ್ರಯತ್ನಿಸುವುದಕ್ಕಿಂತ ತನ್ನ ಅಸ್ತಿತ್ವವನ್ನು ಮೆರೆಯಲು ಯತ್ನಿಸಿ ಯಶಸ್ವಿಯಾಗುತ್ತಾನೆ. ಹೀಗಾಗಿ ಕುಮಾರವ್ಯಾಸ ಮತ್ತು ಪಂಪಭಾರತಗಳಲ್ಲಿ ಚಿತ್ರಿಸಿರುವ ಕೃಷ್ಣನ ಬಗೆಗಿನ ಭಕ್ತಿ ಭ್ರಮೆ ಭಾವನೆಗಳನ್ನು ಜನಪದ ಮಹಾಭಾರತ ಹೋಗಲಾಡಿಸುತ್ತದೆ.

ಜನಪದ ಮಹಾಭಾರತ ಉದ್ದಕ್ಕೂ ವ್ಯಾಸಭಾರತ ಕಥಾ ಪರಂಪರೆಯನ್ನು ಅನುಸರಿಸಿದೆ. ಅದನ್ನು ಉಲ್ಲಂಘಿಸುವ ಧೈರ್ಯವನ್ನು ಮಾಡದೇ ಪರಂಪರೆಯ ಕಥೆಗೆ ಸ್ಥಳೀಯ ಮತ್ತು ಆಯಾಯ ಕಾಲದ ಯುಗಧರ್ಮದ ಮೌಲ್ಯಗಳನ್ನು ಸೇರ್ಪಡೆಗೊಳಿಸಿದೆ. ಮಹಾಭಾರತದ ಅನೇಕ ಘಟನೆಗಳಿಗೆ ಅದು ಆರೋಪಿಸುವ ಕಾರ್ಯಕಾರಣ ಸಂಬಂಧಗಳು ಸ್ಥಳೀಯ ಆಲೋಚನೆ ಮತ್ತು ನಂಬಿಕೆಗಳ

ನೆಲೆಯಾಗಿದೆ. ಉದಾಹರಣೆ: ಭೀಷ್ಮರಿಗೆ ಓತಿ ಶಾಪ ಕೊಡುವುದು, ಭೀಮ ನಾಯಿಗಳಿಗೆ ಶಾಪ ಇತ್ಯಾದಿ. ಕಥೆಯುದ್ದಕ್ಕು ಶೂದ್ರ ಸಮುದಾಯದ ಸಾಂಸ್ಕೃತಿಕ ಆವರಣ ತುಂಬಿಕೊಂಡಿದೆ. ಕುಂತಿಯ ಹುಟ್ಟು, ಬೆಳವಣಿಗೆ, ಮದುವೆ ಅನಂತರದ ಬವಣೆ ಎಲ್ಲವೂ ರೈತ ಸಮುದಾಯದ ಅಭಿವ್ಯಕ್ತಿಯೇ ಆಗಿದೆ. ಸುಳ್ಳುಸಾಕ್ಷಿ ನೀಡುವ ಶಾಪಗಳು ಕಾರ್ಯಕಾರಣ ಸಂಬಂಧಗಳಾಗಿ ಕೂತೂಹಲ ಕೆರಳಿಸುತ್ತದೆ.

ಜನಪದ ಮಹಾಭಾರತ ಚಾರಿತ್ರಿಕ ಪ್ರಜ್ಞೆಯನ್ನು ತನ್ನೊಳಗೆ ತುಂಬಿಕೊಂಡಿದೆ. ಕರ್ನಾಟಕದ ವಿಶಿಷ್ಟ ವಚನ ಪರಂಪರೆ ಅದರ ಕಾಯಕತತ್ವವನ್ನು ಅತ್ಯಂತ ಸಮರ್ಥವಾಗಿ ಬಳಸಿಕೊಂಡಿದೆ. ಕುಂತಿಯ ತನ್ನ ಮೊದಲ ಮಗ ಕರ್ಣನನ್ನು ಅಂಬಿಗರ ಚೌಡಯ್ಯನ ವಶಕ್ಕೆ ಒಪ್ಪಿಸಿದರೆ ಪಾಂಡವರು ಕುಂಬಾರ ಗುಂಡಯ್ಯನ ಮನೆಯಲ್ಲಿ ತಂಗುತ್ತಾರೆ. ಇಂಥ ಕಡೆ ಚರಿತ್ರೆಯ ಪ್ರಭಾವ ಜನಪದ ಕವಿಯ ಮೇಲಾಗಿದೆ. ಪಾಂಡವರು ಜನಪರವಾಗಿರುತ್ತಾರೆ ಎಂಬ ಆಶಯ ಸೃಷ್ಟಿಯಾಗಿದೆ. ಕಾಯಕ ತತ್ವದ ಪ್ರಭಾವವನ್ನು ಭೀಮ ಮುದ್ದೇಗೌಡರ ದರಕಾಸ್ ಭೂಮಿ ಗೇದ ಪ್ರಸಂಗದಲ್ಲಿ ಕಾಣಬಹುದು. ಕಾವ್ಯದಲ್ಲಿ ಬರುವ ಮಳೆ ಮತ್ತು ಬ್ರಾಹ್ಮಣನ ಪ್ರಸಂಗಗಳು ದಾನತ್ವಕ್ಕೆ ಸಾಣೆ ಹಿಡಿಯುತ್ತದೆ. ಹೀಗೆ ಜನಪದ ಮಹಾಭಾರತ ಮೂಲಕಥೆಯಲ್ಲಿಲ್ಲದ ನೂರಾರು ಪ್ರಸಂಗಗಳನ್ನು ಸೃಷ್ಟಿಸಿ ಜನಪದ ಸಂಸ್ಕೃತಿಯಲ್ಲಿನ ಮೌಲ್ಯಗಳನ್ನು ಅನಾವರಣಗೊಳಿಸುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಜನಪದ ಮಹಾಭಾರತದ ವಿವರಣೆಗಳಿಗೆ ಶಿಷ್ಟಭಾರತದಂತೆ ತಾತ್ವಿಕತೆಯ ಹೊರೆಯಿಲ್ಲ. ಕಥೆಗೆ ಕಥೆಯೇ ಗುರಿಯಾಗಿ ಬೆಳೆದಿದೆ. ಜನಪದ ಕವಿ ಸ್ಥಳೀಯತೆಯನ್ನು ಕೊಡುತ್ತಿದ್ದೇನೆ ಎನ್ನುತ್ತಲೇ ತನ್ನ ಎಲ್ಲೆಗಳನ್ನು ಮೀರುತ್ತಾನೆ. ರಂಜನೆಯೇ ಪರಮಗುರಿಯಾಗಿದ್ದರೂ ಅಲ್ಲಿ ನೈತಿಕತೆಯ ಪ್ರಶ್ನೆ ತಲೆದೋರುತ್ತದೆ. ರೂಪಕ–ಉಪಮೆಗಳ್ನು ಜನಪದ ಕವಿ ತನಗರಿವಿಲ್ಲದಂತೆಯೇ ಸೇರಿಸುತ್ತಿರುತ್ತಾನೆ. ತನಗೆ ಇಷ್ಟವಾದ ನೆನಪಿಗೆ ಬಂದ ವರ್ತಮಾನದ ಪಾತ್ರಗಳನ್ನು ತನ್ನ ಪುರಾಣ ಪಾತ್ರಗಳೊಂದಿಗೆ ಸಮೀಕರಿಸಿ ಕಟ್ಟುವ ಅನಂತ ಪ್ರತಿಭೆ ಅವನದಾಗಿದೆ. ಹೀಗೆ ಜನಪದ ಮಹಾಭಾರತ ಪಂಪಭಾರತ, ಕುಮಾರವ್ಯಾಸಭಾರತಗಳಿಗಿಂತ ಕಥಾಸಂವಿಧಾನದಲ್ಲಿ ಭಿನ್ನತೆಗಳಿರುವುದನ್ನು ಕಾಣಬಹುದು.

**ಅಡಿ ಟಿಪ್ಪಣಿಗಳು:**

೧. ಜನಪದ ಮಹಾಭಾರತ ಸಂ. ಪಿ.ಕೆ. ರಾಜಶೇಖರ, ಪು ೮೦.

೨. ಜನಪದ ಮಹಾಭಾರತ ಸಂ. ಪಿ.ಕೆ. ರಾಜಶೇಖರ, ಪು ೮೦.

೩. ಜಾನಪದ ಮಹಾಭಾರತ ಒಂದು ವಿಚಾರ ಸಂಕಿರಣ, ಸಂ ಬಿ.ಎಸ್. ತಲ್ವಾಡಿ, ಪು ೭೪.

೪. ಕರ್ನಾಟಕ ದರ್ಶನಂ. ಡಿ.ಎಲ್. ನರಸಿಂಹಾಚಾರ್, ಪು ೯೪.

೫. ವಿಕ್ರಮಾರ್ಜುನ ವಿಜಯ ವಿವೇಚನೆ: ವಿವಿಧ ಲೇಖಕರು : ಸರ್ಕಾರಿ ಉಪಾಧ್ಯಾಯ ಪ್ರಶಿಕ್ಷಣ ಸಂಸ್ಥೆ ಮೈಸೂರು.

೬. ಕರ್ನಾಟಕ ದರ್ಶನಂ. ಡಿ.ಎಲ್. ನರಸಿಂಹಾಚಾರ್, ಪು ೯೪.

೭. ತೀನಂ.ಶ್ರೀ. ಪಂಪ ಪು ೨.

೮. ಶೈಲಿ. ಎಸ್.ವಿ. ರಂಗಣ್ಣ.

೯. ಕುಮಾರವ್ಯಾಸ ಒಂದು ಅಧ್ಯಯನ, ಬೋರೆಗೌಡ ಚಿಕ್ಕಮರಳಿ, ಪು ೪೪-೪೫, ೧೯೯೯.

೧೦. ಜಿ.ಎಸ್. ಶಿವರುದ್ರಪ್ಪ, ಕನ್ನಡ ಸಾಹಿತ್ಯ ಸಮೀಕ್ಷೆ, ಸಾಮಾನ್ಯನಿಗೆ ಸಾಹಿತ್ಯಚರಿತ್ರೆ, ೧೯೮೫.

# ಅಧ್ಯಾಯ ಐದು

## ಪಾತ್ರಚಿತ್ರಣ

ಜನಪದ ಮಹಾಭಾರತದ ಪಾತ್ರ ಚಿತ್ರಣ ಶಿಷ್ಟಭಾರತದ ಪಾತ್ರಚಿತ್ರಣಗಳಂತೆ ಇದ್ದರೂ ಹಲವಾರು ಕಾಲ್ಪನಿಕ ಪಾತ್ರಗಳೂ ತುಂಬಿ ತುಳುಕುತ್ತಿವೆ. ಸ್ತ್ರೀ-ಪುರುಷ ಪಾತ್ರಗಳು ಜನಪದ ಮಹಾಭಾರತದಲ್ಲಿ ಒಂದೇ ಸಮನಾಗಿ ಚಿತ್ರಿತವಾಗಿದ್ದರೂ ಇಲ್ಲಿ ಪುರುಷ ಪಾತ್ರಗಳಿಗೆ ಜನಪದ ಕವಿ ಹೆಚ್ಚು ಒತ್ತುಕೊಟ್ಟಿದ್ದಾನೆ. ಜನಪದ ಮಹಾಭಾರತದಲ್ಲಿ ಕೃಷ್ಣ, ಭೀಷ್ಮ, ಧರ್ಮರಾಯ, ಕರ್ಣ, ದ್ರೋಣ, ಭೀಮ, ಅರ್ಜುನ, ಶಕುನಿ, ದುರ್ಯೋಧನ ಮುಂತಾದ ಪ್ರಮುಖ ಪಾತ್ರಗಳಿಗೆ ಹೆಚ್ಚಿನ ಪ್ರಾಧ್ಯಾನತೆ ದೊರೆತ್ತಿದೆ. ಮೂಲ ಮಹಾಭಾರತದ ಪಾತ್ರಗಳೊಂದಿಗೆ ಕವಿ ಸ್ಥಳೀಯವಾಗಿ ಅನೇಕ ಕಾಲ್ಪನಿಕ ಪಾತ್ರಗಳನ್ನು ಚಿತ್ರಿಸಿದ್ದಾನೆ. ಪಂಪಭಾರತದಲ್ಲಿ ಅರ್ಜುನನನ್ನು, ಕುಮಾರವ್ಯಾಸಭಾರತದಲ್ಲಿ ಕೃಷ್ಣನನ್ನು ಉನ್ನತ ಶಿಖರಕ್ಕೇರಿಸಿದ್ದರೆ ಜನಪದ ಕವಿ ಎಲ್ಲಾ ಪಾತ್ರಗಳನ್ನು ಸಮಭಾವದಲ್ಲಿ ಚಿತ್ರಿಸಿರುವುದನ್ನು ಕಾಣಬಹುದಾಗಿದೆ.

ಜನಪದ ಮಹಾಭಾರತದಲ್ಲಿ ದೇವಾನುದೇವತೆ ಪಾತ್ರಗಳನ್ನು ಮಾನವ ಸ್ವಭಾವಗಳ ನಡತೆಗೆ ಇಳಿಸುವ ಮಾನವರನ್ನು ದೇವತೆಗಳನ್ನಾಗಿಸುವ ಪ್ರಕ್ರಿಯೆ ಸಾಮಾನ್ಯವಾಗಿರುವುದನ್ನು ಗುರುತಿಸಬಹುದು. ಇಲ್ಲಿನ ಪಾತ್ರಗಳೆಲ್ಲವೂ ಒಂದಲ್ಲೊಂದು ಕಾರಣದಿಂದಾಗಿ ದೇವಲೋಕದಿಂದ ಇಳಿದು ಭೂಲೋಕದಲ್ಲಿ ಜನ್ಮ ತಾಳಿದವೆ ಆಗಿದೆ. ಗಂಗೆ, ಪರಮೇಶ್ವರ, ಯಮ, ಇಂದ್ರ ಅಶ್ವಿನಿ ದೇವತೆಗಳು ಎಲ್ಲರೂ ಭೂಮಿಯ ಮೇಲೆ ಹುಟ್ಟುತ್ತಾರೆ. ಪ್ರತಿಯೊಂದು ಪಾತ್ರದ ಜನನಕ್ಕೂ ಹಿನ್ನಲೆಯನ್ನು ಹೇಳುವ ಜನಪದ ಕವಿ ಹೊಚ್ಚಹೊಸದು ಎನ್ನಬಹುದಾದ ಕಥಾಪ್ರಸಂಗಗಳನ್ನು ಜನಪದ ಮಹಾಭಾರತದ ಭಿತ್ತಿಯಲ್ಲಿ ಕೆತ್ತಿ ನಿಲ್ಲಿಸಿದ್ದಾನೆ. ನಾಗರುಸಿಯ ಕಥೆ ಇದಕ್ಕೊಂದು ಸ್ಪಷ್ಟ ನಿದರ್ಶನ. ಹಾಗೆಯೆ ದ್ರೌಪದಿಯ ಹುಟ್ಟು ಕೂಡ ಇಲ್ಲಿ ಭಿನ್ನವಾಗಿದೆ. ಇಡೀ ಮಹಾಭಾರತದ ಕಥೆಗೆ ಇವಳೇ ಸೂತ್ರಧಾರಿಣಿಯೇನೋ ಎಂಬಂತೆ ಚಿತ್ರಿತವಾಗಿರುವುದನ್ನು ಕಾಣಬಹುದು. ಜನಪದ ಕವಿ ಅವಳನ್ನು ಆದಿಶಕ್ತಿಯಾಗಿಯೇ ಚಿತ್ರಿಸಿದ್ದಾನೆ. ಕುರುಕ್ಷೇತ್ರ ಯುದ್ಧದಲ್ಲಿ ಗೆದ್ದವರು ಯಾರೆಂಬ ಭೀಮಾರ್ಜುನರ ವಿವಾದಕ್ಕೆ ಇತರ ಮಹಾಭಾರತಗಳಲ್ಲಿ ಕೃಷ್ಣನನ್ನು ಸೂಚಿಸಿದರೆ ಜನಪದ ಮಹಾಭಾರತದಲ್ಲಿ ಭದ್ರಬಾಹು ದ್ರೌಪದಿಯನ್ನು ತೋರಿಸುತ್ತ ಆದಿಪರಾಶಕಿ, ತ್ರಿಮೂರ್ತಿಗಳ ತಾಯಿ ಎಂಬಂತೆ ಹೊಗಳುವುದನ್ನು ಕಾಣಬಹುದು.

ಪಂಪ, ಕುಮಾರವ್ಯಾಸರ ಮಹಾಭಾರತದಲ್ಲಿ ಕವಿ ತನಗೆ ಇಷ್ಟವಾಗುವ ಪಾತ್ರವನ್ನು ಉನ್ನತೀಕರಿಸಿ ಅದರ ಪರವಾಗಿ ಧ್ವನಿ ಎತ್ತುವುದು ಸರ್ವಸಾಮಾನ್ಯ. ಆದರೆ ಜನಪದ ಮಹಾಭಾರತದಲ್ಲಿ ಯಾವುದೇ ಪಾತ್ರವನ್ನು ಉತ್ಪ್ರೇಕ್ಷೆಯಿಂದ ಹೊಗಳುವುದಾಗಲೀ ವಿನಾಕಾರಣ ತೆಗಳುವುದಾಗಲೀ ಮಾಡದೇ ಎಲ್ಲಾ ಪಾತ್ರಗಳನ್ನು ಸಮಾನಭಾವದಿಂದ ನೋಡಲಾಗಿದೆ. ಕೃಷ್ಣನಿಗೆ ಪಾಂಡವರು ಪರಮಾಪ್ತರಾದರೂ ಅವರ ಮಕ್ಕಳ ವಿಚಾರದಲ್ಲಿ ಅವನ ನಿಲುವು ಭಿನ್ನವಾಗಿರುವುದನ್ನು ಜನಪದ ಮಹಾಭಾರತದಲ್ಲಿ ಕಾಣಬಹುದು. ಹಾಗಾಗಿಯೇ ಕೃಷ್ಣ ಕುತಂತ್ರದಿಂದ ಅಭಿಮನ್ಯು, ನಾಗಾರ್ಜುನ ಹಾಗೂ ಭದ್ರಬಾಹು ಮುಂತಾದವರನ್ನು ಅವರ ತಂದೆಯಿಂದಲೇ ಕೊಲ್ಲಿಸುವನು. ಈ ಹಿನ್ನಲೆಯಿಂದ ಕೃಷ್ಣನನ್ನು ಅಭಿಮನ್ಯುವಿನಿಂದ 'ಅರ್ಧ ಎಲೆ' ಎಂದು ಹೇಳಿಸಿರುವುದು ಜನಪದರು ಸತ್ಯವನ್ನು ಯಾವುದೇ ಅಳುಕಿಲ್ಲದೇ ಹೇಳುವ ಧೈರ್ಯಕ್ಕೆ ಸಾಕ್ಷಿಯಾಗಿದೆ. ಕೃಷ್ಣನ ಬಗ್ಗೆ ಯಾವುದೇ ಪೂರ್ವಾಗ್ರಹವಿಲ್ಲದೆ ನಡೆದುಕೊಳ್ಳುವ ಜನಪದ ಭಾರತ ಇತರ ಭಾರತಗಳಿಗಿಂತ ಭಿನ್ನವೆನಿಸಿದೆ.

ಜನಪದ ಮಹಾಭಾರತದ ಪಾತ್ರಗಳಲ್ಲಿ ದ್ವೇಷ, ಅಸೂಯೆ, ಶಾಪ, ವರ ಹಾಗೂ ಅವುಗಳಿಂದಾಗುವ ಅನಾಹುತಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. ಜನಪದ ಮಹಾಭಾರತದ ಕಥೆ ಪಾಂಡವ ಮತ್ತು ಕೌರವರ ನಡುವಿನ ಮತ್ಸರದಲ್ಲಿ ಹುಟ್ಟಿದ ಸಂಘರ್ಷ. ಈ ದಾಯಾದಿ ಮತ್ಸರ ಕಾವ್ಯದ ಕೇಂದ್ರ ನೆಲೆಯಾದುದರಿಂದ ಇದರ ಪರಿಧಿಯಲ್ಲಿ ಬರುವ ಪಾತ್ರಗಳು ಮಾತ್ರ ವಿಶಾಲವಾದ ತಳಹದಿ ಮತ್ತು ವಿಪುಲವಾದ ವಿವರಗಳಿಂದ ಕೂಡಿದವುಗಳಾಗಿವೆ.

ಪಾತ್ರ ಚಿತ್ರಣದ ಹಿನ್ನಲೆಯಿಂದ ಗಮನಿಸಿದಾಗಲೂ ಜನಪದ ಮಹಾಭಾರತದಲ್ಲಿನ ಪಾತ್ರಚಿತ್ರಣ ಪಂಪ, ಕುಮಾರವ್ಯಾಸರ ಭಾರತಕ್ಕಿಂತ ಕಡಿಮೆಯೆನ್ನಿಲ್ಲವೆನ್ನಬಹುದು. ಪಂಪ ತನ್ನ ಕಾವ್ಯದ ಆಶಯಕ್ಕನುಗುಣವಾಗಿ ನಾಯಕ-ಪ್ರತಿನಾಯಕ ಪಾತ್ರಗಳನ್ನು ಅವುಗಳ ಕೇಂದ್ರಿತವಾಗುವಂತೆ ಉಳಿದ ಪಾತ್ರಗಳನ್ನು ಚಿತ್ರಿಸಿದ್ದರೆ, ಕುಮಾರವ್ಯಾಸ ತನ್ನ ಕಾವ್ಯಕ್ಕೆ ಕೃಷ್ಣನನ್ನೇ ನಾಯಕನನ್ನಾಗಿಸಿ ಉಳಿದೆಲ್ಲ ಪಾತ್ರಗಳು ಕೃಷ್ಣ ಪಾತ್ರದ ನೆರಳಲ್ಲಿರುವಂತೆ ಚಿತ್ರಿಸಿರುವುದನ್ನು ಕಾಣಬಹುದು. ಜನಪದ ಕವಿಗಾದರೋ ಈ ರೀತಿಯ ಯಾವುದೇ ಹಂಗಿಲ್ಲದೆ ಎಲ್ಲಾ ಪಾತ್ರಗಳನ್ನು ಅವರವರ ಸ್ವಭಾವಕ್ಕನುಗುಣವಾಗಿ ಚಿತ್ರಿಸಲಾಗಿದ್ದರೂ ಹೆಚ್ಚು ಒತ್ತನ್ನು ಪುರುಷ ಪಾತ್ರಗಳಿಗೆ ನೀಡಿರುವುದನ್ನು ಕಾಣಬಹುದು. ಕೃಷ್ಣ, ಭೀಷ್ಮ, ಧರ್ಮರಾಯ, ಕರ್ಣ, ದ್ರೋಣ, ಭೀಮ, ಅರ್ಜುನ, ಶಕುನಿ, ದುರ್ಯೋಧನ ಮುಂತಾದವರು ಪ್ರಮುಖರಾದರೆ ಕುಂತಿ ಮತ್ತು ದ್ರೌಪದಿ ಮಾತ್ರ ಸ್ತ್ರೀ ಪಾತ್ರದಲ್ಲಿ ಪ್ರಮುಖರಾಗಿ ಪ್ರತಿಬಿಂಬಿತರಾಗಿದ್ದಾರೆ. ಉಳಿದ ಪಾತ್ರಗಳು ಅಲ್ಲಲ್ಲಿ ಮಿಂಚಿವೆ. ಮೂಲ ಮಹಾಭಾರತದ ಹೆಸರುಗಳ ಜೊತೆಗೆ ಕಾಲ್ಪನಿಕ

ಪಾತ್ರಗಳೂ ಸೇರಿವೆ. ಜನಪದ ಕವಿ ಮಹಾಭಾರತದ ಹೆಸರುಗಳನ್ನು ದೇಸೀ ಭಾಷೆಗೆ ಬದಲಿಸಿಕೊಂಡಿರುವುದನ್ನು ಕಾಣಬಹುದು (ಉದಾ: ದ್ರೌಪದಿ-ದ್ರೋಪತಿ, ಬ್ರಹ್ಮ-ಬೊಮ್ಮ). ಈ ನಿಟ್ಟಿನಲ್ಲಿ ಮೂರು ಮಹಾಭಾರತಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಮುಖವಾಗಿ ಜನಪದ ಮಹಾಭಾರತದ ಪಾತ್ರಗಳನ್ನು ಉಳಿದಂತೆ ಪಂಪ, ಕುಮಾರವ್ಯಾಸರ ಕಾವ್ಯದಲ್ಲಿ ಬರುವ ಪಾತ್ರಗಳನ್ನು ತೌಲನಿಕವಾಗಿ ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

**ಕೃಷ್ಣ :**

ಮಹಾಭಾರತದ ಸೂತ್ರದಾರನಾದ ಕೃಷ್ಣನನ್ನು ಜನಪದ ಕವಿ ಪರಮಾತ್ಮನೆಂದೇ ಸಂಭೋದಿಸಿದ್ದಾನೆ. ದುಷ್ಟ ಶಿಕ್ಷೆ ಶಿಷ್ಟ ರಕ್ಷೆಯೇ ಅವನ ಕರ್ತವ್ಯವೆಂದು ಕವಿ ಭಾವಿಸಿದ್ದಾನೆ. ಕೃಷ್ಣ ಪಾಂಡವರನ್ನು ಕಾಪಾಡಲು ಅವರ ಶ್ರೇಯಸ್ಸಿಗೆ ಅನೇಕ ಕೆಲಸಗಳನ್ನು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಮಾಡುತ್ತಾನೆ. ಜನಪದ ಮಹಾಭಾರತದಲ್ಲಿ ಕವಿ ಪೂರ್ವಯೋಜಿತವೋ ಎಂಬಂತೆ ಕೃಷ್ಣನ ಪಾತ್ರವನ್ನು ದೈವಿಕ ಹಿನ್ನಲೆಯಲ್ಲಿಯೇ ಚಿತ್ರಿತವಾಗಿದೆ. ಇಲ್ಲಿ ಜನಪದರಿಗೆ ಪಂಪನ ಪ್ರಭಾವಕ್ಕಿಂತ ಭಾಗವತ ಸಂಪ್ರದಾಯದ ಕುಮಾರವ್ಯಾಸನ ಪ್ರಭಾವ ಹೆಚ್ಚಾಗಿದೆ. ಇಡೀ ಕಾವ್ಯದಲ್ಲಿ ಕೃಷ್ಣನ ಪಾತ್ರವು ಸಾಮಾನ್ಯವಾಗಿ ಆದಿಯಿಂದ ಅಂತ್ಯದವರೆಗೂ ಅಂದರೆ ಪ್ರತಿಯೊಂದು ಸನ್ನಿವೇಶ, ಪ್ರಸಂಗದಲ್ಲಿಯೂ ಅವನ ಕೈವಾಡ ಇದ್ದೆ ಇರುವುದರಿಂದ ಪ್ರಮುಖವಾದ ಘಟನೆಗಳ ಹಿನ್ನಲೆಯಿಂದ ಕೃಷ್ಣನ ಪಾತ್ರ ಚಿತ್ರಣವನ್ನು ಅವಲೋಕಿಸಬಹುದಾಗಿದೆ.

ಪಂಪನಿಗೂ ಕೃಷ್ಣನಲ್ಲಿ ಗೌರವಪೂಜ್ಯಭಾವನೆಯಿದೆ. ಅವನು ಪುರುಷೋತ್ತಮ. ಆದರೆ ಶ್ರೀಕೃಷ್ಣನನ್ನು ತನ್ನ ಕಥೆಯ ಕೇಂದ್ರ ಪಾತ್ರವನ್ನಾಗಿಸುವುದು ಸಮ್ಮತವಿರಲಿಲ್ಲ ಎಂದೇ ಭಾವಿಸಬೇಕಾಗುತ್ತದೆ. ಜೊತೆಗೆ ಪಂಪನಿಗೆ ತಾನು ನೆಲಸಿದ ಕಾಲದ ವಾಸ್ತವತೆಯನ್ನು ವಿಕ್ರಮಾರ್ಜುನ ವಿಜಯಂದಲ್ಲಿ ಚಿತ್ರಿಸಬೇಕಾಗಿತ್ತು. ಹೀಗಾಗಿ ತನ್ನ ಕಾಲದ ಜೀವನ ವಿವರಗಳನ್ನು, ಮೌಲ್ಯಗಳನ್ನು ತಾನು ಕಂಡ ಸ್ನೇಹ, ಔದಾರ್ಯಗಳನ್ನು ಕಲಿಯಾಗಿ ರಣರಂಗದಲ್ಲಿ ಅನುಭವಿಸಿದ ಅನುಭವಗಳನ್ನು ಕಾವ್ಯದಲ್ಲಿ ಕಟ್ಟಿಕೊಡಬೇಕಾಗಿತ್ತು. ಈ ಹಿನ್ನಲೆಯಲ್ಲಿ ಪಂಪನ ಕಾವ್ಯದಲ್ಲಿ ಕೃಷ್ಣನಿಗೆ ಪ್ರಾಧಾನ್ಯವಿಲ್ಲವಾಗಿದೆ. ಅವನು ಹೇಳುವ ಪಾತ್ರಗಳಲ್ಲಿ ಕೃಷ್ಣನ ಹೆಸರಿಲ್ಲ. ಹಾಗಂತ ಕೃಷ್ಣನ ಪೂಜ್ಯತೆ ಪ್ರಭಾವಗಳಲ್ಲಾಗಲೀ ಆತನು ಮಾಡಿದ ಸಹಾಯದ ವರ್ಣನೆಯಲ್ಲಾಗಲಿ ಯಾವ ತೂಕವೂ ಕಡಿಮೆಯಾಗಿಲ್ಲ. ರಾಜಸೂಯ ಪ್ರಸಕ್ತಿ ಬಂದು ಯುಧಿಷ್ಠಿರನು ಆತನಿಗೆ ಹೇಳಿಕಳುಹಿಸಿ ಅಭಿಪ್ರಾಯವನ್ನು ಕೇಳಿದಾಗ ಅದು ಬಹಳ

ಕಷ್ಟವೆಂದು ಹೇಳುವುದರ ಜೊತೆಗೆ ಹಿಂದೆ ಕೃತಯುಗದಲ್ಲಿ ಯಾಗ ಮಾಡಿದವರ ವಿಷಯವನ್ನೆಲ್ಲಾ ವರ್ಣಿಸುತ್ತಾನೆ. ಅರ್ಜುನನೂ ತಾನೂ ನರನಾರಾಯಣರೆಂದು ಆತನಿಗೆ ಗೊತ್ತಿದ್ದು ಹಲವು ವೇಳೆ ಅರ್ಜುನನಿಗೆ ತಾನೇ ಆ ಸಂಗತಿಯನ್ನು ತಿಳಿಸುವುದರಿಂದ ಪಂಪನ ಕಥಾನಾಯಕನಾದ ಅರ್ಜುನನ ಪಾತ್ರದ ಉನ್ನತಿ ಹೆಚ್ಚುತ್ತದೆ. ಅರ್ಜುನನಿಗೂ ಕೃಷ್ಣನಿಗೂ ಯಾವ ಭೇದವೂ ಇಲ್ಲವೆಂದೂ ಇಬ್ಬರಿಗೂ ಹಲವು ಜನ್ಮಗಳಲ್ಲಿನ ಗೆಳೆತನವುಂಟೆಂದೂ ತಿಳಿಸುತ್ತಾನೆ. ಕೃಷ್ಣ ಅರ್ಜುನನ ಎಲ್ಲಾ ಕಾರ್ಯಕ್ಕೂ ಅವನ ಹಿಂದೆ ನಿಂತು ಸಹಾಯ ಮಾಡುತ್ತ ಸಮಯೋಚಿತ ಬುದ್ಧಿಯನ್ನು ಕಾರ್ಯರೀತಿಯನ್ನು ಹೇಳಿಕೊಟ್ಟು ಅವನ ದಿಗ್ವಿಜಯಕ್ಕೆ ಸಹಾಯಮಾಡಿ ಅಂತಿಮವಾಗಿ ಅವನಿಗೆ ಮೂರ್ಧಾಭಿಷೇಕ ಮಾಡಿಸುತ್ತಾನೆ.

ಜನಪದ ಮಹಾಭಾರತದಲ್ಲಿ ಕೃಷ್ಣ ಮೊದಲಿನಿಂದಲೂ ಪಾಂಡವರ ಪಕ್ಷಪಾತಿಯಂತೆ ಅವರ ಹಿತವನ್ನು ಕಾಪಾಡಿಕೊಂಡು ಬರುತ್ತಾನೆ. ಜನಪದ ಕವಿ ಕೃಷ್ಣನ ಸಹಾಯವನ್ನು ಸೂಚಿಸುವುದಕ್ಕೆ ಅನೇಕ ಪರ್ವಗಳನ್ನೇ ರಚಿಸಿದ್ದಾನೆ. ಜೊತೆಗೆ ಪಾಂಡವರ ಶತ್ರು ತನ್ನ ಶತ್ರುವು ಹೌದೆಂಬಂತೆ ದುರ್ಯೋಧನ ಗಾಂಧಾರಿಯ ದರ್ಶನಕ್ಕೆ ಹೊರಟಾಗ ಮಾರುವೇಷದಿಂದ ಹೋಗಿ ಅವನಿಗೆ ನಾಚಿಕೆಯಾಗುವಂತೆ ಮಾತನಾಡಿ ಅವನಿಂದ ವಸ್ತ್ರಧರಿಸುವಂತೆ ಮಾಡುವುದರ ಮೂಲಕ ವಜ್ರಕಾಯವಾಗುವುದನ್ನು ತಪ್ಪಿಸಿ ಮುಂದೆ ಭೀಮನ ಪ್ರತಿಜ್ಞೆ ನೆರವೇರುವಂತೆ ಮಾಡುತ್ತಾನೆ. ಹಾಗೆಯೇ ಅರಗಿನ ಮನೆಯಿಂದ ಪಾಂಡವರು ಪಾರಾಗಲು ಕೃಷ್ಣನೇ ಎಚ್ಚರಿಕೆಯ ಮಾತುಗಳನ್ನಾಡಿರುತ್ತಾನೆ. ರಾಜಸೂಯಯಾಗಕ್ಕೆ ಬೇಕಾದ ಪುರುಷಮೃಗ ತರಲು ಭೀಮನನ್ನು ಕಳುಹಿಸಿದಾಗ ಆತನನ್ನು ಅಟ್ಟಿಸಿಕೊಂಡು ಬಂದು ಮೃಗವನ್ನು ಕೃಷ್ಣನೇ ಶಾಂತಗೊಳಿಸುವವನು. ಭೀಷ್ಮರು ಕೃಷ್ಣನೇ ಅಗ್ರಪೂಜೆಗೆ ಅರ್ಹರೆಂದಾಗ ವಿರೋಧಿಸಿದ ಶಿಶುಪಾಲನನ್ನು ಸಂಹರಿಸಿದವನು ಕೃಷ್ಣ. ಈ ಪ್ರಸಂಗ ಕುಮಾರವ್ಯಾಸಭಾರತದಲ್ಲೂ, ಪಂಪಭಾರತದಲ್ಲೂ ಬರುತ್ತದೆ. ವ್ಯತ್ಯಾಸವೆಂದರೆ ಜನಪದ ಮತ್ತು ಕುಮಾರವ್ಯಾಸಭಾರತದಲ್ಲಿ ಶಿಶುಪಾಲನನ್ನು ಕೊಲ್ಲುವ ರೀತಿ ಒಂದೇ ಆಗಿದ್ದರೆ, ಪಂಪಭಾರತದಲ್ಲಿ ಸ್ವಲ್ಪ ವ್ಯತ್ಯಾಸವಾಗಿದೆ. ಬಲರಾಮನು ತಂಗಿಯಾದ ಸುಭದ್ರೆಯನ್ನು ದುರ್ಯೋಧನನಿಗೆ ಕೊಟ್ಟು ವಿವಾಹ ಮಾಡಲು ನಿಶ್ಚಯಿಸಿದ್ದಾಗ ಅದನ್ನು ತಪ್ಪಿಸಿ ಅರ್ಜುನನಿಗೆ ಕೊಟ್ಟು ವಿವಾಹ ಮಾಡುವವನು ಕೃಷ್ಣ. ಆದರೆ ಸುಭದ್ರೆಯ ಗರ್ಭದಲ್ಲಿದ್ದ ಅಭಿಮನ್ಯುವಿನ ಹೆಚ್ಚುವರಿ ಅಂಗಗಳನ್ನು ಕತ್ತರಿಸಿ ಅವನಿಂದ ತನಗೆ ಬರುವ ಅಪಾಯವನ್ನು ತಪ್ಪಿಸಿಕೊಳ್ಳುತ್ತಾನೆ. ಪಗಡೆಯಲ್ಲಿ ದ್ರೌಪದಿಯನ್ನು ಗೆದ್ದು ದುರ್ಯೋಧನ ಅವಳ ವಸ್ತ್ರಾಪಹರಣಕ್ಕೆ ಕೈ ಹಾಕಿದಾಗ ಕೃಷ್ಣನನ್ನು ನೆನೆದ ದ್ರೌಪದಿಯ ಸೀರೆ ಅಕ್ಷಯವಾಗುವ ವರನೀಡಿ ಅವಳನ್ನು ಕಾಪಾಡುತ್ತಾನೆ. ಬಲರಾಮನ ತೀರ್ಥ ಯಾತ್ರೆಯ ಪ್ರಸಂಗ ಶಿಷ್ಟ

ಭಾರತದಲ್ಲಿಯೂ ಇದೆಯಾದರೂ ಜನಪದ ಮಹಾಭಾರತದಲ್ಲಿ ನಿರ್ವಹಿಸಲಾಗಿರುವ ಚಾಕಚಕ್ಯತೆಯೇ ಬೇರೆಯಾಗಿದೆ.

ಶ್ರೀಕೃಷ್ಣ ರಾಯಭಾರ ಪರ್ವ ಜನಪದ ಮಹಾಭಾರತದ ಕಥೆಯಲ್ಲಿಯೇ ಪ್ರಮುಖವಾದುದ್ದಾಗಿದೆ. ಈ ಸನ್ನಿವೇಶ ಯುದ್ಧಕಾರ್ಯಕ್ಕೆ ಸಿದ್ದತೆ ನಡೆಸುವುದು ಕೂಡ ಆಗಿದೆ. ಪಾಂಡವರಿಗೆ ದಕ್ಕಬೇಕಾದ ರಾಜ್ಯವನ್ನು ಕೊಡಿಸುವ ಸಲುವಾಗಿಯೇ ಕೃಷ್ಣ ಸಂಧಾನದ ಕಾರ್ಯವನ್ನು ನಿರ್ವಹಿಸುತ್ತಾನೆ. ದುರ್ಯೋಧನನ ಮನೆಗೆ ಹೋಗದೆ ವಿದುರನ ಮನೆಗೆ ಹೋಗುವುದು ಅಲ್ಲಿ ಹಾಲು ಕುಡಿದು ಅದು ಹೊಳೆಯಾಗಿ ಹರಿಸುವ ಸನ್ನಿವೇಶದಲ್ಲಿ ಕೃಷ್ಣನ ಪಾತ್ರವನ್ನು ವೈಭವೀಕರಿಸಲಾಗಿದೆ. ಇಲ್ಲಿ ವಿದುರನ ಭಕ್ತಿಗಿಂತ ಕೃಷ್ಣನ ಮಹಿಮೆಗೆ ಒತ್ತುಕೊಟ್ಟಿರುವುದು ಸ್ಪಷ್ಟವಾಗಿದೆ. ಈ ಪ್ರಸಂಗದಲ್ಲಿ ಜನಪದ ಕವಿಯ ಮೇಲೆ ಕುಮಾರವ್ಯಾಸ ಕವಿಯ ಪ್ರೇರಣೆ ಪ್ರಭಾವಿತವಾಗಿರುವುದನ್ನು ಗುರುತಿಸಬಹುದು. ಈ ಎರಡೂ ಕಾವ್ಯಗಳಲ್ಲಿ ಸಾಮ್ಯತೆ ಕಂಡುಬರುತ್ತದೆ. ಹಾಗೆಯೆ ದುರ್ಯೋಧನಿಂದ ಅಪಮಾನಿತವಾದ ವಿದುರ ಆತನನ್ನು ರಕ್ಷಿಸಲು ಇಟ್ಟುಕೊಂಡಿದ ಬಿಲ್ಲು ಮುರಿದು ಹಾಕುವ ಪ್ರಸಂಗ ಜನಪದ ಮಹಾಭಾರತದಲ್ಲಿ ಹೊಸ ವ್ಯಾಖ್ಯಾನವನ್ನೇ ನೀಡುತ್ತದೆ. ಜನಪದ ಕವಿಯ ಪ್ರಕಾರ ವಿದುರನು ದುರ್ಯೋಧನನ ರಕ್ಷಣೆಗಾಗಿ ಇಟ್ಟುಕೊಂಡಿದ್ದ ಬಿಲ್ಲನ್ನು ಮುರಿಸುವ ಸಲುವಾಗಿಯೇ ಕೃಷ್ಣನು ವಿದುರನ ಮನೆಗೆ ಹೋಗಿದ್ದನೆಂದು ಹೇಳಿರುವುದೊಂದು ವಿಶೇಷತೆ ಎನ್ನಬಹುದು. ಕುಮಾರವ್ಯಾಸಭಾರತದಲ್ಲಿ ಇದೇ ಪ್ರಸಂಗವಿದ್ದು ಜನಪದದಲ್ಲಿ ಯಥಾವತ್ತಾಗಿ ಬಂದಿರುವುದನ್ನು ಕಾಣಬಹುದು.

ಶ್ರೀಕೃಷ್ಣ ರಾಯಭಾರದ ಪ್ರಸಂಗವನ್ನು ಪಂಪ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಪಂಪನ ಕೃಷ್ಣ ರಾಜನೀತಿನಿಪುಣ, ವ್ಯವಹಾರ ಕುಶಲ, ಮಹಾಮುತ್ಸುದ್ದಿ. ಆದರೆ ಅವನೇನೂ ಯುದ್ಧಕೋರನಲ್ಲ ಶಾಂತಿಪ್ರಿಯ. ಸಾಮೋಪಾಯದಿಂದಲೇ ಪಾಂಡವ ಕೌರವರಿಗೆ ರಾಜಿ ಮಾಡಿಸಬೇಕೆಂದು ಅವನ ಆಶಯ. ಅದಕ್ಕಾಗಿಯೇ ಅವನು ರಾಯಭಾರಿಯಾಗಿ ಕಾರ್ಯನಿರ್ವಹಿಸುತ್ತಾನೆ. ನಯವಾಗಿ ಸೂಕ್ಷ್ಮವಾಗಿ ಕಾರ್ಯ ಸಾಧನೆ ಮಾಡಲು ಅವನು ಹೃತ್ಪೂರ್ವಕವಾಗಿ ಪ್ರಯತ್ನಿಸುತ್ತಾನಾದರೂ ಕೌರವ ಒಪ್ಪದೇ ಹೋದಾಗ ದಂಡೋಪಾಯದ ಮಾತುಗಳನ್ನಾಡಬೇಕಾಗುತ್ತದೆ. ಸಂಧಾನದ ಹಿಂದಿನ ದಿನ ಕೃಷ್ಣ ಹಸ್ತಿನಾಪುರಕ್ಕೆ ಆಗಮಿಸಿ ವಿದುರನ ಮನೆಯಲ್ಲಿ ಪವಡಿಸುತ್ತಾನೆ. ಅವನ ಆಗಮನವನ್ನು ವಿದುರ ದುರ್ಯೋಧನನಿಗೆ ನಿವೇದಿಸಿದಾಗ 'ಉರದೆ ಕಿರುನಗೆನಕ್ಕು ನಾಳಿನೋಲಗದೊಳ್ ತಂದು ಕಾಣಿಸು' ಎನ್ನುತ್ತಾನೆ. ಕೃಷ್ಣನ ಬಗ್ಗೆ ಸಹಜವಾಗಿ ಅವನಿಗಿರುವ ತಾತ್ಸಾರ ತಿರಸ್ಕಾರಗಳನ್ನು ಪಂಪ

ಔಚಿತ್ಯಪೂರ್ಣವಾಗಿ ಅಭಿವ್ಯಕ್ತಗೊಳಿಸಿದ್ದಾನೆ. ಮುಂದೆ ತಾನು ಬಂದ ಉದ್ದೇಶವನ್ನು ಕೃಷ್ಣ ಜಾಣತನದಿಂದ ನುಡಿಯುತ್ತಾನೆ.

**ಮನಕತದಿಂದೊಂದೊರ್ವರ**
**ನಿನಿಸಗಲ್ದಿರ್ದಿರಿನಿಸೆ ನಿಮಗಂ ತಮಗಂ**
**ಮುನಿಸುಂಟೆ ಕಾಯ್ದ ಬೆನ್ನೀರ್**
**ಮನೆ ಸುಡದೆಂಬೊಂದು ನುಡಿಯವೋಲ್ ಕುರುರಾಜಾ**
**(ಪ.ಭಾ. ೯-೩೮)**

'ನಿಮಗೂ ಪಾಂಡವರಿಗೂ ಏನೋ ಸ್ವಲ್ಪ ಭಿನ್ನಾಭಿಪ್ರಾಯ ಬಂದುದ್ದರಿಂದ ತುಸು ವಿರಸ ಉಂಟಾಗಿದೆಯೇ ಹೊರತು ಇಬ್ಬರಿಗೂ ವೈರವೆಲ್ಲಿದೆ' ಅಂತೆಯೇ ಸೋದರ ವಿರಸವನ್ನು ಸರಿಪಡಿಸಿಕೊಳ್ಳಬಹುದು. ಇದು ಕೃಷ್ಣನ ಅಭಿಮತ 'ಕಾಯ್ದ ಬೆನ್ನೀರ್ ಎಂತೂ ಮನೆಸುಡದು' ಎಂಬ ಗಾದೆಯನ್ನು ಪಂಪ ಬಳಿಸಿರುವುದು ಗಮನಾರ್ಹ. ಮುಂದೆ ಕೃಷ್ಣ ಪಾಂಡವರ ಪರವಾಗಿ ಐದು ಗ್ರಾಮಗಳನ್ನಾದರೂ ಕೊಡು ಎಂದು ಸಂದರ್ಭೋಚಿತವಾಗಿ ಹೇಳುವುದು ಉಚಿತವಾಗಿದೆ.

ಜನಪದ ಮಹಾಭಾರತದಲ್ಲಿ ಕೃಷ್ಣ ದುರ್ಯೋಧನನ್ನು ಕುರಿತು ಪಾಂಡವರಿಗೆ ಅವರ ರಾಜ್ಯವನ್ನು ಕೊಟ್ಟುಬಿಡು ಎಂದು ಒತ್ತಡ ಹೇರುತ್ತಾನೆ. ಐದು ಗ್ರಾಮಗಳನ್ನಾದರೂ ಕೊನೆಗೆ ಒಂದು ಗ್ರಾಮವನ್ನಾದರೂ ಬಿಟ್ಟುಕೊಡಬೇಕೆಂದು ಒತ್ತಾಯಿಸುತ್ತಾನೆ. ಆದರೆ ಇದೆಲ್ಲವನ್ನು ದುರ್ಯೋಧನ ನಿರಾಕರಿಸುವ ಕಥಾಸಾರಾಂಶ ಹಾಗೆಯೇ ಇದೆ. ಇಲ್ಲಿಯೂ ಜನಪದ ಕವಿ ದುರ್ಯೋಧನನ ಮೂಲಕ ಆಧ್ಯಾತ್ಮವನ್ನು ವ್ಯಕ್ತಪಡಿಸಿದ್ದಾನೆ.

**ಕೃಷ್ಣ ನಿನ್ನ ಅಂತರಂಗದಲ್ಲಿ ಒಂದು**
**ಬಯಿರಂಗದಲ್ಲೆ ಒಂದು ಮಡಗಿರುವೆ**
**ನಿನ್ನ ವರಸೆ ನನಗೆ ಚೆನ್ನಾಗಿಗೊತ್ತು**
**ಹೊರಗಡೆಗೆ ಕೊಡುಕೊಡು ಅನುತ್ತಿದ್ದೀಯೆ**
**ಒಳಗಡೆ ಕೊಡಬೇಡ ಕೊಡಬೇಡ ಅನುತ್ತಿದ್ದೀಯೆ**
**ನಿನ್ನ ಕಂತು ಇಕಮತ್ತು ನನಗೆ ಗೊತ್ತು**
**ಅವರಿಗೆ ಕೊಡಬೇಕಾದ್ದು ಯಾವುದೂ ಇಲ್ಲ**
**(ಜ.ಭಾ. ಪು. ೪೫೪)**

ಇದೇ ರೀತಿಯ ಕೃಷ್ಣನ ಮನಚಿತ್ತವನ್ನು ಬಲ್ಲ ದುರ್ಯೋಧನನ ಮಾತುಗಳು ಕುಮಾರವ್ಯಾಸನಲ್ಲೂ ಕಾಣಬಹುದು.

**ಎನ್ನ ಹೃದಯದೊಳಿರ್ದು ಮುರಿವನು**
**ಗನ್ನದಲಿ ಸಂಧಿಯನು ರಿಪುಗಳೊ**
**ಳಿನ್ನು ತನ್ನವರವರೊಳಿರ್ದಾ ನುಡಿವನೀಹದನ**
**ಭಿನ್ನನಂತಿರೆ ತೋರಿ ಭಿನ್ನಾ**
**ಭಿನ್ನನೆನಸಿಯೇ ಮೆರವ ತಿಳಿಯಲ**
**ಭಿನ್ನವೈ ಮುರವೈರಿ ನಾವಿನ್ನಂಜಲೇಕೆಂದ**
**(ಕು.ಭಾ. ಉ.ಪ. ೧೦-೨೧)**

ಕುಮಾರವ್ಯಾಸಭಾರತದಲ್ಲಿ ಕವಿ ಸುಯೋಧನನ ಮನಸ್ಥಿತಿಯನ್ನು 'ಕೃಷ್ಣನ ಕೆಣಕಿದಲ್ಲದೆ ವಹಿಲದಲಿ ಕೈವಲ್ಯವಿಲ್ಲೆಂದ' ಎಂಬುದಾಗಿ ಚಿತ್ರಿಸಿದ್ದಾನೆ. ಕುಮಾರವ್ಯಾಸ ದುರ್ಯೋಧನನ ಸಂಕೀರ್ಣ ವ್ಯಕ್ತಿತ್ವವನ್ನು ಸಮರ್ಥವಾಗಿ ಸೆರೆಹಿಡಿದಿದ್ದರೆ ಜನಪದಭಾರತದಲ್ಲಿ ಅದು ಸಂಕೀರ್ಣಗೊಳ್ಳದೆ ಸರಳವಾಗಿದೆ. ಕುಮಾರವ್ಯಾಸನಭಾರತದ ಕೌರವನ ಈ ಮನಸ್ಥಿತಿಗೆ ಕವಿಯ ಕಾಲ ಹಾಗೂ ಧಾರ್ಮಿಕ ಮನೋಭಾವ ಮುಖ್ಯ ಕಾರಣವೆನ್ನಬಹುದು ಜನಪದ ಕವಿಗೆ ಕಾಲ ಮತ್ತು ಧರ್ಮ ಅಷ್ಟೊಂದು ಮಹತ್ವವಲ್ಲವಾದರೂ ಈ ಪದ್ಯದ ನೇರ ಪ್ರೇರಣೆಯಿಂದಲೇ ಕವಿ ದುರ್ಯೋಧನನ ನುಡಿಗಳನ್ನು ಚಿತ್ತದಲ್ಲಿಟ್ಟುಕೊಂಡೇ ರೂಪುಗೊಳಿಸಿದ್ದಾನೆ.

ಕೃಷ್ಣನ ಸಂಧಾನ ವಿಫಲವಾಗಿ ದುರ್ಯೋಧನ ಸಿಟ್ಟುಗೊಂಡು ಬಂಧಿಸಲು ಹೋದಾಗ ಕೃಷ್ಣ ತನ್ನ ವಿಶ್ವರೂಪವನ್ನು ಪ್ರಪಂಚಕ್ಕೆ ತೋರ್ಪಡಿಸುತ್ತಾನೆ. ಇದು ಕುಮಾರವ್ಯಾಸಭಾರತದಲ್ಲೂ, ಪಂಪಭಾರತದಲ್ಲೂ ಬಂದಿದ್ದರೂ, ಜನಪದಭಾರತದಲ್ಲಿ ಸ್ವಲ್ಪ ಭಿನ್ನವಾಗಿ ಬಂದಿದೆ. ಕೃಷ್ಣನ ವಿಶ್ವರೂಪವನ್ನು ಕಂಡ ಧೃತರಾಷ್ಟ್ರನು ಕೃಷ್ಣನ ಬಗ್ಗೆ ತೋರಿದ ಭಕ್ತಿಯನ್ನು ಕಂಡು ಕೋಪಗೊಂಡ ದುರ್ಯೋಧನ ತಂದೆಯ ತಲೆಯ ಮೇಲೆ ಹೊಡೆಯುತ್ತಾನೆ. ಇದೊಂದು ನೂತನ ವಿಚಾರವಾಗಿದ್ದು ಜನಪದ ಕವಿಯ ಸುತ್ತಮುತ್ತಲಿನ ಪರಿಸರದ ನೈಜಾನುಭವವೇ ಈ ಘಟನೆಗೆ ಕಾರಣವಿರಬಹುದು. ಕೃಷ್ಣನ ರಾಯಭಾರವು ಅಂದುಕೊಂಡಂತೆಯೇ ಮುರಿದು ಬಿದ್ದು ಸಮರವೇ ನಿರ್ಣಯವಾಗುತ್ತದೆ. ಕೌರವಾದಿಗಳು ಆತ್ಮಶೋಧನೆಗೆ ಒಳಪಡುವ ಪ್ರಸಂಗವು ಇಲ್ಲೆ ಪ್ರಯೋಗಗೊಂಡು ಇದರಲ್ಲಿ ಕೃಷ್ಣನು ತನ್ನ ಲೆಕ್ಕಚಾರದಂತೆ ಜಯಪಡೆದು ದುರ್ಯೋಧನ ಹಾಗೂ ಅವನ ಅನುಯಾಯಿಗಳ ಆತ್ಮಬಲವನ್ನು ಕುಗ್ಗಿಸುವನು. ಇದಕ್ಕೆ ಕರ್ಣನು ಹೊರತಲ್ಲ. ಪಂಪ ಮತ್ತು ಕುಮಾರವ್ಯಾಸಭಾರತಗಳಲ್ಲೂ ಸಂಧಿಮುರಿದ ನಂತರ ಕೃಷ್ಣ ಕುಂತಿಯೆಡೆಗೆ ಬಂದು ಕರ್ಣನ ಜನ್ಮರಹಸ್ಯವನ್ನು ತಾನೇ ತಿಳಿಸುವಂತೆ

ಮಾಡುವುದರ ಮೂಲಕ ಕರ್ಣನು ದುರ್ಯೋಧನನಿಗೋಸ್ಕರ ಕಾದಾಡಿ ಪಾಂಡವರನ್ನು ನಾಶಗೊಳಿಸುವೆನು ಎಂದು ಉತ್ಸಾಹದಲ್ಲಿದ್ದ ಅವನ ಮನೋಧೃಡತೆಯನ್ನು ನಾಶಗೊಳಿಸಿ ಆ ಮೂಲಕ ತಮ್ಮ ದಿಗ್ವಿಜಯಕ್ಕೆ ಅಡಿಗಲ್ಲನ್ನು ಹಾಕುವ ಪ್ರಯತ್ನಕ್ಕೆ ಕುಂತಿಯನ್ನು ಪ್ರೇರಿಪಿಸುತ್ತಾನೆ.

ಮುಂದೆ ಇದೇ ತಂತ್ರದಿಂದ ಕೃಷ್ಣ ದ್ರೋಣನನ್ನು ಯುದ್ಧದಿಂದ ಹಿಂದೆಗೆಯುವಂತೆ ಮಾಡುತ್ತಾನೆ. ಯಥಾಪ್ರಕಾರ ಆನೆಯ ಸಾವನ್ನು ಆಶ್ವತ್ಥಾಮನ ಸಾವಿಗೆ ಸೂಚನೆಯೆಂಬಂತೆ ಧರ್ಮರಾಯನಿಂದ ಹೇಳಿಸಿ, ದೇಹ ಬಿಟ್ಟು ಹೋದ ದ್ರೋಣರ ಶರೀರವನ್ನು ಧೃಷ್ಟದ್ಯುಮ್ನನಿಂದ ಕತ್ತರಿಸಲು ಕಾರಣನಾಗುತ್ತಾನೆ. ಈ ಪ್ರಸಂಗ ಪಂಪಭಾರತದ ಮತ್ತು ಕುಮಾರವ್ಯಾಸಭಾರತದಲ್ಲೂ ಕಾಣುತ್ತೇವೆ. ಹಾಗೆಯೆ ಕರ್ಣನ ರಥ ಭೂಮಿಯಲ್ಲಿ ಹೂತಿರುವ ಸಂದರ್ಭದಲ್ಲಿ ಬ್ರಾಹ್ಮಣನ ವೇಷದಲ್ಲಿ ಬಂದು ಕರ್ಣನನ್ನು ಕರ್ಣಕುಂಡಲವನ್ನು ಕೇಳುತ್ತಾನೆ. ಅದನ್ನು ಕೊಡಲು 'ಜಲಧಾರೆಯಿಂದ ಧಾರೆ ಎರೆ' ಎನ್ನುವನು. ಕರ್ಣ ನೀರಿಲ್ಲವಲ್ಲ ಎಂದು ಚಿಂತಿಸುವಾಗ 'ನಿನ್ನ ಹೃದಯದ ಅಮೃತ ಕಳಸದಲ್ಲಿದ್ದ ಜಲದಿಂದ ಧಾರೆ ಎರೆ' ಎಂದಾಗ ಕರ್ಣ ಹಾಗೆ ಮಾಡಿದಾಗ ಆತನ ಆತ್ಮ ಪರಮಾತ್ಮನಲ್ಲಿ ಲೀನವಾಗುತ್ತದೆ. ಈ ಪ್ರಸಂಗ ಪಂಪಭಾರತದಲ್ಲಿ ಕಂಡುಬರುವುದಿಲ್ಲ, ಕುಮಾರವ್ಯಾಸಭಾರತದಲ್ಲಿ ಹಾಗೂ ಜನಪದ ಭಾರತದಲ್ಲಿ ಮಾತ್ರ ಕಾಣುವಂಥದ್ದು. ಕೃಷ್ಣ ಈ ತಂತ್ರಗಳನ್ನೆಲ್ಲಾ ಕೈಗೊಳ್ಳದಿದ್ದರೆ ಕರ್ಣನನ್ನು ಸೋಲಿಸಲು ಸಾಧ್ಯವಾಗುತ್ತಿರಲಿಲ್ಲ. ಇಲ್ಲೆಲ್ಲ ಕೃಷ್ಣ ಪಾಂಡವರ ಒಳಿತಿಗಾಗಿಯೇ ಶ್ರಮಿಸಿರುವುದನ್ನು ಕಾಣಬಹುದಾಗಿದೆ.

ಕೃಷ್ಣ ಭೀಷ್ಮರನ್ನು ಇದೇ ತಂತ್ರದಿಂದ ಯುದ್ಧದಿಂದ ವಿಮುಖರಾಗುವಂತೆ ಮಾಡುತ್ತಾನೆ. ಇತರ ಮಹಾಭಾರತಗಳಿಗಿಂತ ಜನಪದಭಾರತದಲ್ಲಿ ವಿಭಿನ್ನವಾಗಿ ಶಿಖಂಡಿಯ ಪ್ರತಿಮೆ ಮಾಡಿ ರಥದಲ್ಲಿರಿಸಿ ಯುದ್ಧಕ್ಕೆ ಕಳುಹಿಸಿದಾಗ ಅಂಬೆಯ ಜೀವ ಅದಕ್ಕೆ ಕೂಡಿಕೊಂಡು ಭೀಷ್ಮನ ಮೇಲೆ ಸೇಡು ತೀರಿಸಿಕೊಂಡಿತ್ತೆನ್ನುವುದು ಹೊಸದಾಗಿ ವಿಶಿಷ್ಟ ಸೃಷ್ಟಿಯಾಗಿದೆ.

ಅಂತಿಮವಾಗಿ ಕೃಷ್ಣ, ಧರ್ಮರಾಯನಿಗೆ ಪಟ್ಟಕಟ್ಟಿ ಭೀಮಾರ್ಜುನರನ್ನು ಹೆಬ್ಬಾಗಿಲಲ್ಲಿ ನಿಲ್ಲಿಸಿ ನಕುಲ ಸಹದೇವರಿಗೆ ಮಂತ್ರಿ ಸೇನಾಧಿಪತಿ ಪಟ್ಟಕಟ್ಟಿದಾಗ ಅವರಿಗೆ ಸಹಜವಾಗಿಯೇ ಅಸಮಾಧಾನವಾಯಿತು. ಅವರಿಬ್ಬರು ನಾರದರಿಗೆ ವಿಷಯ ತಿಳಿಸಿ, ಅದು ಕೃಷ್ಣನಿಗೆ ಗೊತ್ತಾದಾಗ ಕೃಷ್ಣ 'ಕೌರವರ ಕಡೆಯವರು ದೊಂಬಿ ಮಾಡಿದರೆ ನಕುಲ ಸಹದೇವರ ಕೈಲಾಗುವುದಿಲ್ಲ ಎಂದು ಹೀಗೆ ಮಾಡಿದೆ' ಎನ್ನುವಾಗ ಕೃಷ್ಣ ಯಾವ ಕಾರ್ಯ ಮಾಡಿದರೂ ಮುಂದಾಲೋಚನೆಯನ್ನಿಟ್ಟುಕೊಂಡೇ

ಮಾಡುತ್ತಾನೆ. ಅದು ಪಾಂಡವರ ಉದ್ಧಾರಕ್ಕಾಗಿಯೇ ಎನ್ನುವುದು ವಿಶೇಷ. ಹೀಗೆ ಜನಪದ ಮಹಾಭಾರತದಲ್ಲಿ ಕೃಷ್ಣ ಪಾತ್ರವನ್ನು ದೈವೀನೆಲೆಯಲ್ಲೇ ಕಾಣಲಾಗಿದೆ. ಕೃಷ್ಣನು ಕೂಡ ತನ್ನ ದೈವಿಕ ಶಕ್ತಿಯುಕ್ತಿಯಿಂದ ಪಾಂಡವರನ್ನು ಕಾಪಾಡುತ್ತಾನೆ. ಅವರನ್ನು ಕಾಪಾಡುವ ಸಲುವಾಗಿ ಅವರ ಮಕ್ಕಳನ್ನು ಬಲಿಕೊಡಲು ಹಿಂದೆಗೆಯಲಿಲ್ಲ ಎನ್ನುವುದು ವಿಶೇಷವಾಗಿದೆ. ಪಂಪಭಾರತದಲ್ಲಿ ಶ್ರೀಕೃಷ್ಣನು ಆದಿಪುರುಷನ ಅವತಾರನಾದರೂ ಕೇವಲ ವಿಕ್ರಮಾರ್ಜುನನ ದಿವ್ಯಸಖನು ಹಾಗೂ ಮಂತ್ರಿಯಾಗಿಯೂ ಹಿತೈಷಿಯಾಗಿಯೂ ರಕ್ಷಕನಾಗಿಯೂ ಶೋಭಿಸುತ್ತಾನೆ. ಶ್ರೀಕೃಷ್ಣನ ಪಾತ್ರ ಚಿತ್ರಿಸುವಲ್ಲಿ ಪಂಪನಿಗೆ ಭಕ್ತಿ ಮತ್ತು ರಕ್ಷಣೆಗಿಂತ ಮಾನವ ಸಂಘರ್ಷದ ಪರಿಣಾಮಗಳು ಮುಖ್ಯವೆನಿಸಿದೆ. ಹೀಗಾಗಿ 'ಶ್ರೀಕೃಷ್ಣನ ಮಹಿಮೆಯನ್ನು ಪಂಪನು ತುಂಬು ಕಂಠದಿಂದ ಘೋಷಿಸದೆ ಇರುವುದಕ್ಕೆ ಅವನ ಜೈನಧರ್ಮದ ದೃಷ್ಟಿ ಕಾರಣವಾಗಿರಬಹುದು ಅಷ್ಟೇ'[1] ಎಂಬ ತೀ.ನಂ.ಶ್ರೀ.ಯವರ ಅಭಿಪ್ರಾಯ ಇಲ್ಲಿ ಗಮನಾರ್ಹವಾಗಿದೆ.

ಕುಮಾರವ್ಯಾಸ ಕೃಷ್ಣನು ಸರ್ವಶಕ್ತ ಎಂಬಂತೆ ಚಿತ್ರಿಸಿದ್ದರೂ ಅವನ ಮಾನವೀಯ ಸ್ವಭಾವಗಳನ್ನು ಕವಿ ಮರೆಮಾಚಿಲ್ಲ. ಕೌರವ ಪಕ್ಷದ ಯಾವ ವೀರನೂ ನ್ಯಾಯವಾಗಿ ಸಾಯಲಿಲ್ಲ, ಎಲ್ಲರೂ ಕೃಷ್ಣನ ಮೋಸಕ್ಕೆ ಬಲಿಯಾದರು. ಮಹಾಭಾರತದ ಸಮಗ್ರ ಹಿನ್ನಲೆಯಲ್ಲಿ ಯುದ್ಧಪರ್ವಗಳಲ್ಲಿ ನಡೆದ ಘಟನೆಗಳನ್ನು ಪರಿಶೀಲಿಸಿದರೆ ಕೃಷ್ಣನ ನೀತಿ ಅರ್ಥವಾದೀತು. ದುಷ್ಟ ಶಿಕ್ಷೆ ಶಿಷ್ಟ ರಕ್ಷೆ ಅವನ ನೀತಿ. ಇಷ್ಟಾದರೂ ಭೀಷ್ಮ, ಕರ್ಣ ಮಾತ್ರವಲ್ಲ ಕೌರವನಿಗೂ ಸಹ ಮರಣ ಕಾಲದಲ್ಲಿ ಕಾಣಿಸಿಕೊಂಡು ಸಂತೈಸಿ ಅಭಯವೀಯುತ್ತಾನೆ.

ವೀ. ಸೀತಾರಾಮಯ್ಯನವರು ಶ್ರೀಕೃಷ್ಣನ ಪಾತ್ರವನ್ನು ಕುರಿತು 'ನಾರಾಣಪ್ಪನ ಭಾರತದಲ್ಲಿ ಎಲ್ಲ ಕೀರ್ತಿಯೂ ಕೃಷ್ಣನಿಗೆ ಸಲ್ಲತಕ್ಕದ್ದು ಎಲ್ಲ ಕೆಲಸವು ಅವನದು ಎಲ್ಲ ಗುಣದಲ್ಲಿಯೂ ಅವನಿಗೆ ಹೆಚ್ಚಿಗೆ, ಅವನ ಮೇಲೆ ಯಾರ ಕೈಯೂ ಇಲ್ಲ ಶ್ರೀಮಹಾವಿಷ್ಣುವು ಧರ್ಮ ಪರಿಪಾಲನೆಗೂ ಪಾಪವಿನಾಶಕ್ಕೂ ಕೃಷ್ಣನ ರೂಪದಲ್ಲಿ ಅವತಾರವೆತ್ತಿ ಅರ್ಜುನನ ಮೂಲಕ ದುಷ್ಟ ಶಿಕ್ಷಣ ಮಾಡಿಸಿ, ಭೂಭಾರವನ್ನು ಅಳಿಸಿ ವಿರಾಮವಿಲ್ಲದೆ ಭಕ್ತ ಪೋಷಣೆ ಮಾಡುತ್ತಾನೆ. ಆತನು ಸರ್ವವ್ಯಾಪ್ತಿ ಸರ್ವಂತರ್ಯಾಮಿ ಎಲ್ಲ ಸ್ವತಂತ್ರವೂ ಅವನಿಗೆ ಮಾತ್ರ ಸಾಧ್ಯ. 'ತೇನಾವಿನಾ ತೃಣಮಪಿ ನ ಚಲತಿ' ಎಂಬ ನುಡಿಯಂತೆ ಎಲ್ಲಕ್ಕೂ ಆತನೇ ಚೈತನ್ಯ ಇತರರು ಯಂತ್ರದ ಬೊಂಬೆಗಳು ಆತನ ಕೈಗೊಂಬೆಗಳು ಆತನು ಆಡಿಸಿದ ಹಾಗೆ ಪ್ರಪಂಚವು ಆಡುವುದು'[2] ಎಂಬುದಾಗಿ ಕೃಷ್ಣನ ಪಾತ್ರದ ವಿಷಯದಲ್ಲಿ ತಳೆದಿರಬಹುದಾದ ನಿಲುವು ಸರಿಯಾಗಿದೆ.

ಹೀಗೆ ಮೂರು ಮಹಾಭಾರತಗಳಲ್ಲಿ ಕೃಷ್ಣನ ಪಾತ್ರ ಭಿನ್ನವಾಗಿದೆ. ಜನಪದ ಕವಿಗೆ ಕೃಷ್ಣ ದೈವ ಸ್ವರೂಪಿ, ಭಕ್ತ ರಕ್ಷಕನಾಗಿದ್ದಾನೆ. ಬಹುಮಟ್ಟಿಗೆ ಕುಮಾರವ್ಯಾಸಭಾರತದ ಕೃಷ್ಣ ಪಾತ್ರ ಜನಪದಭಾರತದ ಕೃಷ್ಣನ ಪಾತ್ರದಲ್ಲಿ ಸಾಮ್ಯ ಕಂಡುಬರುತ್ತದೆ. ಕಾರಣ ಇಬ್ಬರಿಗೂ ಕೃಷ್ಣ ಅವತಾರ ಸ್ವರೂಪಿ. ಆದರೆ ಜನಪದಭಾರತದಲ್ಲಿ ಕೃಷ್ಣನಿಗಿಂತ ದ್ರೌಪದಿ ಹೆಚ್ಚಿನವಳಾಗುತ್ತಾಳೆ. ಅವಳೇ ಆದಿಪರಾಶಕ್ತಿ ಸ್ವರೂಪಿ. ಪಂಪನಿಗೆ ಕೃಷ್ಣನ ಬಗ್ಗೆ ಗೌರವವಿದ್ದರೂ ಆತನನ್ನು ಬಹುಮಟ್ಟಿಗೆ ರಾಜಕೀಯ ನಿಪುಣನನ್ನಾಗಿ ಚಿತ್ರಿಸಿದ್ದಾನೆ. ಕುಮಾರವ್ಯಾಸ ಕೃಷ್ಣನ ಪಾರಮ್ಯವನ್ನು ಇಳೆಗೆ ಪಸರಿಸುವುದಕ್ಕೋಸ್ಕರವೇ ತಾನು ಕಾವ್ಯರಚಿಸಿರುವುದಾಗಿ ಹೇಳಿರುವುದರಿಂದ ಆತನ ಕಾವ್ಯದ ನಾಯಕ ಕೃಷ್ಣನೇ ಆಗಿದ್ದಾನೆ. ಆದ್ದರಿಂದ ಅವಕಾಶ ಸಿಕ್ಕಿದಾಗಲೆಲ್ಲ ಕೃಷ್ಣನನ್ನು ಹಾಡಿ ಹೊಗಳಿದ್ದಾನೆ. ವಿದುರನ ಬಾಯಲ್ಲಿ ಹೇಳಿಸುವ ಕೃಷ್ಣ ಸ್ತೋತ್ರ ಕವಿಯದೇ ಆಗಿದೆ ಎನ್ನಬಹುದು. ಹೀಗೆ ಮೂವರಿಗೂ ಮೂರು ಬಗೆಯಲ್ಲಿ ಕೃಷ್ಣ ಗೋಚರಿಸಿದ್ದಾನೆ. ಅಥವಾ ಅವನ ಪಾತ್ರವನ್ನು ಶಕ್ತ್ಯಾನುಸಾರ ಚಿತ್ರಿಸಿದ್ದಾರೆ ಎನ್ನಬಹುದು.

**ದ್ರೌಪದಿ :**

ಜನಪದ ಮಹಾಭಾರತದಲ್ಲಿನ ಪ್ರಮುಖ ಪಾತ್ರಗಳಲ್ಲಿ ದ್ರೌಪದಿಯ ಪಾತ್ರವು ಒಂದು. ಜನಪದ ಕವಿ ದ್ರೌಪದಿಯ ಜನನವನ್ನು ದೈವಿಕ ನೆಲೆಯಿಂದ ಚಿತ್ರಿಸಿದ್ದಾನೆ. ತಾಮ್ರಕೇಶಿ ಈಶ್ವರನಿಂದ ವರಪಡೆದು ಪರೀಕ್ಷೆಗಾಗಿ ಅವನ ಮೇಲೆಯೇ ಪ್ರಯೋಗಿಸಲು ಹೊರಟಾಗ ಬ್ರಹ್ಮಾಂಡದಲ್ಲಿ ಈಶ್ವರ ಅದೃಶ್ಯನಾದ. ಈಶ್ವರ ಸಿಗದಿದ್ದಾಗ ತಾಮ್ರಕೇಶಿ ಪಾರ್ವತಿಯನ್ನು ಹಿಡಿಯಲು ಹೊರಟಾಗ ಅವನನ್ನು ತ್ರಿಶೂಲದಿಂದ ಕೊಂದು 'ನೀನು ಭೂಲೋಕದಲ್ಲಿ ಶಕುನಿಯಾಗಿ ಬಾಳು' ಎಂದು ಶಾಪ ನೀಡುತ್ತಾಳೆ. ಮುಂದೆ ತಪಗೈಯುತ್ತಿದ್ದ ಪಾರ್ವತಿ ಬ್ರಹ್ಮ, ವಿಷ್ಣು ಅವರನ್ನು ಐದು ಸಾರಿ 'ಪತಿ ಬೇಕು' ಎಂದು ಕೇಳಲು 'ನೀನು ಭೂಮಿಯ ಮೇಲೆ ಅಗ್ನಿಯಲ್ಲಿ ಹುಟ್ಟಿ ಶಿವನ ಅಂಶಿಕರಾದ ಐದು ಜನ ಗಂಡಂದಿರ ಪಡೆದು ಶತ್ರುಗಳ ನಾಶ ಮಾಡಿ ಬಾ ತಂಗಿ' ಎಂದು ಹರಸಿದರು. ಅದರಂತೆ ದ್ರೌಪದಿ ದ್ರುಪದ ರಾಜನ ಮಗಳಾಗಿ ಜನಿಸುತ್ತಾಳೆ. ಜನಪದ ಕವಿ ಅವಳ ಜನನವನ್ನು ಕುರಿತಂತೆ;

**ಭುಗು ಭುಗು ಉರಿಯುತ**
**ಆ ಬೆಂಕೆ ಒಳಗಿಂದ**
**ಅಗ್ಗುನಿಯ ಮಿಂದು**
**ಪಾರ್ವತಿ ದೇವಿಯು**
**ಸುದ್ಧವಾಗಿ ತಾನು**
**ದ್ರುಪತನ ಮಗಳಾಗಿ**
**ಮ್ಯಾಲೆದ್ದು ಬಂದಳೂ**

(ಜ.ಭಾ. ಪು. ೯೨ )

ಮುಂದೆ ಐದು ಜನ ಗಂಡಂದಿರ ಜೊತೆ ಸಂಸಾರ ಮಾಡುವುದು ಸರಿಯೇ ಎಂದು ನಾರದರನ್ನು ಕೇಳಿದಾಗ ಅವರು ಪ್ರತಿ ಪುರುಷನ ಜೊತೆಯಿರಲು ಹೋಗುವಾಗ ಗಂಗಾ ನದಿಯಲ್ಲಿ ಮಿಂದು ಮರಳು ಗಡಿಗೆಗೆ ಆದಿಶೇಷನನ್ನು ಸಿಂಬಿ ಮಾಡಿಕೊಂಡು ಭೈರವ ಸೈನ್ಯದ ಕಾವಲಲ್ಲಿ ಕರಗ ಹೊತ್ತುಕೊಂಡು ಬಂದರೆ ಕನ್ಯಾತ್ವ ಪ್ರಾಪ್ತಿಯಾಗಿ ಹೊಸದಾಗಿ ಸಂಸಾರ ಮಾಡುವಂತಾಗುತ್ತದೆಂದು ಹೇಳುತ್ತಾರೆ. ಈ ಪ್ರಸಂಗ ಬಹುಮಟ್ಟಿಗೆ ರೇಣುಕಾದೇವಿಯ ಕಥೆಗೆ ಸಂವಾದಿಯಾಗಿದೆ. ಜೊತೆಗೆ ಇಂದಿಗೂ ಬೆಂಗಳೂರಿನಲ್ಲಿ ನಡೆಯುವ ಕರಗವನ್ನು ದ್ರೌಪದಿ ಕರಗವೆಂದೇ ಕರೆಯುವ ರೂಢಿಯಿದೆ. ದ್ರೌಪದಿ ತಿಗಳರೊಡನೆ ಕರಗ ಹೊತ್ತು ಕನ್ಯತ್ವ ಪಡೆದು ಪತಿಗಳಡೆಗೆ ಹೋಗುವಾಗ ಆಕೆ ಆದಿಶಕ್ತಿಯಾಗಿಯೇ ಚಿತ್ರಿತಳಾಗಿದ್ದಾಳೆ. ಮುಂದೆ ಸೋತ ಪಾಂಡವರನ್ನು ಗೆದ್ದು ಕೊಡುವವಳೂ ಈ ಆದಿಶಕ್ತಿಯೇ. ಹೀಗಾಗಿ ಜನಪದ ಮಹಾಭಾರತ ಇಲ್ಲಿ ಶಾಕ್ತ ಮಹಾಭಾರತವಾಗಿ ಕಂಡುಬರುತ್ತದೆ.

ದ್ರೌಪದಿಯ ಸ್ವಯಂವರ ಪಂಪಭಾರತ, ಕುಮಾರವ್ಯಾಸಭಾರತಕ್ಕಿಂತ ಜನಪದಭಾರತದಲ್ಲಿ ಭಿನ್ನವಾಗಿದೆ. ಎಲ್ಲೆಲ್ಲಿಯೋ ಇದ್ದ ಕಥಾ ಪ್ರಸಂಗಗಳನ್ನು ಇಲ್ಲಿ ಬೆಸೆದು ಹೊಸದನ್ನಾಗಿಸಿದ್ದಾನೆ. ವ್ಯಾಸಭಾರತದ ಮತ್ಸ್ಯಯಂತ್ರಭೇದದ ಪ್ರಸಂಗ ಕುಮಾರವ್ಯಾಸಭಾರತ ಹಾಗೂ ಪಂಪಭಾರತದಲ್ಲಿ ಹಾಗೆಯೆ ಬಂದಿದ್ದರೆ ಜನಪದ ಮಹಾಭಾರತದಲ್ಲಿ ಈ ಪ್ರಸಂಗ ಭಿನ್ನರೂಪವನ್ನು ತಾಳಿದೆ. ಪಂಪ ಕುಮಾರವ್ಯಾಸರ ಕಾವ್ಯದಲ್ಲಿ ಅರ್ಜುನ ಮತ್ಸ್ಯಯಂತ್ರವನ್ನು ಭೇದಿಸಿದರೆ ಜನಪದಭಾರತದಲ್ಲಿ 'ಮಾರೀಚ ಕಾಗೆ' ಪ್ರಸಂಗವಿದೆ. ಈ ಕಾಗೆ ವಿಷ್ಣುಕೊಂದ ಹಿರಣಾಕ್ಷನ ರಕ್ತದಿಂದ ಜನಿಸಿದ್ದಾಗಿದೆ. ಇದರ ಜೊತೆಗೆ ಅಂಗಗೊರಬನ ಕಥೆಯೂ ಸೇರ್ಪಡೆಯಾಗಿದೆ. ಈ ಅಂಗಗೊರಬ ಮನ್ಮಥನ ತಮ್ಮನಾದ ಚಿನ್ಮಥನೆಂಬುವನು. ಈ ಪಾತ್ರ ಇತರ ಭಾರತಗಳಲ್ಲಿ ಕಾಣದಿರುವ ಪಾತ್ರವಾಗಿದೆ. ಮಾರೀಚ ಕಾಗೆಯನ್ನು ಹೊಡೆದು (ಶಬ್ದವೇದಿ)ಕೊಂದ ಅರ್ಜುನ ದ್ರೌಪದಿಯನ್ನು ಗೆಲ್ಲುತ್ತಾನೆ.

ಪಂಚವಲ್ಲಭೆಯಾದ ದ್ರೌಪದಿಯನ್ನು ಪಂಪ ಮಾರ್ಪಡಿಸಿಕೊಂಡು ಅರ್ಜುನನೊಬ್ಬನ ಪತ್ನಿಯಾಗಿಸಿದ್ದಾನೆ. ಕಾರಣ ಅಂದಿನ ಲೌಕಿಕ ಪದ್ದತಿಗೆ ವಿರುದ್ಧವಾಗಿದೆ ಎನ್ನುವುದರ ಜೊತೆಗೆ ಅರ್ಜುನನ ಪಾತ್ರದೊಡನೆ ಅರಿಕೇಸರಿಯನ್ನು ಸಮೀಕರಿಸಿರುವುದರಿಂದಲೂ ಆತನಿಗೆ ದ್ರೌಪದಿಯನ್ನು ಪಂಚವಲ್ಲಭೆ ಎಂದು ಗುರುತಿಸುವುದು ಸಾಧ್ಯವಿರಲಿಲ್ಲ. ಆದರೆ ಈಗಾಗಲೇ ದ್ರೌಪದಿ ಪಂಚವಲ್ಲಭೆ ಎಂದೇ ಪ್ರಖ್ಯಾತಳಾಗಿರುವ ಪಾತ್ರವನ್ನು ಕೊನೆಯವರೆಗೆ ಮಾಡಿಕೊಂಡ ಬದಲಾವಣೆಯಂತೆ ಮುಂದುವರಿಸುವಲ್ಲಿ ಪಂಪ ಸೋತಿದ್ದಾನೆನ್ನಬಹುದು. ಅರ್ಜುನ ವರಿಸಬೇಕಾದ ದ್ರೌಪದಿಗೆ ಅಂದಿನ ಕಾಲಕ್ಕೆ ವಿರುದ್ಧವಾದ ಅನೀತಿಯುತವಾದ ಬಹುಪತಿತ್ವವನ್ನು ಆರೋಪಿಸುವುದು ತನ್ನ ಓಡೆಯನಿಗೆ

ಅಪ್ರಿಯವಾಗಿ ನಡೆದಂತೆ ಮತ್ತು ಅಪಚಾರವೆಸಗಿದಂತೆ ಎಂದು ಭಾವಿಸಿದ ಪಂಪ ಅರ್ಜುನನೊಬ್ಬನನ್ನೇ ದ್ರುಪದಜೆಯೊಡನೆ ಕುಳ್ಳರಿಸಿ ಅಗ್ನಿಸಾಕ್ಷಿಯಾಗಿ ಕೈನೀರೆರೆದು ಪಾಣಿಗ್ರಹಣ ಮಾಡಿಸಿದ. ಇದರಿಂದ ದ್ರೌಪದಿ ಮೂಲಭಾರತದಲ್ಲಿ ಬರುವ ಪ್ರಸಂಗವನ್ನು ಪಂಪ ಪೂರ್ಣವಾಗಿ ಕೈಬಿಟ್ಟಿದ್ದಾನೆ. ಪಂಪಭಾರತದಲ್ಲಿ ದ್ರೌಪದಿಯು ಪಾರ್ಥನೊಬ್ಬನ ಹೆಂಡತಿಯೇ ಹೊರತು ಪಂಚಪಾಂಡವರ ಪತ್ನಿಯಲ್ಲ. ಇದು ಸಾಮಾನ್ಯ ಭಾರತ ಕಥೆಯಿಂದ ಬೇರೆಯಾಗಿದೆ. ಕುಮಾರವ್ಯಾಸನಾದರೋ ವ್ಯಾಸಭಾರತವನ್ನು ಯಥಾವತ್ತಾಗಿ ಅನುಸರಿಸಿ ದ್ರೌಪದಿಯನ್ನು ಪಂಚವಲ್ಲಭೆಯನ್ನಾಗಿಸಿದ್ದಾನೆ.

ಜನಪದ ಕವಿ ದ್ರೌಪದಿಯ ಪಂಚವಲ್ಲಭೆತನವನ್ನು ದೈವಿಕ ನೆಲೆಯಿಂದ ಕಾಣಬಯಸುತ್ತಾನೆ. ಆಕೆ ಪರಾಶಕ್ತಿ, ಪಾಂಡವರು ಮಾನವ ರೂಪದ ಶಿವನ ಅಂಶಗಳು ಎಂಬುದು ಕವಿಯ ಆಶಯ. ಆದ್ದರಿಂದಲ್ಲೇ ಆಕೆ ಒಬ್ಬನೊಡನಿದ್ದು ಮತ್ತೊಬ್ಬನೆಡೆಗೆ ಹೊರಟಾಗ ದ್ರೌಪದಿ ಕನ್ಯೆಯಾಗಿಯೆ ಹೋಗುತ್ತಾಳೆ ಎನ್ನುವ ಮೂಲಕ ಸಮಸ್ಯೆಯನ್ನು ಮತ್ತಷ್ಟು ಜಟಿಲಗೊಳಿಸುತ್ತಾನೆ. ಇದನ್ನು ರಾಗೌ 'ದ್ರೌಪದಿಯನ್ನು ವೈಭವೀಕರಿಸಲು ಮಾಡಿದ ಪ್ರಯತ್ನ' ಎಂದಿದ್ದಾರೆ. ಮುಂದುವರೆದು ದ್ರೌಪದಿಯನ್ನು ಕರಗ ಸಂಪ್ರದಾಯಕ್ಕೆ ಸಂಬಂಧವೇರ್ಪಡಿಸಿ ಸಾಂಸ್ಕೃತಿಕ ಗೊಳಿಸುವ ಪ್ರಯತ್ನವನ್ನು ಮಾಡುತ್ತಾನೆ[8] ಎಂಬ ಮಾತನ್ನು ಗಮನಿಸಬಹುದು.

ಒಂದೊಂದು ವರ್ಷ ಒಬ್ಬೊಬ್ಬರು ದ್ರೌಪದಿಯೊಡನೆ ಇರಬೇಕೆಂಬುದೇ ಅಧಿಕೃತ ನಿಯಮ. ಇದನ್ನು ಮೀರಿದರೆ ಅಂಥವರು ಜೋಗಿವೇಷದಲ್ಲಿ ದೇಶಸಂಚಾರ ಮಾಡಬೇಕೆಂಬುದು ಜನಪದಭಾರತ ಸೂಚಿಸುವ ಶಿಕ್ಷೆ. ದೇಶ ಸಂಚಾರದ ಉಲ್ಲೇಖ ಪಂಪ ಹಾಗೂ ಕುಮಾರವ್ಯಾಸಭಾರತದಲ್ಲಿಯೂ ಇದೆಯಾದರೂ ಅರ್ಜುನನ ಜೋಗಿಯ ಪ್ರಸ್ತಾಪವಿಲ್ಲದಿರುವುದು ಗಮನಾರ್ಹ.

ದ್ಯೂತ ಪ್ರಸಂಗ ಪಂಪಭಾರತದ, ಕುಮಾರವ್ಯಾಸಭಾರತದಲ್ಲಿ ಯಥಾವತ್ತಾಗಿ ಬರುತ್ತದೆ. ಆದರೆ ಜನಪದ ಮಹಾಭಾರತದಲ್ಲಿ ಧರ್ಮರಾಯ ಪಗಡೆಯಾಟದಲ್ಲಿ ದ್ರೌಪದಿಯನ್ನು ಪಣವಾಗಿಟ್ಟು ಸೋತಾಗ ಅದನ್ನು ಪ್ರಶ್ನಿಸುತ್ತಾಳೆ. ಇದು ಇಂದಿನ ಮಹಿಳಾಪರ ಆಲೋಚನೆಯನ್ನು ಹೊಂದಿದೆ. ಅಷ್ಟೇ ಅಲ್ಲದೇ ಶಕುನಿಯ ಕುತಂತ್ರದಿಂದ ಆಕೆಯೇ ಪಗಡೆಯಾಡಿ ಗಂಡಂದಿರನ್ನು ವಿಮುಕ್ತಗೊಳಿಸುತ್ತಾಳೆ. ದ್ರೌಪದಿ ಪಗಡೆಯಾಡುವ ಪರಿಕಲ್ಪನೆ ಜನಪದ ಕವಿಯ ಕಲ್ಪನೆ ಎನ್ನಬಹುದು

ಇದು ಆಕೆಗೆ ದೈವೀಕತೆಯನ್ನು ತಂದುಕೊಡುವಲ್ಲಿ ಶಕ್ತವಾಗಿದೆ. ಇದೇ ಸಂದರ್ಭದಲ್ಲಿ ಅಕ್ಷಯವಸ್ತ್ರ ಪ್ರಸಂಗವನ್ನು ಜನಪದ ಕವಿ ಭಿನ್ನ ನೆಲೆಯನ್ನು ಚಿತ್ರಿಸುವ ಮೂಲಕ ಕೃಷ್ಣನ ಪೂರ್ವನಿಯೋಜಿತ ಒಪ್ಪಂದದಂತೆ ಚಿತ್ರಿತವಾಗಿದ್ದು ದ್ರೌಪದಿಯ ಹೊಸತೊಂದು ಮುಖವನ್ನು ಅನಾವರಣಗೊಳಿಸಿದೆ.

ಇದೇ ಪ್ರಸಂಗವನ್ನು ಪಂಪಭಾರತದಲ್ಲಿ ಕಾಣುವುದಾದರೆ ಧರ್ಮರಾಯನು ದ್ರೌಪದಿ ಅರ್ಜುನನ ಪತ್ನಿ ಎಂಬುದನ್ನು ಮರೆತು ಪಣಕ್ಕಿಟ್ಟು ಸೋಲುತ್ತಾನೆ. ಮುಂದೆ ದ್ಯೂತದಲ್ಲಿ ವಶಳಾದ ದ್ರೌಪದಿಯನ್ನು ಸಭಾಮಧ್ಯಕೆ ಎಳೆತರುವುದು, ಹೆಣ್ಣಿನ ಮೇಲೆ ನಡೆಯುವ ದೌರ್ಜನ್ಯ ಇದಕ್ಕೆ ಹಿರಿಯರಾರು ಪ್ರತಿರೋಧ ತೋರದಿರುವುದು ಕೂಡ ಆಶ್ಚರ್ಯವೆನಿಸುತ್ತದೆ. ಪಂಪಭಾರತದಲ್ಲಿ ವಸ್ತ್ರಾಪಹರಣ ಪ್ರಸಂಗವಿಲ್ಲ. ಬದಲಿಗೆ 'ದುಶ್ಯಾಸನಂ ತನಗಂ ಮೆಲ್ಲನೆ ಮೃತ್ಯುಸಾರೆ ತೆಗೆದು ಧಮ್ಮಿಲ್ಲಮಂ ಕೃಷ್ಣೆಯೂ (೩-೫೫)' ಎಂದು ಮುಂದಾಗುವ ಪರಿಣಾಮವನ್ನು ಅಲ್ಲಿಯೇ ಸೂಚಿಸುತ್ತಾನೆ. ಇಷ್ಟೆಲ್ಲಾ ನಡೆದರೂ ವೀರರೆನಿಸಿಕೊಂಡ ಪಾಂಡವರು ಸುಮ್ಮನಿದ್ದರು. ಇದರಿಂದ ಅಪಮಾನಕ್ಕೊಳಗಾದ ದ್ರೌಪದಿ;

**ಮುಡಿಯಂ ಪಿಡಿದೆಟಿದವನಂ ಮಡಯಿಸಿ ಮತ್ತವನ ಕರುಳೆ ಪಿಣಿಲಿಂದೆನ್ನಂ**
**ಮುಡಿಯಿಸುವೆನಗಂ ಮುಡಿಯಂ ಮುಡಿಯೆಗಡ ಕೇಲಿಮೀಗಳಾನ ನುಡಿನುಡಿದೆಂ**
**(ಪ.ಭಾ. ೭-೧೦)**

ಎಂದು ಪ್ರತಿಜ್ಞೆ ಮಾಡುವುದು, ಅದಕ್ಕೆ ಪೂರಕವಾಗಿ ಭೀಮ ಶಪಥ ಮಾಡುವುದನ್ನು ಕಾಣುತ್ತೇವೆ.

ಕುಮಾರವ್ಯಾಸನಿಗೂ ದ್ರೌಪದಿಯೇ ಆದಿಶಕ್ತಿ. ದ್ಯೂತ ಪ್ರಸಂಗದ ನಂತರ ದುಶ್ಯಾಸನನು ದ್ರೌಪದಿಯನ್ನು ಹಿಡಿದೆಳೆದು ಸಭೆಗೆ ಕರೆತರುವಾಗ ಸಕಳ ಶಕ್ತಿಪರೀತ ವಿಮಳಾಂಬಿಕೆಯವೊಲು ಸಭೆಯಲ್ಲಿ ಜನರೆದುರು. ಕೃತ್ಯವನ್ನು ಜರೆದರೂ ಹಿರಿಯರನ್ನು ಹೀಯಾಳಿಸಿದರೂ ದ್ರೌಪದಿಯಲ್ಲಿ ಓದುಗರಿಗೆ ಮರುಕವುಂಟಾಗುತ್ತದೆಯೇ ಹೊರತು ಭಯ ತೋರುವುದಿಲ್ಲ. ಈ ಸನ್ನಿವೇಶದಲ್ಲಿ ಕುಮಾರವ್ಯಾಸನು ತನ್ನ ಕೃಷ್ಣಭಕ್ತಿಯನ್ನು ಮೆರೆಯಲು ದ್ರೌಪದಿಯನ್ನು ಹೆಚ್ಚು ಶೋಕತಪ್ತಳನ್ನಾಗಿ ಮಾಡಿ ಆ ಮೂಲಕ ಕೃಷ್ಣ ಮಹಿಮೆಯನ್ನು ಸಾರಿದ್ದಾನೆ. ದುಶ್ಯಾಸನನು ಸೀರೆಯನ್ನು ಸೆಳೆದಾಗ ಎಲ್ಲರಲ್ಲೂ ಮೊರೆಯಿಟ್ಟು ಬೇಡಿದರೂ ಯಾರು ಅವಳ ಸಹಾಯಕ್ಕೆ ಬರದಿದ್ದಾಗ ಕರುಣಾಜಲಧಿಯಾದ ಕೃಷ್ಣನನ್ನು ಕೈಗಾಯಬೇಕೆಂದು ಕೇಳಿಕೊಂಡಾಗಿನಿಂದ ಅವಳ ರೀತಿಯೇ ಬೇರೆಯಾಯಿತು. ಕೃಷ್ಣನ ರಕ್ಷಣೆಯಿಂದಷ್ಟೇ ತೃಪ್ತಳಲ್ಲ ತನ್ನನ್ನು ಪರಿಭವಗೊಳಿಸಿದ ನೀಚನಿಗೆ ತಕ್ಕಶಾಸ್ತಿಯನ್ನು ಮಾಡದಿದ್ದರೆ ಸಮಾಧಾನವೆಲ್ಲಿ? ಮುಳಿದು ಕೊಟ್ಟಳು ಶಾಪವನು 'ನಿನ್ನಳಿವು

ತೊಡೆಯಲಿ ಮುಗಿವುದೆಂದಳು ಮುಗದೆ ಖಾತಿಯಲಿ (ಸಭಾ ೧೪-೩೦) ಆಗ ಭೀಮನ ಕೋಪಾಟೋಪ ಭುಗಿಲೆದ್ದಿತು ಆತನೂ ಮರುಶಪಥವನ್ನು ಗೈದನು. ಭೀಮನ ಕೋಪಾಟೋಪಗಳಿಗೆ ಹೆದರಿದ ದುಶ್ಯಾಸನ ಕೌರವನ ಹಿಂದೆ ಅವಿತುಕೊಳ್ಳುತ್ತಾನೆ. ಎಲ್ಲರ ಶಪಥವೂ ಪೂರೈಸಬೇಕಾದರೆ ಕೃಷ್ಣನೊಬ್ಬನಿಂದಲೇ ಸಾಧ್ಯ.

ದ್ರೌಪದಿಯ ಪತಿವ್ರತಾಧರ್ಮವನ್ನು ಸಮರ್ಥಿಸಲು ಜನಪದ ಕವಿ ಪಂಪ ಕುಮಾರವ್ಯಾಸಭಾರತಕ್ಕಿಂತ ಭಿನ್ನವಾದ ಪ್ರಸಂಗವನ್ನು ತಂದಿದ್ದಾನೆ. ಅದೆಂದರೆ ಗಂಧರ್ವನೊಬ್ಬ ದುರ್ಯೋಧನನ್ನು ಕಟ್ಟಿ ಕೊಂಡ್ಯೊಯ್ಯುವಾಗ ಭಾನುಮತಿಯ ಮನವಿಯ ಮೇರೆಗೆ ಅರ್ಜುನ ಅವನನ್ನು ಬಿಡಿಸಿಕೊಂಡು ಬಂದರೂ, ಕಟ್ಟಿದ್ದ ಕಟ್ಟುಗಳನ್ನು ಪತಿವ್ರತೆಯ ಪಾದಸೋಂಕಿನಿಂದ ಮಾತ್ರ ಸಾಧ್ಯವೆನ್ನುವ ನಿಬಂಧನೆ ಭಾನುಮತಿ ನಿರಾಕರಿಸುತ್ತಾಳೆ. ಏಕೆಂದರೆ ಪತಿಗೆ ಪಾದ ಸೋಂಕಿಸುವುದು ಪತಿವ್ರತಾಧರ್ಮಕ್ಕೆ ವಿರೋಧ ಆದ್ದರಿಂದ ಈ ಕಾರ್ಯ ಮಾಡಲು ದ್ರೌಪದಿಯೇ ಸಮರ್ಥಳು ಎಂಬುದು ಆಕೆಯ ನಿಲುವು. ಅದರಂತೆ ಧರ್ಮರಾಯ ಕಟ್ಟನ್ನು ಬಿಚ್ಚಲು ಹೇಳಿದರೂ ನಿಯಮದ ಪ್ರಕಾರ ಗಂಡನಾದ ಭೀಮ ಅಪ್ಪಣೆಯಿಲ್ಲದೆ ಈ ಕಾರ್ಯ ಮಾಡುವುದಿಲ್ಲವೆನ್ನುವ ಆಕೆಯ ಮಾತಿನಲ್ಲಿ ತನಗೆ ನೋವನ್ನುಂಟು ಮಾಡಿದವನ ಮೇಲಿನ ಸೇಡು ಕಂಡು ಬರುತ್ತದೆ. ಅಂತಿಮವಾಗಿ ಭೀಮನೇ ಅವಳಿಗೆ ಕಟ್ಟು ಬಿಚ್ಚಲು ಹೇಳುವನು. ದುರ್ಯೋಧನನ ಮೇಲಿನ ಕೋಪದಿಂದ ಆತನನ್ನು ನೋಡದೆ ಕಾಲಿನಿಂದ ಒದ್ದು ಬರುವುದರ ಮೂಲಕ ಬಿಚ್ಚಿದಳೆಂದು ಜನಪದ ಕವಿ ಚಿತ್ರಿಸಿದ್ದಾನೆ.

**ಕಣ್ಣಿಂದ ನೋಡಲಿಲ್ಲ ದ್ರೋಪ್ರತಿಯ**
**ಕೈಯಿಂದ ಮುಟ್ಟಲಿಲ್ಲ ಪಾಪಿಯನು**
**ಕೈಯಿಂದ ಮುಟ್ಟಲಿಲ್ಲ**
**ದುಷ್ಟನಿಗೆ ಸಮನಿಸಿದ ಕಷ್ಟಗಳು ಹೋಗಲಿ**
**ಹಾಗೆಂದು ಹೇಳಿ ತಾಯಿ ದ್ರೋಪತಿ**
**ಕಾಲಿಂದ ಒದ್ದಳಾಗ –ಶಿವಶಿವಾ**
**ಕಾಲಿಂದ ಒದ್ದಳಾಗ**

**(ಜ.ಭಾ. ಪು. ೬೦೭)**

ಮುಂದೆ ಸೈಂಧವ ದ್ರೌಪದಿಯನ್ನು ಅಪಹರಿಸಿದ ಘಟನೆಯೂ ಜನಪದರಲ್ಲಿ ಸ್ವಾರಸ್ಯಪೂರ್ಣವಾಗಿದ್ದು ದ್ರೌಪದಿಯ ಪಾತ್ರ ಹಾಗೂ ನಡತೆಗೆ ಪೋಷಕವಾಗಿ ನಿಲ್ಲುತ್ತದೆ. ಆಕೆಯ ಕೈಯಲ್ಲಿ ಬಾರುಕೋಲು ಕೊಟ್ಟು ಛಡಿಯೇಟು ಹೊಡೆಸಿದ್ದು ಸಾಮಾನ್ಯರ ನೀತಿ ನಿರ್ಣಯಕ್ಕೆ ಹಾಗೂ ಹೆಣ್ಣನ್ನು ಕೆಣಕಿದರೆ ಏನಾಗುತ್ತದೆ ಎಂಬುದಕ್ಕೆ ನಿದರ್ಶನವಾಗಿದೆ.

ಕುಮಾರವ್ಯಾಸನು ಈ ಪ್ರಸಂಗದಲ್ಲಿ ದ್ರೌಪದಿಯನ್ನು ಕಂಡು ಕೀಚಕ ಮೋಹಿತನಾಗಿ ತನ್ನ ಪ್ರೇಮ ನಿವೇದನೆಯನ್ನು ತೋಡಿಕೊಂಡ, ನಿರಾಕರಿಸಿದ ದ್ರೌಪದಿಗೆ ಅಪಮಾನಗೊಳಿಸಿದ ತನಗೆ ಅಪಮಾನಿಸಿದವನ ಮೇಲೆ ಸೇಡು ತೀರಿಸಿಕೊಳ್ಳಲು ಈ ಬಾರಿ ದ್ರೌಪದಿ ಕೃಷ್ಣನ ಮೊರೆಹೋಗಲಿಲ್ಲ, ಬದಲಿಗೆ ಭೀಮನ ಮೊರೆಹೋದಳು. ಎಲ್ಲರಿಗಿಂತ ಭೀಮನೇ ಮಿಡುಕುಳ್ಳಗಂಡನೆಂದು, ಅವಳಿಗೆ ಅವನಲ್ಲಿಯೇ ಹೆಚ್ಚು ನಂಬಿಕೆ. ಕೀಚಕನ ಉಪಟಳವನ್ನು ನಿವೇದಿಸಿದ್ದಾಗ ಸಹಾಯ ಮಾಡಲು ನಿರಾಕರಿಸಿದ ಭೀಮನನ್ನು 'ಗಂಡರೋ ನೀವ್ ಭಂಡರೋ' ಎಂದು ಪ್ರಶ್ನಿಸಿ ಕೊನೆಗೆ ಸಹಾಯ ಹಸ್ತ ಕಾಣದಿರಲು;

**ಭೀಮ ಕೊಟ್ಟೈ ತನಗೆ ಸಾವಿನ**
**ನೇಮವನು ನಿಮ್ಮಣ್ಣನಾಜ್ಞೆವಿ**
**ರಾಮವಾಗದೆ ಬದುಕಿ ಧರ್ಮದ ಮೈಸಿರಿಯನರಿದು**
**ಕಾಮಿನಿಯ ಕೇಳಿಯಲಿ ನೆನೆವುದು**
**ತಾಮಸದಿ ತಾ ಮೀರಿ ನುಡಿದು**
**ದ್ದಾಮತೆಯ ಸೈರಿಸುವುದೆಂದೆರಗಿದಳು ಚರಣದಲಿ**
**(ವಿ.ಪ. ೩-೬೫)**

ಈ ಮಾತು ಯಾರನ್ನು ತಾನೇ ಉದ್ರೇಕಗೊಳಿಸದೆ ಇದ್ದೀತು! ಭೀಮನು ಕಂಬಿನಿದುಂಬಿ ಅನುಕೂಲನಾಗಲು ಅವನನ್ನು 'ಪುರುಷರ ಪುರುಷನಲ್ಲಾ ಭೀಮ. ತನ್ನಯ ಪರಮಸುಕೃತೋದಯವಲಾ ನೀನೊಬ್ಬನೆ' ಎಂದು ಹೊಗಳಿದಳು. ಇಬ್ಬರ ಮನಸ್ಸು ಹೀಗೆ ಸೇರಿದರೆ ರನ್ನ ಹೇಳುವಂತೆ 'ಅನಲಾನಿಲ ಸಂಯೋಗಂ ಉರಿಪದಿರ್ಕುಮೆ ಪಗೆಯಂ' ಭೀಮನು ಕೀಚಕನ 'ತಲೆಯನೊಡಲೊಳಗಿಕ್ಕಿ ಕೈಕಾಲ್ಗಳನು ಬಸಿಜೊಳು ಸಿಕ್ಕಿ' ಯಮಸದನಕ್ಕೆ ಕಳುಹಿಸಿದನು. ದ್ರೌಪದಿಯಿಂದ ಕೀಚಕ, ದುಶ್ಯಾಸನ, ದುರ್ಯೋಧನಾದಿಗಳು ಮಡಿದುರುಳಿದರು. ಅವರನ್ನು ಕೊಲ್ಲಿಸಿದ ಕೀರ್ತಿ ದ್ರೌಪದಿಗೆ ಸೇರಬೇಕು. ಹೀಗೆ ದ್ರೌಪದಿ ತನಗೆ ಅಪಮಾನಗೊಳಿಸಿದ ಯಾರನ್ನು ಅವಳು ಜೀವಂತ ಬಿಡಲಿಲ್ಲ.

ಮುಂದೆ 'ಅಂತರಾಳ ಪರೀಕ್ಷೆ' ಪರ್ವದಲ್ಲಿ ತನ್ನ ಅಂತರಾಳವನ್ನು ಸಮರ್ಥಿಸಲು ಇತರ ಕಾವ್ಯಗಳಲ್ಲಿ ಜಂಬೂ ನೇರಳೆ ಫಲದ ಕಥೆ ಯಥಾಪ್ರಕಾರವಾಗಿದ್ದರೂ ಜನಪದ ಮಹಾಭಾರತದಲ್ಲಿ ಸ್ವಲ್ಪಮಟ್ಟಿಗೆ ಭಿನ್ನವಾಗಿದೆ. ಆಕೆ ತನ್ನ ಅಂತರಾಳವನ್ನು ಬಿಚ್ಚಿಡುತ್ತಿದ್ದಂತೆ ಮೇಲೇರಿದ ಹಣ್ಣು ಕೆಳಕ್ಕೆ ಬಿದ್ದು ಹೋಯಿತು. ಇದರಿಂದ ಆಕೆ ಸರಿಯಾಗಿ ತನ್ನ ಅಂತರಾಳವನ್ನು ಬಿಚ್ಚಿ ತೋರಲಿಲ್ಲ ಎನ್ನುವುದು. ಹಾಗೆ ನೋಡಿದರೆ ಆಕೆಯ ಹೇಳಿಕೆಯಲ್ಲಿ ತಪ್ಪಿರಲಿಲ್ಲ. ಪತಿಗಳೈವರ ನಡುವೆ

ಭೇದವೆಣಿಸಲಿಲ್ಲವೆಂದೂ ಹೇಳಿದ್ದಳು. ಮುಂದೆ ಕೃಷ್ಣನ ನೆರವಿನಿಂದ ಅಂತರಂಗವನ್ನು ತೆರೆದಿಡುತ್ತಾಳೆ. ಇಲ್ಲಿನ ಈ ಪರೀಕ್ಷೆ ಅದ್ಭುತ ಹಾಗೂ ತಾರ್ಕಿಕವಾಗಿದೆ.

ಪಂಪನ ಪ್ರಕಾರ ಕುರುಕ್ಷೇತ್ರ ಯುದ್ಧಕ್ಕೆ ದ್ರೌಪದಿಯ ಕೇಶಪಾಶವೇ ಕಾರಣವೆಂಬುದನ್ನು ಭೀಮನ ಬಾಯಿಂದ ಹೀಗೆ ಬಣ್ಣಿಸುತ್ತಾನೆ.

**ಇದರೊಳ್ ಶ್ವೇತಾತಪತ್ರ ಸ್ಥಗಿತ ದಶಾದಿಶಾಮಂಡಲಂ ರಾಜಚಕ್ರಂ**
**ಪುದಿದಳ್ಕಾಡಿತ್ತಡಂಗಿತ್ತಿದರೊಳ್ ಕುರುರಾಜಾನ್ವಯಂ ಮತ್ರತಾಪ**
**ಕ್ಕಿದರಿಂದ ನೋಡಗುರ್ವುರ್ವಿದುದಿದುವೆ ಮಹಾಭಾರತಕ್ಕಾದಿಯಾಯ್ತು**
**ಬ್ಬದಳಾಕ್ಷಿ ಪೇಳ್ ಸಾಮಾನ್ಯಮೆ ಬಗೆಯೆ ಭವ್ಯೇಶ ಪಾಶಪ್ರಪಂಚಂ**
**(ಪ.ಭಾ. ೧೨-೧೫೬)**

ದ್ರೌಪದಿಯ ಕೇಶಪಾಶವು ಕುರುಕುಲಕ್ಕೆ ಮಾತ್ರವಲ್ಲ ಸಮಸ್ತ ರಾಜಕುಲಕ್ಕೆ ಯಮ ಪಾಶವಾಯಿತು. ಅದನ್ನು ದುಶ್ಯಾಸನನು ಮುಟ್ಟಿದ್ದೇ ಮಹಾಭಾರತಕ್ಕೆ ಆದಿಯಾಯಿತು ಈ ವಿಷಯ ಪಂಪನಿಗೆ ಚೆನ್ನಾಗಿಗೊತ್ತು. ಆದರೆ ಅವನ ಕಾವ್ಯದಲ್ಲಿ ವಿಜಯಶಾಲಿಯಾದ ಅರ್ಜುನನೊಂದಿಗೆ ತುಲಾಭಾರ ತೂಗಿಸಿಕೊಂಡು ಪಟ್ಟಕಟ್ಟಿಸಿಕೊಳ್ಳುವ ಮಹಿಷಿ ಭಾರತಯುದ್ಧಕ್ಕೆ ಚಾಲನ ಶಕ್ತಿಯಾದ ದ್ರೌಪದಿಯಲ್ಲ ತವರು ಮನೆಯಲ್ಲಿ ತೆಪ್ಪಗೆ ಕುಳಿತ್ತಿದ್ದ ಸುಭದ್ರೆ. ಇಷ್ಟೇ ಅಲ್ಲ ಅರ್ಜುನ ಸುಭದ್ರೆಯರ ಪ್ರಣಯ ಕಥೆಗೆ ಪಂಪನು ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಟ್ಟು ಎಲ್ಲೆ ಮೀರಿ ಬೆಳೆಸಿದ್ದಾನೆ. 'ಕತೆಯ ಮೆಯ್ಗಡಲೀಯದೆ' ಬರೆಯುವುದರಲ್ಲಿ ನಿಪುಣನಾದ ಕವಿ ಇಲ್ಲೇಕೆ ಹೀಗೆ ಮಾಡಿದನೆಂಬ ಪ್ರಶ್ನೆ ಕಾಡುವುದುಂಟು. ತನ್ನ ಪ್ರಭುವಿನ ಪಟ್ಟಮಹಿಷಿಯಾದ ಲೋಕಾಂಬಿಕೆಯ ಸಂತೋಷಕ್ಕಾಗಿ ಯದುಕುಲದ ಸುಭದ್ರೆಗೆ ಕಥಾದೃಷ್ಟಿಯಿಂದ ಎಷ್ಟು ಮಾತ್ರಕ್ಕೂ ಸಲ್ಲದ ಈ ವಿಭವ ಗೌರವಗಳನ್ನು ಅವನು ಸಲ್ಲಿಸುವುದರ ಮೂಲಕ ದ್ರೌಪದಿಗೆ ನ್ಯಾಯವೊದಗಿಸುವಲ್ಲಿ ಪಂಪ ಸೋತಿದ್ದಾನೆನ್ನಬಹುದು.

ಜನಪದ ಭಾರತದಲ್ಲಿ ಬರುವ 'ಆತುಮ ಶಕ್ತಿ ಪರ್ವ' ವಿಶಿಷ್ಟವಾಗಿ ಜನಪದ ಕವಿ ಪ್ರತಿಭೆಯ ಕಲ್ಪನಾಶಕ್ತಿಗೆ ಹಾಗೂ ದ್ರೌಪದಿಯ ಶಕ್ತಿಗೆ ಒಂದು ನಿದರ್ಶನವಾಗಿದೆ. ಕೃಷ್ಣ ಕುಳಿತ್ತಿದ್ದ ಸಿಂಹಾಸನವೇ ಕುಸಿದು ಭೂಮಿಯೊಳಕ್ಕೆ ಹೋಗುತ್ತದೆ. ಈ ಸಾಂಕೇತಿಕ ಮೌಲ್ಯ ಪತನವನ್ನು ಎತ್ತಿ ಹಿಡಿಯುವವಳು ಕೊನೆಗೆ ಹೆಣ್ಣೇ ಆದ ದ್ರೌಪದಿ. ಈಕೆ ಕೈಯಿಟ್ಟೊಡನೆ 'ರತುನ ಸಿಂಹಾಸನ ಪರಮಾತ್ಮನ ಸಮೇತ ಮೇಲಕ್ಕೆ ಬಂದಿತ್ತು. ಅಷ್ಟೊತ್ತಿಗೆ ದ್ರೋಪತಿ ಆತುಮಾಶಕ್ತಿ ಪರಮಾತ್ಮನ ದ್ರೀಯದಲ್ಲಿ ಸೇರೋಗಿತ್ತು' ಎಂಬ ಮಾತನ್ನು ಹೇಳುವುದರ ಮೂಲಕ ದ್ರೌಪದಿಯು ಯುಗ ನಾಶಕ್ಕೆ ಕೃಷ್ಣನಿಗೆ ಸಹಾಯಕಳಾಗಿದ್ದಳು.

ಜನಪದ ಭಾರತ ಹೆಣ್ಣಿನ ನೋವಿಗೆ ಮಹತ್ವದ ಸ್ಥಾನವನ್ನು ನೀಡಿದೆ ಅರ್ಜುನ ಜೋಗಿಯಾಗಿ ಹೋಗುವ ಸನ್ನಿವೇಶದಲ್ಲಿ ದ್ರೌಪದಿ ತಾನೂ ಜೋಗಿಣಿಯಾಗಿ ಹೋಗಲು ಬಯಸಿದಾಗ ಪಾರ್ಥ ನಿರಾಕರಿಸುವ ರೀತಿ ಚೆನ್ನಾಗಿದೆ. ಆಗ ದ್ರೌಪದಿ ಹೆಣ್ಣಿನ ಜನ್ಮ ಅವಳಿಗೆ ಉಂಟಾಗುವ ನೋವುಗಳನ್ನು ನೆನೆಯುತ್ತಾ ಗನ್ನಕಾರ ವಿಧಿಯ ಕಣ್ಣು ಇಂಗಲಿ ಎಂದು ಶಾಪಕೊಡುವ ಪ್ರಸಂಗ ಅಸಹಾಯಕ ಹೆಣ್ಣು ತನ್ನ ನಂಬಿಕೆಯ ದೈವವನ್ನೇ ಶಪಿಸುವ ಜನಪದರ ದ್ಯೋತಕವಾಗಿದೆ. ಮುಂದೆ ಚಿತ್ರಾಂಗಿ ಕುಸುಮಾಲೆಯರು ಅರ್ಜುನನ ವಿರಹದಿಂದ ನೋಯುವಾಗ ಅರ್ಜುನನ್ನು ನೆತ್ತವಾಡಲು ಕರೆಯುವ ದ್ರೌಪದಿ ಸೋತರೇ ಜೋಗಿಯಾಗಿ ಹೋಗಬೇಕೆಂಬ ಷರತ್ತನ್ನಿಟ್ಟು ಅರ್ಜುನನ್ನು ಸೋಲಿಸುವುದರ ಮೂಲಕ ನೊಂದ ಹೆಣ್ಣಿಗೆ ಪರಿಹಾರ ಸೂಚಿಸುವ ಅಥವಾ ನೋವನ್ನು ನೀಗಿಸುವ ಸಂಜೀವಿನಿಯಾಗಿದ್ದಾಳೆ. ತನಗೆ ನೋವಾದರೂ ತೋರಿಸಿಕೊಳ್ಳದೇ ಇನ್ನೊಂದು ಹೆಣ್ಣಿನ ನೋವಿಗೆ ಮಿಡಿಯುವ ಮಾನವೀಯ ಹೆಣ್ಣಾಗಿ ದ್ರೌಪದಿ ಚಿತ್ರಿತಳಾಗಿದ್ದಾಳೆ.

ಜನಪದ ಕವಿಯ ಆಶಯದಂತೆ ಆದಿಪರಾಶಕ್ತಿಯಾದರೂ ದ್ರೌಪದಿ ಮೊದಲು ಹೆಣ್ಣು. ಹೆಣ್ಣಿನ ಸಹಜ ಗುಣವಿಶೇಷಗಳೆಲ್ಲವೂ ಆಕೆಗೂ ಇದೆ ಎಂಬುದನ್ನು ತಿಳಿಸುವ ಸಲುವಾಗಿ ಇಂತಹ ಪ್ರಸಂಗಗಳನ್ನು ಕಾವ್ಯದಲ್ಲಿ ಆಗಾಗ ತರುತ್ತಾನೆ. 'ಹೆಣ್ಣು ಒಲಿದರೆ ನಾರಿ, ಮುನಿದರೆ ಮಾರಿ' ಎಂಬುದನ್ನು ದ್ರೌಪದಿಯ ಪಾತ್ರ ಚಿತ್ರಣದಲ್ಲಿ ಕಾಣಬಹುದು.

ಕುಮಾರವ್ಯಾಸಭಾರತದಲ್ಲಿ ಯುದ್ಧಾನಂತರ ಎಲ್ಲವೂ ಸರ್ವನಾಶವಾಯಿತು. ದ್ರೌಪದಿ ಹೊತ್ತು ಹೆತ್ತು ಬೆಳಸಿದ ಉಪಪಾಂಡವರೂ ನಿಧನರಾದರು. ಅಭಿಮನ್ಯುವಿನ ಗರ್ಭವೊಂದೇ ಉಳಿದುದು ಕುರುವಂಶದ ಕುರುಹಾಗಿ. ಆಗ ಅಶ್ವತ್ಥಾಮನನ್ನು ಕೊಲ್ಲಲ್ಲು ಭೀಮ ಫಲುಗುಣರು ಹೊರಟಾಗ ಅತೀವ ದುಃಖದಲ್ಲಿದ್ದ ದ್ರೌಪದಿಯು ದಯಾಬುದ್ಧಿ ವಿವೇಕ ಕಳೆದುಕೊಳ್ಳದೆ 'ಗುರುನಂದನನ ಕೊಲಬಾರದು, ನಾವೆಲ್ಲ ಸಮದುಃಖಿಗಳು' ಎಂದು ಭೀಮಾರ್ಜುನರನ್ನು ತಡೆಯುತ್ತಾಳೆ. ಜನಪದ ಮಹಾಭಾರತದಲ್ಲಿ ಅಶ್ವತ್ಥಾಮ ಪಾಂಡವರೆಂದು ದ್ರೌಪದಿಯ ಮಕ್ಕಳ ತಲೆಯನ್ನು ಕತ್ತರಿಸಿದಾಗ ಕೋಪದಿಂದ ಕಣ್ಣುಗಳಿಂದ ಬೆಂಕಿ ಹಾರಿಸುತ್ತಾ ಬಂದ ದ್ರೌಪದಿಯನ್ನು ಕೃಷ್ಣ ಶಾಂತಗೊಳಿಸುತ್ತಾನೆ. ಜನಪದ ಕವಿಯ ಪ್ರಕಾರ ದ್ರೌಪದಿಯ ಆ ಬೆಂಕಿಯನ್ನು ಕೃಷ್ಣ ಸಮುದ್ರಕ್ಕೆ ಕಳುಹಿಸುತ್ತಾನೆ. ಇಲ್ಲಿ ಕವಿ ಹೆಣ್ಣಿನ ತಾಯ್ತನದ ಮಹತ್ವ ಹಾಗೂ ಅಂತಃಕರಣವನ್ನು ಬಿಂಬಿಸುತ್ತಾನೆ. ಸ್ವರ್ಗಕ್ಕೆ ಹೋಗುವಾಗ ಮೊದಲು ಸೀಲಾ ನದಿಯಲ್ಲಿ ದ್ರೌಪದಿ ಕುಸಿಯುತ್ತಾಳೆ. ಧರ್ಮರಾಯನ ವಿವರಣೆಯನ್ನು ಕೇಳಿದರೂ ದ್ರೌಪದಿ ಪತಿಗಳ ನಾಮಸ್ಮರಣೆ ಮಾಡುತ್ತಾ ಪ್ರಾಣ ಬಿಡುತ್ತಾಳೆ.

ಹೀಗೆ ಜನಪದ ಭಾರತದಲ್ಲಿ ದ್ರೌಪದಿಯ ಪಾತ್ರ ಹೆಣ್ಣಾಗಿ, ಹೆಂಡತಿಯಾಗಿ, ತಾಯಿಯಾಗಿ, ದೇವತೆಯಾಗಿ ಚಿತ್ರಿತಳಾಗಿದ್ದಾಳೆ, ಪಂಪ ತನ್ನ ಕಾವ್ಯದ ಇವರ್ಗಳಿಂ ಭಾರತಂ ಲೋಕಪೂಜ್ಯಂ ಎಂದು ಹೇಳಿರುವ ಪಟ್ಟಿಯಲ್ಲಿ ದ್ರೌಪದಿಯ ಹೆಸರಿಲ್ಲದಿದ್ದರೂ ಅವಳಿಗೆ ಸಲ್ಲತಕ್ಕ ನ್ಯಾಯವನ್ನು ಒದಗಿಸುವುದರಲ್ಲಿ ಲೋಪಗೈದಿಲ್ಲ ಎನ್ನಬಹುದು. ಇನ್ನು ಕುಮಾರವ್ಯಾಸಭಾರತ, ಜನಪದ ಮಹಾಭಾರತಗಳೆರಡಲ್ಲೂ ಕಾವ್ಯದ ಸ್ಫೂರ್ತಿ ಚಿಲುಮೆ ದ್ರೌಪದಿಯೇ ಆಗಿದ್ದಾಳೆ. ಎರಡೂ ಕಾವ್ಯಗಳೂ ಅವಳನ್ನು ಸಮಾನ ದೃಷ್ಟಿಯಿಂದ ಚಿತ್ರಿಸಿವೆ. ಅವಳು ಆದಿಪರಾಶಕ್ತಿ ಭಾರತ ಯುದ್ಧಕ್ಕೆ ಕಾರಣಕರ್ತಳು ಜನಪದ ಕವಿ ಇನ್ನು ಒಂದು ಹೆಜ್ಜೆ ಮುಂದೆ ಹೋಗಿ ಅವಳನ್ನೇ ವೈಭವೀಕರಿಸಿದ್ದಾನೆ. ಕೃಷ್ಣನಿಗಿಂತ ಶ್ರೇಷ್ಠಳು ಎಂಬುದನ್ನು ಭೀಮಾರ್ಜುನ ಜಗಳದಿಂದ ಎಲ್ಲವನ್ನು ಕಂಡ ಭದ್ರಬಾಹುವಿನ ಮೂಲಕ ದ್ರೌಪದಿಯ ಶಕ್ತಿಯೇ ಇಡೀ ಯುದ್ಧವನ್ನು ಜಯಿಸಿತ್ತು ಎಂದು ಹೇಳಿಸಿದ್ದಾರೆ.

**ಅರ್ಜುನ :**

ಪಂಪಭಾರತದ ಮತ್ತೊಂದು ಹೆಸರು ಅಥವಾ ಕವಿ ತನ್ನ ಕಾವ್ಯಕ್ಕೆ ಇಟ್ಟ ಹೆಸರು 'ವಿಕ್ರಮಾರ್ಜುನ ವಿಜಯಂ' ಅಂದರೆ 'ಅರ್ಜುನನ ವಿಜಯವೇ' ಕಾವ್ಯದ ಕೇಂದ್ರ ವಸ್ತು. ಪಂಪ ತನಗೆ ಆಶ್ರಯ ನೀಡಿದ ಅರಿಕೇಸರಿಯನ್ನು ಅರ್ಜುನನ ಪಾತ್ರದಲ್ಲಿ ಸಮೀಕರಿಸಿ ಕಾವ್ಯ ರಚಿಸಿರುವುದಾಗಿ ಹೇಳಿದ್ದಾನೆ. ಹಾಗಾಗೀ ಪಂಪ ಕಾವ್ಯದ ನಾಯಕ ಅರ್ಜುನನೇ ಆಗಿರುವುದರಿಂದ ಅವನನ್ನೇ ಕೇಂದ್ರವಾಗಿಟ್ಟುಕೊಂಡು ಅಪರಿಮಿತವಾಗಿದ್ದ ಕಥಾರಾಶಿಯನ್ನು ಪರಿಮಿತಿಗೊಳಿಸಲು ಒಂದು ದಾರಿ ಮಾಡಿಕೊಂಡಿದ್ದಾನೆ. ಅರ್ಜುನನ ಪಾತ್ರಕ್ಕೆ ಪೋಷಕವಾಗುವ ಸನ್ನಿವೇಶಗಳನ್ನು ಮಾತ್ರ ವಿಸ್ತರಿಸಿ ಉಳಿದ ಭಾಗವನ್ನು ಬಿಟ್ಟೋ ಅಥವಾ ಸಂಗ್ರಹಿಸಿಯೋ ಮುಂದುವರೆದಿದ್ದಾನೆ. ಕಾವ್ಯ ಅರ್ಜುನನ ಜನನದಿಂದ ಪ್ರಾರಂಭವಾಗಿ ಅರ್ಜುನನ ರಾಜ್ಯಾಭಿಷೇಖದಿಂದ ಪರ್ಯಾವಸಾನಗೊಳ್ಳುತ್ತದೆ.

ಕುಮಾರವ್ಯಾಸ ಅರ್ಜುನ ಪಾತ್ರವನ್ನು ಪೂರ್ಣ ಪ್ರಮಾಣದಲ್ಲಿ ಚಿತ್ರಿಸಿದ್ದಾನೆನ್ನಬಹುದು. ದೇವೇಂದ್ರನ ಅಂಶದಿಂದ ಕುಂತಿಯಲ್ಲಿ ಜನಿಸಿದ ಅರ್ಜುನನಿಗೆ ಹಲವಾರು ಹೆಸರುಗಳಿವೆ. ಕೃಷ್ಣನನ್ನು ಬಿಟ್ಟರೆ ಇವನೇ ಆ ಕಾಲದ ಅತ್ಯುನ್ನತ ಮಟ್ಟದ ಬಿಲ್ಲುಗಾರ, ದೇಹಶಕ್ತಿ, ತಪಶಕ್ತಿ, ಮನೋಶಕ್ತಿಗಳಲ್ಲಿ ಅದ್ವಿತೀಯನಾದ ಅರ್ಜುನ ಲಕ್ಷ್ಯಸಾಧನೆಯಲ್ಲಿ ಎಷ್ಟು ಎತ್ತರದವನು ಎಂಬುದಕ್ಕೆ ಅವನು ದ್ರೋಣರಿಂದ ಕತ್ತಲಲ್ಲಿ ಗುರಿಯಿಡುವ ವಿದ್ಯ ಕಲಿಯಲು ಮತ್ತು ಶಿವನಿಂದ ಪಾಶುಪತಾಸ್ತ್ರ ಪಡೆಯಲು

ಪಟ್ಟ ಪರಿಶ್ರಮಗಳೇ ಸಾಕ್ಷಿಯಾಗಿವೆ. ಸೋಲನ್ನೇ ಕಂಡರಿಯದ ಈ ವೀರನಿಗೆ 'ವಿಜಯ' ಎಂಬ ಹೆಸರು ಅನ್ವರ್ಥವಾಗಿದೆ.

ಜನಪದ ಮಹಾಭಾರತದಲ್ಲಿ ಮಧ್ಯಮ ಪಾಂಡವನಾದ ಅರ್ಜುನನ ಪಾತ್ರವನ್ನು ರೋಚಕನಾದ ಪ್ರಸಂಗಗಳೊಂದಿಗೆ ಚಿತ್ರಿಸಲಾಗಿದೆ. ಮೂಲ ಮಹಾಭಾರತ, ಪಂಪಭಾರತ ಹಾಗೂ ಕುಮಾರವ್ಯಾಸಭಾರತದಲ್ಲಿ ಕಂಡುಬಾರದ ಜೋಗಿಯ ಚಿತ್ರಣ ಜನಪದ ಭಾರತದ ಹೆಗ್ಗುರುತಾಗಿದೆ. ಹಸ್ತಿನಾವತಿಯಲ್ಲಿ ವಿದ್ಯೆ ಕಲಿಸುವಾಗ ದ್ರೋಣ ಅರ್ಜುನನ ಪರವಾಗಿ ಒಲವು ತೋರಿದ್ದು ಮುಂದಿನ ರಾಜಕೀಯಕ್ಕೆ ಕಾರಣವಾಗಿ ಪರಿಣಮಿಸುತ್ತದೆ. ದ್ರುಪದ ಪ್ರಕರಣದ ಪರಿಣಾಮವಾಗಿ ದ್ರೋಣ ಅರ್ಜುನನಿಗೆ ಶಬ್ದವೇಧಿ ವಿದ್ಯೆಯನ್ನು ಕಲಿಸುತ್ತಾನೆ. ಅರ್ಜುನನ್ನನ್ನು ಹೀಗೆ ತನ್ನ ಪರವಾಗಿ ಸಿದ್ಧ ಮಾಡಿಕೊಳ್ಳುವಾಗ ದ್ರೋಣ ಅವನನ್ನು ಪರೀಕ್ಷಿಸುವ ವಿಧಾನ ಪಂಪಭಾರತ ಮತ್ತು ಕುಮಾರವ್ಯಾಸಭಾರತಕ್ಕಿಂತ ಭಿನ್ನವಾಗಿದೆ. ಕಾಶಿಯಿಂದ ತೀರ್ಥವನ್ನು ನೆಲಸೋಂಕದ ಹಾಗೇ ತಂದುಕೊಡುವುದೇ ಆ ಪರೀಕ್ಷೆಯಾಗಿರುತ್ತದೆ. ಅರ್ಜುನ ಆ ಪರೀಕ್ಷೆಯಲ್ಲಿ ಗೆಲ್ಲುತ್ತಾನೆ. ಜೊತೆಗೆ ದುರ್ಯೋಧನನಿಗೆ ಕಲಿಸಿದ ವಿದ್ಯೆಯನ್ನು ಗುರುವಿನ ಅನುಪಸ್ಥಿತಿಯಲ್ಲಿ ತಾನೇ ಕಲಿತು ದ್ರೋಣನ ಎದುರಿಗೂ ಅದನ್ನು ಪ್ರಯೋಗಿಸಿ ಅವರಿಂದ ಮೆಚ್ಚಿಗೆಯನ್ನು ಪಡೆಯುತ್ತಾನೆ. ಅಲ್ಲಿಂದ ಗುರುಶಿಷ್ಯರ ಆತ್ಮೀಯತೆ ಗಾಢವಾಗುತ್ತಾ ಪಾಂಡವರ ಬಲ ಮತ್ತಷ್ಟು ಬೆಳೆಯತೊಡಗುತ್ತದೆ. ಆ ನಿಮಿತ್ತವಾಗಿಯೇ ಕೌರವರ ಅಸೂಯೆ ಅಧಿಕಗೊಂಡಿದ್ದನ್ನು ಜನಪದ ಕವಿ ವಿವರಿಸಿದ್ದಾನೆ. ಈ ಪ್ರಸಂಗ ಜನಪದಭಾರತದ ನೂತನ ಸೇರ್ಪಡೆಯಾಗಿದೆ. ಇವೇ ಮುಂದಿನ ಆಗುಹೋಗುಗಳಿಗೆ ವೇದಿಕೆಯನ್ನೊದಗಿಸುತ್ತದೆ.

ಮುಂದೆ ಪಂಪ, ಕುಮಾರವ್ಯಾಸರ ಕಾವ್ಯದಲ್ಲಿ ಕಾಣದ ಜನಪದ ಕಾವ್ಯದಲ್ಲಿ ಮಾತ್ರ ಕಂಡುಬರುವ ಕುಂತಿಗಾಂಧಾರಿಯರ ಗಜನೋಂಪಿ ವ್ರತವು ಹಾಗೂ ಅರ್ಜುನನ ಜೋಗಿ ಪ್ರಸಂಗವು ಅವನ ಶೌರ್ಯವನ್ನು ಮತ್ತಷ್ಟು ಪ್ರಜ್ವಲಗೊಳಿಸುತ್ತದೆ. ತನ್ನನ್ನು ವ್ರತಕ್ಕೆ ಗಾಂಧಾರಿ ಕರೆಯಲಿಲ್ಲವೆಂದು ನೊಂದುಕೊಂಡ ತಾಯಿಯನ್ನು ಸಮಾಧಾನಿಸಲು ಅರ್ಜುನ ತಾನು ವ್ರತವನ್ನು ಮಾಡಬೇಕೆಂದು ಅದಕ್ಕೆ ದೇವೇಂದ್ರನ ಐರಾವತವನ್ನೇ ತರುತ್ತೇನೆಂದು ತಿಳಿಸಿ ಅದರಂತೆ ದೇವೆಂದ್ರನ ಐರಾವತವನ್ನೇ ತರಿಸುತ್ತಾನೆ. ಗಾಂಧಾರಿ ಮಣ್ಣಿನ ಆನೆಯಿಂದ ವ್ರತಗೈದರೆ, ಅರ್ಜುನನ ಸಾಹಸದಿಂದ ಕುಂತಿ ಅಂತಿಂಥ ಆನೆಯಲ್ಲ ಇಂದ್ರನ ಐರಾವತವನ್ನಿಟ್ಟುಕೊಂಡು ವ್ರತಗೈಯುತ್ತಾಳೆ.

ಅರ್ಜುನನ ಸಾಹಸವನ್ನು ಬಿಂಬಿಸುವ ಮತ್ತೊಂದು ಪ್ರಸಂಗವೆಂದರೆ ದ್ರೌಪದಿಯ ಸ್ವಯಂವರ. ಇಲ್ಲಿ ಜನಪದ ಕವಿ ವಿಭಿನ್ನ ತಂತ್ರ ವಿಧಾನವನ್ನು ಅಳವಡಿಸಿಕೊಂಡು ಹೇಳುತ್ತಾನೆ. ಪಂಪಭಾರತ ಮತ್ತು ಕುಮಾರವ್ಯಾಸಭಾರತಗಳಂತೆ ದ್ರೌಪದಿಯ ಸ್ವಯಂವರ ಮತ್ಸ್ಯಯಂತ್ರ ಭೇದನದಿಂದಾಗುವುದಿಲ್ಲ. ಬದಲಾಗಿ ಮಾರೀಚಕಾಗೆಯ ಪ್ರಸಂಗ ಇಲ್ಲಿದೆ. ಈ ಕಾಗೆ ಹಿರಣಾಕ್ಷನ ರಕ್ತದಿಂದ ಹುಟ್ಟಿದನೆಂಬುದು ಕವಿಯ ಕಲ್ಪನೆ. ಆದರೆ ಈ ಕಾಗೆಯ ಕರ್ಕಶ ಧ್ವನಿಯಿಂದ ದ್ರುಪದನ ತಪಭಂಗವಾಗುವುದರಿಂದ, ಅಲ್ಲದೆ ಕಾಗೆ ನಿಗದಿತ ಅವಧಿಯಲ್ಲೇ ಶಬ್ದಮಾಡಿ ತೊಂದರೆ ಕೊಡುತ್ತಿದ್ದು ಅದನ್ನು ಸಂಹರಿಸಲು ಎಷ್ಟೇ ಪ್ರಯತ್ನಿಸಿದರೂ ಸಾಧ್ಯವಾಗದೇ ಹೋದುದರಿಂದ ಕಾಗೆಯನ್ನು ಸಂಹರಿಸಿದವನಿಗೆ ಮಗಳನ್ನು ಕೊಡುವುದಾಗಿ ಘೋಷಿಸುತ್ತಾನೆ. ಅದರಂತೆ ಅರ್ಜುನ ಶಬ್ದವೇಧಿ ವಿದ್ಯೆಯ ಬಲದಿಂದ ಮಾರೀಚ ಕಾಗೆಯನ್ನು ಹೊಡೆದುರುಳಿಸಿ ದ್ರೌಪದಿಯನ್ನು ಪಡೆಯುತ್ತಾನೆ. ಹಾಗಾಗೀ ಉದ್ದೇಶ ಒಂದೇ ತಂತ್ರ ಬೇರೆ ಬೇರೆ ಅಷ್ಟೇ. ಮುಂದೆ ಅರ್ಜುನನಿಂದ ಮಾರೀಚಕಾಗೆಯ ಮೂಲಕ ಚಿನ್ಮಥನ ಉದ್ಧಾರವಾಗುತ್ತದೆ.

ಅರ್ಜುನ ತೀರ್ಥಯಾತ್ರೆಯ ಸಂದರ್ಭದಲ್ಲಿ ನಾಗರಾಜನ ಮಗಳು ಉಲೂಪಿ, ಭೋಗರಾಜನ ಮಗಳು ಚಿತ್ರಾಂಗಿಯರನ್ನು ವಿವಾಹವಾಗುವುದು ಆತನ ರಸಿಕತೆಗೆ ನಿದರ್ಶನ. ಕುಮಾರವ್ಯಾಸಭಾರತದಲ್ಲೂ ಈ ಪ್ರಸಂಗವಿದ್ದು ಮೂವರು ಹೆಣ್ಣುಗಳ ಪ್ರಣಯ ಅರ್ಜುನನಿಗೆ ಲಭಿಸುತ್ತದೆ. ಆದರೆ ಮಣಿಪುರದ ರಾಜಕುಮಾರಿ ಚಿತ್ರಾಂಗದೆಯನ್ನು ಜನಪದ ಕವಿ ಭೋಗರಾಜನ ಮಗಳು ಚಿತ್ರಾಂಗಿಯನ್ನಾಗಿಸಿದ್ದಾನೆ. ಪಂಪ ಸುಭದ್ರೆಯನ್ನು ಹೊರತುಪಡಿಸಿ ಇನ್ಯಾರ ಹೆಸರನ್ನು ಹೇಳಿಲ್ಲ. ಇತರ ಮಹಾಭಾರತಗಳಲ್ಲಿ ಕಾಣದ ಅರ್ಜುನ ದ್ರೌಪದಿಯ ಜೊತೆ ಪಗಡೆಯಾಡುತ್ತಾ ಸೋಲುತ್ತಾನೆ. ಗೆದ್ದಂತಹ ದ್ರೌಪದಿ 'ಯೋಗವಿಲ್ಲದ ಮ್ಯಾಲೆ ಜೋಗಿಯಾಗೋಗಯ್ಯ' ಎಂದಾಗ ಜೋಗಿ ವೇಷ ತಾಳಬೇಕಾಗುತ್ತದೆ. ಕಾವ್ಯದಲ್ಲಿ ಕವಿ ಉಲೂಪಿ, ಚಿತ್ರಾಂಗದೆ, ಬಭ್ರುವಾಹನ ಕಥಾಸಂದರ್ಭಗಳನ್ನು ತರುತ್ತಾನೆ. ಇವೆಲ್ಲವೂ ಅರ್ಜುನನಿಗೆ ಮಾತ್ರ ಸಂಬಂಧಿಸಿದ ಪ್ರಸಂಗಗಳಾಗಿ ಮುಖ್ಯವೆನಿಸಿಕೊಂಡಿವೆ. ಜೊತೆಗೆ ಅವರಿಗಾಗಿಯೇ ಅರ್ಜುನ ಜೋಗಿಯ ವೇಷ ಹಾಕುವ ಸನ್ನಿವೇಶ ಉಂಟು ಮಾಡಿದ್ದಾನೆ. ಜೋಗಿ ಸಂಸ್ಕೃತಿ ಮತ್ತು ಅರ್ಜುನ ಜೋಗಿ ಹಾಡಿನ ಪ್ರಭಾವದಿಂದ ಅದಕ್ಕೆ ನೀಡಿದ ಮನ್ನಣೆಯಿಂದ ಕಾವ್ಯದ ತಾರ್ಕಿಕತೆಗೆ ಭಂಗ ಬರುತ್ತದೆ. ಇದರಿಂದ ಕಾವ್ಯ ಅರ್ಜುನನ ಕಥೆಯಾಗಿ ಹೋಗುತ್ತದೆ.

ಮುಂದೆ ಕಪಾಲಿ ಸಿದ್ದೇಶ್ವರನಿಂದ ಅರ್ಜುನ ಜೋಗಿ ಬಿರುದುಗಳನ್ನು ಪಡೆಯಬೇಕಾದರೆ ವಿಶಿಷ್ಟವಾದ ಕಿನ್ನರಿಯನ್ನು ಪಡೆಯಬೇಕಾಗುತ್ತದೆ. ಈ ಪ್ರಸಂಗ ಶೈವ ಪಂಥದ ಕಾಪಾಲಿಕರ ಹಾಗೂ ಅಘೋರಿಗಳ ಜೀವನ ಶೈಲಿಗೆ ಹೋಲಿಕೆಯಾಗಿದೆ ಎನ್ನಬಹುದು. ಜೋಗಿಯಾದ ಅರ್ಜುನನಿಗೆ ೬೩ ಭಾಷೆಗಳು ೩೨ ರಾಗಗಳು ಸಿದ್ದಿಸುತ್ತದೆ. ಇವೆಲ್ಲ ಭೈರವ ಸಂಪ್ರದಾಯಕ್ಕೆ ಸಂಬಂಧಿಸಿದುದ್ದಾಗಿದೆ.

ಜೋಗಿ ವೇಷ ಧರಿಸಿದ ಅರ್ಜುನ ದ್ರೌಪದಿಯಿಂದ ವೀಳ್ಯ ಸ್ವೀಕರಿಸಿ ಮುಂದೆ ಕೇರಿ ಕೇರಿಗಳನ್ನು ಸುತ್ತಾಡುತ್ತಾ ಬರುತ್ತಿದ್ದರೆ ಅವನನ್ನು ಕಂಡ ನಾರಿಯರೆಲ್ಲ ಅವನ ರೂಪಕ್ಕೆ ಮನಸೋತು ಅವನನ್ನೇ ಬಯಸುತ್ತಾರೆ. ಇಲ್ಲಿ ಕವಿ ಅರ್ಜುನನ ಬಾಯಲ್ಲಿ ನಾನಾ ಭಾಷೆಗಳನ್ನು ನುಡಿಸಿದ್ದಾನೆ. ಅರ್ಜುನ ಜೋಗಿಯಾಗಿ ಕೇರಿ ಕೇರಿಗಳನ್ನು ಸುತ್ತುವ ಸಂದರ್ಭದಲ್ಲಿ ಜನಪದ ಕವಿಯ ಪ್ರತಿಭೆ ವಿಜೃಂಬಿಸುವುದನ್ನು ಕಾಣಬಹುದು. ಹತ್ತಾರು ಜಾತಿಮತಗಳಿರುವ ಊರು ಕೇರಿಗಳ ಓರೆ-ಕೋರೆಗಳನ್ನು ಎತ್ತಿ ಹಾಡುತ್ತಾನೆ, ಅವನ ವ್ಯಂಗ್ಯ ವಿಡಂಬನೆ, ಉಕ್ತಿಚಾರ್ತುಯ ಬೆರಗು ಹುಟ್ಟಿಸುವಂತಿದೆ ಕೃಷಿ ಸಂಸ್ಕೃತಿಯ ಸೊಗಡು ಸೂಸುತ್ತದೆ. ಹೀಗೆ ಕೇರಿ ಕೇರಿ ಸುತ್ತುತ್ತಾ ಜೋಗಿ ಒಕ್ಕಲಿಗರ ಕೇರಿಗೆ ಬಂದಾಗ ಒಂದು ಅಚಾತುರ್ಯ ಸಂಭವಿಸುತ್ತದೆ. ಮುದ್ದೇಗೌಡರ ಸೊಸೆ ದೇವಾಜಮ್ಮ ತಾನು ಕತ್ತರಿಸುತ್ತಿದ್ದ ಸೋರೆ ಕಾಯಿಗೆ ಬದಲಾಗಿ ತೊಡೆ ಮೇಲಿದ್ದ ತನ್ನ ಮಗುವಿನ ಕಾಲನ್ನೇ ಉತ್ತರಿಸಿ ಬಿಡುತ್ತಾಳೆ. ಅವಳು ಮಗುವಿನ ತಲೆ ಕತ್ತರಿಸುವಷ್ಟರಲ್ಲಿ ಜೋಗಿ ಮುಂದಿನ ಕೇರಿಗೆ ದಾಟಿಬಿಟ್ಟಿರುತ್ತಾನೆ. ಆಗ ತಿಳಿವು ಬಂದು ಆಗಿರುವ ಅನಾಹುತಕ್ಕೆ ಹೌಹಾರಿ ಸತ್ತ ಮಗುವನ್ನು ಹೊತ್ತುಕೊಂಡು ಹೋಗಿ ಜೋಗಿಗೆ ಶರಣಾಗುತ್ತಾಳೆ. ಜೋಗಿ ತನಗೆ ಸಿಸುಮಗನನ್ನಾಗಿ ಬಿಡುವ ಷರತ್ತಿನ ಮೇಲೆ ಪುನಃ ಅದನ್ನು ಬದುಕಿಸುತ್ತಾನೆ. ಆದರೆ ತುಂಡರಿಸಿದ ಎಡಗಾಲು ಮಾತ್ರ ಪುನಃ ಬಾರದೆ ಹೋಯಿತು. ಆದ್ದರಿಂದ ಅವನು ಒರ್+ಕಾಲಿಗ 'ಒಕ್ಕಲಿಗನಾದ' ಕಾಲಕ್ರಮೇಣ ಅವನ ತಲೆಮಾರಿನಿಂದ ಬಂದ ಜೋಗಿ ಸಂಪ್ರದಾಯದ ಕುಲಕ್ಕೆ ಒಕ್ಕಲಿಗರೆಂಬ ಹೆಸರು ಬಂತೆಂದೂ ಈ ಮನೆತನದವರು ಒಬ್ಬ ಮಗನನ್ನಾದರೂ ಜೋಗಿ ಬಿಡಬೇಕೆಂಬ ಅರ್ಜುನನ ಮಾತಿನಿಂದ ಅವರು ಮುಂದೆ ಹಾಗೇ ನಡೆದುಕೊಂಡರೆಂದು ಈ ಸಮುದಾಯದವರಿಗೆ ಚುಂಚನಗಿರಿ ಮಠದ ಭೈರವ ಆರಾಧ್ಯ ದೈವವಾಯಿತ್ತೆಂದು ನಂಬಿಕೆಯಿದೆ. ಇಲ್ಲಿ ಒಂದು ಜನಾಂಗದ ಹುಟ್ಟು ಬೆಳವಣಿಗೆಯ ಹಿನ್ನಲೆಯನ್ನು ಸಾರುವ, ಪೌರಾಣಿಕ ಹಿನ್ನಲೆಯನ್ನು ಕಟ್ಟಿಕೊಡುವ ಅಂಶವನ್ನು ಮನಗಾಣಬಹುದು. ಇದು ಒಂದು ಜನಾಂಗದ ಸಾಂಸ್ಕೃತಿಕ ಬೆಳವಣಿಗೆಯನ್ನು ಕಂಡುಕೊಳ್ಳಲು ಸಹಾಯವಾಗುತ್ತದೆ. ಹೀಗೆ ಜನಪದ ಭಾರತದಲ್ಲಿ ಜನಸಾಮಾನ್ಯರ ಮೌಲ್ಯ ಚಿಪ್ಪೊಡೆದು ಬರುವುದನ್ನು ಕಾಣಬಹುದು. ಯಾವ

ಭಾರತದಲ್ಲೂ ಕಾಣದ ಅರ್ಜುನ ಜೋಗಿಯಾಗುವ ಪ್ರಸಂಗ ಜನಪದ ಭಾರತದ ವಿಶೇಷವೆನ್ನಬಹುದು.

ಅರ್ಜುನನ ಪಾತ್ರವನ್ನು ವೈಭವೀಕರಿಸುವ ಮತ್ತೊಂದು ಪ್ರಸಂಗವೆಂದರೆ ಅರ್ಜುನನ ಬೆನ್ನು ಮತ್ತು ಎದೆ ಎರಡು ಒಂದೇ ರೀತಿ ಇರುವುದೆಂದು ಪ್ರತಿಪಾದಿಸಿರುವುದು. ಪಂಪ, ಕುಮಾರವ್ಯಾಸಭಾರತದಲ್ಲಿ ಪಾಶುಪತಾಸ್ತ್ರವನ್ನು ಪಡೆಯಲು ಅರ್ಜುನ ಇಂದ್ರಕೀಲ ಪರ್ವತದಲ್ಲಿ ತಪಗೈಯ್ಯುವಾಗ ಶಿವ ಅವನನ್ನು ಪರೀಕ್ಷಿಸುವುದಕ್ಕೋಸ್ಕರ ಕಿರಾತನ ವೇಷಧರಿಸಿ ಹಂದಿಯನ್ನು ಬೇಟೆಯಾಡುವುದು, ಇಬ್ಬರ ಬಾಣಗಳು ಏಕಕಾಲದಲ್ಲಿ ಹಂದಿಗೆ ನಾಟಿದಾಗ ಕಿರಾತ ಮತ್ತು ಅರ್ಜುನ ಯುದ್ಧ ಮಾಡುವರು. ಈ ಪ್ರಸಂಗ ಜನಪದ ಭಾರತದಲ್ಲಿದ್ದರೂ ಅರ್ಜುನನ ಪಾತ್ರವನ್ನು ಜನಪದ ಕವಿ ಉನ್ನತೀಗೇರಿಸಲು ಹಾಗೆಯೆ ಶೂರನಾದವನು ಶತ್ರುವಿಗೆ ಬೆನ್ನ ತೋರಿಸುವುದಿಲ್ಲವೆಂಬ ಪ್ರಚಲಿತ ನಂಬಿಕೆಗೆ ಅನುಗುಣವಾಗಿ ಅರ್ಜುನನಿಗೆ ಬೆನ್ನೆ ಇರಲಿಲ್ಲ. ಬೆನ್ನೆಂಬುದು ಎದೆಯ ರೀತಿಯೇ ಇತ್ತೆಂಬ ಕಲ್ಪನೆಯನ್ನು ತಂದಿದ್ದಾನೆ.

**ಅರ್ಜುನ ಅಂದಾರೆ**
**ನೀವು ಹಿಂದೊಮ್ಮೆ ಹೇಳಿದ್ದಿರಿ**
**ಅವನಿಗೆ ಬೆನ್ನು ಇಲ್ಲಾಂತ**
**ಅವ್ನ ಎರಡು ಕಡೆ ಎದೆಯಂತ**
**ಇಂಥ ಶಲೀರದವನು ಅಂತ**
**ನೀವೆ ನನಗೆ ಹೇಳಿದ್ದಿರಿ**
**ಎದೆಯೂ ಎದೆಯಾಗಿರೋದು**
**ಲೋಕದಲ್ಲೇ ಇಲ್ಲವಲ್ಲ**
**ಇಂಥ ವಿಚಿತ್ರ ಶಲೀರವ**
**ನಾವು ನೋಡಬೇಕು ಸ್ವಾಮಿ**
**(ಜ.ಭಾ. ಪು. ೩೫೯)**

ಶಿವನ ಬಾಯಿಂದ ಈ ವಿಷಯವನ್ನು ಕೇಳಿದ ಪಾರ್ವತಿ ಅಂತಹ ವ್ಯಕ್ತಿಯ ಬೆನ್ನನ್ನೇ ನೋಡಬೇಕೆಂಬ ಆಸೆ ವ್ಯಕ್ತಪಡಿಸಿದಾಗ ಶಿವನು ಅವಳ ಆಸೆಯನ್ನು ಈಡೇರಿಸುವುದಕ್ಕಾಗಿಯೇ ಅರ್ಜುನನೊಡನೆ ಯುದ್ಧ ಮಾಡುತ್ತಾ ಕೆಳಗೆ ಬೀಳಲು ಅವನ ಗಂಟಲನ್ನು ಮೆಟ್ಟಿದ ಅರ್ಜುನನನ್ನು ಪಾರ್ವತಿ ನೋಡಿ ಸಂತೋಷಪಡುತ್ತಾಳೆ. ಮುಂದೆ ತಾನು ಯುದ್ಧ ಮಾಡಿದ ವ್ಯಕ್ತಿ ಶಿವನೆಂದು ತಿಳಿದ ಅರ್ಜುನ ನಡೆದ ಪ್ರಮಾದಕ್ಕಾಗಿ ಶಿವನಲ್ಲಿ ಕ್ಷಮೆಯಾಚಿಸಿದರೂ ತಪ್ಪಿಗೆ ಶಿಕ್ಷೆಯಾಗಿ ಕೈ ಕಾಲು ಕತ್ತರಿಸಿಕೊಳ್ಳುತ್ತೇನೆಂದಾಗ ಶಿವ 'ಈಗ ಬೇಡ ಮುಂದಿನ ಜನ್ಮದಲ್ಲಿ ವಿಕ್ರಮಾದಿತ್ಯನಾಗಿ ಕೈ ಕಾಲು ಕತ್ತರಿಸಿಕೊಳ್ಳವೆ' ಎನ್ನುತ್ತಾನೆ. ಇಲ್ಲಿ ಜನಪದ ಕವಿಗೆ 'ರಾಜ ವಿಕ್ರಮ' ನಾಟಕದ ಪ್ರಭಾವವಿರುವಂತಿದೆ.

ಅರ್ಜುನ ಅಜ್ಞಾತವಾಸದ ಸಂದರ್ಭದಲ್ಲಿ ಊರ್ವಶಿಯ ಶಾಪದ ಫಲವಾಗಿ ಬೃಹನ್ನಳೆಯಾಗ ಬೇಕಾಯಿತು. ಕುಮಾರವ್ಯಾಸ ಇಲ್ಲಿ ಅರ್ಜುನನ ವ್ಯಕ್ತಿತ್ವವನ್ನು ಉನ್ನತಿಗೇರಿಸಿದ್ದಾನೆ. ಊರ್ವಶಿ ತನ್ನ ಮೋಹದ ಬೇಡಿಕೆಯನ್ನು ಅರ್ಜುನನನ ಮುಂದಿಟ್ಟಾಗ ತಾಯ್ತನದ ಸಂಬಂಧವನ್ನು ಮುಂದಿಟ್ಟು ಸಂಯಮದಿಂದ ಅದನ್ನು ನಿರಾಕರಿಸುತ್ತಾನೆ. ಊರ್ವಶಿ ಮನುಷ್ಯಲೋಕದ ಸಂಬಂಧಗಳು ಇಲ್ಲಿ ಅನ್ವಯವಾಗುವುದಿಲ್ಲವೆಂದರೂ ಅರ್ಜುನ ತಾನಿನ್ನು ಮನುಷ್ಯನೇ, ಅಲ್ಲದೇ ಮುಂದೆ ತಾನು ಮನುಷ್ಯಲೋಕಕ್ಕೆ ಹೋಗಬೇಕಾದವನು ಆದ್ದರಿಂದ ಆ ಸಂಬಂಧವನ್ನು ಮೀರಲು ಸಾಧ್ಯವಿಲ್ಲವೆನ್ನುವ ಊರ್ವಶಿ–ಅರ್ಜುನರ ಸಂಭಾಷಣೆ ಆತನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ಆದರೂ ಊರ್ವಶಿ ನೀಡಿದ ಶಾಪದ ಫಲವಾಗಿ ಬಂದ ನಪುಂಸಕತ್ವವನ್ನು ಅರ್ಜುನ ಅಜ್ಞಾತವಾಸದಲ್ಲಿ ಬಳಸಿಕೊಳ್ಳಲು ಅನೂಕೂಲವಾಯಿತ್ತಲ್ಲದೆ ವೀರನಾದ ಅರ್ಜುನ ವ್ಯಕ್ತಿತ್ವದ ಪೂರ್ಣತೆಯನ್ನು ಪರಿಚಯಿಸುತ್ತದೆ. ಈ ಪ್ರಸಂಗ ಜನಪದ ಮಹಾಭಾರತದಲ್ಲಿ ಯಥಾವತ್ತಾಗಿ ಬಂದಿದೆ. ಕೃಷ್ಣನ ಕೋಪಕ್ಕೆ ತುತ್ತಾದ ಗಯ ತನ್ನನ್ನು ರಕ್ಷಿಸುವಂತೆ ಬ್ರಹ್ಮನನ್ನು ಮೊರೆ ಹೋದರು ರಕ್ಷಣೆಯ ಭರವಸೆ ದೊರೆಯದಿದ್ದಾಗ ನಾರದರ ಸಲಹೆಯಂತೆ ಅರ್ಜುನನ ಮೊರೆ ಹೋಗುತ್ತಾನೆ. ಅರ್ಜುನ ಅವನನ್ನು ರಕ್ಷಿಸುವುದಾಗಿ ಆಶ್ವಾಸನೆ ನೀಡುತ್ತಾನೆ. ಜೈಮಿನಿ ಭಾರತದಲ್ಲಿ ಬರುವ ಅರ್ಜುನನ ಮಗ ಬಭ್ರುವಾಹನನ ಕತೆಯನ್ನು ಜನಪದ ಕವಿ ಇಲ್ಲಿಯೇ ಸೇರಿಸಿದ್ದಾನೆ.

ಪಂಪಭಾರತದಲ್ಲಿ ದುರ್ಯೋಧನನ ಅವನತಿಯ ನಂತರ ರಾಜ್ಯಭಿಷೇಕದ ಸಂದರ್ಭದಲ್ಲಿ ಪಂಪ ತನ್ನ ಕಾವ್ಯದ ನಾಯಕನಾದ ಅರ್ಜುನನಿಗೆನೇ ಪಟ್ಟಾಭಿಷೇಕ ಮಾಡಿಸುತ್ತಾನೆ. ಪಾಂಡವರಲ್ಲಿ ಹಿರಿಯನಾದ ಯುಧಿಷ್ಠಿರನೇ ನ್ಯಾಯವಾಗಿ ಪಟ್ಟಕಟ್ಟಿಸಿಕೊಳ್ಳಬೇಕಾದರೂ ಪಂಪ ಸಹಜವಾಗಿ ತನ್ನ ಕಾವ್ಯ ನಾಯಕನಾದ ಅರ್ಜುನನಿಗೆ ಪಟ್ಟಕಟ್ಟಿಸುವುದರ ಮೂಲಕ ಅಪವಾದಕ್ಕೆ ಗುರಿಯಾಗಿದ್ದಾನೆ. ಏಕೆಂದರೆ ಧರ್ಮರಾಯನಾದರೋ ಹಿರಿಯನಾಗಿ ತನಗೆ ರಾಜ್ಯ ಬೇಡವೆನ್ನಬಹುದೇನೋ. ಆದರೆ ಭೀಮನಿಗೆ ಆ ರೀತಿ ಹೇಳಲು ಯಾವುದೇ ಕಾರಣವಿಲ್ಲ. ಅಲ್ಲದೇ ಅರ್ಜುನನಿಗೆ ಸಮಬಲವಾಗಿ ನಿಂತು ಕೌರವರೊಡನೆ ಹೋರಾಡಿರುತ್ತಾನೆ. ಕರ್ಣನನು ಹೊರತು ಪಡಿಸಿ ಎಲ್ಲರನ್ನು ಸಂಹರಿಸಿದವನು ಭೀಮನೇ ಹಾಗಾಗೀ ಭೀಮ ತನಗೆ ರಾಜ್ಯ ಬೇಡವೆನ್ನಲು ಯಾವುದೇ ನೆಪಗಳಿಲ್ಲ. ಆದರೂ ಪಂಪ ತನ್ನ ನಾಯಕನಾದ ಅರ್ಜುನನಿಗೆ ಪಟ್ಟಕಟ್ಟಿಸಿರುವುದು ಸಂದಿಗ್ಧವಾಗಿದೆ. ಇದಕ್ಕೆ ಕಾರಣ ಅರಿಕೇಸರಿಯ ಮೇಲೆ ತನಗಿದ್ದ ಪ್ರೀತಿ, ವಿಶ್ವಾಸವೇ ಕಾರಣವಾಗಿರಬೇಕು. ಕವಿಯೇ ಹೇಳುವಂತೆ 'ಅಟ್ಟಿಗೆ ದೋಷಮೆಂ' ಎಂದು ಹೇಳುತ್ತಾ ತನ್ನ ಕಾವ್ಯದ ನಾಯಕನಾದ ಅರ್ಜುನನ ಪಾತ್ರವನ್ನು ಅತ್ಯಂತ ಉದಾತ್ತವಾಗಿ ಚಿತ್ರಿಸಿದ್ದಾನೆ. ಕುಮಾರವ್ಯಾಸಭಾರತದಲ್ಲೂ, ಜನಪದ ಮಹಾಭಾರತದಲ್ಲೂ ಈ ಪ್ರಸಂಗ

ಕಂಡುಬರುವುದಿಲ್ಲ. ಹೀಗೆ ಜನಪದಕವಿ ಅರ್ಜುನನ ಪಾತ್ರವನ್ನು ವೈಭವೀಕರಿಸಿದ್ದಾನೆನ್ನಬಹುದು. ಅಂತಿಮವಾಗಿ ಸ್ವರ್ಗಾರೋಹಣಕ್ಕೆ ಹೊರಟಾಗ ಅರ್ಜುನನ ಶರೀರ ತಣ್ಣಗಾದಾಗ ಧರ್ಮರಾಯ ಕೊಡುವ ಕಾರಣ ಕೈ ಹಿಡಿದ ಹೆಂಡತಿ ಇದ್ದರೂ ವಿಪರೀತ ಕಾಮದಿಂದ ಪರಸತಿಯರ ಜೊತೆ ರತಿ ಕ್ರೀಡೆಯಾಡದುದರ ಪಾಪ ಎನ್ನುತ್ತಾನೆ. ಅಂದರೆ ಜನಪದ ಕವಿಗೆ ಅರ್ಜುನನ ಬಗ್ಗೆ ಅಲ್ಪ ಮಟ್ಟಿಗಿನ ವಿಶೇಷ ಪ್ರೀತಿ ವ್ಯಕ್ತವಾಗಿದ್ದರೂ ಕೊನೆಯಲ್ಲಿ ಸ್ಥಿರಭಾವದಿಂದ ಆತನ ಪಾತ್ರವನ್ನು ಚಿತ್ರಿಸಿದ್ದಾನೆ.

ಹೀಗೆ ಮೂವರು ಮಹಾನಕವಿಗಳು ಅರ್ಜುನನ ಪಾತ್ರವನ್ನು ಚಿತ್ರಿಸಿದ್ದರೂ, ಮೂವರ ದೃಷ್ಟಿಕೋನವು ಬೇರೆ ಬೇರೆಯಾಗಿದೆ. ಪಂಪನಿಗೆ ಅರ್ಜುನ ಕಥಾನಾಯಕ ಹಾಗಾಗಿ ಭಾರತದ ಎಲ್ಲಾ ಕಥೆಯನ್ನು ಸನ್ನಿವೇಶವನ್ನು ಅವನಿಗೆ ಕೇಂದ್ರಿಕರಿಸಿ ಕಥೆಯನ್ನು ವಿಸ್ತರಿಸುತ್ತಾ ಅವನ ಪಾತ್ರವನ್ನು ಔನತ್ಯಕ್ಕೇರಿಸಿದರೆ, ಕುಮಾರವ್ಯಾಸನಿಗೆ ಅರ್ಜುನ ಕೃಷ್ಣ ಪರಮ ಸಖನೆಂಬ ಕಾರಣಕ್ಕೆ ಶ್ರೇಷ್ಟನಾಗುತ್ತಾನೆ. ಕೃಷ್ಣನಿಲ್ಲದ ಅರ್ಜುನನನ್ನು ಕುಮಾರವ್ಯಾಸ ಕಲ್ಪಿಸಿಕೊಳ್ಳಲಾರ ಹಾಗೂ ಚಿತ್ರಿಸಲಾರ. ಜನಪದ ಕವಿಗಾದರೋ ಅರ್ಜುನನೇ ಶ್ರೇಷ್ಠನೆನ್ನಬಹುದು. ಅದರಲ್ಲೂ ಜೋಗಿಯಾಗುವ ಅರ್ಜುನನನ್ನು ಕವಿ ವಿಸ್ತಾರವಾಗಿ ವರ್ಣಿಸಿದ್ದಾನೆ. ಮೂಲತಃ ಜೋಗಿಹಾಡು ಪುರಾತನವಾಗಿದ್ದು ಅನಂತರದಲ್ಲಿ ಅದಕ್ಕೆ ಪೂರಕವಾಗುವಂತೆ ಮಹಾಭಾರತ ಕಥೆ ಬೆಳೆಯಿತ್ತೆಂಬ ಮಾತು ವಿದ್ವಾಂಸರ ವಲಯದಲ್ಲಿ ಚಾಲ್ತಿಯಲ್ಲಿರುವುದನ್ನು ಕಾಣುತ್ತೇವೆ. ಅರ್ಜುನನ ಪಾತ್ರಚಿತ್ರಣದಲ್ಲಿ ಮೂವರ ದೃಷ್ಟಿಕೋನವೂ ಭಿನ್ನವಾಗಿದ್ದು ಒಂದಕ್ಕೊಂದು ಪೂರಕವಲ್ಲದಿದ್ದರೂ ಅಲ್ಪಮಟ್ಟಿನ ಸಾಮ್ಯತೆಯನ್ನು ಗುರುತಿಸಬಹುದು.

**ಕರ್ಣ :**

ಜನಪದ ಕವಿ ಕರ್ಣನ ಪಾತ್ರಕ್ಕೂ ಪುರಾಣದ ಹಿನ್ನಲೆಯನ್ನು ಒದಗಿಸಿದ್ದಾನೆ. ಇದು ಜನಪದ ಕವಿಯ ಸ್ವಕಲ್ಪನೆಯೇನಲ್ಲ. ಮೂಲ ಭಾರತದಲ್ಲೂ ಕರ್ಣನನ್ನು ಕಾಲನೇಮಿ ಎಂಬ ರಾಕ್ಷಸ ತನ್ನ ಕವಚ ಕುಂಡಲದೊಡನೆ ಕರ್ಣನಾಗಿ ಜನಿಸಿರುತ್ತಾನೆಂದು ಚಿತ್ರಿಸಲಾಗಿದೆ. ಆದರೆ ಜನಪದ ಕವಿ ಅವನನ್ನು ಡಂಬಕಾಸುರನ ಕೊನೆಯ ಜನ್ಮವೇ ಕರ್ಣನೆಂದು ಕರೆದಿದ್ದಾನೆ. ಆದರೆ ಇಲ್ಲಿ ಕರ್ಣನ ಸಾಕು ತಂದೆ-ತಾಯಿ ಅಂಬಿಗರ ಚೌಡಯ್ಯ ಹಾಗೂ ಸಿರಿದೇವಮ್ಮ. ಕವಿ ಕರ್ಣನ ಪಾತ್ರದಲ್ಲಿ ವೀರರಸ ಕರುಣಾರಸಗಳನ್ನು ಹೊರ ಹೊಮ್ಮಿಸಿದ್ದಾನೆನ್ನಬಹುದು. ಪಂಪ, ಕುಮಾರವ್ಯಾಸರ ಕಾವ್ಯದಲ್ಲಿ ಬರುವ ಕರ್ಣನ ಪಾತ್ರಕ್ಕಿಂತ ಜನಪದ ಭಾರತದ ಕರ್ಣ ಮಿಗಿಲಾಗಿದ್ದಾನೆ.

ಪಂಪ ತನ್ನ ಕಾವ್ಯದಲ್ಲಿ ಅರಿಕೇಸರಿಯನ್ನು ಅರ್ಜುನನ ಪಾತ್ರದಲ್ಲಿ ಸಮೀಕರಿಸಿ ಕಾವ್ಯ ರಚಿಸಿರುವುದರಿಂದ ಕಾವ್ಯದ ನಾಯಕ ಅರ್ಜುನ. ಅವನಿಗೆ ಪ್ರತಿನಾಯಕನಾಗಿ ಬರುವವನು ಕರ್ಣ. ಪಂಪನ ಕಾವ್ಯದ ನಾಯಕ ಅರ್ಜುನನಾದರೂ ಕವಿಯ ಮನಗೆದ್ದವನು ಕರ್ಣ. ಇದಕ್ಕೆ ಆಧಾರಗಳು ಕಾವ್ಯದಲ್ಲೇ ಲಭ್ಯವಿದೆ.

ಪಂಪನಿಗೆ ಕರ್ಣನೆಂದರೆ ಅಭಿಮಾನ. ಕವಿ ತನ್ನೆಲ್ಲಾ ಸಹಾನೂಭೂತಿಯನ್ನು ಕರ್ಣನಿಗೇನೇ ಮುಡಿಪಾಗಿಟ್ಟಿರುವಂತೆ ಕಾಣುತ್ತದೆ. ಹಾಗಾಗಿಯೆ ಕರ್ಣ ಸತ್ತಾಗ ಕವಿ ಮನದುಂಬಿ. ಒಂದೇ ಮಾತಿನಲ್ಲಿ

**ನೆನೆಯದಿರಣ್ಣ ಭಾರತದೊಳಂ ಪೆಱರಾರುಮನೊಂದೆ ಚಿತ್ತದಿಂ**
**ನೆನೆವೊಡೆ ಕರ್ಣನಂ ನೆನೆಯ ಕರ್ಣನೊಳಾರ್ ದೊರೆ ಕರ್ಣನೇಱು ಕ**
**ರ್ಣನ ಕಡು ನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು ಕ**
**ರ್ಣನ ಪಡೆಮಾತಿನೊಳ್ ಪುದಿದು ಕರ್ಣ ರಸಾಯನಮಲ್ತೆಭಾರತಂ**
**(ಪ.ಭಾ. ೧೨-೨೧೭)**

ಎಂದು ಚರಮ ಗೀತೆಯನ್ನಾಡಿದ್ದಾನೆ. ಕರ್ಣನ ಚಾಗ, ನನ್ನಿ ಅಳವು ಗುಣಗಳನ್ನು ಮೆಚ್ಚಿಕೊಂಡು ಅವನ ದುರ್ಗಣಗಳನ್ನೆಲ್ಲ ಅಲಕ್ಷಿಸಿದ್ದಾನೆ. ಕರ್ಣನ ಸದ್ಗುಣಗಳಿಂದಲೇ ಭಾರತ ಕರ್ಣಾರಸಾಯನವಾಗಿರುವುದು. ಆದ್ದರಿಂದ ಕರ್ಣನ ಘನತೆಗೆ ಭಂಗ ತರುವ ಮೂಲ ಭಾರತದ ಅಂಶಗಳನ್ನೆಲ್ಲಾ ಕೈ ಬಿಟ್ಟಿದ್ದಾನೆ. ಕರ್ಣನ ಜನ್ಮವೃತ್ತಾಂತವನ್ನು ಪಂಪ ಮೂಲ ಭಾರತದಲ್ಲಿರುವಂತೆಯೇ ವರ್ಣಿಸಿದ್ದಾನೆ. ದೂರ್ವಾಸರ ಮಂತ್ರವನ್ನು ಪರೀಕ್ಷಿಸಲು ಸೂರ್ಯನನ್ನು ಆಹ್ವಾನಿಸಿದ ಕುಂತಿ ಕರ್ಣನಿಗೆ ಜನ್ಮನೀಡಿ ಸಮಾಜದ ಭಯದಿಂದ ಗಂಗೆಯಲ್ಲಿ ತೇಲಿ ಬಿಡುತ್ತಾಳೆ. ಹುಟ್ಟಿನೊಡನೆ ರತ್ನ ಕುಂಡಲ ಮತ್ತು ಕವಚಗಳಿದ್ದ ಮಗು ಕರ್ಣ ಸೂತನಿಗೆ ಸಿಕ್ಕಿ ಆತನ ಮಡದಿ ರಾಧೇಯಳ ಪ್ರೀತಿಪಾತ್ರದಲ್ಲಿ ಬೆಳೆಯತೊಡಗುತ್ತಾನೆ. ಸೂತ ಮಗುವಿಗಿಟ್ಟ ಹೆಸರು ವಸುಸೇಣ ಎಂದಾಗಿದೆ. ಮುಂದೆ ಯಥಾ ಪ್ರಕಾರ ಪರಶುರಾಮರಲ್ಲಿ ವಿದ್ಯೆ ಪಡೆದರೂ ಅವರ ಶಾಪಕ್ಕೆ ಗುರಿಯಾಗುವ ಪ್ರಸಂಗ ಯಥಾವತ್ತಾಗಿದೆ. ವ್ಯತ್ಯಾಸವೆಂದರೆ ಪರಶುರಾಮರು 'ನಾನು ನಿನಗೆ ಕಲಿಸಿಕೊಟ್ಟ ಬ್ರಹ್ಮಾಸ್ತ್ರ ವಿದ್ಯೆ ನಿನ್ನ ಅವಸಾನದ ಕಾಲದಲ್ಲಿ ಉಪಯೋಗಕ್ಕೆ ಬಾರದಿರಲಿ' ಎಂದು ಶಪಿಸುವುದು. ಆಗ ಕರ್ಣ ಬ್ರಹ್ಮಾಸ್ತ್ರ ಹೋದರೇನಂತೆ ಉಳಿದ ಅಸ್ತ್ರಗಳಿವೆಯಲ್ಲ ಎಂಬ ಸಮಾಧಾನ ತಾಳುವನು.

ಕುಮಾರವ್ಯಾಸನ ಗದುಗಿನ ಭಾರತದಲ್ಲಿನ ಹಲವು ವೀರೋಚಿತ ಪಾತ್ರಗಳಲ್ಲಿ ಕರ್ಣನದು ಒಂದು. ವ್ಯಾಸಭಾರತವನ್ನು ಅನುಕರಿಸಿರುವ ಕುಮಾರವ್ಯಾಸ ಕರ್ಣನ ಪಾತ್ರವನ್ನು ಅಲ್ಲಿನ

ರೀತಿಯಲ್ಲಿಯೇ ಚಿತ್ರಿಸಿದ್ದರೂ ಪಂಪನ ಪ್ರಭಾವಕ್ಕೆ ಒಳಗಾಗಿ ಕರ್ಣನನ್ನು ಉದಾತ್ತ ನಾಯಕನನ್ನಾಗಿ ಚಿತ್ರಿಸಿದ್ದಾನೆ.

ಜನಪದ ಮಹಾಭಾರತದಲ್ಲಿ ಕುಂತಿ ಸೂರ್ಯನ ವರದಿಂದ ಕರ್ಣನನ್ನು ಹೆತ್ತು ಭಯದಿಂದ ಗಂಗೆಗೆ ಒಪ್ಪಿಸಿ ಹೋದ ಮೇಲೆ ಗಂಗೆ ತನ್ನ ಚಿಕ್ಕಪ್ಪನಾದ ಅಂಬಿಗರ ಚೌಡಯ್ಯನಿಗೆ ಆ ಮಗುವನ್ನು ಒಪ್ಪಿಸುತ್ತಾಳೆ. ಕವಿ ಬಾಲ್ಯದಲ್ಲೇ ಕರ್ಣ ದಾನ ಶೂರತೆಯನ್ನು ವ್ಯಕ್ತಪಡಿಸುವುದಕ್ಕೆ ಕೃಷ್ಣ ವೇಷಧಾರಿಯಾಗಿ ಬಂದು ಅವನಿಂದ ಚಿನ್ನದ ಬಟ್ಟಲನ್ನು ಪಡೆಯುವ ಕಥೆಯನ್ನು ಚಿತ್ರಿಸಿದ್ದಾನೆ. ಮುಂದೆ ಇಂದ್ರನೂ ಬ್ರಾಹ್ಮಣ ವೇಷದಲ್ಲಿ ಬಂದು ಅವನ ಮೈಗಂಟಿದ್ದ ಕವಚವನ್ನು ಪಡೆದುಕೊಳ್ಳುತ್ತಾನೆ. ಇಂದ್ರನ ಈ ವೇಷ ಅಷ್ಟಕ್ಕೆ ನಿಲ್ಲದೇ ಪರಶುರಾಮರಿಂದ ವಿದ್ಯ ಕಲಿಯುತ್ತಿದ್ದ ಕರ್ಣನಿಗೆ ಕೇಡನ್ನು ಬಗೆಯಲು ದುಂಬಿಯಾಗಿ ಅವನ ತೊಡೆಯನ್ನು ಕಚ್ಚಿ ನೋವನ್ನುಂಟು ಮಾಡಿದಾಗಲೂ ಕರ್ಣ ಗುರುಗಳಿಗೆ ನಿದ್ರಾಭಂಗವಾಗಬಾರದೆಂದು ಸುಮ್ಮನಿರುತ್ತಾನೆ ಅದರಿಂದ ದೊರೆತ ಫಲವೆಂದರೆ ಪರಶುರಾಮರಿಂದ ಶಾಪ 'ಕಲಿತ ವಿದ್ಯೆ ಆಪತ್ಕಾಲಕ್ಕೆ ದಕ್ಕದಂತಾಗಲೀ' ಎಂಬ ಶಾಪ ಕಾರಣ ಕರ್ಣ ಕ್ಷತ್ರಿಯನಲ್ಲವೆಂದು ಸುಳ್ಳು ಹೇಳಿ ವಿದ್ಯೆ ಕಲಿಯಲು ಸೇರಿದನೆಂಬುದು. ಆದರೆ ಪರಶುರಾಮ ಬಳಿ ವಿದ್ಯೆ ಕಲಿಯುವ ಸಂದರ್ಭದಲ್ಲಿ ಕರ್ಣ ತಾನು ಸೂತಪುತ್ರನೆಂದೇ ನಂಬಿದ್ದನು. ಅವನಿಗಿನ್ನು ಅವನ ಜನ್ಮರಹಸ್ಯ ತಿಳಿದಿರಲಿಲ್ಲ. ಆದರೆ ಪರಶುರಾಮರ ತರ್ಕ ಕ್ಷತ್ರಿಯನಲ್ಲದವನು ಈ ರೀತಿ ನೋವನ್ನು ಸಹಿಸಲು ಸಾಧ್ಯವಿಲ್ಲವೆಂಬುದು. ಒಟ್ಟಾರೆ ಕರ್ಣ ವಿಧಿಯ ಆಟಕ್ಕೆ ತುತ್ತಾದ ನತದೃಷ್ಟ ವ್ಯಕ್ತಿ ಎನ್ನಬಹುದು.

ಕರ್ಣನ ದುರ್ಯೋಧನಾದಿಗಳ ಭೇಟಿ ಸ್ನೇಹ ಮತ್ತು ಒಡನಾಟವೆಲ್ಲ ಮೂಲಭಾರತದಲ್ಲಿರುವಂತೆ ಪಂಪ ಮತ್ತು ಕುಮಾರವ್ಯಾಸಭಾರತದಲ್ಲಿ ಅರ್ಜುನನ ಬಿಲ್ವಿದ್ಯೆ ಪ್ರದರ್ಶನದ ಸಂದರ್ಭದಲ್ಲಿಯೇ ಬರುವುದು. ಅನಂತರ ಅಂಗರಾಜ್ಯಭಿಷೇಕ ಕರ್ಣ ದುರ್ಯೋಧನಾದಿಗಳ ಸರಸ, ಚೈತ್ರಯಾತ್ರೆ ಗೋಗ್ರಹಣ ಮುಂತಾದ ಸನ್ನಿವೇಶಗಳಲ್ಲಿ ಕರ್ಣ ತನ್ನ ಸ್ವಾಮಿನಿಷ್ಠೆಯನ್ನು ವ್ಯಕ್ತಪಡಿಸುವುದನ್ನು ಕಾಣಬಹುದು.

ಕರ್ಣ ದುರ್ಯೋಧನರ ಭೇಟಿಯೂ ಜನಪದರಲ್ಲಿ ಭಿನ್ನವಾಗಿದೆ. ದುರ್ಯೋಧನ ಮೃಗಯಾ ವಿನೋದದಿಂದ ಹಿಂದಿರುಗಿ ಬರುತ್ತಿದ್ದಾಗ ಅವನ ರಥದ ಕಡಾಣಿ ಕಳಚಿ ರಥ ಬೀಳುವುದರಲ್ಲಿದ್ದ ದುರ್ಯೋಧನನನ್ನು ಕರ್ಣ ತನ್ನ ಧನುರ್ವಿದ್ಯೆಯ ಬಲದಿಂದ ರಕ್ಷಿಸುತ್ತಾನೆ. ಆ ಕ್ಷಣವೇ

ದುರ್ಯೋಧನ ಅವನನ್ನು ಅಂಗರಾಜ್ಯಕ್ಕೆ ದೊರೆಯನ್ನಾಗಿ ಮಾಡಿ ತನ್ನ ಬಳಿಯೇ ಇಟ್ಟುಕೊಳ್ಳುತ್ತಾನೆ. ದುರ್ಯೋಧನನ ಸ್ನೇಹಕ್ಕೆ ಕರ್ಣ ಅಂದಿನಿಂದ ತಾನು ಸಾಯುವವರೆಗೂ ಚಿರಋಣಿಯಾಗಿರುತ್ತಾನೆ. ಇತರ ಮಹಾಭಾರತದಲ್ಲಿ ಕರ್ಣನ ಪ್ರವೇಶ ರಾಜಕೀಯ ವಾತವರಣದಲ್ಲಾದರೇ ಇಲ್ಲಿ ವೈಯಕ್ತಿಕ ವಲಯದಲ್ಲಿ ಪ್ರವೇಶ ಜರಗುವುದನ್ನು ಕಾಣಬಹುದು.

ಮುಂದೆ ದ್ರೋಣ ಎಂದಿನಂತೆಯೇ ಅರ್ಜುನನ ಧನುರ್ವಿದ್ಯ ಪ್ರಾವೀಣ್ಯವನ್ನು ಹೇಳತೊಡಗಿದಾಗ ಅದಕ್ಕೆ ಕರ್ಣ ಪ್ರತಿರೋಧ ಒಡ್ಡಿ ಅರ್ಜುನ ಪ್ರದರ್ಶಿಸಿದ ವಿದ್ಯೆಯನ್ನೆಲ್ಲಾ ಪ್ರದರ್ಶಿಸಿ ದುರ್ಯೋಧನನಿಗೆ ಇನ್ನು ಹತ್ತಿರವಾಗುತ್ತಾನೆ. ಈ ಸಂದರ್ಭದಲ್ಲಿ ಬರುವ ಕುಲದ ವ್ಯಾಖ್ಯಾನ ಪಂಪಭಾರತದಲ್ಲಿ ಬರುವ ಕುಲದ ವ್ಯಾಖ್ಯಾನವಂತಿದೆ. ವಿದ್ಯೆ, ವೀರ, ಸಾಹಸ ಮತ್ತು ಬುದ್ದಿಗೆ ಕುಲವನ್ನು ತಳುಕುಹಾಕುವುದು ಸರಿಯಲ್ಲವೆಂದು ವಾದಿಸುತ್ತ ದುರ್ಯೋಧನ;

**ಕುಲದ ಮಾತ್ಯಾಕೆ ಇಲ್ಲಿ?**
**ವಿದ್ಯೆಗೆ ಕುಲವ್ಯಾಕೆ**
**ವೀರಕ್ಕೆ ಕುಲವ್ಯಾಕೆ**
**ಸಾಹಸಕ್ಕೆ ಕುಲವ್ಯಾಕೆ**
**ಬುದ್ದಿಗೆ ಕುಲವ್ಯಾಕೆ**
**ನೀರಿಗೆ ಕುಲವ್ಯಾಕೆ**
**ಗಾಳಿಗೆ ಕುಲವ್ಯಾಕೆ**[೩೫]

ಈ ಸಂದರ್ಭ ಪಂಪಭಾರತದಲ್ಲಿ:

**ಕುಲಮೆಂಬುದುಂಟೆ ಬೀರಮೆ**
**ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ ನೀ**
**ಮೊಲಿದೆಲ್ಲಿ ಪುಟ್ಟ ಬಳೆದಿರೊ**
**ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ**

**(ಪ.ಭಾ. ೨-೮೩)**

ಎಂಬುದಾಗಿ ಪ್ರತ್ಯುತ್ತರ ನೀಡಿದರೆ ಇಲ್ಲಿ ಕರ್ಣನ ಪರವಾಗಿ ದುರ್ಯೋಧನನೇ ಮಾತನಾಡಿ ಸಮರ್ಥಿಸಿಕೊಳ್ಳುವುದು ಔಚಿತ್ಯಪೂರ್ಣವೆನಿಸುತ್ತದೆ. ಜೊತೆಗೆ ಕರ್ಣ ಮತ್ತು ದುರ್ಯೋಧನರ ನಡುವಣ ಸ್ನೇಹ ಗಟ್ಟಿಗೊಳ್ಳಲು ಇದು ಕಾರಣವಾಗುತ್ತದೆ. ಶ್ರೇಣಿಕೃತ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಜನಪದ ಕವಿಗೆ ಪೂರ್ಣ ಅರಿವಿದೆ ಎಂಬುದಕ್ಕೆ ಇದೊಂದು ಉತ್ತಮ ನಿದರ್ಶನ.

ಜನಪದ ಕವಿ ಕರ್ಣನ ವ್ಯಕ್ತಿತ್ವವನ್ನು ಪಂಪನಿಗಿಂತ ಭಿನ್ನವಾಗಿ ಚಿತ್ರಿಸಿರುವುದನ್ನು ಕಾಣಬಹುದು. ಅದಕ್ಕಾಗಿ ಒಂದು ವಿಶೇಷ ಪ್ರಸಂಗವನ್ನೇ ಚಿತ್ರಿಸಿದ್ದಾನೆ. ಅದೆಂದರೆ ತಂದೆಯ ದೇಹವನ್ನು ಚಿತೆಗಿಡಲು ಒಣ ಸೌದೆಯಿಲ್ಲವೆಂದು ಬೇಡಲು ಬಂದ ವ್ಯಕ್ತಿಗೆ ತನ್ನ ಮನೆಯ ಮಾಳಿಗೆಯ ಜಂತಿಯನ್ನು ಕಿತ್ತು ಕೊಡುವುದು. ಇದರಿಂದ ಹರ್ಷಿತನಾದ ವ್ಯಕ್ತಿ 'ದಾನಶೂರ ಅಂದ್ರೆ ಧರೆಗೆ ನೀನೊಬ್ಬನೆ ನಿನಗೆ ಯಾರು ಸಮರಲ್ಲ' ಎಂದು ಹರಸಿ ಆಶೀರ್ವದಿಸುತ್ತಾನೆ. ಕರ್ಣನ ಖ್ಯಾತಿಯನ್ನು ಸಹಿಸದ ಶಕುನಿ ದಾನದ ವಿಷಯವನ್ನೇ ಮುಂದಿಟ್ಟು ದುರ್ಯೋಧನನ ಮತ್ತು ಕರ್ಣನ ಸ್ನೇಹವನ್ನು ಒಡೆಯಲು ಪ್ರಯತ್ನಿಸುತ್ತಾನೆ. ಆದರೆ ಕರ್ಣನ ದಾನದ ಮುಂದೆ ದುರ್ಯೋಧನನ ದಾನಕ್ಕೆ ಮಹತ್ವ ಸಿಗಲಿಲ್ಲ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಶಕುನಿಯ ಮಾತಿನಂತೆ ಮನೆಯ ಮುಂದೆ 'ದಾನಶೂರ ದುರ್ಯೋಧನ' ಎಂದು ಬೋರ್ಡ ಹಾಕಿಸಿಕೊಂಡರೂ ದುರ್ಯೋಧನನಿಗೆ ಕರ್ಣನಂತೆ ದಾನದ ಮುಂದೆ ನಿಲ್ಲಲಾಗಲಿಲ್ಲ. ಆದರೆ ಅಸೂಯಾಪರನಾಗದೇ ಮನಃಪೂರ್ತಿಯಾಗಿ ಕರ್ಣನ ದಾನವನ್ನು ಮೆಚ್ಚಿಕೊಳ್ಳುವ ದುರ್ಯೋಧನನ ಔದಾರ್ಯ ದೊಡ್ಡದೆನ್ನಬಹುದು. ಅಲ್ಲದೆ ದಾನವೆಂಬುದು ಅಂತರಂಗದಿಂದ ಮೂಡಿಬರಬೇಕು ಎಂಬ ತತ್ವವನ್ನು ಜನಪದರು ಬಿಂಬಿಸಿದ್ದಾರೆ.

ಶ್ರೀಕೃಷ್ಣನ ಕರ್ಣನನ್ನು ಪಾಂಡವರ ಕಡೆಗೆ ಎಳೆಯುವ ತಂತ್ರವನ್ನು ಜನಪದ ಕವಿ ತಾಯಿಯಾದ ಕುಂತಿಯ ಕಡೆಯಿಂದಲೇ ಮಾಡಿಸುವನು. ಏಕೆಂದರೆ ಕರ್ಣನು ಕುಂತಿಯ ಮಗನಾದ್ದರಿಂದ ತಾಯಿಯ ಮಾತಿಗೆ ಬೆಲೆಕೊಡಬೇಕೆಂದು ಕವಿಯ ಲೋಕಪರಿಜ್ಞಾನ. ಒಬ್ಬ ಮಗನಿಗಾಗಿ ಇನ್ನೊಬ್ಬನನ್ನು ಬಲಿಯಾಗಿಸುವುದೇ ಈ ನಿರ್ಧಾರದ ರಹಸ್ಯ. ಹಾಗೆಯೆ ಕುಂತಿ ಕರ್ಣರ ಭೇಟಿ ಕೂಡ ಓದುಗರಿಗೆ ಕರುಣೆ ಮತ್ತು ವಿಸ್ಮಯಗಳನ್ನು ಉಂಟು ಮಾಡುವ ಪ್ರಸಂಗಗಳಾಗಿವೆ. ಕರ್ಣ ಸೂತಪುತ್ರನಲ್ಲ ಕುಂತಿಯ ಪುತ್ರ ಎಂದು ಕೃಷ್ಣ ತಿಳಿಸಿದಾಗಿನ ಕರ್ಣನ ಪರಿಸ್ಥಿತಿಯನ್ನು ಕವಿ ಚೆನ್ನಾಗಿ ಚಿತ್ರಿಸಿದ್ದಾನೆ. ಈ ವಿಷಯ ದುರ್ಯೋಧನನಿಗೆ ಗೊತ್ತಿತ್ತೆಂಬುದನ್ನು ಕಾವ್ಯ ಪ್ರಸ್ತಾಪಿಸಿರುವುದು ವಿಶೇಷ ಸಂಗತಿ. ಪಂಪಭಾರತ ಹೊರತು ಪಡಿಸಿ ಬೇರಾವ ಕಾವ್ಯಗಳಲ್ಲೂ ಈ ವಿಷಯ ಉಲ್ಲೇಖಗೊಂಡಿಲ್ಲ. ಪಂಪನು ಈ ವಿಚಾರವನ್ನು ದುರ್ಯೋಧನಂ ನಿನ್ನನೇತಜೊಳ್ ನಂಬಿದನೆಂದೊಡೆ ನೀನುಂ ತಾನುಮೊರ್ಮೆ ಗಂಗಾನದೀ ತೀರದೊಳ್ ಬೇಂಟೆಯಾಡುವಲ್ಲಿ ತತ್ಸಮೀಪದ ತಾಪಸಾಶ್ರಮದೊಳ್ ಸತ್ಯಂತಪರೆಂಬ ದಿವ್ಯ ಜ್ಞಾನಿಗಳಂ ಕಂಡು ಪೊಡೆವಟ್ಟಿರ್ವರಮಂ ಪರಸಿ ನಿನಗೆ ಮುನ್ನಮೇಜಿಲ್ ತರಿಸಿದೊಡೆ ಸುಯೋಧನನೇವಯಿಸಿ ನಿನ್ನಂ ಪೋಗಲ್ಲೇಬ್ಬು (ಪ.ಭಾ.ವ)

**ಆನಿರೆ ನೀಮಿದೇಕೆ ದಯೆಗೆಯ್ದಿರೊ ಮೀಂಗುಲಿಂಗೆ ಪೇಟಿಮೆಂ**
**ದಾ ನರನಾಥನಂ ತಿಳಿಪೆ ತನ್ಮನಿ ಭೂಭುಜನೆಯ್ದೆ ನಂಬಿ ಕಾ**
**ನೀನಸಮಂತು ಪಾಟಿಸುವೆನೊಯ್ಯನೆ ಮುಳ್ಳೊಳೆ ಮುಳ್ಳನೆಂದು ತಾ**
**ನೀನಯದಿಂದೆ ಪೆರ್ಚಿ ಪೊರೆದಜ್ಜಿಟೊಳಂದೊಡನುಂಡನಲ್ಲನೇ**
**(ಪ.ಭಾ. ೯-೬೭)**

ಎಂದು ತಿಳಿಸುತ್ತಾನೆ.

ಜನಪದ ಮಹಾಭಾರತದಲ್ಲಿ ಮಂತ್ರವಾದಿ ಕೊನುಗಯ್ಯ ಅಂಜನ ಹಚ್ಚಿ ತೋರಿಸುವುದ ಮೂಲಕ ಈ ರಹಸ್ಯವನ್ನು ದುರ್ಯೋಧನನಿಗೆ ತಿಳಿಸಿಕೊಡಲಾಯಿತ್ತೆಂಬ ವಿವರ ಪ್ರಸ್ತಾಪಿಸಲಾಗಿದೆ. ಅಂಜನದ ಮೂಲಕ ಎಲ್ಲವನ್ನು ನೋಡಿದ ದುರ್ಯೋಧನ 'ಕರ್ಣ ಸೂತಪುತ್ರನಲ್ಲ ಪಾಂಡವರ ಹಿರಿಯ' ಎಂದು ತಿಳಿದು ಅವನನ್ನು ಮತ್ತಷ್ಟು ಆತ್ಮೀಯತೆಯಿಂದ ಕಾಣುವನು. ಹೀಗೆ ಜನಪದ ಕಾವ್ಯದಲ್ಲಿ ಮಾಟಗಾರ ಕೊನುಗಯ್ಯನ ಮೂಲಕ ಕರ್ಣನನ್ನು ಕುಂತಿಯ ಮಗನೆಂದು ದುರ್ಯೋಧನನಿಗೆ ಗೊತ್ತಾಗುವಂತೆ ಹೇಳಲಾಗಿದೆ. ಪಂಪನಲ್ಲಿ ಬರುವ ಸತ್ಯಂತಪ ಋಷಿಯ ಪ್ರಸಂಗದಿಂದ ಪ್ರಭಾವಿತನಾಗಿ ಜನಪದ ಕವಿ ವಿಷಯವನ್ನು ಕೊನುಗಯ್ಯನ ಪ್ರಸಂಗದ ಮೂಲಕ ಹೇಳಿಸಿರಬಹುದಾದ ಸಂಭವನೀಯತೆಯ ಬಗ್ಗೆಯೂ ಯೋಚಿಸಬಹುದು. ಕೃಷ್ಣನ ಈ ಕಾರ್ಯತಂತ್ರದಿಂದ ಕೌರವನನ್ನು 'ಕದನವಿಲ್ಲದೆ ಕೊಂದ'ನೆಂದು ಕರ್ಣನ ಮೂಲಕ ಕವಿ ಹೇಳಿಸುವ ಮಾತು ಹೆಚ್ಚು ಪ್ರಸ್ತುತ ಮತ್ತು ಯುದ್ಧ ಪೂರ್ವದಲ್ಲಿಯೇ ಚೆಲ್ಲುವ ಬೆಳಕು[9] ಎಂಬ ರಾಗೌರವರ ಅಭಿಪ್ರಾಯ ಇಲ್ಲಿ ಗಮನಾರ್ಹ.

ಕೃಷ್ಣನ ಮಾತಿನಂತೆ ಕುಂತಿ ಕರ್ಣನಿಂದ ತೊಟ್ಟ ಬಾಣಗಳನ್ನು ತೊಡುವುದಿಲ್ಲ ಎಂಬ ಭಾಷೆಯನ್ನು ಪಡೆಯುತ್ತಾಳೆ. ಕುಂತಿ ಕರ್ಣರ ಭೇಟಿಯನ್ನು ಕುರಿತು ಪಂಪ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಪಾಂಡವರ ಕಡೆ ಬಾಯೆಂದ ತಾಯಿಗೆ ಕರ್ಣ ಕೊಡುವ ಉತ್ತರ;

**ಮೀಂಗುಲಿಗನೆನಾಗಿಯುಮಣಂ**
**ಮಾಂ ಗುಣಮನೆ ಬಿಸುಪೆನಿಲ್ಲ ನಿಮಗಂ ಮಗನಾ**
**ದಂಗೆನಗೆ ಬಿಸುಡಲಕ್ಕುಮೆ**
**ನೀಂಗಳ ಪಂಬಲನೆ ಬಿಸುಡಿಮಿನ್ನಡೆಯೊಳ್**
**(ಪ.ಭಾ. ೯-೮೫)**

ಸೂತನಾಗಿದ್ದಾಗಲೇ ಗುಣವನ್ನು ಬಿಡದವನು ಇನ್ನು ಕ್ಷತ್ರಿಯ ಅದರಲ್ಲೂ ಕುಂತಿಯ ಮಗನೆಂದ ಮೇಲೆ ಬಿಡಲು ಸಾಧ್ಯವೇ ಎನ್ನುತ್ತಾನೆ. ಅಂತಿಮವಾಗಿ ಕುಂತಿ ದಿವ್ಯಾಸ್ತ್ರವನ್ನು ತೊಡದಿರುವಂತೆ ಪ್ರತಿಜ್ಞೆ

ಮಾಡಿಸಿ ಬರುತ್ತಾಳೆ. ಈ ಸಂದರ್ಭದಲ್ಲಿ ಕರ್ಣ ಕುಂತಿಗೆ ತಾನು ಸತ್ತ ಮೇಲೆ ಧರ್ಮರಾಯನೇ ತನ್ನ ಶವಸಂಸ್ಕಾರ ಮಾಡಲಿ ಎಂದು ಹೇಳುವ ಮಾತು ವಿಶೇಷವಾಗಿದೆ. ಈ ವಿಷಯ ಪಂಪನಲ್ಲಿ ಕರ್ಣ ಸತ್ತನಂತರ ಕುರುಕ್ಷೇತ್ರ ಯುದ್ಧ ಮುಗಿದ ಮೇಲೆ ಎಲ್ಲರ ಸಂಸ್ಕಾರ ಮಾಡುವಾಗ ಕುಂತಿ ಬಂದು ಕರ್ಣನ ಕಳೇವರವನ್ನು ಅಪ್ಪಿಕೊಂಡು ಪಾಂಡವರಿಗೆ ನಿಮ್ಮ ಹಿರಿಯಣ್ಣನೆಂದು ಹೇಳುತ್ತಾಳೆ. ಜನಪದ ಭಾರತದಲ್ಲಾದರೋ ಕರ್ಣನ ಸಾವಿನೊಂದಿಗೇನೇ ಆ ರಹಸ್ಯ ಪಾಂಡವರಿಗೆ ತಿಳಿದು ಹೋಗುತ್ತದೆ. ಧರ್ಮರಾಯ ಕೊಂತಿಯ ಮಾತು ಕೇಳಿ 'ಇನ್ನು ಮುಂದೆ ಹೆಂಗಸರ ಬಾಯಲ್ಲಿ ರಹಸ್ಯ ಅನ್ನೋದು ನಿಲ್ಲದಾಗಲೀ' ಎಂದು ಶಾಪಕೊಡುತ್ತಾನೆ.

ದ್ರೋಣನ ನಂತರ ಕರ್ಣನಿಗೆ ಪಟ್ಟ ಕಟ್ಟುವುದನ್ನುನ ವಿರೋಧಿಸಿದ ಅಶ್ವತ್ಥಾಮನಿಗೆ;

**ನಿನ್ನಿಂದ ಹದಿನಾಲ್ಕು**
**ಲೋಕಗಳೆ ಸಿಕೋದಾದ್ರು**
**ನನಗೆ ಬೇಕಾಗಿಲ್ಲ**
**ನಮಷ್ಟಕೆ ನಮ್ಮನ್ನು**
**ಬಿಟ್ಟುಬಿಡು ಮಾರಾಯ**
**(ಜ.ಭಾ. ಪು. ೫೨೬)**

ಎಂಬ ದುರ್ಯೋಧನನ ಮಾತುಗಳು ಕರ್ಣನಲ್ಲಿಟ್ಟಿದ ಸ್ನೇಹದಲ್ಲಿನ ಪ್ರಾಮಾಣಿಕತೆಯನ್ನು ಬಿಂಬಿಸುತ್ತದೆ. ಇಂಥದೇ ಮಾತನ್ನು ಪಂಪಭಾರತದಲ್ಲಿ ಕೌರವನ ಬಾಯಿಂದಲೇ ಕರ್ಣ ತೀರಿಕೊಂಡ ಅನಂತದಲ್ಲಿ ಬಂದಿದೆ. ಅಲ್ಲಿಯೂ ಅಶ್ವತ್ಥಾಮನು ಕರ್ಣನನ್ನು ಜರಿದು ಮಾತನಾಡಿದಾಗ ದುರ್ಯೋಧನ ಕೊಟ್ಟ ಉತ್ತರ ಹೀಗಿದೆ;

**ನಿನ್ನಿಂದಂ ತ್ರಿಭುವನ ರಾ**
**ಜ್ಯೋನ್ನತಿ ಬಂದೆನಗೆ ಸಾರ್ಗುಮಪ್ಪೊಡಮೊಲ್ಲೆಂ**
**ನೀನ್ನುಡಿದು ಬದುಕಿದ್ಪೈ ಪೆಱ**
**ರೆನ್ನಿದಿರೊಳ್ ನುಡಿದು ಕರ್ಣನಂ ಬರ್ದುಕುವರೇ**
**(ಪ.ಭಾ. ೧೩-೨೭)**

ಎಂಬ ಪಂಪನ ದುರ್ಯೋಧನನ ಮಾತಿನಲ್ಲಿ ಇನ್ನು ಸ್ಪಷ್ಟ ಹಾಗೂ ಖಚಿತವಾಗಿರುವುದನ್ನು ಕಾಣಬಹುದು. ಇಲ್ಲಿ ಜನಪದ ಮಹಾಭಾರತ ಹಾಗೂ ಪಂಪಭಾರತದ ಕವಿಗಳಿಬ್ಬರೂ ಸ್ವಾಭಿಮಾನಿ ಕೌರವನನ್ನು ಚಿತ್ರಿಸಿದ್ದಾರೆ. ಇಬ್ಬರೂ ಕರ್ಣನ ಪರ ದೃಷ್ಟಿಕೋನವನ್ನೇ ಹೊಂದಿದ್ದಾರೆ. 'ಜನಪದ ಕವಿ ಪಂಪನಿಂದ ಪ್ರಭಾವಿತನಾಗಿರುವುದು ಸ್ಪಷ್ಟವೇ ಮಾರ್ಗ ಯಾವುದುಗೊತ್ತಾಗದು ಯಕ್ಷಗಾನ ಬಯಲಾಟವಿರಬಹುದೇ? ಸಂದೇಹ'[೫] ಎಂಬ ಮಾತು ವಿಚಾರರ್ಹವಾಗಿದೆ.

ಕರ್ಣ ತನ್ನ ಗೆಳೆಯನ ಮೇಲಿದ್ದ ಸ್ನೇಹದ ದ್ಯೋತಕವಾಗಿ ವೃದ್ಧರಾಗಿದ್ದ ಭೀಷ್ಮರಿಗೆ ಪಟ್ಟಕಟ್ಟಿದಾಗ ವಿರೋಧಿಸುತ್ತಾನೆ. ಇದಕ್ಕೆ ಕಾರಣ ಕರ್ಣನಿಗೆ ದುರ್ಯೋಧನನ ಮೇಲಿದ್ದ ಪ್ರೀತಿ. ಅಲ್ಲದೆ ಭೀಷ್ಮರಿಗೆ ಪಾಂಡವರ ಮೇಲೆ ಪ್ರೀತಿಯಿರುವುದರಿಂದ ಅವರ ವಿರುದ್ಧ ಯುದ್ಧ ಮಾಡುತ್ತಾರೆಯೇ ಎಂಬ ಸಂಶಯವನ್ನು ವ್ಯಕ್ತಪಡಿಸುತ್ತಾನೆ. ಈ ಸಂದರ್ಭದಲ್ಲಿ ಕರ್ಣನಿಗೂ ದ್ರೋಣಾದಿಯವರಿಗೂ ಸಂವಾದ ನಡೆಯುತ್ತದೆ. ಕುಲದ ಪ್ರಶ್ನೆ ಮತ್ತೆ ಅಲ್ಲಿ ಉದ್ಭವಿಸುತ್ತದೆ.

**ಕುಲಮನೆ ಮುನ್ನಮುಗ್ಗಡಿಪಿರೇಂ ಗಳ ನಿಮ್ಮ ಕುಲಂಗಳಾಂತು ಮಾ**
**ರ್ಮಲೆವನನಟ್ಟಿ ತಿಂಬುವೆ ಕುಲಂ ಕುಲಮಲ್ತು ಚಲಂ ಕುಲಂ ಗುಣಂ।**
**ಕುಲಮಭಿಮಾನವೊಂದೆ ಕುಲಮಣ್ಣು ಕುಲಂ ಬಗೆವಾಗಳೀಗಳೀ**
**ಕಲಹದೊಳಣ್ಣ ನಿಮ್ಮ ಕುಲವಾಕುಲಮಂ ನಿಮಗುಂಟುಮಾಡುಗುಂ॥**
**(ಪ.ಭಾ. ೧೦-೨೧)**

ಕುಲಹೀನನೆಂದು ಹೀಯಾಳಿಕೆಗೆ ಒಳಗಾಗಿದ್ದ ಕರ್ಣ ತಾನು ಕುಲಜನೆಂದು ತಿಳಿದಾಗಿನ ಮಾತಿದಾಗಿದೆ.

ಮುಂದೆ ಕರ್ಣಾರ್ಜುನರ ಕಾಳಗದ ವರ್ಣನೆಯಲ್ಲಿ ಕರ್ಣನ ವೀರತ್ವದ ವರ್ಣನೆಯಿದೆ. ವೀರನಾದ ಕರ್ಣನಿಗೆ ದೈವ ಬಲವಿಲ್ಲದೆ ತನ್ನೊಡಲನ್ನು ಬಲಿಕೊಡಬೇಕಾಯಿತು. ಕರ್ಣಾರ್ಜುನರ ಕಾಳಗ ಒಂದು ನಿರ್ಣಾಯಕ ಘಟ್ಟವಾಗಿದೆ. ಕರ್ಣ ಸರ್ಪಾಸ್ತ್ರ ಪ್ರಯೋಗಿಸಿದಾಗ ಕೃಷ್ಣ ಅರ್ಜುನನ ರಥವನ್ನು ನೆಲಕ್ಕೆ ತುಳಿದು ಬಿಟ್ಟಾಗ ಅಸ್ತ್ರವಾಪಸ್ಸು ಬರಲು 'ತೊಟ್ಟ ಬಾಣವನ್ನು ತೊಡು' ಎಂದು ಶಲ್ಯ ಒತ್ತಾಯಿಸಿದಾಗ ನಿರಾಕರಿಸಿದ ಕರ್ಣನನ್ನು ತ್ಯಜಿಸಿ ಶಲ್ಯ ಹೊರಟು ಹೋಗುವ ಪ್ರಸಂಗ ಯಥಾವತ್ತಾಗಿದೆ.

ಜನಪದ ಮಹಾಭಾರತದಲ್ಲಿ ಕರ್ಣನ ಸಾವಿನ ಸಂದರ್ಭದಲ್ಲೂ ಕೃಷ್ಣನು ತನ್ನ ಕುತಂತ್ರವನ್ನು ಬಿಡದೆ ಕರ್ಣನ ಕುಂಡಲಗಳನ್ನು ಪಡೆಯಲು ವಿಪ್ರನ ವೇಷದಲ್ಲಿ ಬಂದು ಹೃದಯದ ಅಮೃತ ಕಳಸದಿಂದ ಧಾರೆಯೆರೆದು ಕೊಡು ಎಂದು ಹೇಳುತ್ತಾನೆ. ಕರ್ಣ ದಾನ ನೀಡಿದ ಮೇಲೆ ಕೃಷ್ಣ ತನ್ನ 'ಪರಮಾತ್ಮ' ರೂಪದಲ್ಲಿ ದರ್ಶನ ಕೊಟ್ಟನೆಂಬುದು ಜನಪದ ಗಾಯಕನ ನಂಬಿಕೆ. ಇದೇ ನಂಬಿಕೆಯಲ್ಲಿ ಕವಿ ಇಡೀ ಕಾವ್ಯವನ್ನು ನಡೆಸಿರುವುದನ್ನು ಕಾಣಬಹುದು.

ಜನಪದ ಭಾರತದ ಕರ್ಣನ ಪಾತ್ರವು ಬಹುಮಟ್ಟಿಗೆ ಪಂಪಭಾರತದ ಕರ್ಣ ಪಾತ್ರವನ್ನೇ ಹೆಚ್ಚಾಗಿ ಹೋಲುತ್ತದೆ. ಕುಮಾರವ್ಯಾಸನ ಕರ್ಣನ ಪಾತ್ರಕ್ಕೆ ಅಷ್ಟೊಂದು ಸಾಮ್ಯ ಇಲ್ಲದಿರುವುದನ್ನು ಗಮನಿಸಬಹುದು. ಸತ್ಯಂತಪ ಋಷಿ ಪ್ರಸಂಗ ಪಂಪ ಮತ್ತು ಜನಪದಭಾರತದಲ್ಲಿ ಬಂದರೆ, ಅಮೃತ

ಕಳಶದಿಂದ ಕರ್ಣ ಕುಂಡಲವನ್ನು ಧಾರೆ ಎರೆಯುವ ಪ್ರಸಂಗ ಜನಪದ ಹಾಗೂ ಕುಮಾವ್ಯಾಸರಲ್ಲಿದೆ. ಒಟ್ಟಾರೆ ಕರ್ಣ ಪಾತ್ರ ಮೂವರಲ್ಲೂ ಸಾಮ್ಯವೈಷಮ್ಯಗಳಿಂದ ಕೂಡಿದೆ.

**ದುರ್ಯೋಧನ:**

ಪಂಪ ತನ್ನ ಕಾವ್ಯದ ಉದ್ದೇಶವನ್ನು ಹೇಳುವ ಪದ್ಯದಲ್ಲಿ ಮೊದಲಿಗೆ ಬರುವುದು 'ಛಲದೊಳ್ ದುರ್ಯೋಧನಂ...' ಎಂದೂ ಹೇಳುತ್ತಾ ಇವರ್ಗಳಿಂ ಭಾರತಂ ಲೋಕಪೂಜ್ಯಂ ಎಂಬಲ್ಲಿ ಛಲಕ್ಕೆ ದುರ್ಯೋಧನನೇ ಪ್ರತಿಮೆಯಾಗಿದ್ದಾನೆ. ಅಲ್ಲದೇ ಕವಿ ಅವನನ್ನು ದುರಂತ ನಾಯಕನೆಂದು ಸಹಾನೂಭೂತಿಯಿಂದ ಚಿತ್ರಿಸಿದ್ದಾನೆ. ಪಂಪ ದುರ್ಯೋಧನನ್ನು ತನ್ನ ಕಾವ್ಯದಲ್ಲಿ ಅಭಿಮಾನಧನಮ್ ಸುಯೋಧನ ಎಂದು ಸಂಭೋದಿಸುತ್ತಾ ಅಭಿಮಾನವನ್ನೇ ನೆಚ್ಚಿದವನು, ಮೆಚ್ಚಿದವನು, ಬದುಕಿದವನು ಎಂಬುದಾಗಿ ನಿರೂಪಿಸಿದ್ದಾನೆ. ಜೈನರ ದೃಷ್ಟಿಯಲ್ಲಿ ಪ್ರತಿಯೊಬ್ಬರಲ್ಲೂ ಗುಣದೋಷಗಳಿರುತ್ತವೆ, ಅದರಿಂದಾಗಿಯೇ ಜೈನ ಕವಿಗಳು ಕರ್ಣ, ದುರ್ಯೋಧನನ ಉದಾತ್ತ ಗುಣಗಳನ್ನು ಎತ್ತಿ ತೋರಿಸಿದ್ದಾರೆ.

ದುರ್ಯೋಧನನು ಪಡುವ ಪಾಡು, ಬವಣೆ, ಒಳತೋಟಿ, ಒತ್ತಡ ಕೆಳೆತನ, ಇವುಗಳಿಂದಾಗಿ ಸಹಾನುಭೂತಿಗಳಿಸುತ್ತಾನೆ. ಪಂಪ ತನ್ನ ಆಶ್ರಯದಾತ ಅರಿಕೇಸರಿಗೂ ತನಗೂ ಇದ್ದ ಸ್ನೇಹವನ್ನು ದುರ್ಯೋಧನ ಮತ್ತು ಕರ್ಣರ ನಡುವಿನ ಸ್ನೇಹವನ್ನಾಗಿಸಿದ್ದಾನೆ ಎನ್ನಬಹುದು. ಹಾಗಾಗಿಯೇ ಗೆಳೆತನಕ್ಕೆ ಪ್ರತಿಮೆಯಾಗಿರುವವರು ದುರ್ಯೋಧನ ಕರ್ಣರ ಸ್ನೇಹ ಸಂಬಂಧ. ಆದರೆ ಪಂಪನೂ ಎಲ್ಲೋ ಒಂದು ಕಡೆ ಎಡವಿದ್ದಾನೆ ಎನ್ನುವುದಕ್ಕೆ ಕರ್ಣನ ಜನ್ಮರಹಸ್ಯವನ್ನರಿತ ದುರ್ಯೋಧನ ಮುಳ್ಳನ್ನು ಮುಳ್ಳಿನಿಂದಲೇ ಪಾಟಿಸುವುದಾಗಿ ತೀರ್ಮಾನ ತಳೆದನೆಂಬುದು ಆತನ ಪಾತ್ರದ ಕಪ್ಪುಚುಕ್ಕೆ. ಇದರಿಂದ ಕರ್ಣನೊಂದಿಗೆ ಇರುವ ಗೆಳೆತನವಷ್ಟೂ ಕಪಟನಾಟಕವಾಗುತ್ತದೆ. ಇದನ್ನು ಹೊರತು ಪಡಿಸಿದರೆ ಉಳಿದಂತೆ ಕರ್ಣನೊಂದಿಗಿನ ಸಖ್ಯ ಸಹ್ಯವೇ ಆಗಿದೆ.

ದುರ್ಯೋಧನನ ಹುಟ್ಟೇ ವಿಶೇಷವಾದದ್ದೆನ್ನಬಹುದು. ಕುಂತಿಗೆ ಮಗುವಾಯಿತ್ತೆಂದು ಕೇಳಿದ ಗಾಂಧಾರಿ ಮತ್ಸರದಿಂದ ಕುಲಕ್ಕೆ ಹಿರಿಯ ಮಗನನ್ನು ಪಡೆಯಬೇಕೆಂದಿದ್ದೆ ಆದರೆ ಈಗಾಗಲೇ ಕುಂತಿ ಪಡೆದಳು ಇನ್ನೇಕೆ ಮಕ್ಕಳೆಂದು ಗರ್ಭವನ್ನು ಹೊಸಕಿಕೊಂಡಾಗ ಕಾಳಕೂಟವೆಂಬ ವಿಷದ ಮೊಳಕೆ ಅತಿಶಯವಾಗಿ ಹುಟ್ಟಿದ ಹಾಗೆ ಗಾಂಧಾರಿಯ ಗರ್ಭದಿಂದ ನೂರೊಂದು ಭ್ರೂಣ ಹುಟ್ಟಿದವು.

ಅವನ್ನು ನೋಡಿ ಕೋಪಿಸಿ ಇವನ್ನೆಲ್ಲ ಬಿಸಾಡಿ ಎನ್ನುತ್ತಿರಲು ವ್ಯಾಸರು ಅಲ್ಲಿಗೆ ಬಂದು ಆ ಭ್ರೂಣಗಳನ್ನೆಲ್ಲ ತುಪ್ಪದ ಕೊಡದಲ್ಲಿ ಸುರಕ್ಷಿತವಾಗಿಡಿಸಿದರು ಆ ನೂರರಲ್ಲಿ ಮೊದಲಿಗೆ ಜನಿಸಿದವನೇ ದುರ್ಯೋಧನ, ಅವನು ಜನಿಸಿದಾಗ ಅಪಶಕುನವಾದವು ಹಾಗೇ ಉಂಟಾದ ಅಪಶಕುನಗಳನ್ನು ಕಂಡು ಬುದ್ಧಿವಂತರು ಈತನಿಂದಲೇ ವಂಶನಾಶವಾಗುವುದೆಂದು ನುಡಿದರು. ಹೀಗೆ ದುರ್ಯೋಧನನ ಜನನವೇ ಮತ್ಸರದಿಂದಾದದ್ದು. ಹಾಗಾಗಿ ಅವನಲ್ಲಿ ಮುಂದೆ ಸ್ವಭಾವತಃ ಮತ್ಸರವೇ ತುಂಬಿತು. ಆ ಮತ್ಸರವೇ ಅವನ ಅವನತಿಗೂ ಕಾರಣವಾಯಿತು.

ಕುಮಾರವ್ಯಾಸ ದುರ್ಯೋಧನನ ಪಾತ್ರವನ್ನು ಮೂಲಕ್ಕೆ ಹತ್ತಿರವಾಗಿರುವಂತೆ ಚಿತ್ರಿಸಿದ್ದಾನೆ, ಆದರೂ ವ್ಯಾಸಭಾರತಕ್ಕಿಂತ ವಿಶಿಷ್ಟವಾಗಿದೆ. ಇದಕ್ಕೆ ಪ್ರೇರಣೆ ಪಂಪನೇ ಇರಬಹುದು. ಕುಮಾರವ್ಯಾಸ ದುರ್ಯೋಧನನನ್ನು ದುಷ್ಟಚತುಷ್ಟಯರಲ್ಲಿ ಗುರುತಿಸಿದ್ದಾನೆ. ಯುದ್ಧ ಪೂರ್ವದ ಅವನ ದುರ್ವರ್ತನೆಗಳ ಬಗೆಗೆ ಸಾಕಷ್ಟು ಒತ್ತುಕೊಟ್ಟಿರುವ ಕವಿ ಯುದ್ಧ ಪರ್ವಗಳಲ್ಲಿ ಅವನ ವೀರ ನಿಲುವನ್ನು ಆಗಾಗ ಪ್ರಶಂಸಿರುವುದು ಆಶ್ಚರ್ಯವೇ ಕೌರವ-ಪಾಂಡವರ ವಿದ್ಯಾಭ್ಯಾಸದ ಅವಧಿಯಲ್ಲೇ ಈ ಮಾತ್ಸರ್ಯ ಕಂಡುಬರುತ್ತದೆ. ತನ್ನ ಪ್ರತಿಸ್ಪರ್ಧಿ ಹಾಗೂ ಬದ್ಧದ್ವೇಷಿಯಾದ ಭೀಮನ ಸಾವಿಗೆ ಅನೇಕ ಪ್ರಯತ್ನಗಳನ್ನು ಮಾಡಿ ವಿಫಲನಾಗುತ್ತಾನೆ.

ಜನಪದ ಭಾರತದಲ್ಲಿ ಬರುವ ಪ್ರಮುಖ ಪಾತ್ರಗಳಲ್ಲಿ ದುರ್ಯೋಧನನ ಪಾತ್ರ ಒಂದು. ಪಂಪ ಮತ್ತು ಕುಮಾರವ್ಯಾಸರ ಕಾವ್ಯದಲ್ಲಿನ ದುರ್ಯೋಧನನ ಪಾತ್ರಕ್ಕೂ ಜನಪದ ಕವಿ ಚಿತ್ರಿಸಿರುವ ದುರ್ಯೋಧನನ ಪಾತ್ರಕ್ಕೂ ಭಿನ್ನತೆಯಿದ್ದೂ ವೈಶಿಷ್ಟ್ಯಪೂರ್ಣವಾಗಿದೆ. ಜನಪದ ಕವಿ ದುರ್ಯೋಧನನ ಜನನಕ್ಕೂ ಒಂದು ಪುರಾಣ ಕಥೆಯನ್ನು ಹೆಣದಿದ್ದಾನೆ. ಅದೆಂದರೆ ಚಿತ್ರಾಂಗಿಯು ತಪಸ್ಸು ಮಾಡುತ್ತಿದ್ದ ನಾಗರುಸಿಯ ಕಣ್ಣನ್ನು ಗಂಡನಿಂದ ಚುಚ್ಚಿಸಿ ನೋವಿನಿಂದ ಒದ್ದಾಡುತ್ತಿದ್ದ ರುಸಿಯ ಜಡೆಯೆಳೆದು ಹೀಯಾಳಿಸುತ್ತಿರುವಾಗ ಕೋಪಗೊಂಡ ಋಷಿ ನಾಗಾನೆಂದು ಕರೆದಾಗ ಅಲ್ಲಿದ್ದ ಘಟಸರ್ಪವೊಂದು ಬಂದು ಅವಳ ಗಂಡನನ್ನು ಕಚ್ಚಿ ಕೊಂದಿತು. ಇದನ್ನು ಕಂಡ ಚಿತ್ರಾಂಗಿ ಮೂರ್ಛೆಗೊಳ್ಳಲು ಸರ್ಪ ಅವಳ ಉದರ ಸೇರಿ ಅಲ್ಲಿ ನೂರೊಂದು ಮೊಟ್ಟೆಯಿಟ್ಟು ಹೊರ ಬಂದಿತು. ಈ ಮೊಟ್ಟೆಗಳೇ ಮುಂದೆ ಚಿತ್ರಾಂಗಿ ಗಾಂಧಾರಿಯಾಗಿ ಜನಿಸಿದಾಗ ಅವಳಿಂದ ಜನ್ಮ ಪಡೆದ ದುರ್ಯೋಧನಾದಿ ನೂರೊಂದು ಕೌರವರು. ಹೀಗೆ ದುರ್ಯೋಧನನ ಜನನಕ್ಕೆ ಒಂದು ಪೌರಾಣಿಕ ಕಥೆಯನ್ನು ಚಿತ್ರಿಸಲಾಗಿದೆ.

ಗಾಂಧಾರಿ ಧೃತರಾಷ್ಟ್ರರಿಗೆ ಮಕ್ಕಳಿಲ್ಲವೆಂದು ಕೊರಗುತ್ತಿದ್ದಾಗ ಅಲ್ಲಿಗೆ ಬಂದ ವ್ಯಾಸರು ಪ್ರಸಾದವನ್ನು ನೀಡಿದರು. ಅದರ ಪ್ರಯುಕ್ತ ಗರ್ಭವತಿಯಾದ ಗಾಂಧಾರಿಗೆ ಒಂಬತ್ತು ತಿಂಗಳು ತುಂಬಿದರೂ ಹೆರಿಗೆಯಾಗಲಿಲ್ಲ ಅಷ್ಟಲ್ಲದೇ ಹೊಟ್ಟೆಯಲ್ಲಿ ಹಾವುಗಳು ಹರಿದಾಡಿದಂತೆ ಭಾಸವಾಗಿ ಅವಳು ಹೆದರಿಕೆಯಿಂದ ಹೊಟ್ಟೆ ಹೊಸಕಿಕೊಂಡಾಗ ನೂರೊಂದು ಪಿಂಡಗಳು ಜನಿಸಿದವು ವ್ಯಾಸರು ಅದನ್ನು ತುಪ್ಪದ ಗಡಿಗೆಯಲ್ಲಿ ಸಂರಕ್ಷಿಸಿದರು. ಮುಂದೆ ಆ ಗಡಿಗೆಯಿಂದ ಮೈಯಲ್ಲ ನಾಗರ ಉರುಪಿನಿಂದ ಕೂಡಿದ ಮಗು ಜನಿಸಿತು. ಹೀಗೆ ನೂರಾ ಒಂದು ಮಡಿಕೆಯಿಂದ ನೂರು ಜನ ಗಂಡು ಮಕ್ಕಳು ಒಬ್ಬಳು ಹೆಣ್ಣು ಮಗು ಜನಿಸಿತು, ಮೊದಲಿಗೆ ಜನಿಸಿದವನಿಗೆ ದುರ್ಯೋಧ, ದುರ್ವಿದ ಮುಂತಾಗಿ ನಾಮಕರಣ ಮಾಡಲಾಯಿತು.

ಜನಪದ ಕವಿ ದುರ್ಯೋಧನನ ಸರ್ಪ ಸೇಡಿಗೆ ಅನುಗುಣವಾಗಿ ಅವನನ್ನು ಸರ್ಪದ ಮೊಟ್ಟೆಯಿಂದ ಜನಿಸಿದವನೆಂದು ಜೊತೆಗೆ ಮೈಯೆಲ್ಲ ಸರ್ಪದ ಉರುಪು ಇರುವವನೆಂದು ಚಿತ್ರಿಸಿದ್ದಾನೆ. ಇದಕ್ಕೆ ಬಹುಮಟ್ಟಿಗೆ ಕಾರಣ ದುರ್ಯೋಧನನ ಬಗ್ಗೆ ಆಗಾಗಲೇ ಚಾಲ್ತಿಯಲ್ಲಿದ್ದ ಅವನ ಮತ್ಸರ, ಸೇಡು, ದುಷ್ಟತೆಗಳೇ ಕಾರಣವೆನ್ನಬಹುದು.

ಬಾಲ್ಯದಲ್ಲಿ ಕೌರವರಿಗೂ ಪಾಂಡವರಿಗೂ ನಾನಾ ರೀತಿಯ ಆಟಪಾಟಗಳು ಏರ್ಪಟ್ಟಿದ್ದರೂ, ದುರ್ಯೋಧನ ಪಾಂಡವರ ಬಗ್ಗೆ ಬಾಲ್ಯದಿಂದಲೂ ಮತ್ಸರ ದ್ವೇಷ, ಹಗೆತನ ಮುಂತಾದ ಗುಣಗಳನ್ನು ಬೆಳಸಿಕೊಳ್ಳಲು ಪೂರಕವಾದ ವಾತಾವರಣವನ್ನು ನಿರ್ಮಿಸಿಕೊಳ್ಳತೊಡಗಿದನು. ಮುಂದೆ ದ್ರೋಣರ ಗುರುತನದಲ್ಲಿ ಶಸ್ತ್ರ ಶಿಕ್ಷಣ ಪಡೆದರೂ, ದುರ್ಯೋಧನ ಗದಾ ಪ್ರಾವೀಣ್ಯವನ್ನು ಸಂಪಾದಿಸಿಕೊಳ್ಳುತ್ತಾನೆ. ಮುಂದೆ ಅರ್ಜುನನು ಪ್ರದರ್ಶಿಸಿದ ಬಿಲ್ವಿದ್ಯೆಯನ್ನು ಪ್ರದರ್ಶಿದ ಕರ್ಣನನ್ನು ದುರ್ಯೋಧನ ಸ್ನೇಹಿತನನ್ನಾಗಿ ಮಾಡಿಕೊಂಡು ಅಂಗದೇಶದ ಅಧಿಪತಿಯನ್ನಾಗಿ ಮಾಡುತ್ತಾನೆ. ಕರ್ಣನ ಕುಲದ ಬಗ್ಗೆ ಅವಹೇಳನಕಾರಿಯಾಗಿ ಮಾತಾಡುವಾಗ ಅದಕ್ಕೆ ತಕ್ಕ ಉತ್ತರ ನೀಡುವವನು ದುರ್ಯೋಧನ:

**ವಿದ್ಯೆಗೆ ಕುಲವ್ಯಾಕೆ**
**ವೀರಗೆ ಕುಲವ್ಯಾಕೆ**
**ನೀರು ಬುದ್ಧಿ, ಗಾಳಿ ಇವುಗಳಿಗೆ ಕುಲವ್ಯಾಕೆ**
**ನೀನು ಅಂಗರಾಜ್ಯಕೆ ದೊರೆ ಎಂದು ಸಾರಿದ...**

**(ಜ.ಭಾ. ಪು. ೮೬)**

ಇಲ್ಲಿನ ಅವನ ವಾದ ಸಮಂಜಸವಾದದು ಎಂಬುದರಲ್ಲಿ ಸಂದೇಹವಿಲ್ಲವಾದರೂ ಅದು ರಾಜಕೀಯ ಹಾಗೂ ಸ್ವಾರ್ಥ ಪ್ರೇರಿತ ಎಂಬುದು ಅಷ್ಟೇ ಖಚಿತ ಆದರೂ ದುರ್ಯೋಧನ ಕರ್ಣನನ್ನು

ಅಂಗಾಧಿಪತಿಯನ್ನಾಗಿ ಮಾಡುವುದರ ಮೂಲಕ ಮಾತನ್ನು ಕ್ರಿಯೆಯಾಗಿಸಿದ್ದು ವಿಶೇಷ. ಜಾತಿವ್ಯವಸ್ಥೆಯ ವಿಚಾರವಾಗಿ ಅವನು ತೆಗೆದುಕೊಂಡ ನಿಲುವು ಹೆಚ್ಚು ಪ್ರಸ್ತುತವಾದುದ್ದಾಗಿದೆ. ಕರ್ಣ ದುರ್ಯೋಧನರ ನಡುವಣ ಸ್ನೇಹ ಗಟ್ಟಿಗೊಳ್ಳಲು ಇದು ಕಾರಣವಾಯಿತು. ಆದರೆ ಕರ್ಣನ 'ದಾನಶೂರ' ಕೀರ್ತಿ ಹರಡಿದ್ದನ್ನು ಕಂಡು ಅಸೂಯೆಗೊಂಡ ಶಕುನಿ ತನ್ನ ಸೋದರಳಿಯನ ಕಿವಿ ಹಿಂಡುತ್ತಾನೆ. ಶಕುನಿಯ ಮುಖ್ಯ ಉದ್ದೇಶ ದುರ್ಯೋಧನನ ಮಾನ ತೆಗೆಯುವುದೇ ಆಗಿತ್ತು. ಅದರ ಪ್ರಕಾರ 'ದಾನಶೂರ ದುರ್ಯೋಧನ'ನೆಂದು ಮನೆಯ ಮುಂದೆ ಬೋರ್ಡ್ ಹಾಕುವಂತೆ ಮಾಡಿದ. ಈ ಪ್ರಸಂಗದಲ್ಲಿ ಜನಪದ ಕವಿ ಸಾಮಾನ್ಯನಾದ ವೆಂಕಟೇಶನೆಂಬ ಪಾತ್ರದ ಮೂಲಕ ಅವನ ತಂದೆಯ ಶವಸಂಸ್ಕಾರಕ್ಕೆ ಸೌದೆ ಬೇಡುವ ಪ್ರಸಂಗವನ್ನು ಸೃಷ್ಟಿಸಿ ಆ ಮೂಲಕ ದುರ್ಯೋಧನನ ವ್ಯಕ್ತಿತ್ವವನ್ನು ಛಿದ್ರಗೊಳಿಸುತ್ತಾನೆ. ಈ ಪ್ರಸಂಗ ಜನಪದ ಕವಿಯದೇ ಆಗಿದೆ ಎನ್ನಬಹುದು. ಮುಂದೆ ಇದೇ ಸಂಕಷ್ಟಕ್ಕೆ ಕರ್ಣ ಸಹಾಯ ನೀಡಿದಾಗ ತನ್ನ ಮನೆ ಮುಂದೆ ಹಾಕಿದ್ದ ಬೋರ್ಡ್‌ನ್ನು ಕಿತ್ತೆಸೆಯುವುದರ ಮೂಲಕ ದುರ್ಯೋಧನ ತನ್ನ ಘನತೆಯನ್ನು ಎತ್ತಿ ಹಿಡಿದಿದ್ದಾನೆ. ಆದರೆ ಶಕುನಿಯ ಮಿತ್ರನಾದ ಮಲೆಯಾಳಿ ಮಾಂತ್ರಿಕ ಕೊನುಗಯ್ಯನ ಮೂಲಕ ಅಂಜನ ವಿದ್ಯೆಯ ಮೂಲಕ ಕರ್ಣ ಜನ್ಮರಹಸ್ಯವನ್ನು ತಿಳಿದು ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುತ್ತೇನೆಂದುಕೊಂಡು ಪಾಂಡವರ ಮೇಲೆ ಸೇಡು ತೀರಿಸಿಕೊಳ್ಳಲು ಕರ್ಣನನ್ನು ದಾಳವಾಗಿ ಬಳಸಿಕೊಳ್ಳುತ್ತಾನೆ. ಈ ಪ್ರಸಂಗ ಕನ್ನಡನಾಡಿನ ಯಾವುದೇ ಮೂಲದಿಂದ ಬಂದುದ್ದಾಗಿರಬೇಕು. ಶಕುನಿಯ ತಂತ್ರದಂತೆ ದುರ್ಯೋಧನ ಧರ್ಮರಾಜನನ್ನು ಪಗಡೆಯಾಟಕ್ಕೆ ಕರೆದು ರಾಜ್ಯಕೋಶಗಳನ್ನು ತನ್ನನ್ನು ತಮ್ಮಂದಿರನ್ನು ಕೊನೆಗೆ ದ್ರೌಪದಿಯನ್ನು ಪಣವಾಗಿಟ್ಟು ಸೋಲುತ್ತಾನೆ. ಅನಂತರ ದ್ರೌಪದಿಯ ಸೀರೆ ಸೆಳೆಯಬೇಕೆಂದು ದುರ್ಯೋಧನನೇ ಹೇಳುತ್ತಾನೆ. ಇದಕ್ಕೆ ಅವನು ಕೊಡುವ ಕಾರಣ ಹಿಂದೆ ತಾನು ಜಾರಿ ಬಿದ್ದಾಗ ನೋಡಿ ನಕ್ಕಿದ್ದಳು. ದ್ರೌಪದಿಯ ವಸ್ತ್ರಾಪಹರಣಕ್ಕೆ ದುಶ್ಯಾಸನನಿಗೆ ಆದೇಶ ನೀಡುತ್ತಾನೆ. ಈ ಘೋರ ಕೃತ್ಯಕ್ಕೆ ಕಾರಣನಾದ ದುರ್ಯೋಧನನ ವ್ಯಕ್ತಿತ್ವ ಇದರಿಂದ ಧಕ್ಕೆಯುಂಟಾಗಿದೆ.

ದುರ್ಯೋಧನ ಗಂಧರ್ವರ ಬಂಧನಕ್ಕೊಳಗಾಗಿದ್ದಾಗ ಅವನನ್ನು ಬಿಡಿಸಿದವಳು ದ್ರೌಪದಿ. ಇಲ್ಲಿ ದುರ್ಯೋಧನನ ಮತ್ಸರ ಹಾಗೂ ಅಸೂಯೆಯೇ ಅವನ ಅವನತಿಗೆ ಕಾರಣವಾಗುತ್ತದೆ. ಅವನ ಮತ್ಸರವೇ ದೂರ್ವಾಸರನ್ನು ಪಾಂಡವರ ಬಳಿ ಕಳುಹಿಸಿ ಅವರಿಂದ ಆತಿಥ್ಯವನ್ನು ಸ್ವೀಕರಿಸುವಂತೆ ಮಾಡಲು ಪ್ರಯತ್ನಿಸಿದರೂ ಅಲ್ಲೂ ಅವನಿಗೆ ಸೋಲುಂಟಾಗುತ್ತದೆ. ದುರ್ಯೋಧನ ಅತಿ ಚಾಣಾಕ್ಷನು ಸಹ ಹೌದು. ವಿರಾಟ ನಗರದಲ್ಲಿದ್ದ ಕೀಚಕ ಗಂಧರ್ವರಿಂದ ಹತನಾದನೆಂಬ ಸುದ್ದಿಯನ್ನು ಕೇಳಿ, ಅದು ಭೀಮನ ಕೆಲಸವೆಂದು ನಿಶ್ಚಯಿಸಿ ಸತ್ಯಾಸತ್ಯತೆಯನ್ನರಿಯಲು ಜಟ್ಟಿಗಳನ್ನು ಕಳುಹಿಸುತ್ತಾನೆ.

ಯಾವಾಗ ತನ್ನ ಕಡೆಯ ಜಟ್ಟಿಗಳು ಸೋತು ಬರುತ್ತಾರೋ ಆಗ ದುರ್ಯೋಧನನಿಗೆ ನಿಶ್ಚಯವಾಗುತ್ತದೆ. ಪಾಂಡವರು ವಿರಾಟನ ನಗರದಲ್ಲೇ ಮರೆವಾಸ ಮಾಡುತ್ತಿದ್ದಾರೆಂದು. ಅವರನ್ನು ಹೊರತರಲು ವಿರಾಟನ ಹಸುಗಳನ್ನು ಸೆರೆಹಿಡಿಯುತ್ತಾನೆ.

ಕೃಷ್ಣ ರಾಯಭಾರ ಸಂದರ್ಭದಲ್ಲಿ ಸಭೆಗೆ ಬಂದ ಕೃಷ್ಣನಿಗೆ ಎಲ್ಲರೂ ಮಾರ್ಯಾದೆ ನೀಡಿದರೂ ಈತ ಮಾತ್ರ ಉದಾಸೀನದಿಂದ ಮೇಲೇಳಲಿಲ್ಲ. ಕೃಷ್ಣ ಹೆಬ್ಬೆರಳಿನಿಂದ ನೆಲ ಒತ್ತಲು ಸಿಂಹಾಸನ ಉರುಳಿ ಪರಮಾತ್ಮನ ಪಾದದ ಮೇಲೆ ಬಿದ್ದ. ಕೃಷ್ಣನು ದುರ್ಯೋಧನನಿಗೆ 'ಪಾಂಡವರಿಗೆ ರಾಜ್ಯ ಹಿಂದಿರುಗಿಸು' ಕೊನೆಗೆ ಐದು ಗ್ರಾಮಗಳನ್ನಾದರೂ ಕೊಡು' ಎಂದರೂ ಒಪ್ಪದೇ ಸೂಜಿಮೊನೆಯಷ್ಟೂ ಜಾಗವನ್ನು ಕೊಡುವುದಿಲ್ಲ ಎನ್ನುತ್ತಾ;

**ಕೃಷ್ಣ ನಿನ್ನ ಅಂತರಂಗದಲ್ಲ ಒಂದು**
**ಬಯರಿಂಗದಲ್ಲೇ ಒಂದು ಮಡಗಿರುವೆ**
**ನಿನ್ನ ವರಸೆ ನನಗೆ ಚೆನ್ನಾಗಿ ಗೊತ್ತು**
**ಹೊರಗಡೆಗೆ ಕೊಡು ಕೊಡು ಅನ್ನುತ್ತಿದ್ದಿಯೆ**
**ಒಳಗಡೆ ಕೊಡಬೇಡ ಕೊಡಬೇಡ ಅನ್ನುತ್ತಿದ್ದೀಯೆ**
**ನಿನ್ನ ತಂತು ಇಕಮತ್ತು ನನಗೆ ಗೊತ್ತ**
**(ಶ್ರೀಕೃಷ್ಣರಾಯಭಾರ ಪರ್ವ ಪು-೪೫೪)**

ಎಂದು ಕೃಷ್ಣನನ್ನ ಜರೆಯುತ್ತಾನೆ. ದುರ್ಯೋಧನನ ಈ ಮಾತುಗಳು ಕುಮಾರವ್ಯಾಸಭಾರತದಲ್ಲೂ ಬರುತ್ತದೆ, ಅಲ್ಲಿ ಸ್ವಲ್ಪಮಟ್ಟಿಗೆ ಶಿಷ್ಟವಾಗಿ ಕೃಷ್ಣನನ್ನು 'ಶ್ವೇತಕೃಷ್ಣ ಕಾರಕ' ಎಂದು ಜರೆದಿದ್ದಾನೆ. ಅಂದರೆ ದುರ್ಯೋಧನನಿಗೆ ಒಬ್ಬೊಬ್ಬರ ಸ್ವಭಾವದ ಅರಿವು ಚೆನ್ನಾಗಿತ್ತು.

ಪಂಪ ಅರಿಕೇಸರಿಯಲ್ಲಿ ತನಗೆ ಪ್ರೀತಿಯರುವುದರಿಂದ ಅವನನ್ನು ಅರ್ಜುನನಲ್ಲಿ ಸಮೀಕರಿಸಿ ಹೇಳುತ್ತೇನೆಂದು ಹೇಳಿಕೊಂಡಿದ್ದಾನಷ್ಟೇ. ಲೋಕ ಇರುವವರೆಗೂ ಅರಸನ ಹೆಸರು ಉಳಿಸುವ ಅವನ ರಾಜಭಕ್ತಿಯೇನೋ ಈ ಕಾವ್ಯದಲ್ಲಿ ಸಫಲವಾಗಿದೆ. ಆದರೆ ಅವನು ಅಂದುಕೊಂಡಿದ್ದಕ್ಕಿಂತ ಬೇರೆಯಾದ ವ್ಯಕ್ತಿಗಳೇ ಮಹಾಪುರುಷರೂ ಅಭಿಮಾನಧನರೂ ಆಗಿ ಅವರ ಕತೆಯೇ ಇಲ್ಲಿ ರಸಾಯನವೂ ಆಗಿದೆ. ದುರ್ಯೋಧನನ ನಿರ್ವ್ಯಾಜ್ಯ ಸ್ನೇಹ ಪ್ರೇಮ ಕರ್ಣನ ಸಾವಿನ ಸಂದರ್ಭದಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು. 'ನೀನು ಕೂಡ ನನ್ನನು ಅಗಲಿ ಹೋದೆ. ನನಗೆ ಆಸೆಯಾಗಿರುವವರು ಯಾರು? ನಿನ್ನನು ಬಿಟ್ಟು ನಾನು ಇರಬಲ್ಲನೆ. ನಿನ್ನ ಬೆನ್ನ ಹಿಂದೆಯೇ ಬರುತ್ತೆನೆ' ಎಂದು ದುಃಖಿಸುತ್ತಾ 'ಒಡಲೆರಡೊಂದೆ ಜೀವಮಿವರ್ಗೆಬುದನೆಂಬುದು ಲೋಕಮೀಗಳಾ ನುಡಿ

ಮುಸಿಯಾಯ್ತೆ' (ಪ.ಭಾ. ೧೩-೪) ಅರ್ಜುನನ ಬಾಣದಿಂದ ನಿನ್ನ ಪ್ರಾಣವು ಹೋದರೂ ನನ್ನ ನಾಚಿಕೆಯಿಲ್ಲದ ಜೀವ ಇನ್ನೂ ಶರೀರದಲ್ಲಿದೆ. ಇನ್ನು ಅತಿಶಯವಾದ ಸ್ನೇಹಕ್ಕೆ ಎಡೆಯಲ್ಲಿದೆ ಎಂದು ಪ್ರಲಾಪಿಸುತ್ತಾ

**ಅಜೆಯಂ ಸೋದರನೆಂದು ಧರ್ಮಿ ತನಯಂ ನಿರ್ವ್ಯಾಜದಿಂ ನಿನ್ನನಾ**
**ನಜಿವೆಂ ಮುನ್ನಜಿದಿರ್ದುಮೆನ್ನರಸನಾನೇಕಿತ್ತೆನಿಲ್ಲೇಕೆ ಪ್ರೇ**
**ಟಜಿಪಲ್ಕೊಲ್ದೆನುಮಿಲ್ಲಿ ಕಾರ್ಯವಶದಿಂ ಕೂರ್ಪಂತೆವೋಲ್ ನಿನ್ನನಾಂ**
**ನೆಜಿ ಕೊಂದೆಂ ಮುಳಿಸಿಂದಮಂಗನೃಪತೀ ಕೌಂತೇಯರೇಂ ಕೊಂದರೇ**
**(ಪ.ಭಾ. ೧೩-೫)**

ಎಂದು ದುರ್ಯೋಧನ ಪ್ರಲಾಪಿಸುವಾಗಿನ ಸನ್ನಿವೇಶ ಎಂತಹ ಸಹೃದಯರಿಗೂ ಅವನ ಮೇಲೆ ಸಹಾನುಭೂತಿ ಉಂಟಾಗುವಂತದೆ. ಇಲ್ಲೆಲ್ಲ ಪಂಪ ದುರ್ಯೋಧನನ ಔನತ್ಯವನ್ನು ಮೇಲಕ್ಕೆರಿಸಿದ್ದಾನೆ. ಅವನು ದುಷ್ಟನಂತೆ ಕಾಣುವುದಿಲ್ಲ ಬದಲಾಗಿ ದುರಂತ ನಾಯಕನ್ನಾಗಿ ಚಿತ್ರಿತನಾಗಿದ್ದಾನೆ.

ಕುಮಾರವ್ಯಾಸಭಾರತದಲ್ಲೂ ಕರ್ಣನ ಸಾವಿನ ನಂತರ ಎದುರಾಗುವ ದುರ್ಯೋಧನ ಓದುಗರಿಗೆ ನಿಜವಾಗಿಯೂ ಭಿನ್ನ ಅನುಭವವೊಂದನ್ನು ನೀಡುತ್ತಾನೆ. ತನ್ನವರನ್ನೆಲ್ಲ ಕಳೆದುಕೊಂಡು ರಣಾಂಗಣದಲ್ಲಿ ಏಕಾಂಗಿಯಾಗಿ ಸಂಚರಿಸುವಾಗಿನ ಚಿತ್ರ ಕುಮಾರವ್ಯಾಸನಲ್ಲಿ ದುರ್ಯೋಧನ ಪಾತ್ರದ ಗ್ರಹಿಕೆಯ ದೃಷ್ಟಿಯಿಂದ ಬಹಳ ಮುಖ್ಯವಾದದು. ಅವನ ಅಸಹಾಯಕತೆ ಹಾಗೂ ಎಂದಿನ ಚಲದ ಮಾತುಗಳೂ ಕೂಡ ಬರುತ್ತದೆ. ಕೃಷ್ಣ ಸಹಿತವಾದ ಪಾಂಡವರ ಮುಂದೆ ತಾನೊಬ್ಬನೇ ನಿಂತಾಗಲೂ ಶರಣಾಗದಿರುವುದು ಅವನ ಅಭಿಮಾನದ ಹೆಗ್ಗುರುತಾಗುತ್ತದೆ. ಈ ಎಲ್ಲದರ ಗ್ರಹಿಕೆಯ ಫಲವಾಗಿ ದುರ್ಯೋಧನನ ಪಾತ್ರದ ಬಗೆಗೆ ಸಿ.ಪಿ.ಕೆ.ಯವರು 'ದುರ್ಯೋಧನ ದುಷ್ಟನೇನೊ ಹೌದು; ಆದರೆ ಸಾಮಾನ್ಯವ್ಯಕ್ತಿಯಲ್ಲ, ಅಂತೆಯೇ ಕಡೆಯಲ್ಲಿ ಅವನು ಭೀಮನ ಗದಾಘಾತದಿಂದ ಮಡಿದು ಬಿದ್ದಾಗ ಕವಿ ಅವನನ್ನು ರುಧಿರತಿಲಕವಾದನಲ್ಲೈ ಧರಾಂಗನೆಗೆ' ಎಂಬ ರುದ್ರ ರೂಪಕಾಂಜಲಿಯಿಂದ ಗೌರವಿಸಿದ್ದಾನೆ. ಧರಾಂಗನೆಗೆ ತಾನೊಬ್ಬನೆ ಶಾಶ್ವತವಾಗಿ ಒಡೆಯನಾಗಬೇಕೆಂದು ಬಯಸಿದ ದುರ್ಯೋಧನ ಅವಳಿಗೆ ತಿಲಕವಾಗಿ ಸಮರ್ಪಿತನಾಗುತ್ತಾನೆ ಅಂಥವರ ಗತಿಯಲ್ಲ ಕಡೆಗೆ ಇದೇ[6] ಎಂಬ ನಿಲುವನ್ನು ವ್ಯಕ್ತಪಡಿಸಿದ್ದಾರೆ.

ಜನಪದಭಾರತದಲ್ಲಿ ಕುರುಕ್ಷೇತ್ರ ಯುದ್ಧದಲ್ಲಿ ಎಲ್ಲರೂ ಸತ್ತು ಕೌರವ ಒಬ್ಬನೇ ಉಳಿದು ಆತ ಭೀಷ್ಮರ ಹತ್ತಿರ ಬಂದು 'ನಾನೊಬ್ಬನೇ ಪಾಂಡವರನ್ನು ಹೇಗೆ ಜಯಿಸಲಿ' ಎಂದಾಗ ಅವರು ಬಲರಾಮನ ಸಹಾಯ ಸಿಗುವವರೆಗೂ ಸುವರ್ಣ ಸಮುದ್ರದಲ್ಲಿ ಅಡಗಿರುವಂತೆ ಹೇಳುತ್ತಾನೆ. ಈ

ಪ್ರಸಂಗ ಪಂಪ ಮತ್ತು ಕುಮಾರವ್ಯಾಸರಲ್ಲಿ ಭಿನ್ನವಾಗಿದೆ. ಆ ಕಾವ್ಯಗಳಲ್ಲಿ ಭೀಷ್ಮರೇ ದುರ್ಯೋಧನನ ಮನವೊಲಿಸಿ ವೈಶಂಪಾಯನ ಸರೋವರದಲ್ಲಿ ಅಡಗುವಂತೆ ಹೇಳಿದರೆ, ಜನಪದ ಕಾವ್ಯದಲ್ಲಿ ದುರ್ಯೋಧನನನೇ ಪಾಂಡವರನ್ನು ಒಬ್ಬಂಟಿಗನಾಗಿ ಹೇಗೆ ಜಯಿಸಲಿ ಎಂದು ಕೇಳುವುದರ ಮೂಲಕ ಜನಪದ ಕವಿ ಅವನ ವ್ಯಕ್ತಿತ್ವಕ್ಕೆ ಚ್ಯುತಿ ತಂದಿದ್ದಾನೆ. ಮತ್ತೆ ದುರ್ಯೋಧನ ವೀರನಾಗಿದ್ದು ಸ್ವಾಭಿಮಾನಿಯಾಗಿದ್ದವನು ಅಂತ್ಯದಲ್ಲಿ ಸಮುದ್ರದಲ್ಲಿ ಅಡಗಿ ಕುಳಿತುಕೊಳ್ಳುವಂತಹದು ಅವನ ವ್ಯಕ್ತಿತ್ವಕ್ಕೆ ಸರಿಹೊಂದುವುದಿಲ್ಲ. ಅಲ್ಲಿಯವರೆಗೂ ಭೀಷ್ಮರ ಮಾತನ್ನು ಧಿಕ್ಕರಿಸುತ್ತಾ ಬಂದವನು ಅಂತಿಮ ಹಂತದಲ್ಲಿ ಅವರ ಮಾತಿನಂತೆ ಜಲಮಂತ್ರ ಪಟಿಸುತ್ತಾ ಅಡಗಿಕೊಳ್ಳುವುದು. ಘನಕಾರ್ಯವೆನಿಸುವುದಿಲ್ಲ. ಆದರೆ ಬಹುಮಟ್ಟಿಗೆ ದುರ್ಯೋಧನ ಈ ಸನ್ನಿವೇಶ ಚಿತ್ರಣ ಶಿಷ್ಟ ಮಹಾಭಾರತದೆಲ್ಲಾ ಕಡೆಯೂ ಹಾಗೆಯೆ ಮೂಡಿ ಬಂದಿದೆ. ಹಾಗಾಗಿ ಜನಪದ ಕವಿಯೂ ಕೂಡ ಅದನ್ನೇ ಚಿತ್ರಿಸಿದ್ದಾನೆ. ಮುಂದೆ ಭೀಮ ಕೌರವರ ನಡುವೆ ಗದಾಯುದ್ಧ ನಡೆದು ಭೀಮನ ಗದಾ ಹೊಡೆತದಿಂದ ಸಾವನಪ್ಪುತ್ತಾನೆ.

ಪಂಪಕವಿ ದುರ್ಯೋಧನನು ಭೀಮನ ಗದೆಯಿಂದ ತೊಡೆ ಮುರಿದು ಬಿದ್ದಾಗ

**ನುಡಿದುದನೆಯ್ದೆ ತುತ್ತ ತುದಿಯೆಯ್ದುವಿನಂ ನುಡಿದವಲಂ ಚಲಂ**
**ಬಿಡಿದುದನೆಯ್ದೆ ಮುಂ ಪಿಡಿದುದಂ ಪಿಡಿದಂ ಸಲೆ ಪೂಣ್ದಪೂಣ್ಕೆ ನೇ**
**ರ್ಪಡೆ ನಡೆವನ್ನೆಗಂ ನಡೆದನಳ್ಕದೆ ಬಳ್ಕದೆ ತನ್ನೊಡಲ್ ಪಡ**
**ಲ್ಪಡುವಿನಮಣ್ಮ ಗುಂದನೆ ದಲೇನಭಿಮಾನಧನಂ ಸುಯೋಧನಂ**
**(ಪ.ಭಾ. ೧೩-೬೭)**

ಎಂದು ಚರಮ ಗೀತೆಯನ್ನು ಹಾಡಿದರೆ, ಜನಪದ ಕವಿ ದುರ್ಯೋಧನನ ಸಾವನ್ನು ಮೂಲಕ್ಕೆ ಹತ್ತಿರವಾಗಿರುವಂತೆಯೇ ಚಿತ್ರಿಸಿದ್ದಾನೆ.

ನರಕದಲ್ಲಿ ದುರ್ಯೋಧನ ನರಳಾಡುವುದನ್ನು ಕಂಡ ಧರ್ಮರಾಯ ತನ್ನ ಪುಣ್ಯವನ್ನು ಧಾರೆಯೆರೆಯುತ್ತೇನೆಂದಾಗ ನರಕದಲ್ಲಿದ್ದರೂ ದುರ್ಯೋಧನ ಅದನ್ನು ನಿರಾಕರಿಸುತ್ತಾನೆ. ಹೀಗೆ ಜನಪದ ಕವಿ ದುರ್ಯೋಧನನ ಪಾತ್ರವನ್ನು ಪೌರಾಣಿಕ, ಸಾಮಾಜಿಕ ನೆಲೆಯಲ್ಲಿ ಚಿತ್ರಿಸಿದ್ದಾನೆ. ಬಹುಮಟ್ಟಿಗೆ ಶಿಷ್ಟ ಭಾರತಗಳಲ್ಲಿ ಬರುವ ದುರ್ಯೋಧನ ಪಾತ್ರವನ್ನೇ ಹೋಲುತ್ತಾದರೋ ಪಾತ್ರ ಚಿತ್ರಣ ಹಾಗೂ ಸನ್ನಿವೇಶ ನಿರ್ಮಾಣದಲ್ಲಿ ಭಿನ್ನತೆಯಿದೆ.

**ಭೀಮನ ಪಾತ್ರಚಿತ್ರಣ :**

ಪಂಪ ತನ್ನ ಕಾವ್ಯದ ನಾಯಕನನ್ನಾಗಿ ಅರ್ಜುನನ್ನು ಪ್ರತಿನಾಯಕನನ್ನಾಗಿ ಕರ್ಣನನ್ನು ಚಿತ್ರಿಸಿದ್ದರೂ ಭೀಮ ಪಾತ್ರಕ್ಕೆ ಯಾವುದೇ ಕುಂದುಂಟಾಗದಂತೆ ಚಿತ್ರಿಸಿದ್ದಾನೆ. ದುರ್ಯೋಧನನ ಉದಾತ್ತತೆಯನ್ನು ಚಿತ್ರಿಸುವ ಸಂದರ್ಭದಲ್ಲಿ ಭೀಮನನ್ನು ಅವನ ಎದುರು ನಾಯಕನನ್ನಾಗಿಸ ಬೇಕಾಗಿರುವುದು ಅನಿವಾರ್ಯ. ಆದರೂ ಪಂಪ ಭೀಮನ ಪಾತ್ರವನ್ನು ವ್ಯಾಸ ಭಾರತದಲ್ಲಿನ ಕಥೆಯಂತೆಯೇ ರೂಪಿಸಿದ್ದಾನೆ. ಕುಂತಿ ಧರ್ಮರಾಯ ನಂತರ ವಾಯುದೇವರ ಅನುಗ್ರಹದಿಂದ ಭೀಮನನ್ನು ಪಡೆದಳು. ಆತ ಕುಂತಿಯ ಗರ್ಭದಲ್ಲಿದ್ದಾಗ ಅವನ ಭಾರವನ್ನು 'ಆದಿಶೇಷನು ತಾಳಲಾರದೆ ಕಷ್ಟದಿಂದ ನಿಟ್ಟುಸಿರು ಬಿಟ್ಟನು' ಎಂದು ಹೇಳುವಾಗ ಭೀಮನ ಭಾರದ ಅರಿವಾಗುತ್ತದೆ.

ಕುಮಾರವ್ಯಾಸನ ಭೀಮನ ಪಾತ್ರಚಿತ್ರಣದಲ್ಲಿ ವೀರರಸ ಹಾಗೂ ಅದ್ಭುತರಸಗಳು ಸಮ್ಮಿಲನವಾಗಿದೆ. ಹತ್ತು ಸಾವಿರ ಆನೆಗಳ ಬಲವಿತ್ತೆಂದು ವ್ಯಾಸರೇ ತಮ್ಮ ಕಾವ್ಯದಲ್ಲಿ ಹೇಳಿದ್ದಾರೆ. ಬಾಲ್ಯದಲ್ಲಿ ಕುಂತಿಯ ತೊಡೆಯಿಂದ ಜಾರಿ ಬಿದ್ದ ಭೀಮನಿಗೆ ಏನು ಆಗಲಿಲ್ಲ. ಆದರೆ ಅವನು ಬಿದ್ದ ರಭಸಕ್ಕೆ ಶಿಲೆಯೇ ಚೂರು ಚೂರಾಯಿತು ಎನ್ನುವ ಉಪಮೆ ಭೀಮನ ಭಾರಕ್ಕೆ ನಿದರ್ಶನವಾಗಿದೆ.

ಪಂಪನಂತೆ ಕುಮಾರವ್ಯಾಸನು ಭೀಮನ ಬಾಲ್ಯವನ್ನು ಕೌರವರೊಡನೆ ಆಡುತ್ತಿದ್ದ ಆಟಗಳು ಅದರಿಂದ ತೊಂದರೆಗೊಳಗಾದ ಕೌರವರು ಅವನಿಗೆ ನೀಡುತ್ತಿದ್ದ ಅಪಾಯಗಳನ್ನು ಯಥಾವತ್ತಾಗಿ ಚಿತ್ರಿಸಿದ್ದಾನೆ. ಆತನು ಕೈಗೊಳ್ಳುವ ಸಾಹಸ ಕಾರ್ಯಗಳಲ್ಲಿ ಹೆಚ್ಚಿನವು ದಾನವರ ಸಂಹಾರಕ್ಕೆ ಸೇರಿರುವುದು ಗಮನಾರ್ಹ. ಎಲ್ಲಾ ಕಾವ್ಯಗಳಲ್ಲೂ ರಾಕ್ಷಸರನ್ನು ಸಂಹರಿಸಿದವನು ಭೀಮ ಅದರಲ್ಲೂ ಬಕಾಸುರನ ವಧೆಯನ್ನು ಕವಿ ಕುಮಾರವ್ಯಾಸ ವರ್ಣಿಸಿರುವ ರೀತಿ ಅನನ್ಯವಾದದ್ದು. ರಾಕ್ಷಸರನ್ನು ಸಂಹಾರ ಮಾಡಲು ಅವನು ಸಮರ ವಿದ್ಯೆಗಿಂತ ತನ್ನ ಶಕ್ತಿ ಬಲವನ್ನೇ ನೆಚ್ಚಿದವನು. ಗಡಸುಗಾರಿಕೆ ಭೀಮ ರೂಡಿಸಿಕೊಂಡ ವ್ಯಕ್ತಿತ್ವದ ಒಂದು ಮುಖ. ಪ್ರಮುಖವಾಗಿ ರೂಕ್ಷತೆಯೇ ಇಲ್ಲಿ ವಿಜೃಂಭಿಸುತ್ತದೆ. ವೀರರಸ ಅದ್ಭುತ ರಸದತ್ತ ಹರಿಯುವುದನ್ನು ಕಾಣಬಹುದು.

ಜನಪದ ಮಹಾಭಾರತದಲ್ಲಿ ಯಾವುದೇ ಒಂದು ಪಾತ್ರಕ್ಕೆ ಅಂತ ಪ್ರಾಧಾನ್ಯತೆಯನ್ನು ನೀಡಲಾಗಿಲ್ಲ. ಹಾಗೊಂದು ವೇಳೆ ವಿಶೇಷ ಪ್ರಾಮುಖ್ಯತೆ ನೀಡಿದೆ ಎನ್ನುವುದಾದರೆ ಅದು ಕೃಷ್ಣ ಮತ್ತು ದ್ರೌಪದಿಯ ಪಾತ್ರಕ್ಕೆ ಎನ್ನಬಹುದು. ಉಳಿದಂತೆಯೇ ಮಹಾಭಾರತದಲ್ಲಿ ಬರುವ ಇತರ ಪಾತ್ರಗಳೆಲ್ಲ ವ್ಯಾಸಭಾರತದಲ್ಲಿ ಬರುವಂತೆಯೇ ನಿರ್ಲಿಪ್ತವಾಗಿ ತಾವು ಮಾಡಬಹುದಾದ ಹಾಗೂ ವಹಿಸಬಹುದಾದ

ಕಾರ್ಯ ಮತ್ತು ಭಾವಗಳನ್ನು ವಹಿಸಿದೆ. ಕೆಲವು ಕಡೆ ಸಾಮಾನ್ಯವಾಗಿ ಕಾಣುತ್ತವೆ ಮತ್ತೆ ಕೆಲವು ಕಡೆ ವಿಶೇಷತೆಯನ್ನು ಪಡೆದುಕೊಳ್ಳುತ್ತದೆ. ಇದಕ್ಕೆ ಕಾರಣ ಕಥೆ ಮತ್ತು ಸನ್ನಿವೇಶ ಹಾಗೂ ಕಥೆಯ ವೇಗ. ಆಯಾಯ ಸಂದರ್ಭಕ್ಕನುಗುಣವಾಗಿ ಪಾತ್ರಗಳು ವಿಶೇಷತೆಯನ್ನು ಪಡೆದುಕೊಳ್ಳುತ್ತದೆ ಇದಕ್ಕೆ ಭೀಮನ ಪಾತ್ರವು ಹೊರತಾದುದಲ್ಲ.

ಕವಿ ಪಂಪ ಭೀಮನ ಬಾಲ್ಯವನ್ನು ಚಿತ್ರಿಸುತ್ತಾ ದುರ್ಯೋಧನಾದಿಗಳು ಭೀಮನನ್ನು ಕಾಡಿಸಿ. ಅನಂತರ ಒಟ್ಟಿಗೆ ಮರವನ್ನು ಹತ್ತಿರಲು ಅವರನ್ನು ಮುಟ್ಟಲಾಗದೇ ಭೀಮನು ಮರವನ್ನು ಅಳ್ಳಾಡಿಸಲು ಹಣ್ಣಿನ ಹಾಗೆ ಅಷ್ಟು ಜನವೂ ಕೆಳಗೆ ಉದುರಿದರು. ಇದೇ ಮುಂದಿನ ಮತ್ಸರಕ್ಕೆ ನಾಂದಿಯಾಯಿತು. ಅಂದಿನಿಂದ ಕೌರವರು ಭೀಮನನ್ನು ತಮ್ಮ ಬದ್ದ ದ್ವೇಷಿಯೆಂದು ಪರಿಗಣಿಸುತ್ತಾ ಅವನ ಸಂಹಾರಕ್ಕೆ ನಾನಾ ಉಪಾಯಗಳನ್ನು ಹುಡುಕುತ್ತಾ ಬಂದರು.

ಜನಪದ ಕಾವ್ಯದಲ್ಲಿ ಶೌರ್ಯ ಪರಾಕ್ರಮಗಳ ಸಂಕೇತವಾಗಿ ಭೀಮನ ಪಾತ್ರ ಮೂಡಿ ಬಂದಿದೆ. ಬಾಲ್ಯದಲ್ಲೇ ಕೌರವರನ್ನು ಛೇಡಿಸುವ ಮೂಲಕ ಅವರ ಅವಕೃಪೆಗೆ ಒಳಗಾಗಿ ಅನೇಕ ರೀತಿಯ ವಿಪತ್ತುಗಳಿಗೂ ಒಳಗಾಗುತ್ತಾನೆ. ದುರ್ಯೋಧನ ಎಂದಾಕ್ಷಣ ಅವನಿಗೆ ಪ್ರತಿಸ್ಪರ್ಧಿಯಾಗಿ ಬದ್ದದ್ವೇಷಿಯಾಗಿ ಬರುವವನು ಭೀಮ. ಬಾಲ್ಯದ ಅವರೊಡನೆಯ ಆಟ ಕೇವಲ ಭೀಮನಿಗೆ ಆಟವಾಗಿದ್ದರೆ ದುರ್ಯೋಧನನಿಗೆ ಅದು ಅವಮಾನ ಹಾಗೂ ಮತ್ಸರವಾಗಿರುತ್ತದೆ. ಹೀಗಾಗಿ ಭೀಮನ ಮೇಲೆ ಬಾಲ್ಯದಿಂದಲೆ ಹಗೆ ಸಾಧಿಸುತ್ತಾ ಅವನ ನಾಶಕ್ಕೆ ನಾನಾ ತಂತ್ರಗಳನ್ನು ಪ್ರಯೋಗಿಸಿ ಅದರಲ್ಲಿ ವಿಫಲನಾಗುತ್ತಾನೆ.

ಅರಗಿನ ಮನೆಯಿಂದ ಪಾರಾಗಿ ಭೀಮ ತನ್ನ ತಾಯಿ ಸಹೋದರರನ್ನು ರಕ್ಷಿಸುತ್ತ ಹಿಡಿಂಬಾಸುರನ ನೆಲೆಗೆ ಕರೆತರುತ್ತಾನೆ. ಈ ಪ್ರಕರಣ ಬಹುಮಟ್ಟಿಗೆ ಶಿಷ್ಟ ಭಾರತದಂತೆಯೇ ಇದ್ದರೂ ಹಿಡಿಂಬೆಯ ವಿಷಯದಲ್ಲಿ ಜನಪದ ಕವಿ ತುಸು ಬದಲಾವಣೆಯನ್ನು ಮಾಡಿಕೊಂಡಿದ್ದಾನೆ. ಅದೆಂದರೆ ಉರಿಸಿಂಗಿಯ ತಂಗಿಯೇ ಹಿಡಿಂಬೆ ಎಂದೂ ಶುಕ್ರಾಚಾರ್ಯರ ಶಾಪದಿಂದಾಗಿ ಅವಳಿಲ್ಲಿ ದಾನವಳಾಗಿ ಹುಟ್ಟಿದ್ದಾಳೆಂದೂ ಕವಿ ಕಲ್ಪಿಸಿದ್ದಾನೆ. ಉರಿಸಿಂಗಿ ಭೀಮನನ್ನು ಮದುವೆಯಾದ್ದರಿಂದ ಹಿಡಿಂಬೆಯೂ ಅವನನ್ನು ಬಯಸಿದಳೆಂಬ ಕಾರ್ಯ ಕಾರಣ ಸಂಬಂಧವನ್ನಲ್ಲಿ ಸೇರಿಸಲಾಗಿದೆ. ಉಳಿದಂತೆ, ವಿವಾಹ, ಘಟೋತ್ಕಜನ ಜನನ ಮುಂತಾದವೆಲ್ಲಾ ಯಥಾವತ್ತಾಗಿಯೇ ಚಿತ್ರಿಸಲಾಗಿದೆ. ಅನಂತರ ನಡೆಯುವುದೆಲ್ಲ ಜನಪದ ಕವಿಯ ಪ್ರತಿಭೆಗೆ ಅನುಗುಣವಾಗಿ ಜನಪದರ ನಂಬಿಕೆಗನುಗುಣವಾಗಿ

ಚಿತ್ರಿತವಾಗಿದೆ. ಭೀಮನನ್ನು ಬಯಸಿದ ಹಿಡಿಂಬೆಯ ಜೊತೆ ವಿವಾಹವನ್ನು ನೆರವೇರಿಸಿ ಸ್ವಲ್ಪ ಕಾಲ ಜತೆಗಿರುವಂತೆ ಸೂಚಿಸಿ ಪಾಂಡವರು ಪ್ರಯಾಣ ಬೆಳೆಸುತ್ತಾರೆ. ತಮಗೆ ತೊಂದರೆಯಾದರೆ ತಾವು ಗುರುತಿಗಾಗಿ ನೆಟ್ಟು ಹೋಗಿದ್ದ ತುಳಸಿ ಗಿಡ ಬಾಡಿ ಹೋಗುತ್ತದೆ ಎಂದು ಹೇಳಿ ಧರ್ಮರಾಯ ಪ್ರಯಾಣ ಮುಂದುವರೆಸಿರುತ್ತಾರೆ. ಮುಂದೆ ಪಾಂಡವರು ಸಂಭ್ರಾಸುರನ ಪಟ್ಟಣದಲ್ಲಿ ಕಷ್ಟಕ್ಕೆ ಸಿಲುಕಿಕೊಂಡು ತೊಂದರೆ ಅನುಭವಿಸುತ್ತಿರಲು ಒಣಗುತ್ತಿರುವ ತುಳಸಿ ಗಿಡದ ಮೂಲಕ ಭೀಮ ಅರಿತು ಅವರನ್ನು ಪಾರುಮಾಡುವ ಪ್ರಸಂಗ ಜನಪದ ಕಾವ್ಯದಲ್ಲಿ ಮಾತ್ರ ಕಾಣುವಂಥದ್ದು. ಪಂಪ, ಕುಮಾರವ್ಯಾಸರಲ್ಲಿ ಈ ಪ್ರಸಂಗವನ್ನು ಕಾಣಲಾಗುವುದಿಲ್ಲ. ಸಂಭ್ರಾಸುರನ ಕಥೆ ಒಂದು ನೂತನ ಸೇರ್ಪಡೆಯಾಗಿದೆ.

ಭೀಮನ ಅಸಮಬಲ ಹಾಗೂ ಸಾಹಸವನ್ನು ಜನಪದ ಕವಿ ಮರೆತ್ತಿಲ್ಲ ಎಂಬುದಕ್ಕೆ ಮುದ್ದೇಗೌಡರ ಭೂಮಿಯನ್ನು ಭೀಮನು ಹಸನು ಮಾಡುವ ಪ್ರಸಂಗವೇ ನಿದರ್ಶನವಾಗಿದೆ. ನೂರಾಳುಗಳು ಮಾಡಬಹುದಾದ ಕೆಲಸವನ್ನು ಭೀಮ ಒಂದೇ ದಿನದಲ್ಲಿ ಮಾಡಿ ಮುಗಿಸುತ್ತಾನೆ. ಸ್ವಲ್ಪ ಮಟ್ಟಿಗೆ ವಿವೇಚನಾರಹಿತನೆಂಬುದಕ್ಕೆ ನೂರಾಳುಗಳ ಕೂಲಿಯನ್ನು ಪಡೆದುಬಂದರೂ ಧರ್ಮರಾಯನ ಉಪದೇಶದಿಂದ ಅದನ್ನು ಮತ್ತೆ ವಾಪಸ್ಸು ನೀಡಿ ಒಂದು ದಿನದ ಕೂಲಿಯನ್ನು ಮಾತ್ರ ಉಳಿಸಿಕೊಳ್ಳುವಲ್ಲಿ ಅಣ್ಣನ ಮಾತನ್ನು ಮೀರದಿಹ ನಿಷ್ಠೆಯನ್ನು ಕಾಣಬಹುದು.

ಭೀಮನ ವ್ಯಕ್ತಿತ್ವವನ್ನು ಕಾಣಬೇಕಾದರೆ ಕುಂತಿ ಗಜಗೌರಿ ವ್ರತ ಮಾಡಲು ಬಯಸಿದ ಪ್ರಸಂಗವನ್ನು ಅವಲೋಕಿಸಬಹುದು. ಬಹುಶಃ ಶಿಷ್ಟ ಹಾಗೂ ಜನಪದ ಮಹಾಭಾರತಗಳಲೆಲ್ಲಾ ಹೆಣ್ಣಿನ ನೋವಿಗೆ ಸ್ಪಂದಿಸಿದವನು ಹಾಗೂ ನಿವಾರಿಸಲು ಮುನ್ನುಗ್ಗಿದವನು ಭೀಮನೆಂದರೆ ತಪ್ಪಾಗಲಾರದು ಅದು ತಾಯಿ ಕುಂತಿಯೇ ಇರಬಹುದು ಅಥವಾ ಪತ್ನಿ ದ್ರೌಪದಿಯೇ ಇರಬಹುದು. ಹೆಂಗಸರಿಗೆ ಆಪ್ತರಕ್ಷಕನಾಗಿದ್ದವನು ಭೀಮ. ಆದ್ದರಿಂದಲೇ ದ್ರೌಪದಿ ತನಗೆ ಕೀಚಕನಿಂದ ಅವಮಾನವಾದಾಗ ರಕ್ಷಣೆಗಾಗಿ ಮೊರೆಹೋಗುವುದು ಭೀಮನಲ್ಲಿಗೇನೇ. ತಾಯಿಯ ವ್ರತಕ್ಕಾಗಿ ಕುಬೇರನಲ್ಲಿ ಬಂದಾಗ ಭೀಮನ ಅಹಂಕಾರ ನಿರಶನವಾಗುತ್ತದೆ. ಕುಬೇರನಿಂದ ಕಾಯಕ ನಿಷ್ಠೆಯನ್ನು ಹಾಗೂ ಅನ್ನದ ಮಹತ್ವವನ್ನು ಅರಿತು ಅದುವರೆಗಿದ್ದ ಅಹಂಕಾರವನ್ನು ಕಳೆದುಕೊಳ್ಳುತ್ತಾನೆ. ಹೀಗೆ ಮನುಷ್ಯನಿಗಿರಬೇಕಾದ ಕಾಯಕ ಗೌರವ ಹಾಗೂ ಸ್ವಾಭಿಮಾನದ ಪರಿಯನ್ನು ಜನಪದ ಕವಿ ಭೀಮನ ಪಾತ್ರದ ಮೂಲಕ ಮನಮುಟ್ಟುವ ಹಾಗೇ ಹೇಳಿರುವುದನ್ನು ಕಾಣಬಹುದು.

ಶೀಲ ಚಾರಿತ್ರ್ಯವೇ ಮನುಷ್ಯನಿಗೆ ಅಮೂಲ್ಯ ಆಭರಣ ಪಾರದರ್ಶಕ ವ್ಯಕ್ತಿತ್ವದಿಂದ ಮಾತ್ರ ಲೋಕಗೌರವ ಎಂಬುದನ್ನು 'ಅಂತರಾಳ ಪರೀಕ್ಷೆ' ಎಂಬ ಪರ್ವ ಸಾದರ ಪಡಿಸುತ್ತದೆ. ಈ ಪ್ರಸಂಗಕ್ಕೆ ಕುಮಾರವ್ಯಾಸ ಕಾವ್ಯದ ಕಣ್ವಾಶ್ರಮದ ಜಂಬೂ ಫಲದ ಕಥೆ ಪ್ರೇರಣೆ ನೀಡಿರಬೇಕು. ಎಲ್ಲವನ್ನು ಅಗಾಧವಾಗಿ ಕಲ್ಪಿಸುವ ಕವಿ ಜಂಬೂ ನೇರಳೆಯ ಗಾತ್ರವನ್ನು ಆನೆಗೆ ಹೋಲಿಸುತ್ತಾನೆ. ಆನೆಗಾತ್ರದ ಹಣ್ಣು ಎಂಬುದು ಇಂದಿಗೂ ಕಾಲ್ಪನಿಕವೆನ್ನುವುದಾದರೂ ಮುಗ್ಧ ಮಕ್ಕಳು ಕತೆಯನ್ನು ಕೇಳುವಾಗ ಅದರ ಪರಿಣಾಮಕ್ಕಾಗಿ ಅಗಾಧತೆ ಹಾಗೂ ಅಸಂಭವನೀಯತೆಯನ್ನು ಹೇಳುವುದು ಜನಪದ ಸಾಹಿತ್ಯದಲ್ಲಿ ಸಹಜವೆನ್ನಬಹುದು. ಹಾಗೇ ನೋಡಿದ ಭೀಮನ ಸಾಹಸವೇ ಅಸಹಜವಾದದ್ದು ಎನ್ನಬಹುದು. ಭೀಮ ತನಗೆ ಸಿಟ್ಟು ಬಂದಾಗ ಅಥವಾ ಶತ್ರು ಸಂಹಾರಕ್ಕೆ ಬಳಸುತ್ತಿದ್ದುದು ಅಗಾಧವಾದ ಮರವನ್ನು. ಆಮೂಲಕ ಇಂದಿನ ಸಾಮಾಜಿಕ ಧೋರಣೆಯಿಂದ ಹೇಳುವುದಾದರೆ ಭೀಮ ತನ್ನ ಕೋಪಕ್ಕೆ ಪರಿಸರವನ್ನೇ ನಾಶಮಾಡುತ್ತಿದ್ದನೆನ್ನಬಹುದು.

ಭೀಮ ನಾಯಿಗಳಿಗೆ ಶಾಪಕೊಡುವ ಪ್ರಸಂಗವು ಸಹ ಇತರ ಭಾರತಗಳಲ್ಲಿ ಕಾಣದಿರುವ ಜನಪದರಲ್ಲಿ ಮಾತ್ರ ಕಾಣುವಂಥದ್ದು. ದ್ರೌಪದಿಯೊಡನೆ ಇರುವಾಗ ತಮ್ಮ ಪಾದರಕ್ಷೆಗಳನ್ನು ಬಾಗಿಲಲ್ಲಿ ಬಿಡಬೇಕೆಂಬ ಭೀಮನ ಸಲಹೆಯನ್ನು ಎಲ್ಲರೂ ಒಪ್ಪಿರುತ್ತಾನೆ. ಈ ಪ್ರಕಾರ ಭೀಮನೇ ಒಮ್ಮೆ ದ್ರೌಪದಿಯೊಡನಿದ್ದಾಗ ಧರ್ಮರಾಯನ ಪ್ರವೇಶ ಭೀಮನನ್ನು ಮುಜುಗರಕ್ಕೆ ಈಡು ಮಾಡುತ್ತದೆ. ಇದಕ್ಕೆ ಕಾರಣ ಬಾಗಿಲಲ್ಲಿ ಬಿದ್ದಿದ್ದ ಚಪ್ಪಲಿಯನ್ನು ನಾಯಿ ಕಚ್ಚಿಕೊಂಡು ಹೋಗಿದ್ದುದು. ಆದ್ದರಿಂದ ಭೀಮ ನಾಯಿಗಳಿಗೆ ಶಾಪ ನೀಡುತ್ತಾನೆ.

ದುರ್ಯೋಧನನನ್ನು ಗಂಧರ್ವನೊಬ್ಬ ಸೆರೆಹಿಡಿದಾಗ ಕಟ್ಟುಗಳನ್ನು ಬಿಚ್ಚುವಂತೆ ದ್ರೌಪದಿಗೆ ಧರ್ಮರಾಯ ಹೇಳಿದರೂ ದ್ರೌಪದಿ ಈಗ ಭೀಮನ ಸರದಿ ಅವನ ಅಪ್ಪಣೆಯಿಲ್ಲದೇ ತಾನು ಈ ಕಾರ್ಯ ಮಾಡುವುದಿಲ್ಲ ಎಂದು ನಿರಾಕರಿಸುತ್ತಾಳೆ. ಈ ಪ್ರಸಂಗ ದ್ರೌಪದಿ ಮತ್ತು ಭೀಮ ಸಮಾನ ಚಿಂತಕರು ಹಾಗೂ ಆಲೋಚಕರು ಎಂಬುದಕ್ಕೆ ನಿದರ್ಶನವಾಗಿದೆ.

ಭೀಮ ಏಕಚಕ್ರಾನಗರದಲ್ಲಿ ಬಕಾಸುರನನ್ನು ಕೊಂದು ಹಾಕುವುದು ಹಾಗು ಇಡೀ ಕಾವ್ಯದಲ್ಲಿ ರಾಕ್ಷಸರನ್ನು ಸಂಹರಿಸಿದವನು ಭೀಮ. ಅಷ್ಟೇ ಅಲ್ಲದೇ ಕೌರವರ ನೂರು ಜನ ತಮ್ಮಂದಿರೂ ಭೀಮನಿಂದಲೇ ಹತರಾದವರು. ಹಾಗೆಯೇ ಅರ್ಜುನನ ಅಪ್ರತಿಮ ಶಿವನಭಕ್ತಾಗ್ರೇಸರ ಶಿವನನ್ನು ಸಾಕ್ಷಾತ್ಕರಿಸಿಕೊಂಡವನು ಎಂಬ ಅಹಂಕಾರವನ್ನು ಕ್ಷಣಮಾತ್ರದಿಂದಲೇ ನಾಶಗೊಳಿಸಿದವನು ಭೀಮ.

ಆತ ಅರ್ಜುನನಿಗೆ 'ನೀನು ಹದಿನೆಂಟು ತಿಂಗಳು ತಪಮಾಡಿ ವರ ಪಡೆದೆ ನಾನು ಹದಿನೆಂಟು ಕ್ಷಣದಲ್ಲಿ ಜಗತ್ತಿಗೆ ಶಿವನನ್ನು ತೋರಿಸಬಲ್ಲೆ' ಎಂದು ಅದರಂತೆ ಶಿವನನ್ನು ತೋರಿಸಿಕೊಟ್ಟವನು ಭೀಮ. ಮತ್ಸಯಂತ್ರವನ್ನು ಭೇದಿಸಿ ಸ್ವಯಂವರದಲ್ಲಿ ದ್ರೌಪದಿಯನ್ನು ಗೆದ್ದುದ್ದನ್ನು ಹೊರತುಪಡಿಸಿದರೆ ಜೀವನಪೂರ್ತಿ ದ್ರೌಪದಿಯನ್ನು ರಕ್ಷಿಸಿದವನು. ಅವಳ ಮಾನಪಮಾನಕ್ಕೆ ಸೇಡುತೀರಿಸಿಕೊಂಡವನು ಭೀಮನೇ ಎಂದರೆ ಅತಿಶಯೋಕ್ತಿಯಲ್ಲ. ಬಹುಮಟ್ಟಿಗೆ ಪಾಂಡವರನ್ನು ರಕ್ಷಿಸಿದವನು ಭೀಮ. ಅರ್ಜುನ ಕುರುಕ್ಷೇತ್ರ ಯುದ್ಧದಲ್ಲಿ ಕರ್ಣನನ್ನು ಕೊಂದದ್ದನ್ನು ಬಿಟ್ಟರೆ ಕೌರವರ ಇಡೀ ಕುಲವನ್ನು ನಾಶಮಾಡಿದವನು ಭೀಮ. ದುಷ್ಟ ಸಂಹಾರ ಮಾಡುವುದರಲ್ಲಿ ಭೀಮನದು ಎತ್ತಿದ ಕೈ ಎನ್ನಬಹುದು.

ಭೀಮ ಪ್ರತಿಜ್ಞೆಗೈದಂತೆ ದುಶ್ಯಾಸನನ ಹೊಟ್ಟೆ ಬಗೆದು ಆತನ ರಕ್ತವನ್ನು ಬೊಗಸೆಯಲ್ಲಿ ಕುಡಿದು ದ್ರೌಪದಿಯ ಬಿಚ್ಚು ಮುಡಿಗೆ ಎಣ್ಣೆಯಾಗಿ ಸವರಿ ದುಶ್ಯಾಸನನ ದವಡೆಯನ್ನೇ ಬಾಚಣಿಗೆಯನ್ನಾಗಿ ಮಾಡಿಕೊಂಡು ಆಕೆಯ ಮುಡಿಕಟ್ಟಿ ಅವಳ ಪ್ರತಿಜ್ಞೆಯನ್ನು ನೆರವೇರಿಸುತ್ತಾನೆ.

ಪಂಪ ಈ ಪ್ರಸಂಗವನ್ನು ಭೀಭತ್ಸವಾಗಿ ಚಿತ್ರಿಸಿದ್ದಾನೆ. ದುಶ್ಯಾಸನನ ಗಂಟಲು ಬಳೆಗಳು ಜಜ್ಜಿ ಹೋಗುವ ಹಾಗೆ ಕಾಲಿನಿಂದ ಮೆಟ್ಟಿ ತುಳಿದು

**ಡೊಕ್ಕನೆ ಸುರಿಗೆಯೊಳುರಮಂ**
**ಬಿಕ್ಕನೆ ಬಿರಿಯಿಱಿದು ಬರಿಯನಗಲೊತ್ತಿ ಮನಂ**
**ಕೊಕ್ಕರಿಸದೆ ಬಗಸಿರೆಯಿನ**
**ಉರ್ಕ್ಕೆಯೆ ಮೊಗೆಮೊಗೆದು ನೆತ್ತರಂ ಪವನಸುತಂ**

**(ಪ.ಭಾ. ೧೨-೧೫೩)**

ದುಶ್ಯಾಸನನ್ನು ಎದೆಯನ್ನು ಸೀಳಿ ರಕ್ತವನ್ನು ಮೊಗೆಮೊಗೆದು ದ್ರೌಪದಿಯ ತಲೆಯ ಮೇಲೆ ಸುರಿದು ಜಡೆಗಟ್ಟಿದ್ದ ಅವಳ ಕೂದಲನ್ನು ರಕ್ತದಿಂದ ನೆನೆಸಿ ಅವನ ಕರುಳನೇ ಹೊಸ ಹೂವಿನ ದಂಡೆಯಂತೆ ಮುಡಿಸಿ ಅವಳ ಪ್ರತಿಜ್ಞೆಯನ್ನು ನೆರವೇರಿಸಿ ಅವಳನ್ನು ಸಂತೋಷಪಡಿಸಿ ಕಳುಹಿಸಿದನು. ಅನಂತರ ತನ್ನ ರಾಕ್ಷಸ ಕ್ರೀಡೆಯನ್ನು ಪ್ರಾರಂಬಿಸಿದನು. ಅದೆಂದರೆ

**ಒಸರ್ವ ಬಿಸುನೆತ್ತರಂ ರ**
**ಕ್ಕಸನಂದದೆ ಕುಡಿದು ಕುಡಿದು ಕಂಡಂಗಳನ**
**ರ್ವಿಸೆ ಮೆಲ್ದು ಮೆಲ್ದು ಕರ್ಬಿನ**
**ರಸಕ್ಕಾಮಿನಿಸಿಂಪುಗಾಣೆನೆಂದನಿಲಸುತಂ**

**(ಪ.ಭಾ. ೧೨-೧೫೭)**

ರಕ್ತವನ್ನು ಕುಡಿದು ತನ್ನ ಆಕ್ರೋಶವನ್ನು ತೀರಿಸಿಕೊಳ್ಳುತ್ತಾನೆ. ಇಲ್ಲಿ ಕವಿ ಭೀಮನ ಈ ಕೃತ್ಯವನ್ನು ಸಮರ್ಥಿಸಿಯೇ ಕೊಂಡಿದ್ದಾನೆ.

**ಆದ ಮುಳಿಸಿಂದ ಮೆಲ್ಲಂ**
**ತೇದುಂ ಕುಡಿಯಲ್ಕೆ ತಕ್ಕ ಪಗೆವನ ರುಧಿರಾ**
**ಚ್ಛೋದಮನೆ ಕುಡಿದು ಮಾಣ್ದ ವೃ**
**ಕೋದರನೇನಾವ ತೆಜದೊಳಂ ದೋಷಿಗನೇ**

(ಪ.ಭಾ. ೧೨-೧೪೯)

ಅರ್ಜುನನಾದರೋ ರಣಾಂಗಣದಲ್ಲಿ ಸಂಬಂಧದ ನೆಪಯೊಡ್ಡಿ ಯುದ್ಧದಿಂದ ಹಿಂದೆಗೆಯಲು ನಿರ್ಧರಿಸುತ್ತಾನೆ. ಆದರೆ ಭೀಮ ಯಾವುದೇ ಸಂದರ್ಭದಲ್ಲಿಯೂ ವಿವೇಚನಾರಹಿತನಾಗಿ ನಡೆದುಕೊಳ್ಳಲಿಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಅವನಿಗೆ ತಮ್ಮನ್ನು ನಂಬಿದ ದ್ರೌಪದಿ ಸುಖವಾಗಿರಬೇಕು, ಸಂತೋಷವಾಗಿರಬೇಕು. ಅದಕ್ಕಾಗಿ ಆತ ಯಾವುದೇ ಅಡೆತಡೆಗಳನ್ನು ಮೀರಲು ಸಿದ್ದನಿದ್ದ ಎಂಬುದಕ್ಕೆ ಕೀಚಕನ ಸಂಹಾರವೇ ನಿದರ್ಶನವಾಗಿದೆ. ಸ್ವರ್ಗಾರೋಹಣದ ಯಾತ್ರೆಯಲ್ಲಿ ದ್ರೌಪದಿ ಬಿದ್ದಾಗ ಧರ್ಮರಾಯ ಆಕೆಗೆ ಅರ್ಜುನನ ಮೇಲೆ ಹೆಚ್ಚು ಪ್ರೀತಿ ಇತ್ತೆಂಬ ಕಾರಣ ನೀಡಿ ಮುಂದೆ ಸಾಗುವನು. ಆದರೆ ಭೀಮ ಸತ್ತಿರಬೇಕೆಂದು ಕಾಡು ಪ್ರಾಣಿಗಳಿಗೆ ಸಿಕ್ಕದಿರಲೆಂದು ಹತ್ತು ಹದಿನೈದು ಅಡಿ ದೂರದಿಂದ ಎಳೆದುಕೊಂಡು ಬಂದಿದ್ದ. ಜೀವವಿರುವುದನ್ನು ಕಂಡು ದ್ರೌಪದಿಯನ್ನು ಆ ಸಂದರ್ಭದಲ್ಲಿಯು 'ನಿನಗಾಗಿ ಏನು ಮಾಡಲಿ' ಎಂದು ಕೇಳಿದ. ದ್ರೌಪದಿ ಮುಗುಳು ನಕ್ಕಳು. ಭೀಮನ ಮುಖವನ್ನು ತನ್ನ ಮುಖದ ಬಳಿ ಸೆಳೆದುಕೊಂಡು ಕೊನೆಯುಸಿರಿನಲ್ಲಿ ಹೇಳಿದಳು 'ಮುಂದಿನ ಜನ್ಮದಲ್ಲಿ ನೀನೆ ಹಿರಿಯನಾಗು ಭೀಮ ನಿನ್ನ ಆಸರೆಯಲ್ಲಿ ನಾವೆಲ್ಲ ಸುರಕ್ಷಿತವಾಗಿ ಸಂತೋಷವಾಗಿ ಬಾಳಬಲ್ಲೆವು'[2] ಈ ಮಾತು ಭೀಮನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ.

ಹೀಗೆ ಮೂವರು ಭೀಮನ ಪಾತ್ರವನ್ನು ಯಥಾವತ್ತಾಗಿ ಚಿತ್ರಿಸಿದ್ದಾರೆ. ಜನಪದ ಭಾರತದಲ್ಲಿ ಬರುವ ಭೀಮನ ಪಾತ್ರ ಚಿತ್ರಣ ಪಂಪ ಮತ್ತು ಕುಮಾರವ್ಯಾಸರ ಕಾವ್ಯದಲ್ಲಿನ ಪಾತ್ರಕ್ಕಿಂತ ಸ್ವಲ್ಪಮಟ್ಟಿಗೆ ಭಿನ್ನವಾಗಿದ್ದುದಾಗಿದೆ. ಅದರಲ್ಲೂ ನಾಯಿಗಳ ವರ್ತನೆಗೆ ಭೀಮನ ಶಾಪವೇ ಕಾರಣವೆನ್ನುವ ಜನಪದ ಕವಿಯ ಕಲ್ಪನೆ ವಿಶೇಷವಾಗಿದೆ ಎನ್ನಬಹುದು.

**ಭೀಷ್ಮ:**

ಜನಪದ ಮಹಾಭಾರತದಲ್ಲಿ ಭೀಷ್ಮನ ಪಾತ್ರ ಇತರ ಭಾರತಗಳಲ್ಲಿ ಬರುವ ಪಾತ್ರಕ್ಕಿಂತ ಭಿನ್ನವಿದೆ. ಜನಪದ ಕವಿ ಭೀಷ್ಮ ಎನ್ನುವ ಹೆಸರಿಗೇನೇ ಹೊಸ ವ್ಯಾಖ್ಯಾನವನ್ನು ನೀಡಿದ್ದಾನೆ. ಜನಪದ ಭಾರತದಲ್ಲಿ ಭೀಷ್ಮನ ತಂದೆ ಶಾಂತರಾಜ, ತಾಯಿ ಗಂಗಾದೇವಿ. ಶಾಂತರಾಜ ಗಂಗಾದೇವಿಗೆ ಕೊಟ್ಟ ಮಾತಿನಂತೆ ಹುಟ್ಟಿದ ಮಕ್ಕಳನ್ನೆಲ್ಲ ಸಾಯುಸುತ್ತಿರಲು ಎಂಟನೇ ಮಗು ಹುಟ್ಟಿದಾಗ ಮಗುವನ್ನು ಸಾಯಿಸಬೇಕೆನ್ನುವಷ್ಟರಲ್ಲಿ ಆ ಮಗು

**ಅಪ್ಪನ ಬಾಯ ಕಟ್ಟದ್ದಿಯಲ್ಲೆ ತಾಯಿ**
**ಅಪ್ಪನ ಆಸೆಗೆ ನನ್ನ ಉಳಿಸಮ್ಮ**

ಎಂದು ಮಾತನಾಡಲು ಗಂಗೆ ಮಗುವಿನ ಆಸೆಯಂತೆ ಉಳಿಸಿ ತಾನು ಶಪಥದಂತೆ ಶಾಂತರಾಜನನ್ನು ತೊರೆದಳು. ಆ ಎಂಟನೆಯ ಮಗುವೇ ಗಂಗಾಪುತ್ರ. ಮುಂದೆ ಸುಗಂಧದೇವಿಗೆ ಮನಸೋತ ತನ್ನ ತಂದೆ ಶಾಂತರಾಜನಿಗೆ ಅವಳನ್ನು ಮದುವೆ ಮಾಡಿಸಲು ಮುಂದಾದಾಗ ಕಾಮದೇವ ಈ ಮದುವೆ ಬೇಡವೆಂದಾಗ ಕೋಪದ ಬೆಂಕಿಯಲ್ಲಿ ಅವನನ್ನು ಸುಟ್ಟು ಆತನ ಭಸ್ಮವನ್ನು ಹಣೆಗಿಟ್ಟುಕೊಂಡ ಅಂದಿನಿಂದ ಆತನಿಗೆ ಭೀಷ್ಮ ಎಂದು ಹೆಸರಾಯಿತು ಎನ್ನುವ ಹೆಸರಿನ ವ್ಯಾಖ್ಯಾನವನ್ನು ಜನಪದ ಕವಿ ನೀಡಿದ್ದಾನೆ. ಪಂಪ, ಕುಮಾರವ್ಯಾಸರ ಕಾವ್ಯದಲ್ಲಿ ಭೀಷ್ಮ ಎನ್ನುವ ಹೆಸರಿದೆ. ಆದರೆ ಅದು ಹೇಗೆ ಆ ಹೆಸರು ಬಂದಿತ್ತೆಂಬುದಕ್ಕೆ ವಿವರಣೆಯಿಲ್ಲ. ತಂದೆಗಾಗಿ ತನ್ನ ವೈವಾಹಿಕ ಜೀವನವನ್ನು ತಮ್ಮಂದಿರುಗಳಿಗಾಗಿ ತನ್ನ ರಾಜ್ಯ ಪದವಿಯನ್ನು ತ್ಯಾಗ ಮಾಡಿದ ಮಹಾಪುರುಷ. ತಮ್ಮಂದಿರು ಅಕಾಲ ಮರಣಕ್ಕೆ ತುತ್ತಾದಾಗ ಸ್ವತಃ ತಾಯಿಯೇ ನಾದನಿಯರನ್ನು ಸ್ವೀಕರಿಸಿ ವಂಶೋದ್ಧಾರ ಮುಂದುವರೆಸುವಂತೆ ಹೇಳಿದರೂ ತಿರಸ್ಕರಿಸುತ್ತಾನೆ. ಇದು ಆತನ ನೈತಿಕ ಮಟ್ಟವನ್ನು ಹಾಗೂ ಚಾರಿತ್ಯವನ್ನು ಎತ್ತಿ ಹಿಡಿಯುತ್ತದೆ.

ಪಾಂಡವರು ಮತ್ತು ಕೌರವರು ಬದ್ದ ದ್ವೇಷಿಗಳಾದರು. ಈತನು ಬದುಕಿದ್ದ ಅವಧಿಯಲ್ಲೇ ಕುಲನಾಶವಾಯಿತು. ಅದನ್ನೆಲ್ಲಾ ಕಣ್ಣಾರೆ ಕಾಣುವ ದೌರ್ಭಾಗ್ಯ ಭೀಷ್ಮನದಾಯಿತು. ಅಲ್ಲದೇ ಮರಣ ಸಂದರ್ಭದಲ್ಲಿ ಮುಳ್ಳಿನ ಮಂಚದ ಮೇಲೆ ಮಲಗುವುದು ಕೂಡ ವಿಧಿಬರಹ ಎಂಬುದು ಜನಪದ ಕವಿಯ ನಂಬಿಕೆಯಾಗಿದೆ. ಅದಕ್ಕಾಗಿಯೇ 'ಒತಿಕ್ಯಾತ ಭೀಷ್ಮರಿಗೆ ಶಾಪಕೊಟ್ಟ ಪರ್ವ' ಎಂದು ಒಂದು ಅಧ್ಯಾಯವನ್ನೇ ಮೀಸಲಿಟ್ಟಿದ್ದಾನೆ.

ಶಿಷ್ಟ ಭಾರತದಲ್ಲಿ ಭೀಷ್ಮರು ಶರಶಯ್ಯೆಯಲ್ಲಿ ಮಲಗಲು ಬೇರೆಯದೇ ಕಥೆಯಿದ್ದರೆ ಜನಪದ ಭಾರತದಲ್ಲಿ ಭೀಷ್ಮರು ತಾಯಿ ಗಂಗವ್ವನನ್ನು ಭೇಟಿಯಾಗಲು ಗಂಗಾ ತೀರಕ್ಕೆ ಬರುತ್ತಿರುವಾಗ ಅವರ ದೊಣ್ಣೆಯ ತುದಿಗೆ ಓತಿ ಸಿಕ್ಕಿ ಒದ್ದಾಡುತ್ತಿರುವಾಗ ನೋಡಿದ ಭೀಷ್ಮರು ಇದೆಂತಹ ಅಪಶಕುನವೆಂದು ದೊಣ್ಣೆಯ ತುದಿಯಿಂದ ಓತಿಯನ್ನು ಚಿಮ್ಮಿದರು ಆಗ ಓತಿ ರೊಟ್ಟೆಮುಳ್ಳಿನ ಮೇಲೆ ಬಿದ್ದು ವಿಲವಿಲ ಒದ್ದಾಡುತ್ತಾ ಭೀಷ್ಮರನ್ನು ಕಂಡು 'ನಿಮ್ಮಂಥವರು ಏನ್ ಮಾಡುದ್ರೂ ಸೈ ಅನ್ಕೊಂಡಿದ್ದೀರಾ ಕೋಲಿನ ತುದಿಗೆ ಸಿಕ್ಕಿದು ನಿಮ್ಮ ತಪ್ಪಲ ಆದರೆ ಒದ್ದಾಡುತ್ತಿದ್ದ ನನ್ನ ಕೋಲಿನಿಂದ ಚಿಮ್ಮಿದ್ದು, ರೊಟ್ಟೆಮುಳ್ಳಿಗೆ ಸಿಕ್ಕಿ ರಣಗಾಯವಾದುದ್ದು ನಿಮ್ಮದೆ ತಪ್ಪು ಎನ್ನುತ್ತಾ ನಾನು ಸಾಯುವಾಗ ಹೆಂಗೆ ಮುಳ್ಳ ಮೇಲೊರಗಿವ್ನೊ ಹಂಗೆ ನಿಮ್ಮ ಕಡೆಗಾಲ್ಕಿ ಮುಳ್ಳುಮ್ಯಾಲೆ ಒರುಗಪ್ಪ ಮುಳ್ಳುಗಳ ಮ್ಯಾಲೆ ನೀ ಒರಗಿ ಸಾಯಪ್ಪ' ಎಂದು ಶಾಪ ನೀಡಿತ್ತು. ಅದು ಕಾರಣವೇ ಕಡೆಗಾಲದಲ್ಲಿ ಭೀಷ್ಮರು ಶರಶಯ್ಯೆಯಲ್ಲಿ ಒರಗಿ ಪ್ರಾಣ ಬಿಟ್ಟರು ಎಂಬ ಕಲ್ಪನೆಯನ್ನು ಕಟ್ಟಿರುವ ಜನಪದ ಕವಿಯ ಪ್ರತಿಭೆ ಅನನ್ಯವಾದದ್ದು.

ಭೀಷ್ಮರು ಸೇನಾಧಿಪತಿಯಾಗಿ ಕೌರವರ ಪರ ನಿಂತು ಯುದ್ಧ ಪ್ರಾರಂಭಿಸಿದರು. ಭೀಷ್ಮರ ಶೌರ್ಯದ ಮುಂದೆ ಪಾಂಡವರು ನಿಲ್ಲಲ್ಲು ಸಾಧ್ಯವಾಗಲಿಲ್ಲ. ಕೃಷ್ಣ ದ್ರೌಪದಿಯನ್ನು ಮುಂದಿಟ್ಟುಕೊಂಡು ಅವರಿಂದ ಆಶಿರ್ವಾದ ಬೇಡಲು ಹೋದಾಗ ಸ್ವತಃ ಭೀಷ್ಮರೇ ತಮ್ಮನ್ನು ಸೋಲಿಸುವ ವಿಧಾನವನ್ನು ಹೇಳಿಕೊಡುವುದು ಅವರ ಪಾಂಡವರ ಪರವೆಂಬುದನ್ನು ತೋರಿಸಿಕೊಡುತ್ತದೆ. ಭೀಷ್ಮರು ಸ್ವತಃ ಕೃಷ್ಣನೇ ಆಯುಧವಿಡಿಯುವಂತೆ ಕಾದಾಡುತ್ತಾರೆ. ವಿಶೇಷವೆಂದರೆ ಕೃಷ್ಣ ಪ್ರಯೋಗಿಸಿದ ಚಕ್ರ ಭೀಷರನ್ನು ಏನು ಮಾಡದೇ ನಿಂತು ಬಿಡುತ್ತದೆ. ಶಿಖಂಡಿಯನ್ನು ಮುಂದಿಟ್ಟುಕೊಂಡು ಅರ್ಜುನ ಭೀಷ್ಮರನ್ನು ಶಸ್ತ್ರಸನ್ಯಾಸ ಸ್ವೀಕರಿಸುವಂತೆ ಮಾಡುತ್ತಾನೆ. ಭೀಷ್ಮರು ಸರಳುಮಂಚ ಬೇಕೆಂದು ಕೇಳಿದಾಗ ದುರ್ಯೋಧನ ಅವರಿಗೆ ಮಂಚ ತರವ ಆತುರ ತೋರಿದಾಗ ಭೀಷ್ಮರು ನಿನಗೇನು ಮಂದ ಬುದ್ದಿಯೇ ಎಂದು ಹೇಳುತ್ತಾ ಅರ್ಜುನನಿಗೆ ಮಂಚ ತಯಾರಿಸಿ ಕೊಡುವಂತೆ ಹೇಳಿ ಆ ಮೂಲಕ ಕೌರವರಿಗಿಂತ ಪಾಂಡವರು ಅದರಲ್ಲೂ ಅರ್ಜುನ ಶ್ರೇಷ್ಠ ವೀರ ಎಂಬುದನ್ನು ಸಾಬೀತು ಪಡಿಸುತ್ತಾರೆ. ಹಾಗೆಯೇ ನೀರನ್ನು ಬೇಡಿದಾಗಲೂ ಯಥಾ ಪ್ರಕಾರ ಅರ್ಜುನನಿಗೇನೇ ಪ್ರಾಧಾನ್ಯತೆಯನ್ನು ನೀಡಿದ್ದಾರೆ. ಈ ಎಲ್ಲ ಪ್ರಸಂಗಗಳಲ್ಲೂ ಭೀಷ್ಮರು ತಮ್ಮ ಶಕ್ತಿಯ ಪ್ರದರ್ಶನವನಷ್ಟೇ ದುರ್ಯೋಧನನಿಗೆ ನೀಡಿದ್ದರು ಮನಸನ್ನೆಲ್ಲ ಪಾಂಡವರ ಪರವಿತ್ತು ಎಂಬುದು ತೋರಿಸಿಕೊಡುತ್ತದೆ. ಜನಪದ ಕವಿ ಇದಕ್ಕೆ ನೀಡುವ ವಿಶ್ಲೇಷಣೆ ಎಂದರೆ ಪಾಂಡವರು ಧರ್ಮದ ಪರವಿದ್ದರು ಸ್ವತಃ ಪರಮಾತ್ಮನೇ ಅವರ ಪರವಾಗಿರುವಾಗ ಅವರಿಗೆ ಸೋಲಾಗುವುದು ಸಾಧ್ಯವಿಲ್ಲ ಎನ್ನುವ ಅಚಲ ವಿಶ್ವಾಸ. ಹೀಗೆ ಜನಪದ

ಕವಿ ಕೆಲವು ಘಟನೆಗಳನ್ನು ಹೊಸದಾಗಿ ಸೇರಿಸುವುದರ ಮೂಲಕ ಭೀಷ್ಮರ ಪಾತ್ರಕ್ಕೆ ವಿಶೇಷ ಮೆರಗನ್ನು ನೀಡಿರುವುದನ್ನು ಜನಪದ ಭಾರತದಲ್ಲಿ ಕಾಣಬಹುದಾಗಿದೆ.

ಪಂಪ ಭೀಷ್ಮರ ಪಾತ್ರವನ್ನು ವ್ಯಾಸಭಾರತದಲ್ಲಿ ಬರುವ ಪಾತ್ರದಂತೆ ಚಿತ್ರಿಸಿದ್ದರೂ, ದುರ್ಯೋಧನ ಭೀಷ್ಮರಿಗೆ ಸೇನಾಧಿಪತಿ ಪಟ್ಟ ಕಟ್ಟಿದಾಗ ಭೀಷ್ಮ ಕರ್ಣರಿಗೆ ಸ್ಪರ್ಧೆ ಹುಟ್ಟಿ ವಿರಸಕ್ಕೆ ತಿರುಗಿದ ಪ್ರಸಂಗವನ್ನು ಬಲುಸೊಗಸಾಗಿ ನಿರೂಪಿಸಿದ್ದಾನೆ. ಅದರಲ್ಲಿ ಅವರಾಡಿನ ಮಾತಿನಲ್ಲೇ ಅವರವರ ಸತ್ವಗುಣ ಪ್ರಕಾಶಿತವಾಗುತ್ತದೆ. ಇಲ್ಲಿ ಪಂಪ ಭೀಷ್ಮರ ಪಾತ್ರರಚನೆಗೆ ಹೆಚ್ಚಿನ ಆದ್ಯತೆಯನ್ನು ನೀಡಿರುವುದನ್ನು ಕಾಣಬಹುದು. ಭೀಷ್ಮರಿಗೆ ವೀರಪಟ್ಟವನ್ನು ಕಟ್ಟಿ 'ಹಗೆಗಳನ್ನಲ್ಲ ನನ್ನ ಮಂಚದ ಕಾಲಿಗೆ ಕಟ್ಟಿದೆನೆಂದು ದುರ್ಯೋಧನ ಹಿಗ್ಗುವುದನ್ನು ಕಂಡ ಕರ್ಣ ಭೀಷ್ಮರ ವೃದ್ಧಾಪ್ಯವನ್ನು ಹಂಗಿಸುತ್ತ ಅವರು ಹೇಗೆ ಹಗೆಗಳನ್ನು ಗೆಲ್ಲಬಲ್ಲರು. ಅಲ್ಲದೇ ತಾವೇ ಸಾಕಿದ ಪಾಂಡವರೊಡನೆ ಮನಸಿಟ್ಟು ಕಾದಾಡುವರೆಂಬುದು ಸಂದೇಹವೆನ್ನವಂತಹ ಅವರ ವೀರತನವನ್ನೇ ಸಂದೇಹಿಸುವಂತಹ ಮಾತುಗಳಾನ್ನಾಡಿದಾಗ ಭೀಷ್ಮರು ಕರ್ಣನಿಗೆ ಉತ್ತರ ನೀಡುವ ಪ್ರಸಂಗ ಪಂಪನ ಪ್ರತಿಭಾ ಮೂಸೆಯಲ್ಲಿ ಅದ್ವಿತೀಯವಾಗಿ ಅರಳಿದೆ. ಕರ್ಣ ಹಗೆಗಳ ಬೆನ್ನಲುಬನ್ನು ಮುರಿಯುವುದಾದರೆ ನನಗೆ ಪಟ್ಟಕಟ್ಟು' ಎಂದು ಹೇಳಿದಾಗ ದ್ರೋಣರು ಕರ್ಣನ ಕುಲವನ್ನು ಹಿಡಿದು ಹೀಯಾಳಿಸುವರು. ಹೀಗಾಗಲೇ ಕರ್ಣನಿಗೆ ತಾನು ಕುಲಹೀನನಲ್ಲ ಕ್ಷತ್ರಿಯನೆಂಬುದು ತಿಳಿದಿದ್ದರೂ ಕುಲದ ವ್ಯಾಖ್ಯಾನವನ್ನು ಮಾಡುತ್ತಾ ಭೀಷ್ಮರು ಯುದ್ಧ ಮಾಡುವವರೆಗೂ ತಾನು ಶಸ್ತ್ರ ಹಿಡಿಯುವುದಿಲ್ಲವೆಂದು ಶಪಥ ಮಾಡುತ್ತಾನೆ.

ಇಷ್ಟೆಲ್ಲಾ ವಾಗ್ವಿವಾದ ನಡೆಯುತ್ತಿದ್ದರೂ ಅದುವರೆಗೂ ಮೌನವಾಗಿದ್ದ ಭೀಷ್ಮರು ಕರ್ಣನ ಪ್ರತಿಜ್ಞೆಯುತ ಮಾತಿಗೆ ಮಾರ್ನುಡಿಯುತ್ತಾ ಆಡುವ ಒಂದೊಂದು ಮಾತುಗಳು ಅವರ ವ್ಯಕ್ತಿತ್ವವನ್ನು ಉಜ್ವಲಗೊಳಿಸಿದೆ. ಅವರಾಡಿನ ಒಂದೊಂದು ಮಾತು ಕರ್ಣನ ಅಹಂಕಾರಕ್ಕೆ ಕೊಡಲಿಯ ಪೆಟ್ಟಿನಂತೆ ಬೀಳುತ್ತದೆ. ಇದು ಸಾಮಾನ್ಯ ಯುದ್ಧವಲ್ಲ ಕುರುಕ್ಷೇತ್ರ ಎದುರಾಳಿಯಾಗಿ ನಿಂತಿರುವವನು ಅರ್ಜುನ ಎಲ್ಲರ ಸರದಿಯೂ ಬರುವುದು ಎನ್ನುತ್ತಾ ಹೇಳುವ

ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು ಮಿಕ್ಕ ತೋ
ಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತೇನೆನಗುಂಟೆ ಭಾರತಂ
ಕಲಹಮಿದಿರ್ಚುವಂ ಹರಿಗನಪ್ಪೊಡೆ ಮೊಕ್ಕಳಮೇಕೆ ನೀಂ ಪಳಂ
ಚಲೆದಪೆಯಣ್ಣ ಸೂಟ್ಪಡೆಯಲಪ್ಪುದು ಕಾಣ ಮಹಾಜಿರಂಗದೊಳ್

(ಪ.ಭಾ. ೧೦-೨೩)

ಮಾತು ನಿನ್ನ ಸರದಿಯು ಬರುತ್ತದೆ ಆತುರ ಪಡಬೇಡ ಎಂಬಂತಿದೆ. ಅಷ್ಟಕ್ಕೇ ನಿಲ್ಲದೇ ಮುದುಕ ಎಂದು ಹೀಯಾಳಿದ ಕರ್ಣನಿಗೆ ಉತ್ತರವಾಗಿ ಯುದ್ಧದಲ್ಲಿ ಕೈಕೊಳ್ಳುವ ಅಸಾಧಾರಣ ಪ್ರತಿಜ್ಞೆಯನ್ನು ಮಾಡಿ ಅದರಂತೆ ಹತ್ತು ದಿನ ಯುದ್ಧವನ್ನು ಭೀಷ್ಮರೇ ನಿರ್ವಹಿಸುತ್ತಾರೆ.

ಭೀಷ್ಮರ ಸಾಮರ್ಥವನ್ನು ಕಣ್ಣಾರೆ ಕಂಡ ಕರ್ಣನಿಗೆ ತಪ್ಪಿನ ಅರಿವಾಗಿ ತಾನೇ ಸೇನಾಧಿಪತಿಯಾದಾಗ ರಣರಂಗಕ್ಕೆ ತೆರಳುವ ಮುನ್ನ ಶರಶಯ್ಯೆಯಲ್ಲಿ ಮಲಗಿದ್ದ ಭೀಷ್ಮರನ್ನು ಕಂಡು ಕ್ಷಮೆಯಾಚಿದಾಗ, ಭೀಷ್ಮರ ಕರ್ಣನು ಹಾಗೇ ಮಾತನಾಡಲು ಅವನಿಗೆ ತನ್ನೊಡೆಯ ಮೇಲಿದ್ದ ಪ್ರೀತಿಯೇ ಕಾರಣ ಎಂದು ಹೇಳುತ್ತ ಪರಶುರಾಮರೇ ತಮ್ಮಿಬ್ಬರಿಗೂ ಗುರುಗಳಾದ ಕಾರಣ ತಾವು ಬಂಧುಗಳಾದವೆಂದು ಹೇಳುವ ಔದಾರ್ಯ ಭೀಷ್ಮರದು. ಹೀಗೆ ಭೀಷ್ಮರ ಪಾತ್ರವನ್ನು ಮೂಲಕ್ಕಿಂತ ಭಿನ್ನವಾಗಿ ಹೆಚ್ಚು ಮಾನವೀಯತೆಯಿಂದ ಕೂಡಿರುವಂತೆ ವರ್ಣಿಸಿದ್ದಾನೆ.

ಕುಮಾರವ್ಯಾಸಭಾರತದಲ್ಲೂ ಭೀಷ್ಮರ ಪಾತ್ರ ನ್ಯಾಯೋಚಿತವಾಗಿ ಚಿತ್ರಿತವಾಗಿದೆ. ಅಂದರೆ ವ್ಯಾಸಭಾರತ ಹಾಗೂ ಪಂಪಭಾರತದಲ್ಲಿ ಬರುವ ಪಾತ್ರ ಚಿತ್ರಣದಂತೆಯೇ ಕಂಡುಬರುತ್ತದೆ. ಮಹಾಭಾರತ ಕಥೆಯ ಆದಿಯಿಂದ ಅಂತ್ಯದವರೆಗೂ ಕಥಾ ಸೂತ್ರವಾಗಿ ಬರುವ ಪಾತ್ರ ಭೀಷ್ಮರದು ೧೮ ದಿನಗಳ ಯುದ್ಧದಲ್ಲಿ ೧೦ ದಿನಗಳ ಕಾಲ ಕರ್ಣನೊಡನೆ ಶಪಥ ಮಾಡಿದಂತೆ ಸೆಣೆಸಿ ಶತ್ರುಪಡೆಯ ಅಸಂಖ್ಯಾತ ಸೇನೆಯನ್ನು ಸಂಹರಿಸಿದವನು ಹಾಗೂ ಶಸ್ತ್ರ ಹಿಡಿಯುವುದಿಲ್ಲವೆಂದಿದ್ದ ಕೃಷ್ಣನು ಶಸ್ತ್ರ ಹಿಡಿಯುವಂತೆ ಮಾಡಿದ ಅಸಾಮಾನ್ಯ ವೀರ ಕೃಷ್ಣನನ್ನು ದೇವರೆಂದು ತಿಳಿದ ಭಕ್ತಾಗ್ರೇಸರ ಸಾಯುವ ಸಂದರ್ಭದಲ್ಲೂ ಅವನನ್ನೇ ಧ್ಯಾನಿಸುತ್ತಾ ಪ್ರಾಣ ಬಿಟ್ಟವನು.

ಕುರುವಂಶದ ಹಿರಿಯನಾಗಿ ಅದರ ಸಂರಕ್ಷಣೆಯ ಜವಾಬ್ದಾರಿಯನ್ನು ಹೊತ್ತು ನಿಂತ ಭೀಷ್ಮ ದುರ್ಯೋಧನನ ಪರವಾಗಿ ಪಾಂಡವರ ವಿರುದ್ಧವೇ ಯುದ್ಧ ಮಾಡಿದುದು ಅವನ ಬಗೆಗೆ ಇರುವ ಪ್ರಶ್ನೆ. ಇದಕ್ಕೆ ಕಾವ್ಯ ಉತ್ತರವನ್ನು ಒದಗಿಸಿದೆ. ಅನ್ನದ ಋಣ ತೀರಿಸಬೇಕೆಂದು ಅದ್ದರಿಂದಲೇ ಆತ ದುರ್ಯೋಧನನ ಪರವಾಗಿ ಯುದ್ಧ ಮಾಡಿದನೆಂಬುದು ಸತ್ಯ.

**ಕೌರವನ ಧನವೆಂಬ ಘನ ಸಂ**
**ಸಾರ ಗುಣದೊಳು ಬದ್ಧನಾದೆನು**
**ಧೀರ ನಾನೇ ಗೈವನೆನೆ ಯಮಸೂನು ಕೈಮುಗಿದು**
**ವೈರ ವೃತ್ತಿಯ ರಣದೊಳೆಮಗಿ**
**ನ್ನಾರು ಗತಿ ನೀನುಭಯ ನೃಪರಿಗೆ**
**ಕಾರಣಿಕ ನೀ ಮುನಿದಡೆಮಗಿನ್ನಾಸೆಯಿಲ್ಲೆಂದ**

**(ಕು.ಭಾ. ಭೀ.ಪ. ೨-೨೮)**

ಎಂಬುದಾಗಿ ಅವನೇ ಹೇಳಿಕೊಂಡಿರುವುದು ಲೌಕಿಕತೆ ಎಂಥವರನ್ನು ಹಂಗಿನ ಬಂಧನಕ್ಕೆ ಗುರಿ ಪಡಿಸುತ್ತದೆಂಬುದಕ್ಕೆ ಭೀಷ್ಮನ ಪಾತ್ರವೇ ನಿದರ್ಶನವಾಗುತ್ತದೆ. ಹೀಗಿದ್ದರೂ ಪಾಂಡವರು ಮತ್ತು ಕೌರವರ ಉಳಿವಿನ ಬಗೆಗೆ ಆತ ಕಾಳಜಿವಹಿಸುತ್ತಾನೆ ಎಂಬುದು ಮುಖ್ಯವಾಗುತ್ತದೆ.

ಭೀಷ್ಮ ಪಾತ್ರದ ಪೌರುಷ, ಘನತೆ, ವಿವೇಕಶೀಲತೆಗಳು ಅತ್ಯುಚ್ಚನೆಲೆಯಲ್ಲಿ ಪ್ರಕಟವಾಗುವುದು ಭೀಷ್ಮ ಪರ್ವದಲ್ಲಿ ಸೇನಾಪತಿಯಾಗಬೇಕೆಂದು ಕೋರಲು ಬಂದ ದುರ್ಯೋಧನ ಭೀಷ್ಮನನ್ನು ಕೃಷ್ಣನಿಗೆ ಸಮಾನನೆಂದೂ ನೀವು ನಮಗಿರಲು ನಮ್ಮನ್ನು ಜಯಿಸಬಲ್ಲ ವೀರನಾವನು ಎಂದು ಹೊಗಳಿದಾಗ ಭೀಷ್ಮ ಉಬ್ಬಿಹೋಗುವುದಿಲ್ಲ. ಕೃಷ್ಣನ ಮಹಿಮೆಯನ್ನು ಪಾಂಡವರ ಗರಿಮೆಯನ್ನು ಮನವರಿಕೆ ಮಾಡಿಕೊಟ್ಟು ತನ್ನ ಮತ್ತು ಬೆಂಬಲಿಗರ ಪರಿಮಿತಿಯ ಅರಿವನ್ನು ಅವನಲ್ಲಿ ಮೂಡಿಸಲು ಯತ್ನಿಸುತ್ತಾನೆ. ದುರ್ಯೋಧನನ ಎದುರಿಗೆ ತನ್ನ ಮಿತಿಗಳನ್ನು ಕುರಿತು ಮಾತನಾಡಿದುದು ಭೀಷ್ಮನ ಹಿರಿಮೆ ಮತ್ತು ಕಳಕಳಿಯನ್ನು ತೋರಿಸುತ್ತದೆ.

ಹೀಗೆ ಮೂವರು ಭೀಷ್ಮರ ಪಾತ್ರವನ್ನು ತಮ್ಮ ಕಾವ್ಯದ ಉದ್ದೇಶಕ್ಕೆ ಚ್ಯುತಿ ಬರದಂತೆ ಚಿತ್ರಿಸಿದ್ದಾರೆ. ಜನಪದ ಭಾರತದ ಭೀಷ್ಮ ಪಾತ್ರ ಪಂಪ, ಕುಮಾರವ್ಯಾಸರ ಕಾವ್ಯಕ್ಕಿಂತ ಭಿನ್ನವಾಗಿದ್ದುದಾಗಿದೆ. ಉಳಿದಂತೆ ಮೂಲಭಾರತದ ಪಾತ್ರವನ್ನೇ ಮೂವರು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ತಮ್ಮ ಕಾವ್ಯಗಳಲ್ಲಿ ಭೀಷ್ಮರ ವ್ಯಕ್ತಿತ್ವವನ್ನು ಅನಾವರಣಗೊಳಿಸಿದ್ದಾರೆ.

**ಕುಂತಿ:**

ಮಹಾಭಾರತದಲ್ಲಿ ಬರುವ ಪಾತ್ರಗಳೆಲ್ಲವು ಪುರುಷ ಪಾತ್ರಗಳೇ ಆಗಿವೆ. ಬರುವಂಥ ಸ್ತ್ರೀ ಪಾತ್ರಗಳಲ್ಲಿ ಪ್ರಮುಖವಾದದ್ದು ದ್ರೌಪದಿ. ದ್ರೌಪದಿಯು ಮಹಾಭಾರತ ಯುದ್ಧಕ್ಕೆ ಕಾರಣಳು ಎಂಬುದನ್ನು ಬಹುಮಟ್ಟಿಗೆ ಎಲ್ಲರು ಒಪ್ಪಿಕೊಂಡಿದ್ದಾರೆ. ಅವಳೇ ಹುಟ್ಟೇ ದ್ವೇಷದಿಂದ ಕೂಡಿದ್ದು

ಎಂಬುದನ್ನು ಕಾವ್ಯ ಅವಲೋಕಿಸಿದರೆ ತಿಳಿಯುತ್ತದೆ. ಇಡೀ ಮಹಾಭಾರತ ದ್ರೌಪದಿಯನ್ನು ಆಧರಿಸಿದ್ದರೂ, ಅಲ್ಲಲ್ಲಿ ಪ್ರಾಮುಖ್ಯತೆ ಪಡೆಯುವ ಇತರ ಸ್ತ್ರೀ ಪಾತ್ರಗಳೆಂದರೆ ಕುಂತಿ ಹಾಗೂ ಗಾಂಧಾರಿ.

ಜನಪದ ಭಾರತದಲ್ಲಿ ಕುಂತಿ ಪ್ರಮುಖ ಪಾತ್ರಧಾರಳಾಗಿದ್ದಾಳೆ. ಕುಂತಿಯನ್ನು ಧಾನ್ಯಲಕ್ಷ್ಮಿ ಎಂಬಂತೆ ಸಂಭೋಧಿಸಲಾಗಿದೆ. ಹಾಗೆಯೇ ಜನಪದ ಕವಿ ಕುಂತಿಯನ್ನು ಭೂಮಿಯ ಮಗಳು ಅವಳು ಭೋಜರಾಜನು ಭೂಮಿಯನ್ನು ಉಳುವಾಗ ನೇಗಿಲ ಕುಳಕ್ಕೆ ಸಿಕ್ಕಿದಳು ಎಂಬುದಾಗಿ ವಿವರಣೆ ನೀಡಿದ್ದಾನೆ. ಈ ಪ್ರಸಂಗ ರಾಮಾಯಣದ ಸೀತೆಯ ಜನನಕ್ಕೆ ಸಾಮ್ಯವಿದೆ ಎನ್ನಬಹುದು. ಇವಳ ಹೆಸರಿನಿಂದಲೇ ಕುಂತಲ ರಾಜ್ಯವಾಯಿತು. ಕುಂತಿಯೇ ಮುಂದೆ ಕೊಂತಮ್ಮಳಾದಳು. ಈಕೆ ಪಾಂಡುರಾಜನೊಡನೆ ವಿವಾಹವಾಗಿ ಧರ್ಮರಾಜ, ಭೀಮ, ಅರ್ಜುನ ಎಂಬ ಮಕ್ಕಳನ್ನು ಪಡೆಯುತ್ತಾಳೆ. ಪಾಂಡವರ ಐಕ್ಯತೆಯನ್ನು ಕಟ್ಟಿದವಳು ಕುಂತಿ. ಆದರೆ ಕರ್ಣನ ದುರಂತಕ್ಕೂ ನಾಂದಿ ಹಾಡಿದವಳು ಕುಂತಿಯೇ ಎನ್ನಬಹುದು.

ಗಾಂಧಾರಿ ಗಜನೋಂಪಿ ವ್ರತವನ್ನು ಮಾಡಿ ತನ್ನನು ಆಹ್ವಾನಿಸದೇ ಇದ್ದಾಗ ಅಸಮಾಧಾನಗೊಂಡ ಕುಂತಿ ತಾನು ವ್ರತ ಮಾಡಬೇಕೆಂದು ಮಕ್ಕಳ ಮುಂದೆ ತನ್ನ ಅಪೇಕ್ಷೆ ವ್ಯಕ್ತಪಡಿಸುತ್ತಾಳೆ. ಶೂರರಾದ ಇವಳ ಮಕ್ಕಳು ವ್ರತಕ್ಕಾಗಿ ದೇವೇಂದ್ರನ ಐರಾವತವನ್ನೇ ತರಿಸಿಕೊಡುತ್ತಾರೆ. ಹೀಗೆ ತನಗಾದ ಅಪಮಾನವನ್ನು ತೀರಿಸಿಕೊಳ್ಳುತ್ತಾಳೆ. ಕುಂತಿಗೆ ತನ್ನ ಮಕ್ಕಳ ಶಕ್ತಿಯ ಪರಿಚಯವಿರುತ್ತದೆ. ಅದರಿಂದಲೇ ಏಕಚಕ್ರನಗರದಲ್ಲಿ ಬಕಾಸುರನ ಸಂಹಾರಕ್ಕೆ ತನ್ನ ಮಗನಾದ ಭೀಮನನ್ನು ಕಳುಹಿಸಲು ಒಪ್ಪಿಗೆ ಸೂಚಿಸುತ್ತಾಳೆ. ಆ ಮೂಲಕ ಊರಿನವರ ವಿಶ್ವಾಸ ಗಳಿಸುತ್ತಾಳೆ.

ಅರ್ಜುನನ ಸ್ವಯಂವರದಲ್ಲಿ ದ್ರೌಪದಿಯನ್ನು ಗೆದ್ದು ಕರೆತಂದಾಗ ಆತ ಹೇಳಿದ ಹೆಣ್ಣು ಎಂಬುದನ್ನು ಹಣ್ಣೆಂದು ತಿಳಿದು ಐವರು ಹಂಚಿಕೊಳ್ಳಿ ಎನ್ನುತ್ತಾಳೆ ಸರಿಯಾಗಿ ಕೇಳಲಿಲ್ಲವೆಂದು ಭಾವಿಸಿದ ಅರ್ಜುನ ಮತ್ತೊಮ್ಮೆ ಹಣ್ಣಲ್ಲ ಹೆಣ್ಣು ಎಂದಾಗ ನೀವು ತಂದುದ ಐವರು ಹಂಚಿಕೊಳ್ಳಿ ನನ್ನ ಮೇಲಾಣೆ ಎನ್ನುತ್ತಾಳೆ. ವಿಧಿಯಿಲ್ಲದೆ ದ್ರೌಪದಿ ಪಂಚಪಾಂಡವರ ಹೆಂಡತಿಯಾಗತ್ತಾಳೆ. ಇದಕ್ಕೆ ಕುಂತಿಯೇ ಕಾರಣವೆನ್ನಬಹುದು. ಆಕೆಯ ಶ್ರವಣದೋಷವೆನ್ನುವುದಕ್ಕಿಂತ ಮಕ್ಕಳ ಒಗ್ಗಟ್ಟನ್ನು ಮುರಿಯಬಾರದೆಂಬ ಉದ್ದೇಶವೇ ಕಾರಣವಾಗಿರಬಹುದು.

ಜೋಗಿ ವೇಷದಲ್ಲಿ ಬಂದ ಅರ್ಜುನ 'ನಾನೇ ನಿನ್ನ ಮಗ' ಎಂದು ಹೇಳಿದಾಗ ಆಕೆಗಾದ ಸಂತೋಷ ಅಷ್ಟಿಷ್ಟಲ್ಲ. ಆದರೆ ಅದೇ ಮಗನ ರಕ್ಷಣೆಗಾಗಿ ತಾನೇ ಹೆತ್ತು ಬಿಸಾಡಿದ್ದ ಮಗ ಕರ್ಣನನ್ನು ಕಂಡು ಅವನಿಂದ ತನ್ನ ಮಗನನ್ನು ರಕ್ಷಿಸಿಕೊಳ್ಳುವಾಗಿನ ಕುಂತಿಯ ತಾಯತ್ತನ ಸ್ವಾರ್ಥದಿಂದ ಕೂಡಿದ್ದುದಾಗಿದೆ. ಇದಕ್ಕೆ ವಿಧಿನಿಯಮವೆಂಬ ಮಾತನ್ನು ಮತ್ತೆ ಮತ್ತೆ ಹೇಳಬೇಕಾಗುತ್ತದೆ.

ಕುಂತಿ ಭೂಮಿಯಲ್ಲಿ ವ್ಯವಸಾಯ ಮಾಡಲು ಕಾರಣಕರ್ತಳು ಅದರಿಂದಲೇ ಕವಿ ಅವಳನ್ನು ಧಾನ್ಯಲಕ್ಷ್ಮಿಯ ಪ್ರತಿರೂಪ ಎಂದು ಕರೆಯಲಾಗಿದೆ. ಗಜನೋಂಪಿ ಮತ್ತು ರಾಜಸೂಯ ಯಾಗಕ್ಕೆ ದೇವಲೋಕದಿಂದ ಬಂದ ಧಾನ್ಯಗಳಲ್ಲಿ ಒಂದೊಂದು ಕಾಳನ್ನು ಉಳಿಸಿಕೊಂಡವಳು. ಮುಂದೇ ಅದೇ ವ್ಯವಸಾಯಕ್ಕೆ ಬಿತ್ತನೆಗಳಾದವು. ಊರಿನ ಜನ ಏನಾದರೂ ಬಿತ್ತಿ ಎಂದಾಗ ಕುಂತಿ 'ಅವರೆ'ಯನ್ನು ಬಿತ್ತಿ ಸೂರ್ಯ ಚಂದ್ರ ಇರುವವರೆಗೂ 'ಪಾಂಡವರು ಅವರೆ' ಎನ್ನುವಂತೆ ಮಾಡಿದಳು.

ಕರ್ಣನು ತನ್ನ ಮಗನೆಂದು ಪಾಂಡವರಿಗೆ ತಿಳಿಸಿದವಳು ಕುಂತಿಯೇ ಅರ್ಜುನ ಬಾಣದಿಂದ ಕರ್ಣ ಸತ್ತ ಸುದ್ದಿಯನ್ನು ಕೇಳಿ ಓಡೋಡಿ ಬಂದಳು.

**ಅಯ್ಯೋ ಮಗನೆ ಕರ್ಣ**
**ನಿನ್ನ ಕೊಂದೋಳು ನಾನೇ**
**ಅಂತ್ಹೇಳಿ ಕೊಂತ್ಯಮ್ಮ**
**ಕರ್ಣನ ಮೇಲೆ ಬಿದ್ದು**
**ಒದ್ದಾಡುತಿರುವಾಗ**
**ಪಾಂಡವರು ನೋಡಿ**
**ಐಚೋಜಿಗ ಪಟ್ಟಿದ್ದಾರೆ**
**(ಜ.ಭಾ. ಪು. ೫೩೬)**

ಕರ್ಣ ತಮ್ಮ ಅಣ್ಣನೆಂದು ತಿಳಿದ ಧರ್ಮರಾಯ ಕುಂತಿಯನ್ನು ಅಪಾದಿಸುತ್ತಾ ಇನ್ನು ಮುಂದೆ 'ಹೆಂಗಸರ ರುದಯದಲ್ಲಿ ಯಾವೊಂದು ರಗಸ್ಯವೂ ನಿಲ್ಲದೆ ಬಯಲಾಗಲಿ' ಎಂಬ ಶಾಪವನ್ನು ಕೊಡುತ್ತಾನೆ. ಕುಂತಿಯ ಪಾತ್ರ ಇಡೀ ಕಾವ್ಯದಲ್ಲಿ ಫಲವಂತಿಕೆಯ ಸಂಕೇತವಾಗಿ ಚಿತ್ರಿತಳಾಗಿದ್ದಾಳೆ. ಇವಳ ಸ್ಮರಣಾರ್ಥ ಇಂದಿಗೂ ಹಳ್ಳಿಗಳಲ್ಲಿ 'ಕೊಂತಿ ಪೂಜೆ' ಮಾಡುವ ಸಂಪ್ರದಾಯ ಇವತ್ತಿಗೂ ಆಚರಣೆಯಲ್ಲಿದೆ.

**ಶಕುನಿ:**

ಜನಪದ ಭಾರತದ ಪ್ರಮುಖ ಪಾತ್ರಧಾರಿ ಶಕುನಿ. ಕೌರವರ ಸರ್ವನಾಶಕ್ಕೆ ಪರೋಕ್ಷವಾಗಿ ಕಾರಣನಾದವನು ಈತನೇ. ಗಾಂಧಾರ ರಾಜನ ನೂರೊಂದು ಮಕ್ಕಳಲ್ಲಿ ಶಕುನಿ ಕಿರಿಯವನು. ಬಾಲ್ಯದಿಂದಲ್ಲೂ ದುಷ್ಟನಾಗಿದ್ದ ಇವನನ್ನು ಅರಮನೆಯಿಂದ ಹೊರಹಾಕಲಾಯಿತು. ಆಗ ಮನೆಯಿಂದ ಹೊರಬಿದ್ದ ಈತ ಮಂತ್ರವಾದಿ ಭೂದೇರನಾಥನ ಮಠದಲ್ಲಿದ್ದು ಅವರನ್ನು ಸಂಪ್ರೀತಿಗೊಳಿಸಿ 'ನಾನು ಪಗಡೆ ಆಟದಲ್ಲಿ ಯಾರಿಗೂ ಸೋಲಬಾರದು' ಎಂಬ ವರವನ್ನು ಪಡೆದುಕೊಂಡವನು ತಂದೆಯ ಮರಣಾನಂತರ ಗಾಂಧಾರಿ ಹಾಗೂ ಧೃತರಾಷ್ಟ್ರರನ್ನು ಕೂಡಿಕೊಂಡು ಕುರುಡನಾದ ಅವನಿಂದ ಹೇಗಾದರೂ ರಾಜ್ಯವನ್ನು ಕಸಿದುಕೊಂಡು ನಾವೇ ರಾಜ್ಯಭಾರ ಮಾಡಬಹುದೆಂದು ಕನಸು ಕಂಡವನು.

ಜನಪದ ಕವಿ ಶಕುನಿಯ ಜನನಕ್ಕೂ ಪುರಾಣ ಕಥೆಯ ಲೇಪನವನ್ನು ಅಂಟಿಸಿದ್ದಾನೆ. ದುಷ್ಟನಾದ ತಾಮ್ರಕೇಶಿಯೇ ಶಕುನಿಯಾಗಿ ಹುಟ್ಟಿದ್ದಾನೆ. ೧೮ ಅಕ್ಷೋಹಿಣಿ ಸೈನ್ಯ ನಾಶಕ್ಕೆ ಇವನೇ ಸರಿಯಾದವನೆಂದು ಕೌರವರಿಗೆ ಇವ್ನು ಮುಳ್ಳಾಗಬೇಕೆಂದು ಭಾವಿಸಿ ಕೃಷ್ಣ, ಗಾಂಧಾರರು ಮತ್ತು ನೂರು ಜನ ಕೌರವರು ಆಡುವ ಆಟದ ಮೈದಾನದಲ್ಲಿ ಕಲ್ಲು ಮೊಳ್ಳೆ ಇರುವಂತೆ ಮಾಡಿದನು ಶಕುನಿಯ ಸಹೋದರ ಅದನ್ನು ಎಡವಿ ಬಿದ್ದಾಗ ಕೌರವರು ನೆಗಾಡಿದರು. ಅಪಮಾನಿತನಾದ ಗಾಂಧಾರರು ಆ ಕಲ್ಲು ಮೊಳ್ಳೆಯನ್ನು ಬುಡಸಮೇತ ಕಿತ್ತು ಹಾಕಿದರು. ಈ ಪ್ರಸಂಗ ಚಾಣಕ್ಯನ ಕಥೆಗೆ ಹೋಲಿಕೆಯಾಗುತ್ತದೆ. ತಾನು ಬಿದ್ದಾಗ ನಕ್ಕವರ ವಂಶವನ್ನು ನಾಶಪಡಿಸುತ್ತೇನೆಂದು ಗಾಂಧಾರರು ನುಡಿದಾಗ ಕಂಗೆಟ್ಟ ಕೌರವರು 'ನಮ್ಮ ಮನೆಗೆ ಬಂದು ನಮ್ಮ ಅನ್ನನ ತಿಂದು ನಮ್ಮ ಮ್ಯಾಲೆ ಇವು ಅದುಕಾರ ತೋರುತವ್ರೆ' ಎಂದು ರೇಗಾಡುತ್ತಾ 'ಇವ್ರು ನಮ್ಮೊಮುಸ್ಪ ನಿರೊಮ್ಸ ಮಾಡೋದಕ್ಕೆ ಮುಂಚೆ ನಾವು ಬುದ್ದಿ ಓಡಿಸಿ ಇವರ ವಮುಸವ ನಾವು ಮುಗಿಸಲೆಬೇಕು' ಎಂದು ನಿರ್ಧರಿಸಿ ಶಕುನಿ ಸಹೋದರರರನ್ನು ನೆಲಮಾಳಿಗೆಯಲ್ಲಿಟ್ಟು ಕೊಲ್ಲುವ ಕಾಲದಲ್ಲಿ ಸಹೋದರರೆಲ್ಲರೂ ಸೇರಿ ಶಕುನಿಯನ್ನು ಬದುಕುಳಿವಂತೆ ಮಾಡುತ್ತಾರೆ. ಜನಪದ ಕವಿ ಶಕುನಿಯ ಹೆಸರಿನ ವಿಶ್ಲೇಷಣೆಯನ್ನು

ಶ – ಎಂದರೆ ಶತ್ರುಗಳನ್ನೆಲ್ಲಾ

ಕು – ಎಂದರೆ ಕುತಂತ್ರದಿಂದ

ನಿ – ಎಂದರೆ ನಿರ್ನಾಮ ಮಾಡುವವನು

ಎಂದು ವಿವರಣೆ ನೀಡಿದ್ದಾನೆ. ಇಂದಿಗೂ ಈ ಪಾತ್ರ ನಾಟಕಗಳಲ್ಲಿ ಜೀವಂತವಾಗಿದ್ದು ತನ್ನ ಹೆಸರನ್ನು ಇದೇ ರೀತಿ ವಿಶ್ಲೇಷಿಸುವುದನ್ನು ಕಾಣಬಹುದು.

ಮುಂದೆ ದುರ್ಯೋಧನನ ದುಷ್ಟಪಡೆ ಸೇರಿಕೊಂಡ ಶಕುನಿ ಪಾಂಡವರನ್ನು ನಾಶಪಡಿಸುವಂತೆ ಹೇಳುವ ತಂತ್ರಗಳೆಲ್ಲ ದುರ್ಯೋಧನನಿಗೆ ಕೆಡುಕನ್ನೇ ಉಂಟು ಮಾಡುತ್ತದೆ. ಆದರೆ ಅವನಲ್ಲೂ ಎಲ್ಲೊ ಕೊಂಚ ಒಳ್ಳೆತನವಿತ್ತುತೆಂಬುದನ್ನು ಕವಿ ದ್ರೌಪದಿಯ ವಸ್ತ್ರಾಪಹರಣ ಪ್ರಸಂಗದಲ್ಲಿ ನಿರೂಪಿಸಿದ್ದಾನೆ. ದುರ್ಯೋಧನ ದ್ರೌಪದಿಯ ಸೀರೆ ಎಳೆಯಬೇಕೆಂದಾಗ ಶಕುನಿ 'ಇಂಥ ಮನಸ್ಯಾಕೆ ನಿನಗೆ' ಎನ್ನುವುದರ ಮೂಲಕ ಅವನ ಪಾತ್ರವನ್ನು ಜನಪದ ಕವಿ ಎತ್ತರಕ್ಕೆ ಏರಿಸಿದ್ದಾನೆ.

ಶಕುನಿ ಮಲೆಯಾಳಿ ಮಂತ್ರವಾದಿಯಿಂದ ಪಾಂಡವರನ್ನು ನಾಶ ಮಾಡಲು ಮುಂದಾಗುತ್ತಾನೆ. ಅಜ್ಞಾತವಾಸ (ಮರೆವಾಸ)ದಲ್ಲಿದ್ದ ಪಾಂಡವರನ್ನು 'ಗೂಢಚಾರ್ಯರಿಂದ ಹುಡುಕಿಸು' ಮತ್ತೆ ಅವರು ವನವಾಸಕ್ಕೆ ಹೊಗಬೇಕಾಗುತ್ತದೆ ಎಂಬ ತಂತ್ರವನ್ನು ಕೌರವನಿಗೆ ನೀಡುತ್ತಾನೆ. ಹೆಜ್ಜೆ ಹೆಜ್ಜೆಗೂ ತಂತ್ರ ಹೊಸೆಯುವುದರಲ್ಲಿ ನಿಸ್ಸೀಮನಾಗಿದ್ದರೂ ಕೆಲವೊಮ್ಮೆ ಅವು ಫಲ ನೀಡಿದರೂ ಮತ್ತೆ ಕೆಲವೊಮ್ಮೆ ಕೌರವನಿಗೆ ನಿರಾಸೆಯನ್ನು ಅಪಮಾನವನ್ನು ತರುತ್ತಿತ್ತು. ಉದಾಹರಣೆಗೆ 'ದಾನಶೂರ ದುರ್ಯೋಧನ' ಎಂಬ ಬೋರ್ಡ್ ಹಾಕುವ ಸಲಹೆ ಇಲ್ಲಿ ಉಲ್ಲೇಖಾರ್ಹ.

'ಪಾಂಡವರು ಅವರೆ ಪರ್ವ'ದಲ್ಲಿ ಶಕುನಿಯ ಮೂಲೋದ್ದೇಶ ಅರಿವಾಗುತ್ತದೆ. ನರಕದಲ್ಲಿದ್ದ ದುರ್ಯೋಧನ ಹಾಗೂ ಶಕುನಿ ಅವರೇ ಗಿಡವನ್ನು ಕಂಡು 'ಭೂಮಿಯಲ್ಲಿ ಪಾಂಡವರ ಅವರೇ ಗಿಡ ಉಳಿಯುತ್ತದೆ' ಏನು ಮಾಡುವುದು ಎಂದು ಯೋಚಿಸಿದರು. ಶಕುನಿಯು ಚಿತ್ತೆಮಳೆಯನ್ನು ಹುಯ್ಯುಸಿ ಹುಳುಹುಪ್ಪಟೆ ಚಿಟ್ಟೆಗಳನ್ನು ಸೃಷ್ಟಿಮಾಡಿ ಅವರೇ ಗಿಡವನ್ನು ನಾಶಮಾಡು ದುರ್ಯೋಧನ ಎಂದ ಹಾಗೆಯೇ ದುರ್ಯೋಧನ ಚಿಟ್ಟೆಮಳೆ ಹುಯ್ಯುಸಿದ. ಈ ದುಷ್ಕೃತ್ಯದಿಂದಾಗಿ ದುರ್ಯೋಧನಿಗೆ ದಕ್ಕಿದ ಚೂರು ಪುಣ್ಯವು ಕ್ಷಯಿಸಿ ನರಕದ ಗುಂಡಿಯೊಳಕ್ಕೆ ಬಿದ್ದು ಹೋಗುತ್ತಾನೆ. ಇದನ್ನು ಕಂಡ ಶಕುನಿ 'ನಿನಗೆ ಇಂಥ ಸ್ಥಿತಿ ಬರಲೆಂದೇ ನಾನು ಚಿಟ್ಟೆಮಳೆ ಹುಯ್ಯುಸುವ ಉಪಾಯ ಹೇಳಿಕೊಟ್ಟಿದ್ದು' ಎಂದ ಇದರಿಂದ ಕೋಪಗೊಂಡ ದುರ್ಯೋಧನ;

ದಡ ದಢನೆ ಬಂದು ಶಕುನಿಯ ಝಾಡ್ಸಿ ಒದ್ದ
ಆ ಕೂಡಲೆ ಶಕುನಿ ನರಕದಿಂದ ಭೂಮಿಗೆ ಧೊಪ್ಪನೆ ಬಿದ್ದ
ಅವತ್ತಿನಿಂದ ಭೂಮಿ ಮೇಲೆ
ಶಕುನಿ ಸಂತಾನ ಹೆಂಗೋ ಉಳುಕೊಂಡದೆ
ಕಲಿಂಗ ಕಳಿಯೋನ್ತನಕ
ಶಕುನಿ ಸಂತಾನ ಇದ್ದೇ ಇರ್ತದೆ
ಶಕುನಿ ಬಿದ್ದ ಸ್ಥಳುವೆ ಈವತ್ತುನ
ಶಕುನೀ ಪುರ ಅಂತಾಗದೆ

(ಜ.ಭಾ. ಪು. ೪೯೮)

ರಾಗೌ ಹೇಳುವಂತೆ 'ಜನಪದ ಮಹಾಭಾರತದ ಪ್ರಕಾರ ಕೌರವರ ಸರ್ವನಾಶಕ್ಕೆ ಕೃಷ್ಣ ಒಂದು ಕಡೆ ಪ್ರಯತ್ನಿಸಿದರೆ, ಮತ್ತೊಂದು ಕಡೆ ಅದೇ ಕೆಲಸಕ್ಕೆ ಶಕುನಿ ಪ್ರಯತ್ನ ನಡೆಸುತ್ತಾನೆ. ಹಾಗಾಗಿ ಕೃಷ್ಣ ಒಂದು ಶಕ್ತಿ ಶಕುನಿ ಮತ್ತೊಂದು ಶಕ್ತಿ. ವ್ಯತ್ಯಾಸವೆಂದರೆ ಕೃಷ್ಣ ಕಟ್ಟುವವಕ್ರಿಯೆಗೆ ಸಂಕೇತ ಶಕುನಿ ಒಡೆಯುವ ಕ್ರಿಯೆಗೆ ಸಂಕೇತ. ಹಾಗೆ ನೋಡಿದರೆ ಈ ಕಟ್ಟುವ ಮತ್ತು ಒಡೆಯುವ ಕ್ರಿಯೆಗಳಿಂದಾದದು ಮಹಾಭಾರತ ಕಥಾನಕ. ಜನಶ್ರುತಿಯಲ್ಲಿ ಬಹಳಕಾಲದಿಂದ ಜನಪ್ರಿಯವಾಗಿರುವ ಶಕುನಿ ಮೂಲ ಪ್ರಕರಣಕ್ಕೆ ಕಾವ್ಯ ಅಭಿವ್ಯಕ್ತಿ ನೀಡಿದೆ. ಸೇಡಿನ ಶಕುನಿ ಪರ್ವ ಎಂದೇ ಜನಪದ ಮಹಾಭಾರತದಲ್ಲಿ ಇದನ್ನು ಕರೆಯಲಾಗಿದೆ. ಶಕುನಿಗೆ ತಾಮ್ರಕೇಶಿಯ ಹಿನ್ನಲೆ ಕೊಡುವುದನ್ನು ಕವಿ ಮರೆಯುವುದಿಲ್ಲ ಯಾವುದಕ್ಕೂ ಜನ್ಮಾಂತರ ಸಂಬಂಧ ಕೊಡುವುದು ಜನಪದ ಕವಿಯ ಉದ್ದೇಶ'[೮] ಎಂಬ ಅವರ ಮಾತು ಶಕುನಿಯ ವ್ಯಕ್ತಿತ್ವವನ್ನು ಉಜ್ವಲಗೊಳಿಸುತ್ತದೆ. ಕುರುಕ್ಷೇತ್ರ ಯುದ್ಧ ನಡೆದಾಗ ಶಕುನಿ ಸಹದೇವನಿಂದ ಹತನಾಗುತ್ತಾನೆ.

ಪಂಪ, ಕುಮಾರವ್ಯಾಸ ಕಾವ್ಯದ ಉದ್ದೇಶ ಹಾಗೂ ರಚನೆಯ ವ್ಯತ್ಯಾಸಕ್ಕನುಗುಣವಾಗಿ ಕಾವ್ಯದ ನಾಯಕ ಪ್ರತಿನಾಯಕರನ್ನು ವೈಭವೀಕರಿಸಿದ್ದಾರೆ. ಲೌಕಿಕ ಕಾವ್ಯವೆಂದು ಕರೆದ ಪಂಪ ತನ್ನ ಕಾವ್ಯ 'ಇವರ್ಗಳಿಂ ಲೋಕ ಪೂಜ್ಯಂ' ಎಂದು ಹೇಳುವ ಪಟ್ಟಿಯಲ್ಲಿ ಶಕುನಿಯ ಹೆಸರಿಲ್ಲ. ಶಕುನಿಯ ಪಾತ್ರವನ್ನು ಮೂಲ ಮಹಾಭಾರತದಲ್ಲಿ ಚಿತ್ರಿತವಾಗಿರುವಂತೆಯೇ ಚಿತ್ರಿಸಿದ್ದಾನೆ. ದುಷ್ಟನಾದ ಶಕುನಿ ಯಾವಾಗಲೂ ದುರ್ಯೋಧನನಿಗೆ ದುರ್ಭೋಧನೆ ಮಾಡುತ್ತಾ ಒಳಿತನ್ನು ಬಯಸುತ್ತೇನೆಂದು ಬಾಯಲ್ಲಿ ಹೇಳಿದರೂ ಅವನು ಕೌರವ ನಾಶವನ್ನೇ ಮಾಡಿದ್ದನ್ನು ಪಂಪ ಯಥಾವತ್ತಾಗಿ ಚಿತ್ರಿಸಿದರೆ, ಕುಮಾರವ್ಯಾಸನಾದರೂ ತನ್ನ ಕಥಾನಾಯಕ ಕೃಷ್ಣನ್ನನ್ನೇ ವರ್ಣಿಸುತ್ತಾ ಅವನೇ ಕೇಂದ್ರಬಿಂದುವಾಗಿರುವಂತೆ ಮಹಾಭಾರತ ಕಥೆಯನ್ನು ಹೇಳಿರುವುದರಿಂದ ಶಕುನಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿಲ್ಲ. ಆದರೂ ಅವನ ಪಾತ್ರದಲ್ಲಿ ಕುಟಿಲ ನೀತಿಗಳನ್ನು ನಿರ್ವಹಿಸುವ ಸಮರ್ಥ

ನೆಂಬುದನ್ನು ವಿವರಿಸಿದ್ದಾನೆ. ಶಿಷ್ಟ ಭಾರತದಲ್ಲಿ ಶಕುನಿ ಅಕ್ಕ ಗಾಂಧಾರಿ ಧೃತರಾಷ್ಟ್ರನನ್ನು ಮದುವೆಯಾದಾಗ ಅಕ್ಕನೊಡನೆ ಹಸ್ತಿನಾವತಿಗೆ ಬಂದವನು ಮತ್ತೆ ತನ್ನ ದೇಶ ಗಾಂಧಾರಕ್ಕೆ ಹಿಂತಿರುಗಲೇ ಇಲ್ಲ. ದುರ್ಯೋಧನನ ಸ್ವಭಾವವನ್ನು ಬಲ್ಲ ಶಕುನಿ ಅವನಿಗೆ ಯಾವಾಗಲೂ ಪಾಂಡವರ ವಿರುದ್ಧ ಪಿತೂರಿ ನಡೆಸುತ್ತಲೇ ಕಾಲಕಳೆದವನು ಧರ್ಮರಾಯನ ನೆತ್ತವ್ಯಸನವನ್ನು ಬಳಸಿಕೊಂಡು ಅವರನ್ನು ಅಂತಿಮವಾಗಿ ಕಾಡಿಗಟ್ಟುವಲ್ಲಿ ಯಶಸ್ವಿಯಾಗುತ್ತಾನೆ.

ದುರ್ಯೋಧನನ ಪ್ರಗತಿಗಾಗಿಯೇ ತನ್ನ ಕುತ್ಸಿತಬುದ್ಧಿಯನ್ನು ಬಳಸಿಕೊಂಡು ಸಮಸ್ಯಾತ್ಮಕ ಸನ್ನಿವೇಶಗಳನ್ನು ಸೃಷ್ಠಿಸುತ್ತಾನೆ. ಕೃಷ್ಣ ಪಾಂಡವರ ಸಮಸ್ಯೆಗಳಿಗೆ ಪರಿಹಾರ ಒದಗಿಸಿದರೆ ಶಕುನಿ ಕೌರವರಿಗೆ ಸಮಸ್ಯೆಗಳನ್ನು ಸೃಷ್ಟಿಸುವಲ್ಲಿ ತನ್ನ ಕುತ್ಸಿತವನ್ನು ಪ್ರದರ್ಶಿಸುತ್ತಾನೆ. ಆ ಮೂಲಕ ದುರ್ಯೋಧನನಿಗೆ ವಿನಾಶವನ್ನೇ ತರುತ್ತಾನೆ. ದುರ್ಯೋಧನ ಭೀಷ್ಮ ದ್ರೋಣಾದಿಗಳ ಮಾತನ್ನು ಕೇಳದಿದ್ದರೂ ಶಕುನಿಯ ಮಾತನ್ನು ಮೀರದವನಲ್ಲ.

ಶಕುನಿ ಸ್ವಾರ್ಥಿ, ಮುಂಗೋಪಿ, ಪರಗುಣ ದ್ವೇಷಿಯಾದ ಮತ್ಸರಿ. ದುರ್ಯೋಧನನ ಅತಿಯಾದ ಅಭಿಮಾನ ದೂರದೃಷ್ಟಿಯಿಲ್ಲದ ಅವನನ್ನು ಅನರ್ಥಕ್ಕೆ ತಳ್ಳಿತು. ಯಲ್ಲವನ್ನು ಸಂಶಯದಿಂದ ನೋಡುವ ಯಾರನ್ನು ನಂಬದ ವಕ್ರಬುದ್ಧಿಯುಳ್ಳಾವನು. ಮಾತಿನಲ್ಲಿ ಜೇನು ಸೂಸುತ್ತ ನಾಟಕವಾಡುತ್ತ ಧೃತರಾಷ್ಟ್ರನ ಮನಗೆದ್ದವನು ಶಕುನಿ. ಇಡೀ ಕೌರವನಾಶವನ್ನು ಪರೋಕ್ಷವಾಗಿ ಗೈದವನು, ದುರ್ಯೋಧನ ಒಳಿತನ್ನು ಬಯಸುವ ಭೀಷ್ಮ, ದ್ರೋಣರ ಮಾತು ಮತ್ತು ಸಲಹೆಯನ್ನು ಕಡೆಗಣಿಸುತ್ತಾ ಶಕುನಿಯ ಮಾತಿನ ಮೇಲೆಯೇ ಅವಲಂಬಿತನಾಗಿ ಅವನು ಹೇಳಿದಂತೆ ನಡೆದುಕೊಂಡಿದ್ದು ವಿಧಿಯಾಟವೆನ್ನದೇ ಬೇರೇನಿಲ್ಲ.

ಹೀಗೆ ಶಕುನಿ ಪಾತ್ರ ಶಿಷ್ಟ ಭಾರತಗಳಿಂತ ಜನಪದ ಭಾರತದಲ್ಲಿ ಹೆಚ್ಚು ಮಾರ್ಮಿಕವಾಗಿ ಚಿತ್ರಿತವಾಗಿದೆ. ಈಗಲೂ ಜನಪದರು ದ್ರೋಹ ಬಗೆಯುವರನ್ನು ಶಕುನಿ, ಶಕುನಿ ಬುದ್ಧಿ ಎಂದು ಸಂಭೋದಿಸುವಷ್ಟರ ಮಟ್ಟಿಗೆ ಶಕುನಿ ಜನಮಾನಸದಲ್ಲಿ ಉಳಿದಿದ್ದಾನೆ.

**ಧರ್ಮರಾಯ:**

ಹೆಸರಿಗೆ ತಕ್ಕಂತೆ ಧರ್ಮಿಷ್ಟನಾದ ಧರ್ಮರಾಯನ ಪಾತ್ರ ಶಿಷ್ಟ ಹಾಗೂ ಜನಪದ ಭಾರತ ಎರಡೂ ಕಡೆಗಳಲ್ಲೂ ಒಂದೇ ರೀತಿಯಲ್ಲಿ ಚಿತ್ರಣಗೊಂಡಿದೆ. ಪಾಂಡವರಲ್ಲಿಯೇ ಹಿರಿಯನಾದ ಧರ್ಮರಾಯನಿಗೆ ಪಗಡೆಯಾಟದಲ್ಲಿ ಆಸಕ್ತಿ ಇದ್ದು ಅದೇ ಮುಂದೆ ಪಾಂಡವರ ಕಷ್ಟ ಕಾರ್ಪಣ್ಯಗಳಿಗೆ ಕಾರಣವಾಗುತ್ತದೆ. ಧರ್ಮರಾಯ ಯಾವುದೇ ಸಂದರ್ಭದಲ್ಲೂ ತನ್ನ ಧರ್ಮವನ್ನು ಮೀರಲಿಲ್ಲ ಇದಕ್ಕೆ ಉತ್ತಮ ನಿದರ್ಶನ ಪಾಂಡವರು ಏಕಚಕ್ರನಗರದಲ್ಲಿ ಕುಂಬಾರ ಗುಂಡಯ್ಯನ ಮನೆಯಲ್ಲಿ ತಂಗಿದ್ದಾಗ ಭೀಮ ಮುದ್ದೇಗೌಡರ ದರಕಾಸು ಭೂಮಿಯಲ್ಲಿ ಕೆಲಸ ಮಾಡಿ ಪಡೆಯುವ ಕೂಲಿಯ ಪ್ರಸಂಗ. ಭೀಮ ನೂರಾಳು ಕೆಲಸವನ್ನು ಒಬ್ಬನೇ ಮಾಡಿ ಅಷ್ಟು ಜನರ ಕೂಲಿಯನ್ನು ಪಡೆದು ಬಂದಾಗ ಧರ್ಮರಾಯ ಅದನ್ನು ವಿರೋಧಿಸಿ ಭೀಮನಿಗೆ ಬುದ್ದಿ ಹೇಳಿ ಒಬ್ಬಾಳಿನ ಕೂಲಿಯನ್ನು ಪಡೆಯುವಂತೆ ಮಾಡುತ್ತಾನೆ.

**ಬ್ಯಾಡ ಬ್ಯಾಡಪ್ಪ ನಮಗಿದು ಸರಿಯಲ್ಲ**
**ಒಂದು ದಿನ್ದ ಕೂಲಿಗೆ ಒಕ್ಕರಾಗಿ ಸಾಕು**
**ಒಕ್ಕ ರಾಗಿ ಜೊತೆಗೆ ಒಂದು ದುಡ್ಡು ಸಾಕು**
**ಇದು ಧರ್ಮಶಾಸ್ತ್ರವು ಕೇಳಪ್ಪ ಭೀಮಣ್ಣ**
**ಉಳಿದ ರಾಗೀನೂ ದುಡ್ಡನು ನಾವುಗಳು**
**ಮಡಿಕೊಂಡರೆ ಕರ್ಮ ತಪ್ಪುವುದಿಲ್ಲಪ್ಪ**
**ಈ ರಾಗೀನು ಹಣವನ್ನು ಈಗಲೇ ಕುಂಡೋಗಿ**
**ಗೌಡರಿಗೆ ಕೊಟ್ಟು ಬರೋಗು ತಮ್ಮಯ್ಯ**
**ಇದು ಧರ್ಮದ ಅನ್ನವಲ್ಲ ಅನ್ನಾಯ್ದು ಅನ್ನ**
**ಒಂದು ದಿನದ ಕೂಲಿಗೆ ಒಂದು ಕೊಳ್ಗರಾಗಿ ಮಾತ್ರ**
**ಧರ್ಮದ ಅನ್ನವಪ್ಪ ಕೇಳಪ್ಪ ಭೀಮಣ್ಣ**
**(ಜ.ಭಾ. ಪು. ೧೩೪)**

ಇಲ್ಲಿ ಬರುವ ಧರ್ಮರಾಯನ ಬುದ್ಧಿವಾದ ಕಾಯಕತತ್ವ ನ್ಯಾಯಯುತ ಆಲೋಚನೆಗೆ ಸ್ಪಷ್ಟ ನಿದರ್ಶನವಾಗಿದೆ. ಮುದ್ದೇಗೌಡನ ಈ ಪ್ರಸಂಗ ಸಮಕಾಲೀನ ಕಾಯಕತತ್ವದ ಮಹತ್ವವನ್ನು ಸಾರಲೆಂದೇ ಜನಪದ ಕವಿ ಇಲ್ಲಿ ತಂದಿದ್ದಾನೆ. ಇದು ಶರಣರ ಅತಿಯಾಸೆ ಪಡಬಾರದು ಕೂಡಿಡಬಾರದು ಎಂಬುದಕ್ಕೆ ಸಾಮ್ಯವಿದೆ.

ಧರ್ಮರಾಯ ಪರರಸಂತೋಷವನ್ನು ತನ್ನ ಸಂತೋಷವೆಂದೇ ಆನಂದಿಸುತ್ತಿದ್ದ. ಕಾಡಿನಲ್ಲಿದ್ದರೂ ಭೀಮನಿಂದ ಹಿಡಿಂಬಿಗೆ ಮಗ ಹುಟ್ಟಿದ ವಿಚಾರ ತಿಳಿದು ಸಂತೋಷಪಟ್ಟು ತನ್ನ ಚಿನ್ನದ ಉಂಗುರವನ್ನು ಗಿರವಿಯಿಟ್ಟು ಸಿಹಿ ಹಂಚಿದ ಎನ್ನುವಲ್ಲಿ ಅವನ ಸೋದರ ವಾತ್ಸಲ್ಯ ಹಾಗೂ

ಪುತ್ರ ವಾತ್ಸಲ್ಯವನ್ನು ಗಮನಿಸಬಹುದು. ಕುಂತಿ ಐವರಿಗೂ ಒಬ್ಬಳೇ ಹೆಂಡತಿ ಮಾಡಿದ ವಿಚಾರಕ್ಕೆ ನಾರದರ ಬಳಿ ಬೇಸರವನ್ನು ತೋಡಿಕೊಂಡಾಗ ನಾರದರು 'ಇದು ವಿಧಿ ಬರಹ ನೀವು ಮಾನವ ರೂಪದಲ್ಲಿರೋ ಶಿವನ ಅಂಶದವರು, ದ್ರೌಪದಿಯು ಪಾರ್ವತಿ ಇದರಲ್ಲಿ ದೋಷವೆಣಿಸಬೇಡ' ಎಂದು ಸಮಾಧಾನಿಸುತ್ತಾರೆ.

ಅಕ್ಷಯ ಪಾತ್ರೆ ಪ್ರಸಂಗ ಹಾಗೂ ದೂರ್ವಾಸಮುನಿ ಪ್ರಕರಣಗಳು ಮಹಾಭಾರತದಲ್ಲಿ ಒಟ್ಟೊಟ್ಟಿಗೆ ಬರುವ ಎರಡು ವಿಲಕ್ಷಣ ಸನ್ನಿವೇಶಗಳಾಗಿವೆ. ಈ ಪ್ರಸಂಗಗಳು ಧರ್ಮರಾಯನ ವ್ಯಕ್ತಿತ್ವದಲ್ಲಿನ ತಾಳ್ಮೆ, ಸಂಯಮ ಹಾಗೂ ದಾನದ ಮಹತ್ವವನ್ನು ಎತ್ತಿ ಹಿಡಿಯುತ್ತದೆ. ಶಿಷ್ಟ ಭಾರತದಲ್ಲಿಯೂ ಈ ಘಟನೆಗಳಿದ್ದರೂ ಜನಪದ ಕವಿ ಅವುಗಳ ವೃತ್ತಾಂತದಲ್ಲಿ ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡಿದ್ದಾನೆ. ಇಲ್ಲಿಯೂ ಶ್ರೀ ಕೃಷ್ಣನ ಪಾರಮ್ಯವೇ ಮೇಲುಗೈಯಾಗಿದೆ. ಅತಿ ಮಾನುಷ ಸಂಗತಿಗಳು ಸೇರಿವೆ. ಶಿಷ್ಟಕ್ಕಿಂತ ಭಿನ್ನವಾಗಿ ದುರ್ಯೋಧನನು ಪಾಂಡವರನ್ನು ಕಾಡುವುದಕ್ಕಾಗಿಯೇ ದೂರ್ವಾಸರನ್ನು ಕಳುಹಿಸಿಕೊಡುತ್ತಾನೆ. ಪಾಂಡವರ ಬಳಿ ಬಂದ ಮುನಿಗಳು ಹೊತ್ತಲ್ಲದ ಹೊತ್ತಿನಲ್ಲಿ ಹತ್ತು ಸಾವಿರ ಜನಕ್ಕೆ ಊಟವಾಗಬೇಕೆಂಬ ಅಪೇಕ್ಷೆಯಿಡುತ್ತಾರೆ. ಇದನ್ನು ನೆರವೇರಿಸಲಾರದ ಪಾಂಡವರು ಮುನಿಯ ಶಾಪಕ್ಕೆ ತುತ್ತಾಗುತ್ತಾರೆಂಬದು ಕೌರವನ ಅನಿಸಿಕೆ ಹಾಗೂ ಬಯಕೆ. ಇಂತಹ ಸೂಕ್ಷ್ಮ ಸನ್ನಿವೇಶವನ್ನು ಜನಪದ ಭಾರತ ನಿಭಾಯಿಸುವ ರೀತಿಯೇ ಬೇರೆಯಾದುದ್ದಾಗಿದೆ. ಆರಂಭದಲ್ಲಿ ವಾಸ್ತವಿಕತೆಯಲ್ಲೇ ಸಾಗಿದ ಕಥೆ ಸಮಸ್ಯೆಯ ಪರಿಹಾರಕಾಣುವ ಬಗೆ ಅತಿಮಾನುಷವಾದುದ್ದಾಗಿದೆ. ಧರ್ಮರಾಯ ಹೇಳುವಂತೆ ಆತನ ದೇಹವನ್ನು ಹತ್ತು ಸಾವಿರ ಚೂರುಗಳಾಗಿ ಮಾಡಿ ಉಣಬಡಿಸುವಂತೆ ಹೇಳುವುದು ಅಸಾಧ್ಯವಾದುದ್ದಾಗಿದೆ. ಯಥಾ ಪ್ರಕಾರ ಕೃಷ್ಣ ಈ ಸಮಸ್ಯೆಗೆ ಪರಿಹಾರ ಸೂಚಿಸಿ ಧರ್ಮರಾಯನ ಸತ್ಯಸಂಧತೆಯನ್ನು ಕಾಪಾಡುತ್ತಾನೆ. ಪಂಪ, ಕುಮಾರವ್ಯಾಸಭಾರತದಲ್ಲೂ ಈ ಪ್ರಸಂಗ ಇದೆಯಾದರೂ ನಿರ್ವಹಣೆ ಮಾತ್ರ ಜನಪದರಲ್ಲಿ ಭಿನ್ನವಾಗಿದೆ.

ಧರ್ಮರಾಯನ ಸತ್ಯಸಂಧತೆ ಹಾಗೂ ತಮ್ಮಂದಿರಲ್ಲಿ ಸಮಾನತೆಯನ್ನು ಕಾಣುವಂಥ ಮತ್ತೊಂದು ಪ್ರಸಂಗವೆಂದರೆ ಅರಣ್ಯವಾಸದಲ್ಲಿ ಬರುವ ಯಕ್ಷಪ್ರಶ್ನೆ ಪ್ರಸಂಗ. ಪಂಪ, ಕುಮಾರವ್ಯಾಸರಲ್ಲಿ ಈ ಪ್ರಸಂಗ ಅಷ್ಟೇನು ಮಹತ್ವವನ್ನು ಪಡೆಯದೇ ಕಥೆಗೆ ಪೂರಕವಾಗಿ ಬಂದಿದೆ. ಜನಪದ ಭಾರತದಲ್ಲಾದರೋ ಧರ್ಮರಾಯನು ಯಕ್ಷನಿಗೆ ಕೊಡುವ ಉತ್ತರ ಸಮಾಕಾಲೀನ ಜೀವನ ಮೌಲ್ಯವನ್ನು ಬಿಂಬಿಸುವಂತಿದೆ. ದುರ್ಯೋಧನನ್ನು ಸಂತೋಷಗೊಳಿಸುವುದಕ್ಕಾಗಿ ಶಕುನಿ

ಕೊನುಗಯ್ಯನೆಂಬ ಮಂತ್ರವಾದಿಯಿಂದ ಮಾಟ ಮಾಡಿಸಿ ಪೆಡಂಭೂತವನ್ನು ಸೃಷ್ಟಿಸಿ ಪಾಂಡವರನ್ನು ಸಂಹಾರ ಮಾಡುವಂತೆ ಕಳುಹಿಸುತ್ತಾನೆ. ಪೆಡಂಭೂತ ಸತ್ತವರನ್ನು ನೀರಿನಲ್ಲಿದ್ದವರನ್ನು ಮುಟ್ಟುವುದಿಲ್ಲವೆಂದು ತಿಳಿಸುತ್ತದೆ. ಈ ವಿಷಯವನ್ನು ಅಂತರ್ಜ್ಞಾನದಿಂದ ಅರಿತ ಕೃಷ್ಣ ಯಮಧರ್ಮನನ್ನು ಪಾಂಡವರನ್ನು ಕಾಪಾಡುವಂತೆ ಕಳುಹಿಸುತ್ತಾನೆ. ಅರಣ್ಯವಾಸದಲ್ಲಿ ಆಲದ ಮರದ ಬಳಿ ಕುಳಿತ್ತಿದ್ದ ಪಾಂಡವರಲ್ಲಿ ಧರ್ಮರಾಯ ನೀರು ತರುವಂತೆ ಸಾದೇವನಿಗೆ ತಿಳಿಸುತ್ತಾನೆ. ನೀರನ್ನು ಅರಸಿ ಬಂದ ಸಹದೇವ ನೀರನ್ನು ಮುಟ್ಟಲು ಹೋದಾಗ ಆಕಾಶವಾಣಿಯಾಗಿ ತನ್ನ ಪ್ರಶ್ನೆಗೆ ಉತ್ತರ ಕೊಟ್ಟು ನೀರನ್ನು ಕುಡಿಯಬೇಕೆಂದು ಇಲ್ಲದಿದ್ದರೆ ಸಾಯುವೆಯೆಂದು ಕೇಳಿಬರುತ್ತದೆ. ಆ ಮಾತನ್ನು ಮೀರಿ ಸಾದೇವ ನೀರು ಕುಡಿದು ಸತ್ತನು. ಮುಂದೆ ನಕುಲ, ಅರ್ಜುನ, ಭೀಮರು ಹಾಗೆಯೇ ಸಾಯಲು ಅವರನ್ನು ಅರಸಿ ಬಂದ ಧರ್ಮರಾಯ ಅವರು ಸತ್ತಿರುವುದನ್ನು ಕಂಡು ಆಶ್ಚರ್ಯಚಕಿತನಾಗಿ, ಮೊದಲಿಗೆ ದಾಹ ತೀರಿಸಿಕೊಂಡು ಅನಂತರ ಯೋಚಿಸೋಣವೆನ್ನುತ್ತಾ ನೀರಿಗೆ ಇಳಿಯುತ್ತಾನೆ ಯಥಾ ಪ್ರಕಾರ ಪ್ರಶ್ನೆ ಕೇಳಿಬರಲು, ಧರ್ಮರಾಯ ಯೋಚಿಸಿ ಉತ್ತರ ಹೇಳಲು ನಿರ್ಧರಿಸುತ್ತಾನೆ. ಶಿಷ್ಟಕ್ಕಿಂತ ಭಿನ್ನವಾದಂತಹ ಒಗಟಿನ ರೂಪದಲ್ಲಿರುವಂತಹ ಪ್ರಶ್ನೆಗಳು ಕೇಳಿ ಬರುತ್ತದೆ. ಉದಾಹರಣೆಗೆ 'ಕಕ್ಕಟ್ಟೆ ಕಯ್ಯ ಯಾವುದು' 'ಸತ್ಯ', 'ಸಿಕ್ಕಟ್ಟೆ ಸೀ ಯಾವುದು' 'ಸುಳ್ಳು' 'ಬಹ್ಮಾಂಡಕಿಂತಲೂ ದೊಡ್ಡದು ಯಾವುದು' 'ಆಸೆ' 'ಎಲ್ಲಕ್ಕೂ ಆಚ್ಚರ್ಯ ಯಾವುದು' 'ನಾವು ಒಂದಲ್ಲ ಒಂದು ದಿನ ಸಾಯ್ತೇವಿ ಅಂತಗೊತ್ತಿದ್ದರೂ ನಾವು ಸಾಯೋದೆ ಇಲ್ಲ ಅನ್ನೆಂಗೆ ಮನಮಠ ಆಸ್ತಿಪಾಸ್ತಿ ಹೆಂಡ್ತಿ ಮಕ್ಳು ಬಂಧು ಬಳಗ ಅಂತ ಹಾತೋರಿತರಲ್ಲ ಅದು' (ಪು. ೩೯೪) ಹೀಗೆ ಧರ್ಮರಾಯ ಉತ್ತರ ಕೊಡುತ್ತಿರುವಲ್ಲಿ ಕೊನುಗಯ್ಯ ಕಳುಹಿಸಿದ ಪೆಡಂಭೂತ ಬಂದು ನೀರಲ್ಲಿ ನಿಂತಿರುವ ಧರ್ಮರಾಯನನ್ನು ಸತ್ತು ಬಿದ್ದಿರುವ ಪಾಂಡವರನ್ನು ಹಿಡಿಯಲಾರದೇ ವಾಪಸ್ಸು ಬಂದು ತನ್ನನ್ನು ಸೃಷ್ಟಿಸಿದ ಕೊನುಗಯ್ಯನನ್ನೇ ಬಲಿ ತೆಗೆದು ಕೊಳ್ಳುತ್ತದೆ. ಅಷ್ಟಲ್ಲದೇ ದುರ್ಯೋಧನನ ಹೆಗಲೇರಿ ಬಿಡುತ್ತದೆ. ಇಲ್ಲೆಲ್ಲ ಧರ್ಮರಾಯನ ತಾಳ್ಮೆ ಮತ್ತು ಸಹೋದರ ಪ್ರೀತಿಯನ್ನು ಕಾಣಬಹುದಾಗಿದೆ. ಮುಂದೆ ಪೆಡಂಭೂತ ಹಿಡಿದ ಕೌರವನನ್ನು ಧರ್ಮರಾಯ ಒದ್ದು ದುರ್ಯೋಧನನಿಗೂ ಅದರಿಂದ ಮುಕ್ತಿ ಕೊಡಿಸುತ್ತಾನೆ. ಹೀಗೆ ತನಗೆ ಕೆಡಕನ್ನುಂಟು ಮಾಡಿದವರನ್ನು ಕ್ಷಮಿಸುವ ಹಿರಿತನ ಧರ್ಮರಾಯನದು.

ಸ್ವರ್ಗಾರೋಹಣ ಪರ್ವದಲ್ಲಿ ದ್ರೌಪದಿ ಸಹಿತ ಪಾಂಡವರು ಸೀಲಾ ನದಿ ದಾಟುವಾಗ ಒಬ್ಬೊಬ್ಬರಂತೆ ಒಬ್ಬರು ಮುಳುಗಿ ಸಾಯುತ್ತಿರಲು ಧರ್ಮರಾಯ ಅವರ ಸಾವಿಗೆ ಅವರ ಗುಣ ದೋಷವನ್ನು ಹೇಳುತ್ತಾ ನಿರ್ಲಿಪ್ತನಾಗಿ ಮುಂದೆ ಸಾಗುತ್ತಾನೆ. ಆದರೆ ಭೀಮ ಸತ್ತಾಗ ಅವನನ್ನು ಹೆಗಲ ಮೇಲೆ ಹೊತ್ಕೊಂಡು ಮುಂದೆ ಸಾಗುವನು. ಇದನ್ನು ಕಂಡ ಕೃಷ್ಣ

ಭೀಮನ ಕಂಡ್ರೆ ಧರಂ ರಾಯಂಗೆ ಬೋ ಪ್ರೀತಿ
ಯಾರು ಹೇಳದ್ರೂ ಅಂವ ಬಿಡೋಂಗಿಲ್ಲ
ಇದುಕ್ಕೆ ನಾನೇ ಹೋಗಿ ಏನಾರ ಮಾಡಿ
ಭೀಮನ ಹೆಣವನ್ನು ಬೆಂಕಿಗೆ ಮುಟ್ಟಸಿ ಬರ್‍ಬೇಕು

(ಜ.ಭಾ. ಪು. ೬೦೪)

ಅದರಂತೆ ಒಣಗಿದ ತುಳಸಿ ಗಿಡವನ್ನು ತಲೆಕೆಳಗಾಗಿ ನೆಟ್ಟ ಆ ಮೂಲಕ ಧರ್ಮರಾಯನಿಗೆ ತಿಳಿಸಿ ಭೀಮನ ದೇಹಕ್ಕೆ ಅಗ್ನಿ ಸ್ಪರ್ಶಿಸುತ್ತಾನೆ. ಮುಂದೆ ತನ್ನ ಜೊತೆ ನಾಯಿಮರಿ ಬರುತ್ತಿರಲು ಅದನ್ನು ಸ್ವರ್ಗಕ್ಕೆ ಕರೆದೊಯ್ಯುತ್ತಾನೆ. ಕೌರವನನ್ನು ನರಕದಲ್ಲಿ ನೋಡಿದಾಗ ಮರುಗಿ 'ನನ್ನ ಪುಣ್ಯ ನಿನಗೆ ಧಾರೆ ಎರೆಯುವೆ' ಎಂದಾಗ ಅನ್ಯರ ಪುಣ್ಯದಿಂದ ಬರುವವನಲ್ಲ ಸ್ವಂತ ಸ್ವಾಧೀನದಲ್ಲಿರುವ ನರಕವೇ ಲೇಸು ಎಂದು ತನ್ನ ಛಲ ಸಾಧಿಸುತ್ತಾನೆ. ಆದರೂ ಧರ್ಮರಾಯ ನರಕದಲ್ಲಿದ್ದ ದುರ್ಯೋಧನನ್ನು ನೋಡಿ;

ಕೌರವನ ನರಳಾಟವ ನಾನು ನೋಡಲಾರೆ
ಅವುನ್ಗೆ ಶಿಕ್ಷ್ಯ ಮಾಡಿ ನಾನು ಸುಕವಾಗಿ
ಸೊರ್ಗದಲ್ಲಿ ಇರಲಾರಿ
ನಾನು ಅವನ ಜೊತೆ ಶಿಕ್ಷ್ಯ ಅನುಭವುಸ್ತೀನಿ ಅಂತ್ಹೇಳಿ
ಕಥಾಕಥಾ ಅಂತ ಕುದೀತಿರೋ ಎಣ್ಣೆ ಬಾಂಡ್ಲೀಗೆ
ಧರ್ಮರಾಯ್ರು ಹಾರ್‍ಕೊಂಡ್ರು

(ಜ.ಭಾ. ಪು. ೬೦೭)

ಆದರೆ ಅದು ಪನ್ನೀರಾಗಿ ಪರಿವರ್ತನೆಯಾಗುತ್ತದೆ. ಮುಂದೆ ಕೃಷ್ಣ ಅವನನ್ನು ಮೇಲೆತ್ತಿ ಸ್ವರ್ಗಕ್ಕೆ ಕರೆದ್ಯೊಯ್ಯುತ್ತಾನೆ. ಹೀಗೆ ಜನಪದ ಭಾರತದಲ್ಲಿ ಧರ್ಮರಾಯನ ಪಾತ್ರ ಪಂಪ, ಕುಮಾರವ್ಯಾಸರ ಕಾವ್ಯದಲ್ಲಿನ ಪಾತ್ರಕ್ಕಿಂತ ಭಿನ್ನವಾಗಿದೆ. ಜನಪದ ಭಾರತದ ನಾಯಕನ ಸ್ಥಾನ ಕೃಷ್ಣನದಾದರೆ, ನಂತರದ ಸ್ಥಾನ ಧರ್ಮರಾಯನದೇ ಆಗಿದೆ. ಹೆಸರಿಗೆ ತಕ್ಕಂತೆ ಸತ್ಯಸಂಧನಾಗಿ ಸಹನಾಶೀಲನಾಗಿ ಸಂಯಮಿಯಾಗಿ ಎಲ್ಲರನ್ನು ಸಮಾನವಾಗಿ ಸಹೋದರತ್ವದಿಂದ ಕಾಣುವವನು ಧರ್ಮರಾಯನೇ ತನಗೆ ಕೆಡಕನ್ನುಂಟು ಮಾಡಿದವರಿಗೂ ಹಿತಬಯಸುವವನು.

ಹೀಗೆ ಪಂಪ, ಕುಮಾರವ್ಯಾಸ ಜನಪದ ಕವಿ ಮೂವರು ತಮ್ಮ ಆಶಯಕ್ಕನುಗುಣವಾಗಿ ಮಹಾಭಾರತದ ಕಥೆಯನ್ನು ಮಾರ್ಪಡಿಸಿಕೊಂಡು ಕಾವ್ಯ ರಚಿಸಿದ್ದಾರೆ. ಪಂಪ ಕಾವ್ಯದಲ್ಲೇ ಹೇಳಿರುವಂತೆ ಮಹಾಭಾರತ ಅವನಿಗೆ ಲೌಕಿಕ ಕಾವ್ಯ. ಕುಮಾರವ್ಯಾಸನು ಕೃಷ್ಣ ಪಾರಮ್ಯವನ್ನು ಇಳೆಗೆ ಬಿತ್ತರಿಸುವುದಾಗಿ ಕಾವ್ಯದಲ್ಲೇ ಹೇಳಿಕೊಂಡಿದ್ದಾನೆ. ಜನಪದ ಕವಿ ವ್ಯಾಸರಿಗೆ ಹತ್ತಿರವಾಗಿ ಯಾವುದೇ ಪಾತ್ರವನ್ನು ವೈಭವೀಕರಿಸದೇ ಆಯಾ ಪಾತ್ರದ ಸ್ವಭಾವಕ್ಕನುಗುಣವಾಗಿ ನಿರ್ಲಿಪ್ತವಾಗಿ ಕಾವ್ಯ ರಚಿಸಿದ್ದಾರೆ. ಈ ಮೂರು ಮಹಾಕಾವ್ಯದಲ್ಲಿ ಬರುವ ನಾಯಕ ಪ್ರತಿನಾಯಕರನ್ನು ಹಾಗೂ ಅತಿ ಪ್ರಮುಖವೆನಿಸಿದ ಪಾತ್ರಗಳನ್ನು ಮಾತ್ರ ಈ ಅಧ್ಯಾಯದಲ್ಲಿ ತೌಲನಿಕವಾಗಿ ಅಭ್ಯಸಿಸಲಾಗಿದೆ.

**ಅಡಿ ಟಿಪ್ಪಣಿಗಳು:**

೧. ಪಂಪ, ತೀ.ನಂ.ಶ್ರೀ. ಪ್ರಸಾರಾಂಗ, ಮೈ.ವಿ.ವಿ. ಪುಟ ೩೭.

೨. ಕುಮಾರವ್ಯಾಸ ಪ್ರಶಸ್ತಿ, ವಿ. ಸೀತಾರಾಮಯ್ಯ, ಮಹಾರಾಜ ಕಾಲೇಜು, ಮೈಸೂರು ಪು. ೧೬೫.

೩. ಜನಪದ ಮಹಾಭಾರತ, ಸಂ. ಪಿ.ಕೆ.ಆರ್. ಪ್ರಸ್ತಾವನೆ.

೪. ಜನಪದ ಮಹಾಭಾರತ, ಸಂ. ಪಿ.ಕೆ.ಆರ್. – ರಾಗೌರವರ ಪ್ರಸ್ತಾವನೆ.

೫. ಜನಪದ ಮಹಾಭಾರತ, ಸಂ. ಪಿ.ಕೆ.ಆರ್. – ರಾಗೌರವರ ಪ್ರಸ್ತಾವನೆ.

೬. ಕುಮಾರವ್ಯಾಸ ಭಾರತ ಒಂದು ನೋಟ, ಸಿ.ಪಿ.ಕೆ. ಸುವಿದ್ಯಾಪ್ರಕಾಶನ, ಬೆಂಗಳೂರು, ೧೯೮೮, ಪುಟ ೭೮.

೭. ಯುಗಾಂತ ಇರಾವತಿ ಕರ್ವೆ, ಕನ್ನಡಕ್ಕೆ ಹೆಚ್.ಎಸ್. ಶಿವಪ್ರಕಾಶ್, ಓರಿಯೆಂಟಲ್ ಲಾಂಗ್‌ಮನ್ ಲಿ., ಬೆಂಗಳೂರು.

೮. ಜನಪದ ಮಹಾಭಾರತ, ಸಂ. ಪಿ.ಕೆ.ಆರ್. – ರಾ.ಗೌ. ರವರ ಪ್ರಸ್ತಾವನೆ.

# ಅಧ್ಯಾಯ ಆರು

## ಜನಪದ ಮಹಾಭಾರತದಲ್ಲಿ ಕಂಡುಬರುವ ಸಾಹಿತ್ಯಿಕ ಪ್ರಜ್ಞೆ

ಜನಪದ ಮಹಾಕಾವ್ಯವಾಗಲೀ ಶಿಷ್ಟ ಮಹಾಕಾವ್ಯವಾಗಲೀ ಅದರ ಅಧ್ಯಯನ ಹಲವು ಆಯಾಮಗಳಿಗೆ ತನ್ನನ್ನು ಸಹಜವಾಗಿ ತೆರೆದುಕೊಳ್ಳುತ್ತದೆ. ಒಟ್ಟು ಬದುಕಿನ ವೈವಿಧ್ಯ, ವೈಶಿಷ್ಟ್ಯಗಳನ್ನು ಚಿಂತನೆಯ ಹೂರಣದೊಡನೆ ಅನಾವರಣಗೊಳಿಸುವ ಮಹಾಕಾವ್ಯ ಆಂತರ್ಯದಲ್ಲಿ ಜೀವಪರ ಕಾಳಜಿಗಳನ್ನು, ಸಾಹಿತ್ಯಿಕ ಮೌಲ್ಯಗಳನ್ನು ಹೊಂದಿರುತ್ತದೆ. ಹೀಗಿಲ್ಲದಿದ್ದರೆ ಮಹಾಕಾವ್ಯಕ್ಕೆ ಸಾರ್ವತ್ರಿಕ ವ್ಯಾಪ್ತಿ ದೊರೆಯಲಾರದು. ಚಲಿಸುವ ಕಾಲದ ಸಂದರ್ಭಕ್ಕೆ ಪ್ರಸ್ತುತವೆನಿಸದೆ ಅಲ್ಪಾಯುವಾಗಿ ಅನ್ಯವಾಗಿಬಿಡುತ್ತದೆ. ನಿಜವಾದ ಮಹಾಕಾವ್ಯ ಒಂದು ಮಹಾಸತ್ವದ ಜೀವದ್ರವ್ಯವಾಗಿ ಮೈದಾಳುವುದರಿಂದ ಅದು ಕಾಲ ಮತ್ತು 'ಜನಸಾಮಾನ್ಯರ' ತಾಳುವಿಕೆಗೆ ಪಾತ್ರವಾಗುತ್ತದೆ.

ಒಂದು ಸಮಾಜದ ಸ್ವಾಸ್ಥ್ಯವನ್ನು ಕಾಪಾಡಬಲ್ಲ ಸಾಮರ್ಥ್ಯ ಯಾವ ಸಾಹಿತ್ಯಕ್ಕಿದೆಯೊ ಅಂಥ ಸಾಹಿತ್ಯ ಯಾವತ್ತೂ ಪ್ರಸ್ತುತವೇ ಆಗಿರುತ್ತದೆ. ಆ ಸಾಹಿತ್ಯ ಜನಪದವಾಗಿರಬಹುದು ಅಥವಾ ಶಿಷ್ಟ ಸಾಹಿತ್ಯವಾಗಿರಬಹುದು. ಆದರೆ ದೃಷ್ಟಿ ಮಾತ್ರ ಲೋಕದ ಒಳಿತನ್ನೇ ಕುರಿತಾಗಿರುತ್ತದೆ. ಇದು ಪಾಪ, ಪುಣ್ಯ, ಸುಖ, ದುಃಖ, ಹಿತ, ಅಹಿತ ಎಂಬ ತರತಮ ಭಾವವನ್ನು ನಮ್ಮ ಕಾವ್ಯಗಳು ತಿಳಿಸಿಕೊಡುತ್ತವೆ. ಜನಪದ ಸಂಸ್ಕೃತಿ ಮತ್ತು ಸಾಹಿತ್ಯ ಸಮಾಜದಲ್ಲಿನ ಲೋಕವನ್ನು ತಿದ್ದಿ ಜೀವಸೆಲೆ ಹರಿಸಬಲ್ಲದು. 'ಜನಪದ ಮಹಾಭಾರತ ವಿಶಿಷ್ಟ ಆಲೋಚನಾಕ್ರಮ, ಜೀವಪರ ಆಶಯ, ಸಾಹಿತ್ಯ ಪ್ರಜ್ಞೆ ಹಾಗೂ ಕಲಾತ್ಮಕತೆ'– ಇವುಗಳಿಂದ ಅಧ್ಯಯನಕಾರರನ್ನು ವಿಶೇಷವಾಗಿ ಆಕರ್ಷಿಸುತ್ತದೆ.

ವಿಶಾಲವಾದ ಅರ್ಥದಲ್ಲಿ ಜನಪದ ಸಾಹಿತ್ಯವೇ ಶೋಷಣೆಗೆ ಪ್ರತಿಕ್ರಿಯೆ ಹಾಗೂ ಪ್ರತಿಭಟನೆಯಾಗಿ ಅಭಿವ್ಯಕ್ತಿ ಪಡೆಯುತಂಥಾಗಿದೆ. 'ಕತ್ತಲರಾಜ್ಯದಕೋಗಿಲೆ' ಎಂದು ಗುರುತಿಸಿಕೊಂಡಿರುವ ಜನಪದ ಕವಿ ಹಾಡುವುದೇ ಆ ಕತ್ತಲೆಯಲ್ಲಿ ದಿಕ್ಕು ತಪ್ಪಿದವರನ್ನು ಸರಿದಾರಿಗೆ ಕರೆ ತರುವುದಕ್ಕಾಗಿ, ಬೆಳಕು ಹರಿಯುವ ಸೂಚನೆಯನ್ನು ನೀಡುವುದಕ್ಕಾಗಿ, ಅಕ್ಷರವಿದ್ಯೆ ನೀಡದೆ ಶೋಷಿಸುವ ಶಿಷ್ಟ ಸಮಾಜಕ್ಕೆ ಪರ್ಯಾಯವಾಗಿ, ತನ್ನ ಸಹಜ ಸೃಜನಶೀಲತೆ, ಅಗಾಧ ನೆನಪಿನ ಶಕ್ತಿ ಹಾಗೂ ಜೀವಪರ ಧೋರಣೆಗಳಿಂದ ಜನಪದ ಸಾಹಿತ್ಯ ವಾಕ್ಪರಂಪರೆಯ ಮೂಲಕ ಜೀವ ಶೋಷಣೆಯನ್ನು ಉದ್ದಕ್ಕೂ ವಿರೋಧಿಸುತ್ತಲೇ ಬಂದಿದೆ. ಪ್ರತಿಸಂಸ್ಕೃತಿಯನ್ನು ದಾಖಲಿಸುತ್ತಾ

ಬರುತ್ತಿದೆ. ಪ್ರಸ್ತುತ ಅಧ್ಯಾಯ ಜನಪದ ಮಹಾಭಾರತದಲ್ಲಿ ಕಂಡುಬರುವ ಸಾಹಿತ್ಯಿಕ ಪ್ರಜ್ಞೆಯನ್ನು, ಅಂದರೆ ಜನಪದ ಕವಿ ಹೇಗೆ ತನ್ನ ಪ್ರತಿಭೆಯಿಂದ ಕಾವ್ಯತ್ವವನ್ನು ಅನಾವರಣಗೊಳಿಸಿದ್ದಾನೆಂಬುದನ್ನು ವಿವೇಚಿಸುವುದೇ ಆಗಿದೆ. ಜನಪದ ಮಹಾಭಾರತದಲ್ಲಿ ಅಲ್ಲಲ್ಲಿ ವರ್ಣನೆಗಳು, ನವರಸಗಳು, ಪ್ರಾಸ ಉಪಮೆ ಮುಂತಾದ ಛಂದಸ್ಸಿಗೆ ಸಂಬಂಧಿಸಿದ ವಿಷಯಗಳು ಹೇರಳವಾಗಿವೆ. ಜನಪದ ಕವಿಗೆ ಕಥೆ ಹೇಳಿಕೊಂಡು ಹೋಗುವುದೇ ಮುಖ್ಯ ಉದ್ದೇಶವಾದುದರಿಂದ ಧಾರ್ಮಿಕತೆಗೆ ಒತ್ತು ನೀಡುವುದೇ ಆಗಿದೆ. ಆದ್ದರಿಂದ ಪಾಂಡಿತ್ಯ ಪ್ರದರ್ಶನ ಮಾಡುವುದಾಗಲೀ, ಶಾಸ್ತ್ರೀಯ ಕಟ್ಟಿಗೆ ಬದ್ಧವಾಗುವುದಾಗಲೀ ಇಲ್ಲಿಲ್ಲದಿರುವುದು ಗಮನಾರ್ಹ. ಛಂದಸ್ಸು, ರಸ, ಅಲಂಕಾರ ಮುಂತಾದವುಗಳನ್ನು ಹೇಳುವ ಉದ್ದೇಶವಿಲ್ಲದೆ ಕಾವ್ಯದ ಓಟದತ್ತ ಜನಪದ ಕವಿಯ ಗಮನ ಕೇಂದ್ರೀಕೃತವಾಗಿದೆ. ಆದರೂ ಜನಪದ ಮಹಾಭಾರತದಲ್ಲಿ ಅಲ್ಲಲ್ಲಿ ಕವಿ ಪ್ರತಿಭೆಯನ್ನು ಗುರುತಿಸಬಹುದು.

ಗ್ರಾಮೀಣ ಪ್ರದೇಶದ ನಂಬಿಕೆಗಳು, ಹಬ್ಬಹರಿದಿನಗಳು ಜಾತ್ರೆ ಮುಂತಾದವುಗಳ ಜೀವಂತ ಚಿತ್ರಣವನ್ನು ಇಲ್ಲಿ ಕಟ್ಟಿಕೊಡಲಾಗಿದೆ. ಕವಿ ಮೂಲ ಭಾರತದಕಥೆಯನ್ನು ಮರೆಯದೆ ತನ್ನದೇ ಆದ ಕಲ್ಪನೆಗಳನ್ನು ಕಾವ್ಯದಲ್ಲಿ ಬೆರಸಿ ಕಾವ್ಯವನ್ನು ಹೃದ್ಯವಾಗಿ ಮಾಡಿದ್ದಾನೆ. ಅಲ್ಲಲ್ಲಿ ವರ್ಣನೆಗಳು ಯಾವ ಶಿಷ್ಟಕವಿಗೂ ಕಡಿಮೆ ಇಲ್ಲದಂತೆ ಬೆರಗು ಮೂಡಿಸುತ್ತವೆ. ಅಲ್ಲಲ್ಲಿ ಪ್ರಕೃತಿಸೌಂದರ್ಯವನ್ನು ಚಿತ್ರಿಸುವಲ್ಲಿ ಜನಪದ ಕವಿ ನಿಸ್ಸೀಮ ಎಂಬುದನ್ನು ಸಾಬೀತುಪಡಿಸಿದ್ದಾನೆ. ಕನಸಿನ ವರ್ಣನೆಯನ್ನು ಕವಿ ಅಭಿವ್ಯಕ್ತಗೊಳಿಸಿದ್ದಾನೆ.

**ನಾವು ಕಾಮಿತವನದಲ್ಲಿ ಮನಗಿರುವಾಗ**
**ಕಾಳಿಂಗ ಸರ್ಪವೊಂದು ಹೆಡೆ ಎತ್ಕಂಡು ಬುಸ್ಗರಿತಾ**
**ದ್ರೋಪತಿ ಕಾಲ್ಗೆ ಸುತ್ಕಳಕೊಯ್ತು**
**ಅಂತ ಸಮಯದಲ್ಲಿ ಆಕಾಶದಲ್ಲಿ ಹೋಯ್ತಿದ್ದಂತ**
**ಗರುಡಾಳ ಸ್ವಾಮಿ ಸುಯ್ಯನೆ ಬಂದು**
**ಹಾವನ್ನು ಕಚ್ಚಿಕೊಡು ಆಕಾಸುಕ್ಕೊಯ್ತಪ್ಪ**
**ಆಗ ಯಾರೋ ಕೇಕೆ ಹಾಕ್ಕೊಂಡು ನಗ್ತಾ ಇದ್ರು**

ಹೀಗೆ ಕವಿ ತನ್ನ ಆಗಾಧ ಪ್ರತಿಭೆಯಿಂದ ಕನಸಿನಲ್ಲಿ ಕಂಡ ದೃಶ್ಯವನ್ನು ಹೇಳಿದ್ದಾನೆ.

ಗಾಂಧಾರಿ ಸ್ವಪ್ನದಲ್ಲಿ ಕಂಡ ವಿವಿಧ ಹಾವುಗಳ ಬಣ್ಣನೆಗಳನ್ನು ಹೀಗೆ ಕವಿ ಚಿತ್ರಿಸಿದ್ದಾನೆ:

**ಕಾಳಿಂಗ ಕಾರ್ಕೋಟ ಘಟಸರ್ಪವೆಲ್ಲ**
**ಕೊಳಕಮಂಡ್ಲ, ಹುಳುಕುಮಂಡ್ಲ, ಗೆಜ್ಜುಮಂಡ್ಲ, ಗ್ವಾರೆಮಂಡ್ಲ**
**ಬಿಲ್ಲೂರಿ, ಹಸ್ರಾವು, ಹೆಬ್ಬಾವು, ಕುಟ್ನಾವು**
**ಕರಿಕಾಟಿ, ಬೆಳ್‌ಗಟ, ಕ್ಯಾರೆ ಹಾವುಗಳು**
**ನೂರೊಂದು ಜಾತಿಯ ಭಾರಿ ಹಾವುಗಳು**

ಎಂದು ಹಲವಾರು ಹಾವಿನ ಪ್ರಭೇದಗಳನ್ನು, ಅವುಗಳಿಗಿರುವ ಹೆಸರುಗಳನ್ನು ಹೇಳಿರುವುದನ್ನು ಕಂಡರೆ ಆಧುನಿಕ ಉರಗತಜ್ಞರೂ ಆಶ್ಚರ್ಯ ಪಡುವರು. ಪನ್ನಗಕೇತನನನ್ನು ಹಡೆದ ತಾಯಿ ಹೊಟ್ಟೆಯಲ್ಲಿ ಆದ ಅನುಭವವನ್ನು ಕವಿ ಮೇಲಿನ ಹೋಲಿಕೆಗಳಿಂದ ವರ್ಣಿಸಿರುವುದು ಔಚಿತ್ಯಪೂರ್ಣವಾಗಿದೆ.

ಭೂಮಿ ತಾಯಿಯ ಬಗೆಗೆ ಕವಿ ತಾಳಿರುವ ನಿಲುವು ಹೀಗಿದೆ:

**ಮಣ್ಣೆಲ್ಲ ಹೊನ್ನು ಕಾಣೆ ಭೂಮಿತಾಯಿ**
**ಹೊನ್ನೆಲ್ಲ ಸಿರಿಯು ಕಾಣೆ**
**ಸಿರಿಯ ಮಾತ್ಗೆ ಕಾಣೆ**
**ಅಂಥ ಸಿರಿಯ ಮಣ್ಣು ಕಾಣೆ**

ಎಂಬಲ್ಲಿ ಮಣ್ಣನ್ನು ಹೊನ್ನೆಂದು ಪರಿಭಾವಿಸಿ ಅದರ ಮೌಲ್ಯವನ್ನು ಇಮ್ಮಡಿ ಗೊಳಿಸಿದ್ದಾನೆ.

ಅಂಗಗೊರಬನ ವರ್ಣನೆ ಜನಪದ ಮಹಾಭಾರತದಲ್ಲಿ ಅದ್ಭುತವಾಗಿ ಮೂಡಿಬಂದಿದೆ:

**ತ್ಯಾಗದ ಮರದುದ್ದ ತೋಳುಗಳ ಬೀಸುತ**
**ಗುಡ್ಡದ ಗಾತ್ರದ ದೊಡ್ಡ ಹೊಟ್ಟೆ**
**ಆಲದ ಮರದ ಗಾತ್ರಾ ಅವನ ತೊಡೆಗಳು**
**ಒಂದೊಂದು ಬಂಡೆಗಾತ್ರ ಒಂದೊಂದು ಕುಂಡೆ**
**ಅರಮನೆ ಹೆಗ್ಗಂದಯರೋ ಕಾಲುಗಳು**
**ನೆಲನಡಗೋ ಆಪಾಟಿ ಪಾದಗಳು**
**ಟಾರೆಣ್ಣೆಯಂತೆ ಮೈ**

ಆತನ ವರ್ಣನೆಯಲ್ಲಿ ಕವಿ ಪ್ರಾಕೃತಿಕ ವಸ್ತುಗಳಾದ ಮರ, ಬೆಟ್ಟ, ಬಂಡೆ ಮುಂತಾದವುಗಳ ಹೋಲಿಕೆಯನ್ನು ನೀಡಿದ್ದಾನೆ. ಇಲ್ಲಿ ಕವಿಯ ಅರಣ್ಯಜ್ಞಾನ ಹಾಗೂ ಮರಗಳ ಸ್ವಭಾವ ಆಕಾರ ಮೊದಲಾದ ತಿಳಿವನ್ನು ಈ ಪದ್ಯದಲ್ಲಿ ಕಾಣಬಹುದು. ಕಪ್ಪಾದ ಬಣ್ಣವನ್ನು ಕವಿ ಇಂದಿನ ಟಾರೆಣ್ಣೆಗೆ

ಹೋಲಿಸುತ್ತಾನೆ. ಇಲ್ಲಿ ರಾಕ್ಷಸನ ಬೀಭತ್ಸವರ್ಣನೆಯನ್ನು ಅಷ್ಟೇ ಸಹಜವಾಗಿ ಅದ್ಭುತವಾಗಿ ಬಣ್ಣಿಸಿದ್ದಾನೆ.

ಜೋಗಿ ದೀಕ್ಷೆ ಪಡೆದು ಪದ್ಮಾವತಿಯ ಬೆನ್ನಸೀಳಿ ತಲೆಬುರುಡೆ ಪಗಡೆ, ರುಂಡಗಳನ್ನು ತೆಗೆದುಕೊಂಡು ಮೂರು ಬುರುಡೆ ಮಾಡಿಕೊಂಡು ತೋಳನ್ನು ಬಳ್ಳಾ ಮಾಡ್ಕಂಡು, ನರಗಳನ್ನು ತಂತಿಮಾಡಿಕೊಂಡ, ಮೂಗು ಕಿತ್ತು ಬುರುಡೆಗೆ ಕುದುರೆ ಮಾಡಿಕೊಂಡ, ಕಣ್ಣು ಕಿತ್ತು ಜೀವದ ಕಲ್ಲು ಮಾಡ್ಕಂಡ; ಮೈಯ ಚರ್ಮ ಜೋಳಿಗೆ, ಅವಳ ರಕ್ತ ಕಾವಿ ಬಟ್ಟೆಗಳಾದವು. ಅವುಗಳಿಂದ ಕಿನ್ನರಿ ಮಾಡಿಕೊಂಡು ಅದರಿಂದ ಮೂವತ್ತೆರಡು ರಾಗಗಳನ್ನು ಮಿಡಿಸಿದನಂತೆ. ಜನಪದ ಕವಿಯ ಈ ವರ್ಣನೆ ಅದೆಷ್ಟು ಸೊಗಸೆಂಬುದು ಇಲ್ಲಿ ಮುಖ್ಯವಾಗುತ್ತದೆ.

ಹಾಗೆಯೇ ಯುದ್ಧದ ವರ್ಣನೆ ಸಹಜವಾಗಿಯೂ ಅದ್ಭುತವಾಗಿಯೂ ಮೂಡಿ ಬಂದಿರುವುದನ್ನು ಕಾಣಬಹುದು. ಭೀಷ್ಮರು ಬಾಣಗಳನ್ನು ಬಿಟ್ಟಾಗ ಆಕಾಶ ತುಂಬ ಬಾಣಗಳಾದುವಂತೆ.

**ಹದಿನೆಂಟು ದಿನಗಳು**
**ಕುರುಕ್ಷೇತ್ರ ಯುದ್ಧದಲ್ಲಿ**
**ಹದಿನೆಂಟುಚೋಣಿ ಸೈನ್ಯಗಳು**
**ನಾಶವಾಯಿತು**
**ರಣದಲ್ಲಿ ಹರಿದಂಥ**
**ಸೈನ್ಯದ ರಕ್ತವು**
**ಮಡುವಾಗಿ ಹೊಳೆಯಾಗಿ**
**ರಕ್ತದ ಹೆಪ್ಪುಪ್ಪು**
**ತೇಲುತ ತೇಲುತ**
**ಭೋರ್ಗರೆದು ಹರಿವಂತ**
**ರಕುತದಾ ಹೊಳೆಯು**
**ಕಾಡು ಕಾಡನೆಲ್ಲ**
**ಬೆಟ್ಟಗುಡ್ಡಗಳನ್ನೆಲ್ಲ**
**ಮುಳುಕೀಸಿ ಬರುತ್ತಿತ್ತು.**

ಹೀಗೆ ಜನಪದ ಮಹಾಭಾರತದ ಯುದ್ಧದ ವರ್ಣನೆಯಲ್ಲಿ ಬೀಭತ್ಸ್ಯ ವೀರರಸ ಚಿಮ್ಮಿರುವುದನ್ನು ಗಮನಿಸಬಹುದು. ಹಾಗೆಯೇ ಭೀಷ್ಮರು ಶಿಖಂಡಿಯೊಂದಿಗೆ ಯುದ್ಧ ಮಾಡುವುದೇ ಸಾಧ್ಯವಿಲ್ಲ, ಮರಣಕಾಲದಲ್ಲಿ ಪರಮಾತ್ಮನ ದರ್ಶನವಾಯ್ತೆಂದು ಹೇಳುತ್ತಿರುವಾಗ ಶಿಖಂಡಿ ಗೊಂಚೆ ಹರಿತವಾದ ಬಾಣವನ್ನು ಭೀಷ್ಮರ ಎದೆಗೆ ಹೊಡೆದಾಗ ಭೀಷ್ಮರು ಅರ್ಜುನನಿಗೆ 'ಸರಳಮಂಚ

ಮಾಡಪ್ಪಾ' ಎಂದು ಹೇಳಲು ಅರ್ಜುನ ಬಿಟ್ಟ ಒಂದು ಬಾಣ ಸಾವಿರಾರು ಬಾಣಗಳಾಗಿ ಸರಳಮಂಚವಾಯಿತು. ಭೀಷ್ಮರನ್ನು ಅಲ್ಲಿ ಮಲಗಿಸಿ ಅರ್ಜುನ ಬಾಣದಿಂದ ಪಾತಾಳದಿಂದ ನೀರು ಚಿಮ್ಮಿ ಅವರ ಬಾಯಿಗೆ ಬೀಳುವಂತೆ ಮಾಡಿದನು. 'ನೀನು ಯುದ್ಧದಲ್ಲಿ ಜಯಶೀಲನಾಗಪ್ಪಾ, ಕೀರ್ತಿಶಾಲಿಯಾಗಪ್ಪಾ' ನಾನು ಈ ಉತ್ತರಾಯಣ ಪುಣ್ಯಕಾಲದಲ್ಲಿ ಈ ಮಂಚದಲ್ಲೇ ಪ್ರಾಣಬಿಡುತ್ತೇನೆ ಎಂದರು. ಈ ವರ್ಣನೆಗಳು ಶಿಷ್ಟಕಾವ್ಯಾದ ಸಾಮ್ಯವನ್ನು ಹೊಂದಿದೆ ಎಂದರೆ ಅಚ್ಚರಿಪಡಬೇಕಾಗಿಲ್ಲ. ಯಾವ ಶಿಷ್ಟಕವಿಗಳಿಗೂ ಈ ಜನಪದ ಕವಿ ಕಡಿಮೆ ಇಲ್ಲ ಎಂಬುದು ಈ ಕಾವ್ಯದ ವರ್ಣನಾ ಭಾಗಗಳಲ್ಲಿ ಸಾಬೀತಾಗಿರುವುದನ್ನು ಕಾಣಬಹುದು.

ಜನಪದ ಮಹಾಭಾರತದಲ್ಲಿ ಶೋಷಣೆಗೆ ಸಂಬಂಧಿಸಿದ ಸಂಗತಿಗಳು ಅನಾವರಣಗೊಂಡಿರುವುದನ್ನು ಗುರುತಿಸಬಹುದು. ಶೋಷಣೆಯ ನೆಲೆಗಳನ್ನು ಗುರುತಿಸುವುದು, ಅದಕ್ಕೆ ಪ್ರತಿಕ್ರಿಯಿಸುವುದು. ಶೋಷಕರಿಗೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ತಿಳಿಹೇಳುವುದು ಹಾಗೂ ಆಗಿರುವ ಲೋಪಗಳನ್ನು ಸರಿಪಡಿಸುವ ಮಾರ್ಗಗಳನ್ನಲ್ಲಿ ಸೂಚಿಸುವುದು, ಇದಕ್ಕೆ ಪೂರಕವಾಗಿ ಸಮಸ್ಯೆಗಳ ಪರಿಹಾರಕ್ಕಾಗಿ ನೇತ್ಯಾತ್ಮಕ ಮಾರ್ಗಗಳಾದ ಹಿಂಸಾತ್ಮಕ ಹಾದಿ ಹಿಡಿಯುವಿಕೆ ಮತ್ತು ಆತ್ಮಹತ್ಯೆಯನ್ನು ವಿರೋಧಿಸುವುದು ಈ ಕಾವ್ಯದ ಮಹತ್ವದ ಅಂಶವಾಗಿದೆ. 'ಧರ್ಮಕ್ಕಿಂತ ದೊಡ್ಡು ಬ್ಯಾರೆ ಯಾವ್ದೂ ಇಲ್ಲ' ಎಂಬುದೇ ಜನಪದ ಮಹಾಭಾರತದ ಪ್ರಧಾನ ಆಶಯವಾಗಿದೆ. ಧರ್ಮವೆನ್ನುವುದು ಇಲ್ಲಿ ಒಟ್ಟು ಮಾನವೀಯತೆಯೇ ಆಗಿದೆ. ಹಾಗಾಗೀ ಈ ದೇಶದ ಸಂದರ್ಭದಲ್ಲಿ ಶಿಷ್ಟನೆಲೆಯಲ್ಲಿ 'ಯಜಮಾನಧರ್ಮ' ಎಂಬಂತೆ ವರ್ತಿಸಿದ ಆರ್ಯ ತತ್ವ ಪ್ರಣಾಳಿಕೆಯನ್ನಾಧರಿಸಿದ ಹಿಂದೂ ಧರ್ಮದ ಅನೇಕ ಜೀವವಿರೋಧಿ ಧೋರಣೆಗಳನ್ನು ಈ ಕಾವ್ಯ ಪ್ರಶ್ನಿಸುತ್ತದೆ.

ಜನಪದ ಮಹಾಭಾರತ ಶೋಷಣೆಯನ್ನು ವ್ಯಾಪಕ ನೆಲೆಯಲ್ಲಿ ಸಂಗ್ರಹಿಸುತ್ತದೆ. ಸ್ತ್ರೀ, ಪುರುಷ, ಪರಿಸರ, ಪ್ರಾಣಿ ಇವುಗಳಿಗೆಲ್ಲ ಸಂಬಂಧಿಸಿದ ಶೋಷಣೆಯ ಪ್ರಶ್ನೆಗಳನ್ನು ಈ ಕಾವ್ಯ ಎತ್ತುತ್ತದೆ. ಇನ್ನೂ ವಿಶೇಷವೆಂದರೆ 'ನಾನು ಕಾಯುವ ನಾಯಕ' ಎಂದು ಬಹಿರಂಗವಾಗಿ ಉದ್ಘೋಷಿಸುತ್ತಾ ಆ ಪಟ್ಟವನ್ನು ಎಲ್ಲಾ ಕಾಲಕ್ಕೂ ಉಳಿಸಿಕೊಳ್ಳುವ ಸ್ವಾರ್ಥ ಹಂಬಲದಿಂದ ದೊಡ್ಡವರೆನಿಸಿಕೊಂಡವರು ಅತ್ಯಂತ ಸೂಕ್ಷ್ಮ ಸ್ತರದಲ್ಲಿ ನಡೆಸುವ ಶೋಷಣೆಯನ್ನು ಈ ಕಾವ್ಯ ಯಾವ ಮುಲಾಜೂ ಇಲ್ಲದೆ ಪ್ರತಿಭಟಿಸುವುದು ಬಹುಮುಖ್ಯವಾಗಿದೆ.

ಶಿಷ್ಟ ಮಹಾಭಾರತದ ದ್ರೌಪದಿಗಿಂತ ಜನಪದ ಮಹಾಭಾರತದ ದ್ರೌಪದಿ ಭಿನ್ನಳಾಗಿದ್ದಾಳೆ. ಈ ನಿಟ್ಟಿನಲ್ಲಿ 'ದ್ರೌಪದಿ ಪಗಡೆಯಾಡುವ ಸನ್ನಿವೇಶ' ವಿಶೇಷವಾಗಿ ಗಮನಾರ್ಹವೆನಿಸುತ್ತದೆ. ಸ್ತ್ರೀಯನ್ನು ಒಂದು ನಿರ್ಜೀವ ವಸ್ತು ಎಂದು ಭಾವಿಸುವ ಮತ್ತು ಹಾಗೆಯೇ ವರ್ತಿಸುವ ಪಾಂಡವರು ಹಾಗೂ ಕೌರವಾದಿಗಳಿಗೆ ದ್ರೌಪದಿ ತೋರುವ ಪ್ರತಿಕ್ರಿಯೆ ಸ್ತ್ರೀ ಸ್ವಾಭಿಮಾನದ ಅನಾರವರಣವೇ ಆಗಿದೆ. ಪುರುಷನ ಸ್ವಾರ್ಥ, ಅಹಂಕಾರ, ವ್ಯಸನಗಳಿಗೆ ಸೋತು ಸಭೆಯಲ್ಲಿ ಬಂದು ನಿಂತ ದ್ರೌಪದಿ ದುರ್ಯೋಧನನಿಗೆ ಹೇಳುವ ಈ ಮಾತುಗಳನ್ನು ಗಮನಿಸಬಹುದು.

**ಎಲ್ಲೋ ಪಾಪಿ ದುರ್ಯೋಧ**
**ನೀನು ನನ್ನನ್ನು ಈ ರೀತಿ (ಗೌಡಿ) ಕರಿಯೋ ಹಕ್ಕಿಲ್ಲ**
**ನಾನು ನಿನ್ನ ತೊತ್ತು ಅಲ್ಲ ಗೌಡೀನೂ ಅಲ್ಲ**
**ಧರ್ಮರಾಜ ತಾನು ಸೋತು ನಿನ್ನ ಸೋದೇನಲ್ಲಿರುವಾಗ**
**ನನ್ನನ್ನು ಈಡು ಕಟ್ಟಿದಕ್ಕೆ ಅವರಿಗೆ ಅಧಿಕಾರವಿಲ್ಲ**
**ಆ ಕಾರ್ಯದಿಂದ ನಾನು ಸೊತಂತ್ರಳು**
**ನನ್ನುನ್ನಿ ಈನುವಾಗಿ ಮಾತಾಡಿ ನಾಸನಾಗ್ಬೇಡ**

ಹೆಣ್ಣಿಗೂ ಗಂಡಿನಂತೆ ಒಂದು ಜೀವಿಯಾಗಿ ಬದುಕುವ ಸ್ವತಂತ್ರ ಅಸ್ತಿತ್ವವಿದೆ ಎಂಬುದನ್ನು ಈ ಮಾತುಗಳು ಸಮರ್ಥವಾಗಿ ಸಾದರಪಡಿಸುತ್ತದೆ. ಶೋಷಣೆಗೆ ಒಳಗಾದವರ ಪರವಾಗಿ ಮತ್ಯಾರೋ ಮಾತನಾಡುವುದು, ಪ್ರತಿಭಟಿಸುವುದು ಪೂರ್ಣ ಪರಿಣಾಮಕಾರಿ ಎನಿಸುವುದಿಲ್ಲ. ಶೋಷಿತರೇ ಸ್ವಾಭಿಮಾನದಿಂದ ಪ್ರತಿಭಟಿಸಿದರೆ ಉದ್ದೇಶ ಸಾರ್ಥಕವಾಗುತ್ತದೆ. ಇದಕ್ಕೆ ಚರಿತ್ರೆಯ ಹಲವು ಸಾಕ್ಷಿಗಳಿವೆ. ಶೋಷಣೆಯನ್ನು ವಿರೋಧಿಸುವ ಸಮರ್ಪಕ ವಿಧಾನವನ್ನು ಜನಪದ ಕವಿ ಇಲ್ಲಿ ತಿಳಿಸಿದ್ದಾನೆ.

ಮುಂದೆ ದ್ರೌಪದಿ ಸ್ವಯಂ ಪಗಡೆಯಾಡಲು ಕುಳಿತುಕೊಂಡಾಗ 'ಸಕುನಿ ಮಾರಾಜ ಗ್ವಾರಂದ ನಡುಗೋಯ್ತು ನಾಲಿಗೆ ಬಿದ್ದೋದಂಗಾಯ್ತು. ಲಕ್ವ ಹೊಡ್ದಂಗಾಯ್ತು' ಎಂದು ಜನಪದ ಕವಿ ಆಡುವ ಮಾತುಗಳು ತುಂಬಾ ಶಕ್ತಿಯುತವಾಗಿವೆ. ದಲಿತ ಬಂಡಾಯ ಕಾವ್ಯದ ಸಮರ್ಥ ಕವಿಯಾದ ಸಿದ್ದಲಿಂಗಯ್ಯನವರ 'ಸಾವಿರಾರು ನದಿಗಳು' ಕವಿತೆಯಲ್ಲಿ ಕಂಡುಬರುವ "ಇವರು ಬಾಯಿ ಬಿಟ್ಟೊಡನೆ ಅವರ ಬಾಯಿ ಕಟ್ಟಿತು ಇವರ ಕಂಠ ಕೇಳಿದೊಡನೆ ಅವರ ದನಿ ಇಂಗಿತು" ಎಂಬ ಮಾತುಗಳನ್ನು ಇಲ್ಲಿ ತೌಲನಿಕವಾಗಿ ಗಮನಿಸಬಹುದು. ಶೋಷಣೆಗೆ ಒಳಗಾದವರು 'ಬಾಯಿ ಬಿಡುವುದೆ' ಶೋಷಣೆಯನ್ನು ಸಮರ್ಥವಾಗಿ ವಿರೋಧಿಸುವ ಪ್ರಾಥಮಿಕ ಹಾಗೂ ಪರಿಣಾಮಕಾರಿ ಕ್ರಿಯೆಯಾಗಿದೆ. ಅನಂತರ ಪಗಡೆಯಾಡಿದ ದ್ರೌಪದಿ ಗೆಲ್ಲುವುದು ಈ ಪ್ರಾಥಮಿಕ ಶಕ್ತಿಯ ಸಮರ್ಥ

ಕ್ರಿಯಾತ್ಮಕತೆಯಿಂದಲೆ ಎನ್ನುವುದು ಗಮನಾರ್ಹ. ಜನಪದ ಕವಿಯ ಆದ್ಯತನ ಜನಪದ ಮಹಾಭಾರತದ ಪ್ರಸ್ತುತತೆ ಇಲ್ಲಿ ಎದ್ದು ಕಾಣುತ್ತದೆ.

ಜನಪದ ಮಹಾಭಾರತದಲ್ಲಿ ಕಂಡುಬರುವ ಸ್ಥಳನಾಮ, ವ್ಯಕ್ತಿನಾಮ ಹಾಗೂ ಕೆಲವು ಪ್ರಸಂಗಗಳಿಗೆ ಶಿಷ್ಟಭಾರತದಲ್ಲಿ ಉತ್ತರವಿಲ್ಲ. ಇಲ್ಲಿ ಕವಿ ಹೇಳುವ ಕಾರ್ಯ ಕಾರಣಗಳು ಅವನ ಪ್ರತಿಭೆಗೆ ತಾರ್ಕಿಕತೆಗೆ ನಿದರ್ಶನವಾಗುತ್ತವೆ. ಭೀಷ್ಮನ ಹೆಸರಿನ ಬಗ್ಗೆ ಹೇಳುತ್ತ 'ಕಾಮನ ಭಸ್ಮವನ್ನು ಧರಿಸಿದ್ದರಿಂದ ಭೀಷ್ಮ' ಎಂಬ ಹೆಸರು ಬಂದಿತ್ತೆಂದು ನಿಷ್ಪತ್ತಿ ಹೇಳಲಾಗಿದೆ. ಭೀಷ್ಮನ ವ್ಯಕ್ತಿತ್ವಕ್ಕೆ ಈ ಅರ್ಥವಿವರಣೆ ಅನ್ವಯಿಸುವುದರಿಂದ ಇಂಥ ಶಬ್ದಸಾಮ್ಯ ನಿಷ್ಪತ್ತಿ ಕೃತಕ ಆಡಂಬರ ಬೌದ್ಧಿಕ ಕಸರತ್ತೆನ್ನಿಸುವುದಿಲ್ಲ. 'ಕರುಣೆಯಿಂದ ಬದುಕಿದವನಾಗಿ ಕರ್ಣನಾದ, ಎಂಬ ನಿಷ್ಪತ್ತಿಯನ್ನು ಈ ನೆಲೆಯಲ್ಲಿ ವ್ಯಾಖ್ಯಾನಿಸಿಕೊಳ್ಳುವ ಸಾಧ್ಯತೆಯಿದೆ. ಪಾರ್ವತಿಯು ಉಲೂಪಿಗೆ ಕೊಟ್ಟಿದ್ದ ಎಂದೂ ಬಾಡದ ಕುಸುಮಮಾಲೆಯಿಂದ ಅವಳಿಗೆ ಕುಸುಮಾಲೆ ಎಂದು ಹೆಸರಾಯಿತು. ರಾಜಶೂರ ಕೆಬ್ಬೆಹೊಲವನ್ನು ಉಳುತ್ತಿದ್ದ ನೇಗಿಲುಗುಳ ಸಾಗಿದ ಸಾಲಿನ ಕುನಿತಲದಲ್ಲಿ ಮೂಡಿದವಳಾದ್ದರಿಂದ ಅವಳಿಗೆ ಕುಂತಿ ಎಂದು ಹೆಸರಾಯಿತು. ಭೀಮ–ಉರಿಸಿಂಗಿಯರ ಪುಟ್ಟಕಂದ ಪಾತಾಳದಿಂದ ಭೂಮಿಗೆ ಹಿಂದಿರುಗಲು ಸಿದ್ಧನಾದ ಭೀಮನನ್ನು ಭದ್ರವಾಗಿ ತನ್ನ ಬಾಹುಗಳಿಂದ ಹಿಡಿದುಕೊಂಡಿದ್ದರಿಂದ ಆ ಮಗುವಿಗೆ 'ಭದ್ರಬಾಹು' ಎಂದು ಹೆಸರಾಯಿತು.

ಹೀಗೆಯೇ ಅನೇಕ ಸ್ಥಳನಾಮಗಳಿಗೂ ಇಂಥ ಕಥೆಗಳನ್ನು ಹೇಳಲಾಗಿದೆ. ಧರ್ಮರಾಯರು ಸ್ವರ್ಗಾರೋಹಣ ಸಂದರ್ಭದಲ್ಲಿ ಒಂದು ರಾತ್ರಿ ತಂಗಿದ್ದ ಸ್ಥಳವೇ ಧರ್ಮಸ್ಥಳವಾಯ್ತು. ಧರ್ಮರಾಯ ತಮ್ಮ ಪಟ್ಟಣಕ್ಕೆ ಬಂದಿದ್ದ ಕುರುಹಿಗಾಗಿ ರತ್ನಪುರಿಯ ಮಯೂರಧ್ವಜ ಕಟ್ಟಿಸಿದ ನಗರವೇ ಧರ್ಮಾಪುರಿ (ಇದು ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿದಲ್ಲಿದೆ). ನರಕದಲ್ಲಿದ್ದ ಶಕುನಿಯು ಮಾಡಿದ ಕಿತಾಪತಿಗೆ ರೋಸಿಹೋದ ದುರ್ಯೋಧನನು ಅವನನ್ನು ಝಾಡಿಸಿ ಒದ್ದುದರಿಂದ ಅವನು ನೆಲಕ್ಕೆ ಬಿದ್ದ. ಹೀಗೆ ಶಕುನಿ ನರಕದಿಂದ ನೆಲಕ್ಕೆ ಬಿದ್ದ ಸ್ಥಳವೇ 'ಶಕುನಿಕೊಪ್ಪಲು' (ಇದೂ ಹುಣಸೂರು ತಾಲ್ಲೂಕಿನಲ್ಲಿದೆ) ಎಂದಾಯಿತಂತೆ. ಪಾಂಡವರು ಕೆಲಕಾಲ ತಂಗಿದ್ದ ಏಕಚಕ್ರ ನಗರವೇ ಪಾಂಡವಪುರ. ಉಲೂಪಿ ಚಿತ್ರಾಂಗದೆಯರ ಮೂಲನೆಲೆಯೇ ಆದಿಚುಂಚನಗಿರಿ, ಸಮೀಪವಿರುವ ನಾಗಮಂಗಲ. ಈ ಊರಿನಲ್ಲಿ ಬಭ್ರುವಾಹನನು ನಾಗಲೋಕಕ್ಕೆ ಹೋದ ದ್ವಾರವೆಂದು ದೇವಾಲಯವೊಂದರ ಒಳಗಿರುವ ಬಾವಿಯನ್ನು ತೋರಿಸುವುದುಂಟು. ಹೀಗೆ ಮಹಾಭಾರತದಲ್ಲಿ ಬರುವ ಸ್ಥಳಗಳಿಗೆಲ್ಲ ಐತಿಹ್ಯ

ಪುರಾಣಗಳನ್ನು ಕಟ್ಟಿ ಹೇಳುವ ಪ್ರಕ್ರಿಯೆ ಜನಪದರಿಗೆ ಅತ್ಯಂತ ಪ್ರಿಯವಾದ ಸಂಗತಿ. ಇಲ್ಲಿ ಜನಪದ ಕವಿಯ ಪ್ರತಿಭೆ ಭಾಷಾವಿಜ್ಞಾನದ ಹಿನ್ನಲೆಗೂ ಪೂರಕವಾಗುತ್ತದೆ.

ಕುಂತಿಯ ಹೊಟ್ಟೆಯಲ್ಲಿ ಹುಟ್ಟಿದರೂ ಅಂಬಿಗರ ಚೌಡಯ್ಯನ ಸಾಕುಮಗನಾಗಿ ಬೆಳೆಯುವ ಕರ್ಣನ ಹುಟ್ಟು ಹಬ್ಬದ ಆಚರಣೆ ದಮನಗೊಂಡ ಪಾತ್ರಗಳಿಗೆ ಜನಪದರು ನೀಡುವ ಉನ್ನತ ಸ್ಥಾನಕ್ಕೆ ಸಾಕ್ಷಿಯಾಗಿದೆ. ಕರ್ಣ ಕೌರವನ ಮೊದಲ ಭೇಟಿಯ ಸಂದರ್ಭ ಜನಪದರ ವಿಶಿಷ್ಟ ಕಲ್ಪನಾ ಸಾಮರ್ಥ್ಯ ಹಾಗೂ ನೂತನ ಸನ್ನಿವೇಶ ಸೃಷ್ಟಿಗೆ ನಿದರ್ಶನವಾಗುತ್ತದೆ. ಕರ್ಣನ ಬಾಣಪ್ರಯೋಗ ಕೌಶಲವೂ ವಿಶೇಷದ್ದಾಗಿದೆ. ಕರ್ಣನ ಬಗೆಗೆ ಕೌರವನಿಗೆ ವಿಶೇಷ ಅಕ್ಕರೆ ಮೂಡಲು ದುರ್ಯೋಧನ ಕುಳಿತ್ತಿದ್ದ ರಥವು ಕಮ್ಮರಿಗುರುಳುವುದನ್ನು ತಡೆದ ಅವನ ಬಿಲ್ವಿದ್ಯೆ ಕಾರಣವಾಗುತ್ತದೆ. ಇಲ್ಲಿ ಪಾಂಡವ ದ್ವೇಷಕ್ಕೆ ಕರ್ಣನನ್ನು ಅಸ್ತ್ರವನ್ನಾಗಿ ಬಳಸಿಕೊಳ್ಳುವುದಕ್ಕಿಂತಲೂ ಹೆಚ್ಚಾಗಿ ವೈಯಕ್ತಿಕ ಆಸಕ್ತಿ ಮುಖ್ಯವಾಗುತ್ತದೆ. 'ಕಲಿತ ವಿದ್ಯೆ ಸಂಕಷ್ಟದಲ್ಲಿರುವವರನ್ನು ರಕ್ಷಿಸುವುದಕ್ಕಾಗಿ' ಎಂಬ ಕರ್ಣನ ಧೋರಣೆ ಜನಪದರ ಜೀವಪರ ನಿಲುವಿಗೆ ನಿದರ್ಶನವಾಗುತ್ತದೆ. ಕೌರವನಿಂದ ದೊರೆತ ಸಹಕಾರದಿಂದ ಕರ್ಣನಿಗಾದ ಸಂತಸಕ್ಕೆ ಕೊಡುವ ಹೋಲಿಕೆಗಳು ಜನಪದ ಕವಿಯ ಸೃಜನಶೀಲ ಪ್ರತಿಭೆಗೆ ದ್ಯೋತಕವಾಗಿದೆ. ನಾಗರೀಕರ ಪ್ರಚಾರಪ್ರಿಯತೆಯನ್ನು ಸೂಕ್ಷ್ಮವಾಗಿ ಟೀಕಿಸುವ ದುರ್ಯೋಧನ ದಾನಶೂರನೆಂದು ಬೋರ್ಡ್ ಹಾಕಿಕೊಳ್ಳುವ ಪ್ರಸಂಗ ಕರ್ಣನು ಮನೆಯ ಜಂತಿಯನ್ನೇ ಬ್ರಾಹ್ಮಣನ ಹೆಣ ಸುಡಲು ದಾನ ಮಾಡಿದ್ದು ಸಕಾಲಿಕ ದಾನದ ಹಿರಿಮೆಯನ್ನು ಎತ್ತಿ ಹೇಳುತ್ತದೆ. ಈ ಸನ್ನಿವೇಶದಲ್ಲಿ ಸೃಷ್ಟಿ ಕರ್ಣನ ದಾನಗುಣವನ್ನು ಶಿಷ್ಟ ಮಹಾಭಾರತಕ್ಕಿಂತಲೂ ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ. ಆದಿಕವಿ ಪಂಪನಂತೂ ತನ್ನ ಭಾರತವನ್ನು ಕರ್ಣರಸಾಯನವೆಂದೇ ಕರೆದಿದ್ದಾನೆ. ಆದರೆ ಜನಪದ ಮಹಾಭಾರತ ಆತನನ್ನು ಧಾನಗುಣವುಳ್ಳ ತೀರ ಸಾಮಾನ್ಯ ಮನುಷ್ಯನೆಂಬಂತೆಯೇ ಚಿತ್ರಿಸುತ್ತದೆ.

ಕುಂತಿ ಗಜಗೌರಿ ವ್ರತ ಹಿಡಿದಾಗ ಕುಬೇರನು ದೇವಲೋಕದಿಂದ ರಾಗಿ, ಭತ್ತ, ಅವರೆ, ತೊಗರಿ ಮುಂತಾದ ಧಾನ್ಯಗಳನ್ನು ಕಳುಹಿಸುತ್ತಾನೆ. ವ್ರತ ಮುಗಿದ ಅನಂತರ ಕುಂತಿ ಆ ಧಾನ್ಯಗಳನ್ನು ಜೋಪಾನ ಮಾಡಿಡುತ್ತಾಳೆ. ಪಾಂಡವರು ಸ್ವರ್ಗಾರೋಹಣ ಮಾಡುವ ಮುನ್ನ ತಮ್ಮಲ್ಲಿದ್ದ ಧನಕನಕ ವಸ್ತುಗಳನ್ನೆಲ್ಲಾ ಪ್ರಜೆಗಳಿಗೆ ದಾನಮಾಡಿ ಹೊರಡುವ ಸಿದ್ಧತೆಯಲ್ಲಿರುವಾಗ ಸುದ್ದಿ ತಿಳಿದ ರೈತರು ಬಂದು ನಮಗೇನಾದರೂ ಕೊಡುವುದಿಲ್ಲವೇ ಎಂದಾಗ ಧರ್ಮರಾಯ ಕೈಚೆಲ್ಲಿ ನಿಲ್ಲುತ್ತಾನೆ. ಕುಂತಿ ತನ್ನಲ್ಲಿ ಇಷ್ಟು ಕಾಲ ಕಾಪಾಡಿಕೊಂಡು ಬಂದಿದ್ದ ಧಾನ್ಯಗಳ ಬೀಜಗಳನ್ನು ಜನರಿಗೆ ದಾನ

ಮಾಡುವಂತೆ ಧರ್ಮರಾಯನ ಕೈಗೆ ಕೊಡುತ್ತಾಳೆ. ಸ್ವತಃ ಧರ್ಮರಾಯನೇ ರೈತರು ಉತ್ತು ಸಾಲುಗಳನ್ನು ಮಾಡುತ್ತಿರುವಾಗ ಅವರೇ ಬೀಜಗಳನ್ನು ಬಿತ್ತುತ್ತಾನೆ. ಅವರೆ ಬೆಳೆ ಬೆಳೆದು ಹೂ ಕಾಯಿಗಳಿಂದ ತುಂಬಿದ್ದನ್ನು ಕಂಡು ಸಹಿಸದ ದುರ್ಯೋಧನ ನರಕದಲ್ಲಿದ್ದರೂ ಪಾಂಡವರಿಗೆ ಬಂದ ಲೋಕ ಕೀರ್ತಿಯನ್ನು ಸಹಿಸದೆ ಬೆಳೆಗೆ ಹುಳು ಹುಪ್ಪಟೆಗಳು ಹರಡಿ ಬೆಳೆನಾಶವಾಗುವಂತೆ ಮಾಡುತ್ತಾನೆ. ಹೀಗೆ ಕೀಟಜ್ಞಾನ ಕಾವ್ಯರೂಪಕದಲ್ಲಿ ಅಭಿವ್ಯಕ್ತಿ ಪಡೆದಂತಿದೆ. ಜನಪದ ಕವಿ ದುರ್ಯೋಧನನ ಹೆಸರನ್ನು ಸಹ ದೇಸಿಗೆ ಒಗ್ಗಿಸುತ್ತಾ ಅವರೆ ಹೂ ಕಾಯಿಗಳನ್ನು ಕವರಿ ತಿನ್ನುವ ಹುಳುಗಳನ್ನು ಸೃಷ್ಟಿಸಿದವನು ಕವರುವವ > ಕೌರವ ಎಂದಿರುವುದು ಕೌತುಕವಾಗಿದೆ.

ಜನಪದ ಮಹಾಭಾರತದ ಮುಕ್ತ ಮನಸ್ಸು ಗಂಡನ ಅತಿವರ್ತನೆಯನ್ನು ತಗ್ಗಿಸಿ ನಯಗೊಳಿಸುತ್ತದೆ. ಈ ನಿಟ್ಟಿನಲ್ಲಿ ಕುಂತಿ ಮತ್ತು ದ್ರೌಪದಿಯ ಪಾತ್ರಗಳನ್ನು ಸಮೀಕ್ಷಿಸಬಹುದು. ಕುಂತಿ ನೆಲದ ಮಗಳಾಗಿ, ಸಂತಾನಲಕ್ಷ್ಮಿ ಎಂಬ ಮಾತಿಗೆ ಅನ್ವರ್ಥಳಾಗಿ ಬೀಜಸಂರಕ್ಷಣೆಯ ಹೊಣೆ ಹೊತ್ತ ಹೆಣ್ಣಾಗಿ, ತಾಯಿಯಾಗಿ ಅತ್ತೆಯಾಗಿ ಪಾಂಡವ ವಂಶಕ್ಕೆ ಕಾರಣಕರ್ತೆಯಾಗಿದ್ದಾಳೆ. ಅವಳ ಸೊಸೆ ಬೆಂಕಿಯ ಮಗಳು ದ್ರೌಪದಿ ಪಾಂಡವರೈವರಿಗೂ ಪತ್ನಿಯಾಗಿ ನಾಗರೀಕತೆಯ ಹುಟ್ಟಿಗೆ ಭಾವೈಕ್ಯತೆಗೆ ನಾಂದಿ ಹಾಡಿದ್ದಾಳೆ. ಹಾಗೆಯೇ ಸೃಷ್ಟಿಸಂತಾನ ಅತಿಯಾಗಿ ಬೆಳೆದಾಗ ಅದರ ಸಂಹಾರಶಕ್ತಿಯೂ ಆಗುತ್ತಾಳೆ. ಈ ಅಭಿಪ್ರಾಯವನ್ನು ಭದ್ರಬಾಹು ತೀರ್ಪು ನೀಡಿದ ಪರ್ವ ಎಂಬುದರಿಂದ ಸಮರ್ಥಿಸಬಹುದು. ಮಹಾಭಾರತವೆಂದಕೂಡಲೆ ಕುರುಕ್ಷೇತ್ರ ಸಂಗ್ರಾಮದ ರಣಕೇಳಿ ಮುಂತಾದವು ಪಂಪಭಾರತ, ಕುಮಾರವ್ಯಾಸರಭಾರತದಲ್ಲಿ ಕನಿಷ್ಠ ಮೂರನೆಯ ಒಂದು ಭಾಗವನ್ನಾದರೂ ಯುದ್ಧವರ್ಣನೆ ಆಕ್ರಮಿಸಿಕೊಂಡಿರುತ್ತದೆ. ಆದರೆ ಜನಪದ ಮಹಾಭಾರತದಲ್ಲಿ ಇಂಥ ವಿಸ್ತೃತ ವರ್ಣನೆಗೆ ಎಡೆಯಿಲ್ಲ. ಇದಕ್ಕೆ ಕಾರಣಗಳುಂಟು. ಮೊದಲನೆಯದಾಗಿ ಜನಪದರಿಗೆ ಯುದ್ಧವೆಂದರೆ ಆಗದು. ಹಿಂಸೆ ಕ್ರೌರ್ಯ ರಕ್ತಪಾತ ಮುಂತಾದ ವಿಚಾರಗಳಿಗಿಂತ ಮಾನವೀಯ ಸ್ನೇಹ ಸಂಬಂಧಗಳತ್ತ ಅವರಿಗೆ ಹೆಚ್ಚು ಒಲವು. ಎರಡನೆಯದಾಗಿ ನಾಥ ಅಥವಾ ಜೋಗಿಯ ಮೌಖಿಕ ಪಂಥ ಪ್ರಧಾನಧಾರೆಯಾಗಿರುವ ಜನಪದ ಮಹಾಭಾರತದಲ್ಲಿ ತಪಸ್ಸಿನ ಮೂಲಕ ಆತ್ಮೋನ್ನತಿಗೆ ಹೆಚ್ಚು ಒತ್ತು ಬೀಳುತ್ತದೆಯೇ ಹೊರತು ಅಹಂಕಾರ ಮೂಲವಾದ ಯುದ್ಧಕ್ಕಲ್ಲ. ಆದುದರಿಂದಲೇ ಹಿಂಸೆ ಹಿಂಸೆಗೆ ಮರಿಹಾಕುವ, ವೈದಿಕ ಮತಾಚರಣೆಗಳನ್ನು ವೈಭವೀಕರಿಸುವ ಅಶ್ವಮೇಧ ಯಾಗಕ್ಕೆ ಇಲ್ಲಿ ಪ್ರಾಶಸ್ತ್ಯವಿಲ್ಲ. ಜೈಮಿನಿ ಭಾರತದ ಕತೆಯೆಲ್ಲವೂ ಇಲ್ಲಿ ಬಭ್ರುವಾಹನ ಪರ್ವದ ಕೇವಲ ಹದಿಮೂರು ಪುಟಗಳಲ್ಲಿ ಮುಗಿದುಹೋಗುತ್ತದೆ. ಒಟ್ಟು ೬೦೦ಕ್ಕೂ ಹೆಚ್ಚು ಪುಟಗಳಿರುವ ಜನಪದ ಮಹಾಭಾರತದಲ್ಲಿ ಕುರುಕ್ಷೇತ್ರ ಯುದ್ಧಕ್ಕೆ ಸಂಬಂಧಿಸಿದಂತೆ ಕೇವಲ ೪೮ ಪುಟಗಳು ಮಾತ್ರ ಯುದ್ಧ

ವರ್ಣನೆಯನ್ನು ವಿವರಿಸುತ್ತವೆ. ಈ ಅಂಶದಲ್ಲಿ ಇತರ ಭಾರತಕ್ಕಿಂತ ಜನಪದ ಮಹಾಭಾರತ ಭಿನ್ನ ಆಶಯವನ್ನೊಳಗೊಂಡಿರುವುದನ್ನು ಕಾಣಬಹುದು.

ಜನಪದ ಮಹಾಭಾರತ ಭಾರತೀಯ ಪ್ರಧಾನ ಸಂಸ್ಕೃತಿಧಾರೆಗೆ ಮುಖಾಮುಖಿಯಾಗಿಸುವ ಮೌಲ್ಯಸಂಘರ್ಷದ ಮಹತ್ವದ ದಾಖಲೆಯಾಗಿದೆ. ಬೃಹತ್ ಗಾತ್ರದ ಜೀವವಸ್ತುವೊಂದು ಲೋಕಭಾವವಾಗಿ ಒಂದು ಜನಾಂಗದ ಜೀವನ ಮೌಲ್ಯವಾಗಿ ಸ್ಥಳೀಯ ರಾಗಗಳಲ್ಲಿ ಲಯಗಳಲ್ಲಿ ಬಿತ್ತರಗೊಂಡಿರುವುದು ಬೆರಗು ಮೂಡಿಸುತ್ತದೆ. ಮಹಾಭಾರತದ ಕಥಾವಸ್ತು ಭಾರತೀಯರಿಗೆ ಹೊಸತಲ್ಲ. ಶತಶತಮಾನಗಳಷ್ಟು ಹಳೆಯದು. ಪೂರ್ವಸೂರಿಕವಿಗಳು ಈ ಕಥೆಯ ಮೂಲಕ ಭಾರತದ ಮೌಲ್ಯಶೋಧದ ಕೆಲಸ ಮಾಡುತ್ತಾ ಬಂದಿದ್ದಾರೆ. ನಮ್ಮ ಜನರ ಬದುಕಿನಲ್ಲಿ ಈ ಕಥೆ ಹಾಸುಹೊಕ್ಕಾಗಿ ಮೌಲ್ಯಗಳ ಪ್ರತೀಕವಾಗಿದೆ. ಇವುಗಳನ್ನು ಹೊಸ ಆಶಯಗಳೊಂದಿಗೆ ಸ್ಥಳೀಯಗೊಳಿಸುವ ಕ್ರಿಯೆ ಜನಪದ ಮಹಾಭಾರತದುದ್ದಕ್ಕೂ ಗೋಚರಿಸುತ್ತದೆ. ದೇಶಕಾಲದಾಚೆಗಿನ ಮಾನವೀಯ ಬದುಕಿನಲ್ಲಿ ಸಾರ್ವಕಾಲಿಕ ಸತ್ಯ ಸಂದೇಶಗಳನ್ನು ಸಾರುತ್ತಲೇ ದೇಶ ಕಾಲದೊಳಗಿನ ಸ್ಥಳೀಯ ಬದುಕಿನ ಅನನ್ಯತೆಯನ್ನು ಶೋಧಿಸುವ ಕ್ರಿಯೆ ಈ ಕಾವ್ಯದ ವಿಶಿಷ್ಟತೆಯಾಗಿದೆ.

ಮೌಖಿಕ ಪರಂಪರೆಯ ಅಸಾಧಾರಣ ಅಭಿವ್ಯಕ್ತಿಯಾಗಿ ಮೈದಾಳಿದ ಜನಪದ ಮಹಾಭಾರತವೆಂಬ ಈ ಗೀತಕಾವ್ಯದಲ್ಲಿನ ಹಾಡುಗಾರನ ಶಕ್ತಿ ಹಾಗೂ ಪ್ರತಿಭೆಗೆ ಎಂಥವರೂ ಬೆರಗಾಗಲೇಬೇಕು. ಅವನ ಭಾಷಾಸಾಮರ್ಥ್ಯ ನೆನಪಿನಶಕ್ತಿ ಅಸಾಧಾರಣ. ಕನ್ನಡ ಮಾತ್ರವಲ್ಲದೆ ತಮಿಳು, ತೆಲಗು, ಉರ್ದು ಭಾಷೆಗಳಲ್ಲೂ ಅವನು ಹಾಡು ಕಟ್ಟಿ ಹಾಡಬಲ್ಲ ಕಲೆಗಾರನೆಂಬುದಕ್ಕೆ ಈ ಕೃತಿಯಲ್ಲೇ ಸಾಕ್ಷಿಗಳಿವೆ. ಪಾತ್ರ ಸನ್ನಿವೇಶಗಳಿಗೆ ತಕ್ಕಂತೆ ಕಥನ ಶೈಲಿಯನ್ನು ರೂಪಾಂತರಗೊಳಿಸುವ ಶಕ್ತಿ ಹಾಡುಗಾರನಿಗಿದೆ. ಭೀಮನ ಪ್ರಸಂಗದಲ್ಲಿ ಗಡುಸಾದ ಗದ್ಯಶೈಲಿ ಬಳಸುವ ಹಾಡುಗಾರ ಕರ್ಣನ ಪ್ರಸಂಗದಲ್ಲಿ ಭಾವಗೀತಾತ್ಮಕ ಶೈಲಿಗೆ ಮೊರೆಹೋಗುತ್ತಾನೆ. ನೇರ ಹೃದಯ ತಟ್ಟುವ ವಿಷಾದ ತಂತಿಯನ್ನು ಮೀಟುವ ಕಲೆಗಾರಿಕೆ ತೋರಿದ್ದಾನೆ. ಈ ಕಾವ್ಯವನ್ನು ಓದಿ ಆಸ್ವಾದಿಸಿದಾಗ ಸಿದ್ದಶೆಟ್ಟಿಯನ್ನು ಒಬ್ಬ ಅನಕ್ಷರಸ್ಥನೆಂದು ಎಣಿಸಲಾಗದು. ಅವನು ಗ್ರಹಿಸಿರುವ ಬದುಕಿನ ಅನುಭವ ಸಂಪತ್ತು ಅವನಲ್ಲಿ ಪುನರ್‌ಸೃಷ್ಟಿಗೊಂಡಂತೆ ಭಾಸವಾಗುತ್ತದೆ[2] ಶಿವರಾಮು ಕಾಡನಕುಪ್ಪೆಯವರ ಅಭಿಪ್ರಾಯ ಔಚಿತ್ಯಪೂರ್ಣವಾಗಿದೆ.

ಅರ್ಜುನ ಜೋಗಿಯಾಗಿ ಸಂಚರಿಸುವ ಸಂದರ್ಭದಲ್ಲಿ ಕನ್ನಡೇತರ ಭಾಷೆಗಳಲ್ಲೂ ಹಾಡಿರುವುದು ಜನಪದ ಕವಿಯ ಬಹುಭಾಷಾ ತಿಳುವಳಿಕೆಯನ್ನು ಸಾಬೀತುಪಡಿಸದರೂ ಮತ್ತೊಂದೆಡೆ ಎಲ್ಲಾ ಭಾಷಿಗರನ್ನು ತಮ್ಮೆಡೆಗೆ ಸೆಳೆಯುವ ಉದ್ದೇಶವಿರಬಹುದು. ಇಲ್ಲಿ ಭಾಷಾ ಸಾಮರಸ್ಯ ಹಾಗೂ ಮತೀಯ ಸೌಹಾರ್ದತೆ ಜನಪದರ ಉದಾರ ಮನಸ್ಸನ್ನು ಹೇಳುವಂಥದ್ದಾಗಿದೆ. ಹೀಗೆ ಅರ್ಜುನ ಜೋಗಿಯಾಗಿ ಕೇರಿ ಕೇರಿ ಸುತ್ತುವ ಸಂದರ್ಭದಲ್ಲಿ ಜನಪದ ಕವಿಯ ಪ್ರತಿಭೆ ವಿಜೃಂಬಿಸಿದೆ. ಹತ್ತಾರು ಜಾತಿ ಮತಗಳಿರುವ ಊರುಕೇರಿಗಳ ಜನರ ಓರೆ-ಕೋರೆಗಳನ್ನು ಎತ್ತಿ ಹಾಡುತ್ತಾನೆ. ಅವನ ವ್ಯಂಗ್ಯ ವಿಡಂಬನೆ, ಉಕ್ತಿಚಾತುರ್ಯ ಬೆರಗು ಹುಟ್ಟಿಸುವಂತಿದೆ. ಕೃಷಿ ಸಂಸ್ಕೃತಿಯ ಸೊಗಡು ಸೂಸುತ್ತದೆ. ಬೆಡಗು ಬಾಯ್ದೊರೆಯಾಗಿದೆ.

ಮುಸಲ್ಮಾನ ಸ್ತ್ರೀಯರನ್ನು ಕುರಿತು 'ಮಿಣಿ ಮಿಣಿ ಸೆರಗೊದ್ದು ಪಿಣಿ ಪಿಣಿ ಕಣ್‌ಬುಡುತ ಇಣಿಕಿಣಿಕಿ ನೋಡುತ್ತಾರೆ' ಎನ್ನುವ ಮಾತಿನಲ್ಲಿ ಶಬ್ದಾಲಂಕಾರವಿದ್ದು ಸುಂದರ ಶಬ್ದಚಿತ್ರವಾಗಿದೆ. ಇದೇ ಸಂದರ್ಭದಲ್ಲಿ 'ಜೋಗಪ್ಪ ಬ್ಯಾರಲ್ಲ, ಅಲ್ಲಾ ಬ್ಯಾರಲ್ಲ' ಎನ್ನುವ ಮಾತು ಬಳಕೆಯಾಗಿರುವುದು ಕೋಮುಸೌಹರ್ದದತೆಯನ್ನು ಸೂಚಿಸುತ್ತದೆ.

ಜೋಗಯ್ಯನ ಕುಣಿತವನ್ನು ಕಂಡು ನಾರಿಮಣಿಯರೆಲ್ಲ ಬೆರಗಾಗಿ ಹೀಗೆನ್ನುತ್ತಾರೆ,

**ಆಡಿದರೆ ಅರಗಿಣಿಯು- ಈ ಜೋಗಿ**
**ಕುಣಿದರೆ ನವಿಲುಮರಿಯು**
**ಸೊರವೆತ್ತಿ ಹಾಡಿದರೆ ಕೋಗಿಲೆಗೂ ಇವ ಮಿಗಿಲು**
**ಹಡೆದವ್ವ ಯಾರೋ ಇವನ**

ಜನಪದ ಕವಿಯ ಈ ವರ್ಣನೆ ಅವನ ಪ್ರತಿಭೆ ಹಾಗೂ ಸೃಜನಶೀಲತೆಗೆ ನಿದರ್ಶನವೆನ್ನಬಹುದು. ಅರ್ಜುನ ಜೋಗಿ ವೇಷ ಬಿರುದುಗಳಿಂದ ಕಿನ್ನಡಿ ಕಾವಿ ಜೋಳಿಗೆಗಳ ಮೂಲಕ ದಿವ್ಯರೂಪ ತಾಳಿ ತಿರುಗುವ ಚಿತ್ರ ಜೋಗಿಶೀಲಕ್ಕೆ ಪ್ರತೀಕವಾಗಿಲ್ಲಿ ಚಿತ್ರಿತವಾಗಿದ್ದಾನೆ. ಅತ್ಯಂತ ದೀರ್ಘವಾದ ಈ ಜೋಗಿ ಹಾಡಿನಲ್ಲಿ ಶೀಲಕ್ಕೆ ಮಹತ್ವ ನೀಡಲಾಗಿದೆ. ತನ್ನ ದಿವ್ಯರೂಪದಿಂದ ಮನಮೋಹಕ ರಾಗಾಲಾಪಗಳಿಂದ ಕಿನ್ನುಡಿ ನುಡಿಸುತ್ತಾ ಕೇರಿ ಕೇರಿ ಸುತ್ತುವ ಜೋಗಿಯ 'ಗಂಡು ಗಾಡಿಗೆ' ನಾರಿಯರು ಮನಸೋಲುತ್ತಾರೆ. ಒಲಿದು ರಮಿಸಬೇಕೆಂದು ಕೋರುತ್ತಾರೆ. ಆದರೆ ಮಾನವ ಪ್ರೇಮಿಯಾದ ಅವನು ಅವರಿಗೆಲ್ಲ ಸೋದರನೆಂದು ತಿಳಿಸಿ ಶೀಲದ ಮಹತ್ವ ಎತ್ತಿಹಿಡಿದು ಕೌಟುಂಬಿಕ ಧರ್ಮವನ್ನು ತಿಳಿಹೇಳುತ್ತಾನೆ. ಶಿಷ್ಟ ಮಹಾಭಾರತದ ಅರ್ಜುನನಿಗಿಂತ ಭಿನ್ನವಾದ ಶೀಲವಂತ

ಅರ್ಜುನನನ್ನು ಜನಪದ ಕವಿ ಇಲ್ಲಿ ಚಿತ್ರಿಸಿದ್ದಾನೆ. ಮೂಲ ಮಹಾಭಾರತದ ಕಥೆಯ ಜಾಡನ್ನು ಎಲ್ಲಿಯೂ ತಪ್ಪದೆ ತನಗೆ ಸಾಧ್ಯವಾದೆಡೆಯಲ್ಲೆಲ್ಲಾ ಜನಸಂಸ್ಕೃತಿಯ ಮೌಲ್ಯವನ್ನು ಪ್ರಸ್ತುತ ಪಡಿಸುವುದರಿಂದ ಕೃತಿಗೆ ಪೌರಾಣಿಕ ಮಹತ್ವಕ್ಕಿಂತ ಸಾಮಾಜಿಕ ಮಹತ್ವವೇ ಹೆಚ್ಚೆನಿಸಿದೆ. ಮೂಲಕಥೆಯಲ್ಲಿ ಕಾಣದ ಎಷ್ಟೋ ಪ್ರಸಂಗಗಳು ಇಲ್ಲಿ ಸೃಷ್ಟಿಗೊಂಡಿವೆಯಾದರೂ ಇಂಥ ಪ್ರಸಂಗಗಳೆಲ್ಲವು ಕಾರ್ಯ ಕಾರಣ ಸಂಬಂಧಗಳನ್ನು ಗುರುತಿಸಲು ಮತ್ತು ಜನಸಂಸ್ಕೃತಿಯ ಮೌಲ್ಯಗಳನ್ನು ಪ್ರತಿಪಾದಿಸಲು ಬಂದಿರುವಂಥವು. ಅದನ್ನು ಹೊರತು ಪಡಿಸಿದರೆ ಇದು ವ್ಯಾಸಭಾರತದ ನಿಷ್ಠೆಯನ್ನು ಉದ್ದಕ್ಕೂ ಕಾಪಾಡಿಕೊಂಡಿದೆ ಎನ್ನಬಹುದು. ಜನಪದ ಮಹಾಭಾರತದ ಮತ್ತೊಂದು ವೈಶಿಷ್ಟ್ಯವೆಂದರೆ ಇದರ ಜನಮುಖಿರಚನೆ. ವ್ಯಾಸ, ಪಂಪ, ಕುಮಾರವ್ಯಾಸರ ಮಹಾಭಾರತದಂತೆ ಇದು ಕೇವಲ ರಾಜರ ಮೇಲ್ವರ್ಗದವರ ಕಥೆ ಮಾತ್ರವಾಗಿರದೆ ಜನಸಾಮಾನ್ಯರ ಜೀವನದ ಸ್ಪಷ್ಟ ಚಿತ್ರಣಗಳನ್ನೂ ಅಭಿವ್ಯಕ್ತಿಸುತ್ತದೆ. ಹಾಗೆಯೇ ಸಾಮಾನ್ಯರಲ್ಲಿ ಪ್ರಚಲಿತವಾಗಿರುವ ನಂಬಿಕೆಗಳಿಗೆ ಆಚರಣೆಗಳಿಗೆ, ಜೀವನ ಶೈಲಿಗೆ ಪುರಾಣದೊಡನೆ ಸಂಬಂಧ ಕಲ್ಪಿಸಿ ಆ ಆಚರಣೆ ನಂಬಿಕೆಗಳನ್ನು ಮತ್ತಷ್ಟು ಗಟ್ಟಿಮಾಡಿ ಜನಸಾಮಾನ್ಯರ ಸಂಬಂಧವನ್ನು ದೇವರೊಂದಿಗೆ ಜೋಡಿಸುತ್ತದೆ. ಹೀಗಾಗಿ ಜನಸಾಮಾನ್ಯರು ತಮ್ಮ ದೈನಂದಿನ ಜೀವನದಲ್ಲಿಯೇ ದೈವದೊಂದಿಗೆ ಸಂಬಂಧ ಬೆಳಸುವಲ್ಲಿ ಸಹಕಾರಿಯಾಗುತ್ತದೆ. ಆದರೆ ಈ ಎಲ್ಲಾ ಪ್ರಕ್ರಿಯೆಗಳಿಗೆ ಒಂದು 'ತಾರ್ಕಿಕ ನೆಲೆಗಟ್ಟು' ಇಲ್ಲದಿರುವುದು ವೇದ್ಯವಾಗುತ್ತದೆ.

ಈ ಕಾವ್ಯ ತನ್ನ ಒಡಲೊಳಗೆ ಅನೇಕ ಹೊಸ ವಿಚಾರಗಳನ್ನು ಹಳೆಯ ಸಂಗತಿಯನ್ನು ಹೊಸ ಆಯಾಮದಿಂದ ನೋಡುವ ಉದಾರತೆಯನ್ನು ಒಳಗೊಂಡಿದೆ. ಜನಪದ ಮಹಾಭಾರತ ತೋರಿಸಿರುವ ಹೊಸ ಆಯಾಮದಿಂದ ಹಳೆಯ ಘಟನೆಯನ್ನು ಅವಲೋಕಿಸಿದಾಗ ಪಾತ್ರ ಕುರಿತ, ಘಟನೆ ಕುರಿತ ಅಭಿಪ್ರಾಯಗಳು ಸಂಪೂರ್ಣ ಬದಲಾಗಿಬಿಡುತ್ತವೆ.

ಶಿಷ್ಟ ಮಹಾಭಾರತದ ಪ್ರಕಾರ ಧರ್ಮರಾಯ 'ಅಶ್ವತ್ಥಾಮ' ಎಂಬ ಹೆಸರಿನ ಆನೆ ಸತ್ತಿತು ಎಂದು ಹೇಳಿದಾಗ ದ್ರೋಣಾಚಾರ್ಯ ಕಸಿವಿಸಿಗೊಂಡು ಶಸ್ತ್ರತ್ಯಾಗಮಾಡಿ ಪರಮಾತ್ಮನಲ್ಲಿ ಐಕ್ಯವಾದರೂ. ಇದನ್ನರಿತು ದೃಷ್ಟದ್ಯುಮ್ನ ರಣದಿಂದ ಜಿಗಿದು ಜೀವರಹಿತ ದ್ರೋಣರ ಶರೀರವನ್ನು ಖಡ್ಗದಿಂದ ಚೂರು ಚೂರಾಗಿ ತುಂಡರಿಸಿದನು. ಕುರುಕ್ಷೇತ್ರದ ಯುದ್ಧವೆಲ್ಲಾ ಕ್ರೌರ್ಯದ ಪ್ರದರ್ಶನವೇ ಇರಬಹುದು. ಆದರೆ ದೃಷ್ಟದ್ಯುಮ್ನನ ಈ ನಡವಳಿಕೆ ಯಾರಿಗೂ ಶೂರತನವೆನಿಸುವುದಿಲ್ಲ. ಈ ಪ್ರಸಂಗದಿಂದಲೇ

ಪಂಪ 'ಪೆಣನಿರಿದು ಪಗೆಗೊಂಡರ್' ಎಂಬ ಗಾದೆಯೊಂದನ್ನು ಬಳಸಿದ್ದಾನೆ. ಇದು ಆತನ ಕ್ರೂರ ನಡುವಳಿಕೆಗೆ ಸಾಕ್ಷಿಯಾಗಿದೆ.

ಜನಪದ ಮಹಾಭಾರತದಲ್ಲಿ ದೃಷ್ಟದ್ಯುಮ್ನನನ್ನು ನೋಡುವ ರೀತಿ ಸಂಪೂರ್ಣ ಭಿನ್ನವಾಗಿದೆ. ದ್ರೋಣರ ಆತ್ಮ ದೇಹವನ್ನು ತ್ಯಜಿಸಿದ ಅನಂತರ ನೇರವಾಗಿ ಸ್ವರ್ಗಕ್ಕೆ ಹೋಗಿ ಅಲ್ಲಿ ತನ್ನ ಮಗ ಅಶ್ವತ್ಥಾಮನನ್ನು ಹುಡುಕಿತ್ತಂತೆ. ಅವನನ್ನು ಅಲ್ಲಿ ಕಾಣದಿದ್ದಾಗ ಕೈಲಾಸಕ್ಕೆ, ವೈಕುಂಠಕ್ಕೆ ಅನಂತರ ಬ್ರಹ್ಮಲೋಕದಲ್ಲೆಲ್ಲಾ ಹುಡುಕಿ ಸಿಗದಿದ್ದಾಗ ಬ್ರಹ್ಮನನ್ನು ವಿಚಾರಿಸಲು ತನ್ನ ಮಗ ಚಿರಂಜೀವಿಯೆಂದು ನೆನಪಿಸಿಕೊಂಡು ಕುರುಕ್ಷೇತ್ರದೆಡೆಗೆ ಬಂದು ಅಲ್ಲಿ ತನ್ನ ಮಗನನ್ನು ನೋಡಿ ಎಂದೂ ಸುಳ್ಳಾಡದ ಧರ್ಮರಾಯ ಇಂದು ಸುಳ್ಳಾಡಿದನಲ್ಲ; ಇವರನ್ನು ಸುಮ್ಮನೆ ಬಿಡಬಾರದು ನಿರ್ನಾಮ ಮಾಡಬೇಕೆಂದು ನಿರ್ಧರಿಸಿ ತಮ್ಮ ದೇಹದೊಳಗೆ ಸೇರಲು ಹೋಯಿತಂತೆ ಆಗ ಆ ಆತ್ಮಕ್ಕೆ ಕಂಡದ್ದು ಚೂರು ಚೂರಾಗಿ ದಿಕ್ಕಪಾಲಾಗಿ ಹರಡಿರುವ ದೇಹ. ದೃಷ್ಟದ್ಯುಮ್ನನೇನಾದರೂ ದ್ರೋಣರ ದೇಹವನ್ನು ಕತ್ತರಿಸದೇ ಹೋಗಿದ್ದಲ್ಲಿ ಅವರ ಆತ್ಮ ದೇಹವನ್ನು ಸೇರಿಕೊಂಡು ಪಾಂಡವರನ್ನು ನಾಶಮಾಡಿಬಿಡುತ್ತಿತ್ತು. ಹೀಗಾಗಿ ಶಿಷ್ಟ ಮಹಾಭಾರತದಲ್ಲಿ ಕ್ರೂರಿಯಾಗಿ ಕಾಣುವ ದೃಷ್ಟದ್ಯುಮ್ನ ಜನಪದ ಮಹಾಭಾರತದಲ್ಲಿ ರಕ್ಷಕನಂತೆ ಗೋಚರಿಸುತ್ತಾನೆ. ಈ ರೀತಿಯ ವಿಶಿಷ್ಟತೆ ಮತ್ತು ಅದ್ಭುತ ಕಲ್ಪನೆಗಳಿಂದ ಕೃತಿ ವೈಶಿಷ್ಟ್ಯವಾಗಿದೆ. ಜನಪದ ಮಹಾಭಾರತದಲ್ಲಿ ಕಥೆಯನ್ನೇ ಕೇಂದ್ರವಾಗಿಟ್ಟುಕೊಂಡು ತರ್ಕ ಮತ್ತು ಕಲಾತ್ಮಕತೆಯನ್ನು ಬದಿಗೆ ಸರಿಸಿ ನಾಟಕೀಯವಾಗಿ ರೂಪಿಸಿರುವುದನ್ನು ಕಾಣಬಹುದು.

ಜನಪದ ಮಹಾಭಾರತದ ಚಾರಿತ್ರಿಕ ವಸ್ತು ಸ್ವರೂಪವನ್ನು ಕುರಿತು ರಾಗೌರವರು ತಮ್ಮ ಮುನ್ನುಡಿಯಲ್ಲಿ ಹೀಗೆ ಹೇಳುತ್ತಾರೆ: 'ಈ ಭಾರತದಾದ್ಯಂತ ಇರುವ ಈ ಮಹಾಭಾರತದ ಕಥೆ ವ್ಯಾಸಭಾರತದ ಕಥೆಯಲ್ಲ, ಅದು ಮೂಲಜನಪದ ಮಹಾಭಾರತ ಕಥೆ ಅನ್ನೋದನ್ನು ಸ್ಪಷ್ಟೀಕರಿಸುತ್ತೇನೆ. ವ್ಯಾಸಭಾರತದ್ದು ಏಕ ಸಾಂಸ್ಕೃತಿಕ ನೆಲೆಯಾದರೆ ಜನಪದ ಮಹಾಭಾರತದ್ದು ಬಹುಸಾಂಸ್ಕೃತಿಕ ನೆಲೆ. ಇವುಗಳ ಕೊಡುಕೊಳ್ಳುವಿಕೆಯ ಬೇರೆಬೇರೆ ಹಂತಗಳಲ್ಲಿ ಸಂಘರ್ಷಣೆ ನಡೆದೇ ಇದೆ ಅನ್ನುವುದನ್ನು ಗಮನದಲ್ಲಿಟ್ಟುಕೊಳ್ಳಬೇಕು. ಇದಕ್ಕೆ ಬಹಳ ಮುಖ್ಯ ಕಾರಣರಾದವರು ಈ ಗಾಯಕ ಕವಿಗಳು. ಈ ಗಾಯನ ಸಂಪ್ರದಾಯದಲ್ಲಿ ಪಾಲ್ಗೊಳ್ಳುವ ಗಾಯಕರಿದ್ದಾರಲ್ಲ ಅವರನ್ನು ಕವಿಗಳು ಅಂತ ಕೂಡ ನಾವು ಹೇಳುತ್ತೇವೆ. ಈಗ ಸಿದ್ದಶೆಟ್ಟರು ಅಂತ ಏನಿದ್ದಾರೆ ಅವರು ತಮ್ಮ ಹಿಂದಿನಿಂದ ಬಂದಂಥ ಮಹಾಭಾರತದ ಕಥೆಯನ್ನು ತಗೊಂಡು ತಾವೇ ಬೇರೆಬೇರೆ ಮೂಲಗಳಿಂದ ತಗೊಂಡು ಜೋಡಿಸಿರೋ ಹಾಗೆ ಕಾಣಿಸುತ್ತೆ, ಅಂದರೆ ಒಂದರ್ಥದಲ್ಲಿ ಅವರು ಮಹಾಭಾರತವನ್ನು

ಪುನಃ ಸೃಷ್ಟಿಸಿದ್ದಾರೆ. ಒಂದು ಪಕ್ಷ ಮುಂದಿನ ದಿನಗಳಲ್ಲಿ ಭಾರತದ ಬೇರೆ ಬೇರೆ ಭಾಷೆಗಳಲ್ಲಿ ಈ ಜನಪದ ಮಹಾಭಾರತ ಈ ತರ ಪ್ರಕಟವಾಗಿ ಆ ಬೇರೆಬೇರೆ ಭಾಷೆಗಳ ಎಲ್ಲಾ ಮಹಾಭಾರತವನ್ನು ಒಂದು ಕಡೆ ಇಟ್ಟುಕೊಂಡು ಅವುಗಳನ್ನು ತೌಲನಿಕವಾಗಿ ನೋಡಿ ಮೂಲ ಮಾತೃಕೆಯನ್ನು ಸಿದ್ಧಪಡಿಸುವುದು ಸಾಧ್ಯ. ಜನಪದ ಮಹಾಭಾರತದ ಈ ಮೂಲ ಮಾತೃಕೆ ವ್ಯಾಸ ಭಾರತದ ಮೂಲ ಮಾತೃಕೆಗೆ ಸಂಭವನೀಯ ಮಾತೃಕೆಯಾಗಿರುವ ಸಾಧ್ಯತೆಯಿದೆ. ವ್ಯಾಸ ಮಹಾಭಾರತಕ್ಕೆ ಏನು ರಾಷ್ಟ್ರೀಯ ವ್ಯಾಪ್ತಿಯಿದೆಯೋ ಹಾಗೆಯೇ ಈ ಜನಪದ ಮಹಾಭಾರತಕ್ಕೂ ರಾಷ್ಟ್ರೀಯ ವ್ಯಾಪ್ತಿಯಿದೆ. ಹಾಗೂ ಪ್ರಾದೇಶಿಕ ವ್ಯಾಪ್ತಿಯೂ ಇದೆ[3] ಎಂದಿದ್ದಾರೆ.

ಜನಪದ ಮಹಾಭಾರತ, ಪಂಪಭಾರತ, ಕುಮಾರವ್ಯಾಸಭಾರತ ಕವಿಗಳ ಕಲ್ಪನೆಯಲ್ಲಿ ಅಜಗಜಾಂತರ ವ್ಯತ್ಯಾಸವಿರುವುದಿಲ್ಲವೆಂಬುದನ್ನು ದ್ರೋಣ, ದ್ರುಪದರ ಪ್ರಸಂಗದಿಂದ ನೇರ ಸಂಬಂಧಿ ವ್ಯತ್ಯಾಸದ ಸಾಮ್ಯತೆಯನ್ನು ವಿವೇಚಿಸಬಹುದು. ಜನಪದ ಕವಿ ಆ ಪ್ರಸಂಗವನ್ನು ಕುರಿತಂತೆ ಒಂದು ಕಾಲದಲ್ಲಿ ದ್ರೋಣರ ಪರಮಾಪ್ತ ಸ್ನೇಹಿತನಾಗಿದ್ದಂಥ ದ್ರುಪದರಾಜನ ಆಸ್ಥಾನಕ್ಕೆ ಹೋಗುವುದರಿಂದ ಲಾಭವಾಗಬಹುದೆಂದು ತನ್ನ ಮಗನಿಗೆ ತಿಳಿಸುತ್ತಾನೆ.

**ಕಂದಾ ಅಸ್ವತ್ಥಾಮ ಕೇಳುವಂತವನಾಗು**
**ನಾನೂ ದ್ರುಪತ್ರಾಜನೂ**
**ಒಂದೇ ಗುರುಕುಲದಲ್ಲಿ ಓದ್ತಾ ಇದ್ದು**
**ದ್ರುಪತ್ರಾಜುಂಗೆ ನಾನು ನನಗೆ ದ್ರುಪತ್ರಾಜಮದ್ರೆ ಪರಮಾಪ್ತರು**
**ಹೀಗಿರುವಾಗ ಒಂದ್ಸಲ ಏನಾಯ್ತು**
**ಗುರುಕುಲ ಶಿಷ್ಯರೆಲ್ಲ ದನಗಳ ಮೇಯಸ್ಕೊಂಡು**
**ಸೌದೆ ಆಯ್ಕೊಂಡು ಹೊರೆಕಟ್ಟಿ**
**ಪಾಠ ಹೇಳ್ಕೊಂಡು ಆಟ ಆಡ್ಕೊಂಡು**
**ಗಂಗಾನದೀಲಿ ಈಜಕ ಅಂತ ಇಳ್ದೊ**
**ಈಜ್ಕೊಂಡು ಆಚೆದಡ ಮುಟ್ಟಿ ಈಚೆದಡಕ್ಕೆ**
**ಬರ್ಬೇಕು ಅನ್ನೋ ಕರಾರು ಮಾಡ್ಕೊಂಡು**
**ಪೈಪೋಟಿಯಿಂದ ಈಜುತ್ತಿದ್ದೆ**
**ಒಬ್ರುಗಿಂತ ಒಬ್ರು ಜಿದ್ದಾಜಿದ್ದಿಯಿಂದ**
**ಈಜ್ಕೊಂಡು ಹೋಯ್ತಿರುವಾಗ**
**ದ್ರುಪತ್‌ರಾಜುಂಗೆ ಕೈಕಾಲು ಸೋತ್ಬಂತು**
**ನಡುಮಧ್ಯದ ಹೊಳೇಲಿ ಮುಳುಗ್ತಾ ಅವನೆ**
**ಕಾಪಾಡಿ ಕಾಪಾಡಿ ಅಂತವ್ನೊನೆ**
**ಅಂಥ ಸಂದರ್ಭದಲ್ಲಿ ಸಿಸುಮಕ್ಕೆಲ್ಲ**
**ಏನು ಮಾಡಬೇಕು ಅನ್ನೋದು ತಿಳೀದೆ**
**ಕಣ್‌ಕಣ್‌ಬುಡ್ತಾ ನಿಂತಿರುವಂತ ಸಮಯದಲ್ಲಿ**

**ನಾನು ಪ್ರಾಣವನ್ನು ಹುಲ್ಲುಕಡ್ಡಿ ಸಮಮಾಡಿ**
**ನೀರುಗೆ ದುಮುಕಿ**
**ಈಜುಕೊಂಡೋಗಿ**
**ದ್ರುಪತರಾಜುನ ಜುಟ್ ಹಿಡ್ಕೊಂಡು**
**ಎಳಕೊಂಡು ದಡಕ್ ತಂದು ಹಾಕಿ**
**ಕುಡಿದಿದ್ದ ನೀರ ಕಕ್ಕುಸಿ ಬದುಕುಸ್ದೆ**
**ಅವನು ಬದುಕೊಂಡ**

ಒಂದು ಅರ್ಥದಲ್ಲಿ ಇದು ಸೋಜಿಗ, ಇನ್ನೊಂದು ಅರ್ಥದಲ್ಲಿ ಸಹಜ. ಈಗಾಗಲೇ ತಿಳಿಸಿರುವಂತೆ ಶಿಷ್ಟ ಕವಿಯಾಗಲೀ ಜನಪದ ಕವಿಯಾಗಲೀ ಲೋಕದ ರೀತಿಯಲ್ಲಿ ತಮ್ಮ ಸೃಜನಕ್ರಿಯೆಯನ್ನು ಪ್ರಕಟಿಸಲು ಪ್ರಯತ್ನಿಸಿರುವುದರಿಂದ ಅವರ ಕಲ್ಪನೆಯಲ್ಲಿ ಸಾಮ್ಯವಿರುತ್ತದೆ. ಜನಪದ ಕವಿಯು ಸಹ ಸುಲಲಿತವಾಗಿ ಪ್ರಸಂಗವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾನೆ.

ಪಂಪಭಾರತದಲ್ಲಿ ಇದೇ ಪ್ರಸಂಗ ಹೀಗೆ ಅನಾವರಣಗೊಂಡಿರುವುದನ್ನು ನೋಡಬಹುದು: 'ತನ್ನ ಕೆಳೆಯಂ ಪಾಂಚಾಳದೇಶರಸಂ ಪೃಷತನೆಂಬನ್ ಆತನ ಮಗಂ ದ್ರುಪದನುಮಂ ದ್ರೋಣನುಮನೊಡಗೂಡಿ ಯಜ್ಞಸೇನನೆಂಬ ಬ್ರಹ್ಮರ್ಷಿಯ ಪಕ್ಕದೊಳ್ ಬಿಲ್ವಿದ್ದೆಯಂ ಕಲಲ್ವೇಟ್ಟೊಡೆ ದ್ರೋಣನುಂ ದ್ರುಪದನುಂ ಧನುರ್ಧರಾಗ್ರ ಗಣ್ಯರಾಗೆ...'[೪] ಭಾರದ್ವಜನ ಮಗನಾದ ದ್ರೋಣನೂ ದ್ರುಪದರಾಜನೂ ಹೇಗೆ ಸಹಪಾಠಿಗಳಾಗಿದ್ದರೆಂಬುದನ್ನು ಚಿತ್ರಿಸಿರುವುದನ್ನು ಇಲ್ಲಿ ಕಾಣಬಹುದು. ಮುಂದೆ ದ್ರೋಣನು ಬಡತನಕ್ಕೀಡಾಗಿ ತನ್ನ ಮಗನೊಂದಿಗೆ ಗೆಳೆಯನ ನೆರವು ಸಿಕ್ಕಬಹುದೆಂದು ಅರಮನೆಗೆ ಬಂದು ತಾನು ಬಂದ ವಿಷಯವನ್ನು ತಿಳಿಸಿದಾಗ ದ್ರುಪದ ರಾಜ್ಯಮದಿರಾಮದೋನ್ಮತ್ತನೂ ಗರ್ವಗ್ರಹ ವ್ಯಗ್ರಚಿತ್ತನೂ ಆಗಿ:

**ಅಂತೆಂಬನಾರ್ಗೆ ಪಿರಿದೂ**
**ಭ್ರಾಂತು ದಲೇಂ ದ್ರೋಣನೆಂಬನೇಂ ಪಾರ್ವನೆ ಪೇಳ**
**ಚಿಂತೆನಗೆ ಕೆಳೆಯನೇ ನೂಂ**
**ಕಂತಪ್ಪನನರಿಯೆನೆಂದು ಸಭೆಯೊಳ್ ನುಡಿದಂ**[೫]

ಇದನ್ನು ಕೇಳಿದ ದ್ರೋಣನು ಕೋಪಗೊಂಡು ದ್ರುಪದನನ್ನು ಹೀಯಾಳಿಸಿ ಅವಮಾನಿಸಿ ತನ್ನ ಶಿಷ್ಯನಿಂದ ಅಪಮಾನಿಸುವುದಾಗಿ ಪ್ರತಿಜ್ಞೆಗೈದು ಬರುವನು. ಇದೇ ಪ್ರಸಂಗವನ್ನು ಕುಮಾರವ್ಯಾಸನು ಸಹ ಸ್ವಲ್ಪಮಟ್ಟಿಗೆ ಯಥಾವತ್ತಾಗಿ ಚಿತ್ರಿಸಿರುವುದನ್ನು ಕಾವ್ಯದಲ್ಲಿ ಕಾಣುತ್ತೇವೆ.

ಹೀಗೆ ಜನಪದ ಮಹಾಭಾರತ ಮೂಲ ಮಹಾಭಾರತದ ಚೌಕಟ್ಟಿನೊಳಗೆ ಚಲಿಸಿ ಅದರೊಳಗೆ ಕಥೆಯನ್ನು ವಿಸ್ತರಿಸುವ ಕೆಲಸ ಮಾಡುತ್ತದೆ. ಜನಪದ ಕವಿಗೆ ವ್ಯಾಸಭಾರತವೇ ಮೂಲ ಪ್ರೇರಣೆಯೂ ಆಕರವೂ ಆಗಿದ್ದು ಅಲ್ಲಿ ಬರುವ ಪ್ರಧಾನ ಪ್ರಸಂಗಗಳು ಹಾಗೂ ಸನ್ನಿವೇಶಗಳು ಜನರ ಜೀವನ ಪ್ರವಾಹದಲ್ಲಿ ಹಾಸುಹೊಕ್ಕಾಗಿವೆ. ಆದರೆ ಯಾವುದೇ ಜನಪದ ಸಂಪ್ರದಾಯದ ಕಥನಕಲೆ ಸಿದ್ಧ ಕಥಾಮಾದರಿ ಅಥವಾ ನಿರೂಪಣೆಯನ್ನಷ್ಟೇ ಮುಂದುವರೆಸಿಕೊಂಡು ಹೋಗಲು ಮಾತ್ರ ಸಿದ್ಧವಾಗದೆ ಅದಕ್ಕೆ ತನ್ನದೇ ಆದ ಕಥನ ಪ್ರತಿಭೆಯನ್ನು ತನ್ನದೇ ಆದ ಅನನ್ಯ ರೀತಿಯಲ್ಲಿ ಸೇರಿಸುತ್ತಾ ಹೋಗುತ್ತದೆ. ಅಲ್ಲಿ ಬರುವ ಪಾತ್ರ ಸನ್ನಿವೇಶಗಳನ್ನು ತನ್ನ ಕಥನ ಚೌಕಟ್ಟಿಗೆ ಮರುಹೊಂದಾಣಿಕೆ ಮಾಡಿಕೊಳ್ಳುತ್ತದೆ. ಇದೊಂದು ಸೃಜನಾತ್ಮಕ ಪ್ರಕ್ರಿಯೆಯಾಗಿದೆ. ಪಂಪ, ಕುಮಾರವ್ಯಾಸ ಮಹಾಭಾರತದ ಕತೆಯನ್ನು ತಮ್ಮ ಸಮಕಾಲೀನತೆಗೆ ತಮ್ಮ ಪ್ರತಿಭೆಗೆ ಹೊಂದಿಸಿಕೊಂಡಿರುವುದು ವ್ಯಕ್ತಿ ವಿಶಿಷ್ಟ ಪ್ರತಿಭೆಯಾದರೆ, ಜನಪದ ಮಹಾಭಾರತದ್ದು ಸಮಷ್ಠಿ ಪ್ರತಿಭೆಯಾಗಿದೆ.

ಜನಪದ ಮಹಾಭಾರತ ಕೃಷಿಕ ಸಮಾಜದ ಪುನರ್‌ಸೃಷ್ಟಿ ಎನ್ನಬಹುದು. ಇದು ಜನಪದರು ತಮ್ಮ ಅನುಭವ ಹಾಗೂ ತಮ್ಮ ಕಲ್ಪನೆ ಎರಡನ್ನೂ ಒಂದು ಮಹಾಕಾವ್ಯದ ಚೌಕಟ್ಟಿನಲ್ಲಿ ರೂಪಿಸಿರುವ ಅನನ್ಯ ಕೃತಿ. ಮಹಾಕಾವ್ಯವೆಂದರೆ ಅದರ ಭಾಷೆ ಹೀಗಿರಬೇಕು, ಕಥನಕ್ರಮ, ಛಂದೋಲಯ ಮುಂತಾದುವು ಹೀಗಿರಬೇಕೆಂಬ ಕೆಲವು ನಿಯಮಗಳಿರುತ್ತವೆ. ಅವು ಶಿಷ್ಟ ಮಹಾಕಾವ್ಯಕ್ಕೆ ನಿಗದಿಪಡಿಸಿಕೊಂಡ ನಿಯಮಗಳಾಗಿವೆ. ಜನಪದ ಮಹಾಭಾರತ ಕಾವ್ಯಕ್ಕೂ ಅದರದೇ ಆದ ಲಕ್ಷಣಗಳಿವೆ. ಆದರೆ ಅಲ್ಲಿ ಶಿಷ್ಟತೆಗಿಂತ ಪರಿಶಿಷ್ಟತೆ ದೊಡ್ಡದಾಗಿ ಎದ್ದು ಕಾಣುತ್ತವೆ. ತಮಗೆ ತಿಳಿದಿರುವ ಎಲ್ಲಾ ಛಂದೋಲಯಗಳನ್ನು ಬಳಸಿಕೊಳ್ಳುತ್ತಲೇ ಹೊಸಲಯಗಳನ್ನು ಸೃಷ್ಟಿಸಲು ಮುಂದಾಗುತ್ತಾರೆ. ಹೀಗೆ ಜನಪದ ಮಹಾಭಾರತ ಈ ದೇಶದ ಬಹುಮುಖೀ ಸ್ವರೂಪವಾದ ಬಹುರೂಪತ್ವವನ್ನು ಪ್ರತಿನಿಧಿಸುತ್ತದೆನ್ನಬಹುದು.

ಜನಪದ ಮಹಾಭಾರತವನ್ನು ಕುರಿತು ಪ್ರಸಿದ್ಧ ಜನಪದ ವಿದ್ವಾಂಸರಾದ ರಾಗೌರವರು 'ಇಲ್ಲಿಯವರೆಗೆ ನಾವು ವ್ಯಾಸಭಾರತವನ್ನು ಮೂಲವಾಗಿಟ್ಟುಕೊಂಡು ಕನ್ನಡದ ಪಂಪಭಾರತ ಮತ್ತು ಕುಮಾರವ್ಯಾಸಭಾರತಗಳನ್ನು ಮಾರ್ಗ, ದೇಸಿ ಮುಖಾಮುಖಿಗೆ ಉದಾಹರಣೆಯಾಗಿ ನೀಡುತ್ತಿದ್ದೆವು. ಇನ್ನು ಮುಂದೆ ಇವುಗಳ ಜೊತೆಗೆ ಜನಪದ ಮಹಾಭಾರತವನ್ನು ಸೇರಿಸಿಕೊಳ್ಳಬೇಕಾಗಿದೆ'[5] ಎಂಬ ಅಭಿಪ್ರಾಯ ಜನಪದ ಮಹಾಭಾರತದ ಸಾಹಿತ್ಯಿಕ ಪ್ರಜ್ಞೆಯನ್ನು ಎತ್ತಿತೋರುತ್ತದೆ.

ಜನಪದ ಮಹಾಭಾರತದ ಅಭಿವ್ಯಕ್ತಿ ವಿಧಾನ ನೇರವಾದದ್ದು ಮತ್ತು ಸರಳವಾದುದಾಗಿದೆ. ಕಥೆಯ ನಿರೂಪಣೆಯ ದೃಷ್ಟಿಯಿಂದಾಗಲೀ ಭಾಷೆಯ ಬಳಕೆಯ ದೃಷ್ಟಿಯಿಂದಾಗಲೀ ಪ್ರಯೋಗಶೀಲವಾದ ಪ್ರಜ್ಞಾಪೂರ್ವಕ ತಾಂತ್ರಿಕ ಕೌಶಲ್ಯ ಕಾವ್ಯದಲ್ಲಿ ಗೋಚರಿಸುವುದಿಲ್ಲ. ಕಾವ್ಯದ ಅಭಿವ್ಯಕ್ತಿ ವಿಧಾನದ ಯಶಸ್ಸುಗಳು ಹುದುಗಿರುವುದು ಅದರ ಸರಳ ನಿರೂಪಣೆಯಲ್ಲಿಯೆ. ಏಳನೂರ ಅರವತ್ತು ಪುಟಗಳೂ, ನೂರ ಅರವತ್ತು ಪರ್ವಗಳೂ, ನಲವತ್ತೂ್ಮರು ಸಾವಿರಕ್ಕೂ ಮಿಕ್ಕ ಪಂಕ್ತಿಗಳ ವೈಶಾಲ್ಯವನ್ನು ಪಡೆದುಕೊಂಡಿರುವ ಈ ಬೃಹತ್ಕಾವ್ಯ ತನ್ನ ನೇರ ನಿರೂಪಣಾ ವಿಧಾನದಿಂದಲೇ ಸಹೃದಯರ ಹೃದಯವನ್ನು ಗೆಲ್ಲುವುದು ನಿಜವಾಗಿಯೂ ಅದ್ಭುತ. ಅಭಿವ್ಯಕ್ತಿ ನೇರ ಹಾಗೂ ಸರಳ ಎಂದ ಮಾತ್ರಕ್ಕೆ ಇಲ್ಲಿ ಭಾಷೆ ಸಾಮಾನ್ಯ ಎಂದು ಅರ್ಥವಲ್ಲ. ಇಲ್ಲಿನ ಭಾಷೆಗೆ ತನ್ನದೇ ಆದ ಗತಿಯಿದೆ. ಆಡುಭಾಷೆಗೆ ಹತ್ತಿರವಾದ ಪುನರುಕ್ತಿ ಮತ್ತು ಲಯದ ಏಕಾತನತೆಯನ್ನು ಮೆರೆಯುತ್ತದಾದರೂ ತನ್ನ ವಿಶಿಷ್ಟ ಗುಣಗಳಿಂದಾಗಿ ಮುದ ನೀಡುತ್ತದೆ. ಪದಗುಚ್ಛಗಳು ಮತ್ತು ಅಭಿಪ್ರಾಯಗಳ ಪುನರುಕ್ತಿ ಜನಪದಕಾವ್ಯಗಳ ಅಭಿವ್ಯಕ್ತಿಯ ಲಕ್ಷಣವೇ ಆಗುತ್ತದೆ. ಜನಪದ ಕವಿ ಅಥವಾ ಗಾಯಕನಿಗೆ ಕಾವ್ಯದ ಪಂಕ್ತಿಗಳನ್ನು ನೆನಪಿಟ್ಟುಕೊಳ್ಳುವ ಸೌಲಭ್ಯಕ್ಕಾಗಿ ಈ ಪುನರುಕ್ತಿ ಅವಶ್ಯಕವಾಗುತ್ತದೆ. ಸನ್ನಿವೇಶದ ತೀವ್ರತೆಯನ್ನು ಅರಿವಿಗೆ ತಂದು ಶ್ರಾವಕವರ್ಗದ ಗಮನ ಸೆಳೆಯುವ ದೃಷ್ಟಿಯಿಂದಲೂ ಈ ಪುನರುಕ್ತಿ ಉಪಯುಕ್ತವಾಗುತ್ತದೆನ್ನಬಹುದು. ವಾಕ್‌ಪರಂಪರೆಯಲ್ಲಿ ಉಳಿದು ಬಂದ 'ಜನಪದ ಮಹಾಭಾರತ'ದಂತಹ ಧೀರ್ಘಕಾವ್ಯದಲ್ಲಿ ಇಂತಹ ಪುನರುಕ್ತಿ ಅಪರಿಹಾರ್ಯವಾಗುತ್ತದೆ. ಪ್ರಸ್ತುತ ಕಾವ್ಯದ ಭಾಷೆ ಆಡುಭಾಷೆಗೆ ಸಮೀಪವಾಗಿರುವುದರಿಂದ ಕಾವ್ಯದ ಸ್ವಾರಸ್ಯ ಹೆಚ್ಚಿದೆ. ಹಾಗೂ ಜೀವಂತಿಕೆ ಲಭಿಸಿದೆ. ಮೈಸೂರು ಹಾಗೂ ಚಾಮರಾಜನಗರ ಜಿಲ್ಲೆಯ ಉಪಭಾಷೆಗಳ ಸ್ವರೂಪವನ್ನು ದಟ್ಟವಾಗಿ ಪ್ರದರ್ಶಿಸುತ್ತದೆ. ಇವುಗಳ ಜೊತೆಗೆ ತಮಿಳು, ತೆಲುಗು, ಉರ್ದು, ಇಂಗ್ಲಿಷ್ ಭಾಷೆಗಳ ಪದಗಳು ಬಳಕೆಯಾಗಿವೆ. ಆದರೆ ಇಲ್ಲಿನ ಭಾಷೆ ಪ್ರದೇಶವೊಂದರ ದೈನಂದಿನ ವ್ಯವಹಾರದ ಭಾಷೆಯಲ್ಲ. ಈ ಪ್ರದೇಶದ ಆಡುಭಾಷೆ ಕಲಾತ್ಮಕ ಅಭಿವ್ಯಕ್ತಿರೂಪವೊಂದರಲ್ಲಿ ಮೈತಳೆದುಕೊಂಡಿರುವುದರಿಂದ ವ್ಯವಹಾರಿಕ ಭಾಷೆಗಿಂತ ಭಿನ್ನವಾಗಿದೆ. ಕಾವ್ಯದ ಭಾಷೆಗೆ ಆಕರ್ಷಣೀಯವಾದ ಸೊಬಗು ಲಯದ ಸಮ್ಮೋಹಕತೆ ಪ್ರಾಪ್ತವಾಗಿದೆ. ಜನಪದ ಸಾಹಿತ್ಯ ಜನಪದರ ಅನುಭವದ ತಳಹದಿಯ ಮೇಲೆಯೇ ಮೈ ತಳೆಯುವುದರಿಂದ ಮತ್ತು ಜನಪದರೇ ಅದರ ವಾಹಕಶಕ್ತಿಯಾಗಿ ಉಳಿಯುವುದರಿಂದ ಅವರ ಭಾಷೆಯ ಮೂಲ ಸೊಗಡು ಕಾವ್ಯದ ಭಾಷೆಯಲ್ಲಿ ಮಾಸದೆ ಉಳಿಯುತ್ತದೆ. ಜನಪದ ಸಾಹಿತ್ಯದ ಕಲಾಕಾರರು ಎಲ್ಲಾ ಜನಸಾಮಾನ್ಯರಾಗಿರದೆ ಇವರಲ್ಲಿಯೇ ಬುದ್ಧಿವಂತರೂ ಸೃಜನಶಕ್ತಿಯುಳ್ಳವರೂ ಆಗಿರುವುದರಿಂದ ತಮ್ಮ ಪರಿಸರದ ಭಾಷೆಯನ್ನು ಅದರ ವ್ಯಾವಹಾರಿಕ ಪ್ರಯೋಜನದಿಂದ ಕಲಾತ್ಮಕ ಪ್ರಯೋಜನಕ್ಕೆ ಎಳೆತರುವುದು

ಅನಿವಾರ್ಯವಾಗುತ್ತದೆ. ಆದ್ದರಿಂದ ಜನಪದ ಸಾಹಿತ್ಯದ ಭಾಷೆ ಒಂದು ವಿಶಿಷ್ಟ ಮಟ್ಟದಲ್ಲಿ ಸಂಭವಿಸುತ್ತದೆ ಎನ್ನಬಹುದು. ಆದರೆ ಅದು ಒಂದು ದ್ವೀಪವಾಗಿ ಉಳಿದುಬಿಡದೇ ಆಡುಭಾಷೆಯ ಸಂಪರ್ಕವನ್ನು ಸದಾ ಉಳಿಸಿಕೊಂಡಿರುವುದು ವಿಶೇಷ. ಇದಕ್ಕೆ ಯಾವ ಜನತೆ ಇದರ ಸೃಷ್ಟಿಯಲ್ಲಿದ್ದರೋ ಅದೇ ಜನತೆ ಇದರ ಉಳುವಿನಲ್ಲಿಯೂ ಇರುವುದು ಕಾರಣವೆನಿಸುತ್ತದೆ. ಜನಪದ ಮಹಾಭಾರತದ ಭಾಷೆ ಕೂಡ ಆಡುಭಾಷೆಯ ಸಂಪರ್ಕವನ್ನು ಉಳಿಸಿಕೊಂಡ ವಿಶಿಷ್ಟ ಭಾಷೆಯಾಗಿದೆ.

ಜನಪದ ಮಹಾಭಾರತ ಕಾವ್ಯದ ನಿರೂಪಣೆಯಲ್ಲಿ ಕಾಣುವ ಮತ್ತೊಂದು ವೈಶಿಷ್ಟ್ಯವೆಂದರೆ ಸಂವಾದದ ಸೊಗಸು. ನಿರೂಪಕನ ನಿರೂಪಣೆಯಲ್ಲದೆ ಕಾವ್ಯದುದ್ದಕ್ಕೂ ಸಾಮಾನ್ಯವಾಗಿ ಎರಡು ಅಥವಾ ಮೂರು ಪಾತ್ರಗಳು ಮಾತ್ರ ಮುಖಾಮುಖಿಯಾಗಿ ಸಂವಾದ ನಡೆಸುವ ಮತ್ತು ಸಂವಾದದ ಮೂಲಕವೇ ಕಥೆಗೆ ಚಾಲನೆಯನ್ನು ಕೊಡುವ ವಿಧಾನ ಕಂಡುಬರುತ್ತದೆ. ಈ ಸಂವಾದ ಕಾವ್ಯದ ನಾಟಕೀಯ ಸೊಗಸನ್ನು ಹೆಚ್ಚಿಸುತ್ತದೆ. ದಾಸರಾಜನಿಗೂ–ಶಾಂತರಾಜನಿಗೂ ನಡೆಯುವ ಸಂಭಾಷಣೆ, ಪರಮಾತ್ಮ(ಶಿವ)ನಿಗೂ–ತಾಮ್ರಕೇಶಿಗೂ ನಡೆಯುವ ಸಂಭಾಷಣೆ, ಸರ್ಪ–ವಿಳ್ಳೇದೆಲೆ, ಕೇತರಾಜನಿಗೂ ನಡೆಯುವ ಸಂಭಾಷಣೆ ಮುಂತಾದವು ಇಂತಹ ನಾಟಕೀಯ ಸೊಗಸಿಗೆ ಉತ್ತಮ ನಿದರ್ಶನಗಳಾಗಿವೆ. ತನ್ನ ಗ್ರಾಮ ಶೈಲಿಯ ಮೂಲಕವೇ ಸಂವಾದವನ್ನು ತಂದು ನಾಟಕೀಯ ಸೊಗಸನ್ನುಂಟು ಮಾಡುವುದು ಕಾವ್ಯದ ವಿಶಿಷ್ಟ ಗುಣವಾಗಿದೆ. ಇದಕ್ಕೆ ನಿದರ್ಶನ ಸುಗಂಧಿನಿ–ಶಾಂತರಾಜರ ಸಂಸಾರ ಪರ್ವದಲ್ಲಿ ಬರುವ ದಾಸರಾಜನಿಗೂ–ಶಾಂತರಾಜರಿಗೂ ನಡುವೆ ನಡೆಯುವ ಸಂವಾದವನ್ನು ನೋಡಬಹುದು.

ಜನಪದ ಮಹಾಭಾರತ ಕಾವ್ಯದಲ್ಲಿ ಅಲ್ಲಲ್ಲಿ ಉಕ್ತಿ ವೈಚಿತ್ರ್ಯಕ್ಕೆ ಎಡೆ ಕೊಟ್ಟಿರುವುದೂ ಉಂಟು– ಈ ಉಕ್ತಿವೈಚಿತ್ರ್ಯ ಕೆಲವು ಕಡೆ ಪ್ರಜ್ಞಾಪೂರ್ವಕ ಎನಿಸಿದರೆ ಬಹಳಷ್ಟು ಕಡೆ ಅತ್ಯಂತ ಸಹಜವಾದುದಾಗಿದೆ. ಶಬ್ದ ಚಮತ್ಕಾರ ಅರ್ಥ ಚಮತ್ಕಾರಗಳು ಅಲ್ಲಲ್ಲಿ ಕಂಡು ಬರುವುದುಂಟು.

ಜರೆಯಿಂದ ಅವನಿಗೆ ಜರಾಸಂಧ ಎಂದೂ, ಜರಾಸಂಧನ ಬೂದಿಯಿಂದ ಜಾರ್ಗಲ್ ಮೀನಾಯಿತ್ತೆಂದೂ ಗಟ್ಟದ ಗಾತ್ರ ಆನೆ ಇದ್ದಂಗಿದ್ದುದರಿಂದ ಗಟೋದ್ಗಜ ಎಂದೂ, ಕಾಮನ ಭಸ್ಮವನ್ನಿಟ್ಕೊಂಡಿದ್ದರಿಂದ ಭೀಷ್ಮನೆಂಬ ಹೆಸರು ಬಂತೆಂದೂ ಹೆಸರಿನ ನಿಷ್ಪತ್ತಿಯನ್ನು ಹೇಳುವುದನ್ನು ಕಾಣಬಹುದು.

ಹರಿದ್ವಾರ ಊರಿನ ನಿಷ್ಪತ್ತಿಯನ್ನು ಕಾವ್ಯದಲ್ಲಿ ಕಾಣುವ ರೀತಿ ಹೀಗಿದೆ:

**ಬ್ರಮ್ಮನು ಮಸ್ತಕ ನೋಡಲು ಹೋದನಲ್ಲಿ**
**ನಾರಾಯ್ಣ ಪಾತಾಳದ ದ್ವಾರ ಮಾಡಿಕೊಂಡು**
**ಇಳುದ ಸ್ಥಳವೇ ಈಗ ಹರಿದ್ವಾರ ಅನ್ನುವುದು**

ಬಕಾಸುರನಿಗೆ ಕೊಡಲು ತಯಾರಿಸಿದ ಅಡುಗೆಯ ಚಿತ್ರವನ್ನು ಜನಪದ ಕವಿ ವರ್ಣಿಸುವಾಗ ಬರುವ ಮಾತುಗಳೆಂದರೆ:

**ಒಂದೊಂದ್ ಕಜ್ಜಾಯ ಸುತ್ತು ಒಂದಾನೆ ಸೊಂಡಿಲಗಾತ್ರ**
**ಒಂದೊಂದ್ ಕಜ್ಜಾಯ ಒಂದು ಲಾರಿ ಚಕ್ರದ ಅಗಲ**

ಕಜ್ಜಾಯಗಳು ಆಕಾರ ಗಾತ್ರಗಳಲ್ಲಿ ದೊಡ್ಡದಾಗಿದ್ದವು ಎಂಬುದಿಲ್ಲಿ ವಾಚ್ಯಾರ್ಥ. ಅದು ಶ್ಲೇಷೆಯೂ ಆಗಿದೆ. ಆಡು ಮಾತಿನ ಸಹಜತೆಯೊಡನೆಯೇ ಪುಟ್ಟ ಪುಟ್ಟ ಉಪಮೆಗಳು ಕಾವ್ಯದಲ್ಲಿ ಅಲ್ಲಲ್ಲಿ ಪ್ರಕಾಶಿಸುತ್ತವೆ. ನಿದರ್ಶನವಾಗಿ;

೧. ಗದ್ದೇಲಿ ಸೊಪ್ಪುಗಳ
ತುಣಿಯೋಂಗೆ ಈ ರಾಕ್ಷಸನ
ತುಣಿತೀನಿ ಈಗಲೆ.

೨. ಮಗ್ಗದೆ ನಿಂತ ಕಗ್ಗಲ್ಲ ಬಂಡೆಯಂತೆ
ಗಾಂಧಾರಿ ತಾಯಿ
ಗರುಬವಾದರೆ ಅಲ್ಲಾಡಲಿಲ್ಲವಲ್ಲ.

೩. ಅಡ್ಡಿ ಇಲ್ಲದೆ ಬೆಳೆದು ಫಲವೇನು
ನನ್ನಾ ಮಡದಿ
ಗೊಡ್ಡುಣ್ಸೆ ಮರದ ಬಾಳು ನಮದಲ್ಲೆ.

೪. ಬಡತನಕೆ ಬಾಯಿಲ್ಲ
ಸಿರಿತನಕೆ ಸೀನೇಹವಿಲ್ಲ
ಅಂತ್ಹೇಳಿ ನಾನು
ಮಾತಾಡ್ದೆ ಬಂದ್ಬುಟ್ಟೆ.

೫. ಹಣ– ಇದ್ದೋನ ಕೂಡುದ್ರ ಋಣ ಇದ್ದಷ್ಟೇ
ಅನ್ನೋ ಮಾತಾದ್ರೆ ನಿಜವಾಯ್ತು.

ಮುಂತಾದವುಗಳಲ್ಲಿ ಅನುದ್ದೇಶಪೂರಿತವಾಗಿ ಬಂದ ಪದಪ್ರಯೋಗ, ಶಬ್ದ ಸಂಪತ್ತುಗಳು ಇಲ್ಲಿ ಅನುರಣಿತ ಧ್ವನಿಗೆ, ಉಪಮೆಗೆ ಹಾಸ್ಯಕ್ಕೆ ಕಾರಣವಾಗುವುದನ್ನು ಕಾಣಬಹುದು. ಹಾಗೆಯೇ ಜನಪದ ಕವಿ ತರುವ ಗಾದೆಗಳು, ನಾಣ್ಣುಡಿಗಳು, ನುಡಿಗಟ್ಟುಗಳು, ಒಗಟುಗಳು ಕಾವ್ಯದ ಪರಿಣಾಮದ ತೀವ್ರತೆಯನ್ನು ಹೆಚ್ಚಿಸಿರುವುದು ಕಾವ್ಯ ಶೈಲಿಗೆ ಮತ್ತೊಂದು ನಿದರ್ಶನವೆನ್ನಬಹುದು. ಕಾವ್ಯದಲ್ಲಿ ಬಳಕೆಯಾಗಿರುವ ಗಾದೆಗಳಲ್ಲಿ ಕೆಲವು ಹೀಗಿವೆ:

೧. ಅತ್ತೇದ ಅಳಿಯ ದಾನ ಮಾಡಿದ

೨. ಅಟ್ಟಿ ಅಳಿಬೋದು ಆಕಾಸ ಅಳೆಯಕಾಯ್ತದ

೩. ಆಲದ ಎಲೇಲಿ ಆಕಾಸ ಮುಚ್ಚಕ್ಕಾಯ್ತುದಾ

೪. ಪ್ರೀತಿ ಮಾಡಿದ ಮ್ಯಾಲೆ ನೀತಿ ಬಿಡಬ್ಯಾಡ

೫. ಕಡ್ಲೆ ತಿಂದು ಕೈ ತೊಳೆದುಕೊಂಡ ರೀತಿಯಲ್ಲಿ

ಮುಂತಾದವು. ಈ ರೀತಿಯ ಗಾದೆ ಬಳಕೆಯನ್ನು ಪಂಪಭಾರತ ಮತ್ತು ಕುಮಾರವ್ಯಾಸ ಭಾರತಗಳಲ್ಲೂ ಕಾಣಬಹುದು, ನಾಣ್ನುಡಿಗಳನ್ನೂ ತಮ್ಮ ಕ್ಲಿಷ್ಟವಾದ ಶೈಲಿಯಲ್ಲಿ ಸಮರಸವಾಗುವಂತೆ ಲೀಲಾಜಾಲವಾಗಿ ಇವರು ಬಳಸಿಕೊಂಡಿದ್ದಾರೆ. ಪಂಪಭಾರತದಲ್ಲಿನ ಗಾದೆಗಳಲ್ಲಿ ಕೆಲವನ್ನು ನೋಡಬಹುದು:

೧. ಜಲಕ್ಕನೀಗಜೆದೆಂ ಸಿರಿಕಳ್ಳೊಡವುಟ್ಟಿತೆಂಬುದಂ

೨. ಪಡೆನೋಡಲ್ ಬಂದವರಂ ಗುಡಿವೊರಿಸಿದರೆಂಬುದಾಯ್ತು

೩. ತಣಿಯುಂಡಮರ್ದಂ ಗೋಮೂತ್ರದಿಂದೆ ಬಾಯ್ಪೂಸಿದವೋಲ್

೪. ಕಾಯ್ದ ಬೆನ್ನೀರ್ ಮನೆ ಸುಡದು ಎಂಬೊಂದು ನುಡಿಯವೋಲ್

೫. ಬಡಿಗಂಡನಲ್ಲ ಪಾಲನೇಕಂಡ ಎಂಬಂತೆ

ಪಂಪನ ಅಸಾಧರಣ ಪ್ರತಿಭೆ ಮೂಲಕಥೆಯನ್ನು ಹಿತಮಿತವಾಗಿ ಸಂಗ್ರಹಿಸಿದೆ. ಮೂಲ ಕಥೆಗೆ ಚ್ಯುತಿ ಬರದಂತೆ ಒಂದು ವೃತ್ತದಲ್ಲಿ ಸಮಗ್ರ ಕಥೆಯನ್ನು ಅಡಗಿಸಿಡಬಲ್ಲ. ಒಂದು ಮಾತಿನಲ್ಲಿ ಒಂದು ಪ್ರಪಂಚದಷ್ಟು ಭಾವನೆಯನ್ನು ತುಂಬಬಲ್ಲ. ಆದರೆ ಎಲ್ಲಾ ಕಡೆಯಲ್ಲೂ ಮಾತಿನಲ್ಲಿ ಮಿತಿಯನ್ನು ಸಾಧಿಸಿದ್ದಿನೆಂದಷ್ಟೇ ಹೇಳಿದರೆ ಕವಿಗೆ ಅಪಚಾರವೆಸಿಗಿದಂತಾಗುತ್ತದೆ. ಅರ್ಜುನನನ್ನು ಸ್ತುತಿಸುವೆಡೆಗಳಲ್ಲಿ, ಸುಭದ್ರಾರ್ಜುನರ ವಿರಹದ ವರ್ಣನೆಯಲ್ಲಿ ಅವನ ಮಾತಿನ ಧಾರಳವನ್ನು ಕಾಣಬಹುದು.

ಸನ್ನಿವೇಶ ರಚನೆ, ಪಾತ್ರನಿರ್ಮಿತಿ, ವರ್ಣನೆಗಳು, ರಸಪ್ರತಿಪಾದನೆ, ಭಾಷೆಯ ಬಳಕೆ ಮುಂತಾದ ಎಲ್ಲಾ ದೃಷ್ಟಿಯಿಂದಲೂ ಪಂಪ ಕವಿಯ ವಿಕ್ರಮಾರ್ಜುನ ವಿಜಯಂ ಅದ್ಭುತವಾದ ಕೃತಿಯಾಗಿದ್ದು ಮುಂದಿನ ಕವಿಗಳಿಗೆ ಮಾರ್ಗದರ್ಶಕ ಕೃತಿಯಾಗಿದೆ. ಪಂಪನೇ ಹೇಳಿರುವಂತೆ 'ನಿಚ್ಚಂ ಪೊಸತು ಅರ್ಣವಂಬೊಲ್ ಅತಿ ಗಂಭೀರಂ ಕವಿತ್ವಂ'. ನಾಗರಾಜ ಕವಿಯು ಹೇಳಿರುವಂತೆ 'ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ ಪಂಪನಾವಗಂ'. ಈ ಮಾತು ಅಕ್ಷರಶಃ ಸತ್ಯವಾಗಿದೆ. ಕುಮಾರವ್ಯಾಸನಂಥ ಕವಿಯು ಪಂಪನಿಂದ ಅಲ್ಲಲ್ಲಿ ಪ್ರಭಾವಿತನಾಗಿರುವುದು ಪಂಪನ ಪ್ರತಿಭೆಯ ಹಿರಿಮೆಗೆ ಸಾಕ್ಷಿಯಾಗಿದೆ.

ಕುಮಾರವ್ಯಾಸನು ಕೂಡ ತನ್ನ ಕಾವ್ಯದುದ್ದಕ್ಕೂ ಅಲ್ಲಲ್ಲಿ ಗಾದೆ, ನಾಣ್ನುಡಿಗಳನ್ನು ಬಳಸಿರುವುದನ್ನು ಕಾವ್ಯದಲ್ಲಿ ಕಾಣಬಹುದು. ನಿದರ್ಶನವಾಗಿ:

೧. ಒಡಲಬಳಿ ನೆಳಲಿಂಗೆ ಗತಿ

೨. ಬತ್ತಿದ ಕೆರೆಯೊಳಗೆ ಬಲೆಯೇಕೆ

೩. ಕನಸಿನ ಹೊನ್ನ ಕಾಣದೆ ಶೋಕ ಬಡುವರೆ

೪. ನರರಿಗೆ ನಂಜು ಪಥ್ಯವೇ

೫. ಬೆಳದಿಂಗಳಲಿ ಮೈ ಬೆವರುವುದೇ.

೬. ಎಳಲತೆಯ ಕುಡಿ ಮಾಳಿಗೆಗೆ ತೊಲೆಯೆ

೭. ಕಡ್ಡಿ ತಡೆವುದೆ ಕಡಲ

ಮುಂತಾದವು ನಾರಣಪ್ಪನ ವಚೋವಿಲಾಸ ನಿತ್ಯನೂತನವಾದುದು ಹಾಗೂ ಅನನುಕರಣೀಯವಾದುದಾಗಿದೆ. 'ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ ಅವನದಾಗಿದೆ. ಕೆಲವೇ ಮಾತುಗಳಲ್ಲಿ ಅಗಾಧವಾದ ಚಿತ್ರವನ್ನು ರಚಿಸಿ ಕಣ್ಣ ಮುಂದಿಡಬಲ್ಲ ಸಾಮರ್ಥ್ಯ, ಸಣ್ಣ ದೃಶ್ಯವೊಂದನ್ನು ಹಲವಾರು ಮಾತುಗಳಲ್ಲಿ ಸಾವಧಾನವಾಗಿ ಪದರ ಪದರವಾಗಿ ಚಿತ್ರಿಸಿ ಪ್ರದರ್ಶಿಸಬಲ್ಲ ಪ್ರತಿಭೆ ನಾರಾಣಪ್ಪನದು. ಅವನು ಬಳಸುವ ಒಂದೊಂದು ಮಾತಿಗೂ ಜೀವಕಳೆ ತುಂಬಿಬರುತ್ತದೆ. 'ಪದವಿಟ್ಟಳುಪದೊಂದಗ್ಗಳಿಕೆ' ತನ್ನದೆಂದು ವ್ರತ ತೊಟ್ಟ ಅವನು ಹಲವೆಡೆಗಳಲ್ಲಿ ಶಬ್ದಬಾಹುಳ್ಯದ ಪುನರುಕ್ತಿಯ ದೋಷಕ್ಕೆ ಗುರಿಯಾಗಿದ್ದಾನೆ. ಆದರೂ ಎಲ್ಲೂ ಅಯುಕ್ತವಾದ ಪದಪ್ರಸಾರವಾಗಿಲ್ಲ. ಪದಪ್ರಯೋಗದಲ್ಲಿ ಅವನೂ ಪಂಪನಂತೆ ಸ್ವಲ್ಪ ಸಂಯಮವನ್ನು ವಹಿಸಿದ್ದರೆ ಅವನ ಅಗ್ಗಳಿಕೆ ಮತ್ತೂ ಅತಿಶಯವೆನಿಸುತ್ತಿತ್ತೊ ಏನೊ'[2] ಎಂಬ ಅಭಿಪ್ರಾಯವನ್ನು ಅನುಮೋದಿಸಬಹುದು.

'ಕುಮಾರವ್ಯಾಸ ಮೂಲವನ್ನು ಗತಕಾಲದ ಗವಿಯಿಂದೆತ್ತಿ ಪ್ರತಿಭಾ ಮೂಸೆಯಿಂದ ಕವಿಶಕ್ತಿಯ ಶ್ರೇಷ್ಠ ಸಾಧನಗಳಿಂದ ಸಚೇತನಗೊಳಿಸಿದ್ದರಲ್ಲಿಯೇ ಈ ಕೃತಿಯ ಹೆಚ್ಚಳವಿದೆ' ಎಂದು ರಂ.ಶ್ರೀ. ಮುಗಳಿಯವರು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಉಲ್ಲೇಖಿಸಿದ್ದಾರೆ. ಕವಿಯ ಅದಮ್ಯ ಪ್ರತಿಭೆ, ಅದ್ಭುತ ಕಲ್ಪನಾಶಕ್ತಿ, ಭಾವಾವೇಗ ಅಸಾಧಾರಣ ಪಾಂಡಿತ್ಯ, ರೂಪಕಾದಿಗಳ ರಮಣೀಯತೆ, ನಡುಗನ್ನಡದ ಹದವಾದ ದೇಶೀಯ ಶೈಲಿ ಇವುಗಳಿಗೆಲ್ಲಾ ಅಡಿಪಾಯವಾಗಿರುವ ಅವನ ಧರ್ಮದೃಷ್ಟಿ ಭಗವದ್ಭಕ್ತಿ ಮತ್ತು ಯೋಗಿಕ ದರ್ಶನ ಇವುಗಳೇ ಅವನ ಕೃತಿಯನ್ನು 'ಕಾವ್ಯಕ್ಕೆ ಗುರು'ವನ್ನಾಗಿ ಮಾಡಿವೆ ಎನ್ನಬಹುದು.

ಜನಪದಕವಿ, ಪಂಪ, ಕುಮಾರವ್ಯಾಸ ಈ ಮೂವರೂ ಬಹುಮುಖ ಪ್ರತಿಭಾನ್ವಿತರು ಹಾಗೂ ನಾನಾ ಕಲೆಗಳಲ್ಲಿ ಪ್ರಾವೀಣ್ಯವುಳ್ಳವರು. ಪೂರ್ವಕವಿಗಳ ಕಾವ್ಯ ಪರಿಚಯ ಈ ಮೂವರಿಗೂ ತಿಳಿದಿರುವುದೇ ಆಗಿದೆ. ಜನಪದ ಕವಿಯೂ ಮೂಲಭಾರತ, ಕುಮಾರವ್ಯಾಸಭಾರತ, ಪಂಪಭಾರತ, ಯಕ್ಷಗಾನ ಬಯಲಾಟ ಮೊದಲಾದ ಕಾವ್ಯಗಳನ್ನು ಕೇಳಿಯೋ, ಅಭಿನಯಿಸಿರುವುದನ್ನು ನೋಡಿಯೋ ತಿಳಿದುಕೊಂಡಿರಬಹುದು. ಅದರಲ್ಲೂ ಕುಮಾರವ್ಯಾಸಭಾರತವನ್ನು ಗಮಕಿಗಳು ಗಮಕ ವಾಚನದ ಮೂಲಕ ಜನಪ್ರಿಯಗೊಳಿಸಿರುವುದನ್ನು ಕಾಣಬಹುದು. ಹಾಗಾಗಿ ಜನಪದ ಕವಿಗೆ ಕುಮಾರವ್ಯಾಸಭಾರತ ಬಲು ಹತ್ತಿರವಾದಂತಹ ಕೃತಿಯಾಗಿದೆ ಎಂಬುದು ಕಾವ್ಯವಾಚನದಲ್ಲಿ ಗಮನಕ್ಕೆ ಬರುತ್ತದೆ. ಇತರ ಕವಿಗಳಿಗಿಂತ ಅಂದರೆ ಪಂಪನಿಗಿಂತ ಕುಮಾರವ್ಯಾಸಭಾರತ ಜನಪದ ಮಹಾಭಾರತಕ್ಕೆ ಪ್ರಭಾವಿತವಾದವುಗಳೆನ್ನಬಹುದು.

ಪಂಪ ಜೈನನಾಗಿದ್ದು ಜಿನಭಕ್ತ, ನಾರಣಪ್ಪ ವೈಷ್ಣವನಾಗಿದ್ದು ಕೃಷ್ಣನ ಭಕ್ತ, ಜನಪದ ಗಾಯಕ/ಕವಿಯಾದ ಸಿದ್ದಶೆಟ್ಟಿ ನೀಲಗಾರರಾದರೂ (ಸಿದ್ದಪ್ಪಾಜಿ ಆರಾಧಕರು) ದೇವರ ಗುಡ್ಡರ(ಮಹದೇಶ್ವರನ ಆರಾಧಕರು) ಸಂಪ್ರದಾಯವನ್ನು ರೂಢಿಸಿಕೊಂಡವರು. ಮಹಾಭಾರತದ ವಿಷಯದಲ್ಲಿ ಪಂಪನದು ಕೇವಲ ಲೌಕಿಕ ಶ್ರದ್ಧೆಯಾದರೆ ನಾರಣಪ್ಪನದು ಆಧ್ಯಾತ್ಮಿಕ ಶ್ರದ್ಧೆ; ಕೃಷ್ಣ ಪಾರಮ್ಯವನ್ನು ಇಳೆಗೆ ಸಾರಲು ಇರುವ ಮಾಧ್ಯಮ. ಜನಪದ ಕವಿಯಾದಾದರೋ ಸರ್ವಧರ್ಮ ಸಮನ್ವಯ ಎನ್ನಬಹುದು.

ಪಂಪ ತನ್ನೊಡೆಯನಿಂದ ಆದೇಶ ಪಡೆದು ಆಶ್ರಯದಾತನಾದ ಅವನ ಮೆಚ್ಚಿಗೆಗಾಗಿ ಕಾವ್ಯ ಬರೆದರೆ, ಕುಮಾರವ್ಯಾಸ ಶ್ರೀಕೃಷ್ಣ ಪ್ರೇರಿತನಾಗಿ ಶ್ರೀಕೃಷ್ಣ ಪ್ರೀತ್ಯರ್ಥಕ್ಕಾಗಿ ಆತ್ಮೋದ್ಧಾರ ಮತ್ತು ಲೋಕೋದ್ಧಾರಕ್ಕಾಗಿ ಕಾವ್ಯ ಬರೆದರೆ, ಜನಪದ ಕವಿ ಧಾರ್ಮಿಕ ವೃತ್ತಿಗಾಯಕನಾಗಿಯೂ ಕಾವ್ಯವನ್ನು ಹಾಡಿದ್ದಾನೆ. ಪಂಪ ತನ್ನ ಕಾವ್ಯವನ್ನು ಅರ್ಜುನನ ಮಹಿಮೆಯನ್ನು ಸಾರಲು ರಚಿಸಿದರೆ, ಕುಮಾರವ್ಯಾಸ ಕೃಷ್ಣಮಹಿಮೆಯನ್ನು ಕೊಂಡಾಡಲು ಬರೆದಿದ್ದಾನೆ. ಹಾಗಾಗಿ ಇಬ್ಬರೂ ಸ್ವಾತಂತ್ರ್ಯವಹಿಸಿ ಮೂಲದಿಂದ ಬದಲಾಣೆಗಳನ್ನು ಮಾಡಿಕೊಂಡಿದ್ದಾರೆ.

ಆದರೆ ಜನಪದ ಕವಿ ಯಾವುದೇ ಒಂದು ಪಾತ್ರದ ವಕಾಲತ್ತು ವಹಿಸದೆ ಸಮಭಾವದಲ್ಲಿ ಎಲ್ಲವನ್ನು ಚಿತ್ರಿಸಿದ್ದಾನೆ. ಹಾಗಾಗಿ ಯಾವುದೇ ಪಾತ್ರ ಇಲ್ಲಿ 'ಪರಮಪವಿತ್ರ'ವೆನಿಸದೆ ಮಾನವ ಗುಣ ದೌರ್ಬಲ್ಯದ ಸಮಾನತೆಯಲ್ಲಿ ಚಲಿಸುವುದು ವಿಶೇಷವೆನಿಸಿದೆ. ಕೃಷ್ಣನ ಪಾತ್ರವೂ ಇದಕ್ಕೆ ಹೊರತಾದುದಲ್ಲ. ಪಾಂಡವರಿಗೆ ಕೃಷ್ಣ ಪಂಚಪ್ರಾಣ; ಹಾಗೆಯೇ ಕೃಷ್ಣನಿಗೆ ಪಾಂಡವರು ಪಂಚಪ್ರಾಣವಾದರೂ ಅವರ ಮಕ್ಕಳ ವಿಚಾರದಲ್ಲಿ ಅವನ ನಿಲುವು ಭಿನ್ನವಾಗಿದೆ. ಅಭಿಮನ್ಯು, ನಾಗಾರ್ಜುನ, ಭದ್ರಬಾಹು, ಈ ಮೂವರ ಪ್ರಸಂಗಗಳೂ ಕೃಷ್ಣನ ಸ್ವಾರ್ಥಕ್ಕೆ ಸಮರ್ಥಸಾಕ್ಷಿಯಾಗಿವೆ. ಹಾಗಾಗಿ ಜನಪದ ಮಹಾಭಾರತದಲ್ಲಿ ಕೃಷ್ಣನು ಪಾಂಡವರ ಅಸ್ತಿತ್ವ ಸ್ಥಾಪನೆಗೆ ಪ್ರಯತ್ನಿಸುತ್ತಾನೆ ಎನ್ನುವುದಕ್ಕಿಂತ ತನ್ನ ಅಸ್ತಿತ್ವವನ್ನು ಮೆರೆಯಲು ಯತ್ನಿಸಿ ಯಶಸ್ಸು ಗಳಿಸುತ್ತಾನೆ ಎನ್ನಬಹುದು. ಹೀಗಾಗಿ ಶಿಷ್ಟ ಪುರಾಣ ಸೃಷ್ಟಿಸಿರುವ ಕೃಷ್ಣನ ಬಗೆಗಿನ ಭ್ರಮೆ ಭಾವನೆಗಳನ್ನು ಜನಪದ ಮಹಾಭಾರತ ಒಡೆಯುತ್ತದೆ. ಕುವೆಂಪುರವರು ತಮ್ಮ 'ಮಲೆಗಳಲ್ಲಿ ಮದುಮಗಳು' ಕೃತಿಯಲ್ಲಿ ಹೇಳಿರುವಂತೆ 'ಇಲ್ಲಿ ಯಾರೂ ಮುಖ್ಯರಲ್ಲ, ಯಾರೂ ಅಮುಖ್ಯರಲ್ಲ, ಯಾವುದೂ ಯಃಕಶ್ಚಿತವಲ್ಲ' ಎಂಬ ಮನೋಧರ್ಮ ಎದ್ದುಕಾಣುತ್ತದೆ.

**ಅಡಿ ಟಿಪ್ಪಣಿಗಳು:**

೧. ಜನಪದ ಮಹಾಭಾರತ, ಪಿ.ಕೆ.ರಾಜಶೇಖರ, ಹೊನ್ನರು ಜನಪದ ಗಾಯಕರು, ಮುನ್ನುಡಿ. ಪುಟ ೫೮, ೨೦೦೪.

೨. ಜಾನಪದ ಜೋಗಿ, ಪಿ.ಕೆ. ರಾಜಶೇಖರ ಅವರ ಅಭಿನಂದನಾ ಗ್ರಂಥ, ಲಾವಣ್ಯ ಮುದ್ರಣ, ಬೆಂಗಳೂರು, ಪು ೪೨೮, ೨೦೦೮.

೩. ಜನಪದ ಮಹಾಭಾರತ ಸಂ. ಪಿ.ಕೆ.ಆರ್.- ರಾಗೌ ಪ್ರಸ್ತಾವನೆ, ಪುಟ ೨೮.

೪. ಪಂಪಭಾರತ, ಎಲ್. ಬಸವರಾಜು, ಮುದ್ದುಶ್ರೀ ಗ್ರಂಥ ಮಾಲೆ, ಬೆಂಗಳೂರು, ಪುಟ ೮೧, ೨೦೦೯.

೫. ಅದೇ, ಪುಟ ೮೧, ೨೦೦೯.

೬. ಜಾನಪದ ಜೋಗಿ, ಪಿ.ಕೆ. ರಾಜಶೇಖರ, ಅಭಿನಂದನಾ ಗ್ರಂಥ, ಲಾವಣ್ಯ ಮುದ್ರಣ, ಬೆಂಗಳೂರು, ಪುಟ ೪೬೧, ೨೦೦೮.

೭. ಮಹಾಭಾರತ ಸಮೀಕ್ಷೆ, ನ. ಸುಬ್ರಹ್ಮಣ್ಯಂ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ಪುಟ ೭೫, ೧೯೭೩.

# ಅಧ್ಯಾಯ ಏಳು

## ಜನಪದ ಮಹಾಭಾರತದಲ್ಲಿ ಸೇರ್ಪಡೆಯಾಗಿರುವ ಉಪಕಥೆಗಳು

ಕಥೆ ಜನಪದ ಸಾಹಿತ್ಯದ ಜನಪ್ರಿಯ ಪ್ರಕಾರವಾಗಿದೆ. ಕಥೆಗಳನ್ನು ಹೇಳುವ ಹಾಗೂ ಕೇಳುವ ಪ್ರಕ್ರಿಯೆ ಯಾವುದೇ ಒಂದು ಪ್ರದೇಶಕ್ಕೆ ಮತ್ತು ಕಾಲಕ್ಕೆ ಮಾತ್ರ ಸೀಮಿತವಾಗಿರದೆ ವಿಶ್ವವ್ಯಾಪಕವಾದುದಾಗಿದೆ. 'ತಲೆಮಾರಿನಿಂದ ತಲೆಮಾರಿಗೆ ವಾಗ್ರೂಪದಲ್ಲಿ ಹರಿದು ಬಂದ ಕಥಾ ನಿರೂಪಣೆಯನ್ನು ಜನಪದ ಕಥೆ'[1] ಎನ್ನಬಹುದು. ಜನಪದ ಕಥೆ ಘಟನೆಗಳ ಸರಳವಾದ ಅಥವಾ ಸಂಕೀರ್ಣವಾದ ರಚನೆಯಾಗಿದ್ದು ಅದು ನಿರ್ಧಿಷ್ಟವಾದ ವ್ಯಕ್ತಿ, ಕಾಲ, ಸ್ಥಳಗಳನ್ನು ಅವಲಂಬಿಸಿರುವುದಿಲ್ಲ. ಈ ಗುಣ ಜನಪದಕಥೆಯನ್ನು ಐತಿಹ್ಯ ಮತ್ತು ಪುರಾಣಗಳಿಂದ ಸ್ಪಷ್ಟವಾಗಿ ಬೇರ್ಪಡಿಸುತ್ತದೆ. ಇದಲ್ಲದೆ ಜನಪದ ಕಥೆಗಳ ರಚನೆ ಹಾಗೂ ನಿರೂಪಣೆಯಲ್ಲಿ ಕೆಲವು ವಿಶಿಷ್ಟ ಲಕ್ಷಣಗಳಿವೆ. ಈ ಲಕ್ಷಣಗಳು ಇತರ ಯಾವುದೇ ಪ್ರಕಾರ ಅಥವಾ ಸಾಹಿತ್ಯದಿಂದ ಕಥಾಪ್ರಕಾರವನ್ನು ಸ್ಪಷ್ಟವಾಗಿ ಬೇರ್ಪಡಿಸುತ್ತದೆ.

ಜನಪದ ಕಥೆ ವಾಕ್ಸಂಪ್ರದಾಯದಲ್ಲಿ ಬರುವುದರಿಂದ ಪರಂಪರೆಗೆ ಹಾಕಿಕೊಟ್ಟ ಮಿತಿಯಲ್ಲಿ ಕಥೆಗಾರನ ವೈಯಕ್ತಿಕ ಅಭಿವ್ಯಕ್ತಿಗೆ ಸಾಕಷ್ಟು ಸ್ವಾತಂತ್ರ್ಯವಿದೆ. ಇದರಿಂದಾಗಿ ಕಥೆಗಾರನಿಂದ ಕಥೆ ಬೇಕಾದಷ್ಟು ರೀತಿಯಲ್ಲಿ ಬದಲಾಗಿ ಮೈದಾಳಬಹುದು. ಕಥೆಗಾರ ಅವಕಾಶವಿರುವೆಡೆಯೆಲ್ಲೆಲ್ಲ ತನ್ನ ವೈಯಕ್ತಿಕ ಅನುಭವ ಹಾಗೂ ಕಲ್ಪನಾ ಶಕ್ತಿಯಿಂದ ಕಥೆಯ ಹಂದರವನ್ನು ತುಂಬಬಹುದು. ಕಥೆಯ ಪಾತ್ರ ಅಥವಾ ಘಟನೆಗಳನ್ನು ವಿವರಿಸುವ ಸಂದರ್ಭದಲ್ಲಿ ಬಹುಮಟ್ಟಿಗೆ ಆತ ತನ್ನ ಅನುಭವದಿಂದಲೇ ಪ್ರಭಾವಿತನಾಗಿರುತ್ತಾನೆ. ಕೆಲವೊಮ್ಮೆ ಮರೆವಿನಿಂದ ಅಥವಾ ಕಥೆಯಲ್ಲಿ ತಾರ್ಕಿಕತೆ ತರುವುದಕ್ಕಾಗಿ ಘಟನೆಗಳನ್ನೇ ವ್ಯತ್ಯಾಸ ಮಾಡಿ ಅದರ ರೂಪವನ್ನೇ ಬದಲಾಯಿಸಬಹುದು. ಅನವಶ್ಯಕವೆನಿಸಿದ ಅಂಶಗಳನ್ನು ತನ್ನ ಸ್ವಂತ ತರ್ಕದಿಂದ ಬಿಡಲೂಬಹುದು. ಇಷ್ಟಾಗಿಯೂ 'ಕಥೆಗಾರನ ಹಸ್ತಕ್ಷೇಪವಿರುವುದನ್ನು ತಜ್ಞರು ಸುಲಭವಾಗಿ ಗುರುತಿಸುವುದು ಸಾಧ್ಯವಿದ್ದು, ಈ ರೀತಿಯ ವ್ಯತ್ಯಾಸವನ್ನು ಮಾಡುವುದಕ್ಕೆ ಕಾರಣವಾದ ಜನಪದ ಮನೋಧರ್ಮವನ್ನು ಅಧ್ಯಯನ ಮಾಡುವುದಕ್ಕೆ ಅದೇ ಒಂದು ಸಾಮಾಗ್ರಿಯಾಗುತ್ತದೆ. ಆದರೆ ಕತೆಗಾರನ ಸ್ವಂತಿಕೆಗೆ ಅವಕಾಶವಿರುವುದು ಕತೆಯ ಮೇಲು ಮೇಲಿನ ಪೂರಕ ವಿವರಗಳಲ್ಲಿ ಮಾತ್ರವಾದ್ದರಿಂದ ಕತೆಯ ಹೊರರೂಪಿನಲ್ಲಿ ಮಾತ್ರ ಇಂತಹ ವ್ಯತ್ಯಾಸಗಳು ನಡೆಯುತ್ತವೆ'[2]. ಇದರಿಂದ ಕಥೆಯ ಸಂವಿಧಾನಕ್ಕೆ ಯಾವುದೇ ಧಕ್ಕೆಯಾಗುವುದಿಲ್ಲ.

ಜನಪದ ಸಾಹಿತ್ಯದ ಉಳಿದ ಪ್ರಕಾರಗಳಿಗಿಂತ ಜನಪದ ಕಥೆಯಲ್ಲಿ ಜನಪದರ ವೈಯಕ್ತಿಕ ಪ್ರತಿಭೆ ಕಲಾಶಕ್ತಿಗಳು ಪ್ರಕಟವಾಗಲು ಹೆಚ್ಚು ಅವಕಾಶವಿದೆ. ಏಕೆಂದರೆ ಕಥೆ ಒಂದು ಜನಸಮುದಾಯದ ನಡುವೆ ಆಗಿಂದಾಗಲೇ ನಿರೂಪಿತವಾಗುವ ಪ್ರಕಾರ. ಕಥೆ ಎಷ್ಟೇ ಪ್ರಾಚೀನವಾದರೂ ಸಾಂಪ್ರದಾಯಕವಾದರೂ ಪ್ರತಿಯೊಂದು ಬಾರಿ ನಿರೂಪಣೆಯಾಗುವಾಗಲೂ ಅದು ಹೊಸದಾಗಿ ಕಂಗೊಳಿಸುತ್ತದೆ. ಜನಪದ ಕಥೆಗಳ ಸೌಂದರ್ಯ ಅಡಗಿರುವುದೇ ಅವುಗಳ ಅನುಭವದ ನೆಲೆಗಟ್ಟಿನಲ್ಲಿ ಹಾಗೂ ಭಾಷೆಯಲ್ಲಿ ಎನ್ನಬಹುದು. ಆಡುಮಾತಿನ ದನಿ, ನಾದ, ಲಯಗಳು ಕಥೆಗೆ ಒಂದು ರೀತಿಯ ನಾದ ಸೌಂದರ್ಯವನ್ನು ಜೀವಂತಿಕೆಯನ್ನು ತಂದುಕೊಡುತ್ತವೆ. ಭಿನ್ನ ಭಿನ್ನ ಸಂಸ್ಕಾರದ ವ್ಯಕ್ತಿಗಳ ಅಭಿರುಚಿ, ಮೌಲ್ಯ ವಿವೇಚನೆ ಕಲಾಭಿವ್ಯಕ್ತಿಯನ್ನು ನಾವಿಲ್ಲಿ ಗುರುತಿಸಬಹುದು.

ಶಿಷ್ಟ ಸಾಹಿತ್ಯದ ಮಾನದಂಡಗಳಿಂದ ಈ ಸಾಹಿತ್ಯವನ್ನು ಅಳೆಯಬೇಕಾಗಿಲ್ಲ. ಜನಪದ ಕಥೆಯ ನಿರೂಪಣೆಗೆ ಯಾವುದೇ ಕಟ್ಟುಪಾಡಿಲ್ಲ. ಶಿಷ್ಟಸಾಹಿತ್ಯದಲ್ಲಿ ಬರುವ ಪದಶುದ್ಧತೆ, ವಾಕ್ಯರಚನೆ, ತಾರ್ಕಿಕ ನಿರೂಪಣೆಯನ್ನಿಲ್ಲಿ ಕಾಣದಿದ್ದರೆ ಅದಕ್ಕೆ ಕಥೆಗಾರರ ಮುಗ್ಧತೆ ಹಾಗೂ ಅನಕ್ಷರತೆಗಳಷ್ಟೇ ಕಾರಣ ಹೊರತು ಮೂಲ ಸಾಹಿತ್ಯವೇ ಅತಾರ್ಕಿಕವಾದುದು, ಅಶುದ್ಧವಾದುದು ಎಂದು ಭಾವಿಸುವಂತಿಲ್ಲ.

ಯಾವುದೇ ವಿಷಯ ಪರಿಣಾಮಕಾರಿಯಾಗುವಂತೆ ಮಾಡಲು ಜನಪದ ಕಥೆಗಾರ ಕೃತಕ ಭಾಷೆ, ಕಲ್ಪನೆಗಳ ಮೊರೆ ಹೋಗುವುದಿಲ್ಲ. ಬದಲಿಗೆ ಆತ ಅಪ್ರಜ್ಞಾಪೂರ್ವಕವಾಗಿಯೇ ಅಲ್ಲಿ ಬಳಸುವ ಜೀವನಾನುಭವ ಹಾಗೂ ಅನುಭವದಿಂದ ಹದಗೊಂಡ ನುಡಿಗಳು ಅಪೇಕ್ಷಿತ ಗುರಿಯನ್ನು ಯಶಸ್ವಿಯಾಗಿ ಸಾಧಿಸುತ್ತದೆ. ಆದ್ದರಿಂದ ರಸಾನುಭವವನ್ನು ತರಲು ಶಿಷ್ಟ ಸಾಹಿತ್ಯದಲ್ಲಿರುವ ವಿಧಾನಗಳೇ ಬೇರೆ ಜನಪದ ಸಾಹಿತ್ಯದಲ್ಲಿರುವ ವಿಧಾನವೇ ಬೇರೆ. ಆದರೂ ಸಾಹಿತ್ಯದ ಮೂಲಭೂತ ಅಂಶಗಳು ಜನಪದ ಕಥೆಗಳಲ್ಲಿದ್ದು ರಸಾನುಭವ ಸಾಧ್ಯವಾಗುವುದರಿಂದ ಸಾಹಿತ್ಯಿಕವಾಗಿ ಯಶಸ್ವಿಯಾಗಿವೆ.

ಜನಪದ ಮಹಾಭಾರತ ಪುರಾಣ, ಇತಿಹಾಸ, ಐತಿಹ್ಯ, ದಂತಕಥೆ, ಸಮಕಾಲೀನ ಕಥೆಗಳ ಮಿಶ್ರಣದ ಬಹುರೂಪಿ ಮಹಾಕಾವ್ಯವಾಗಿದೆ. ಪ್ರಾಚೀನತೆಯಿಂದ ಆಧುನಿಕತೆಯೊಂದಿಗೆ, ಶಿಷ್ಟವನ್ನು ಜನಪದದೊಂದಿಗೆ ಸಮೀಕರಿಸುವ ವಿನೂತನ ಸೃಜನಶೀಲ ಪ್ರಕ್ರಿಯೆ ಈ ಮಹಾಕಾವ್ಯದಲ್ಲಿದೆ ಎನ್ನಬಹುದು. ಮಹಾಕಾವ್ಯದ ವಸ್ತು, ವಿನ್ಯಾಸ ಮತ್ತು ರಚನೆಯನ್ನು ನೋಡಿದರೆ ಕಾವ್ಯ ಪ್ರಾಚೀನ ಮಧ್ಯಕಾಲೀನ ಬೆಳವಣಿಗೆಯಿಂದಾದುದೆಂದು ಹೇಳಬಹುದು. ಮಹಾಭಾರತ ಕಾವ್ಯ ನಮ್ಮ ದೇಶದ

ಸಂಸ್ಕೃತಿ, ಪರಂಪರೆ, ಜ್ಞಾನದ ನೆಲೆಗಳು, ತಾರ್ಕಿಕ ದರ್ಶನ, ವ್ಯಕ್ತಿ ಸ್ವರೂಪಗಳು ಮೊದಲಾದವುಗಳನ್ನು ವಿಸ್ತರಿಸಿದ ಕಾವ್ಯ ಇಂದಿಗೂ ನಮ್ಮ ಜೀವನದ ನರನಾಡಿಗಳಲ್ಲಿ ಹಾಸುಹೊಕ್ಕಾಗಿದೆ. ಅದೊಂದು ಕಥಾಸರಿತ್ಸಾಗರ. ಆದ್ದರಿಂದಲೇ ಕುಮಾರವ್ಯಾಸ ತನ್ನ ಕಾವ್ಯದ ಆರಂಭದಲ್ಲಿ ಹೇಳುವಂತೆ ಅದರಲ್ಲಿ ಬಯಸಿದವರಿಗೆಲ್ಲಾ ಬೇಕಾದ್ದು ಇದೆ. ಸಂಸ್ಕೃತ ಮೂಲದಿಂದ ಶಿಷ್ಟ ಕಾವ್ಯವಾಗಿ ಹೊರಹೊಮ್ಮಿ ಅನಂತರ ದೇಶಭಾಷೆಗಳಲ್ಲಿ ಅನೇಕ ಪಠ್ಯಾಂತರಗಳನ್ನು ಪಡೆದುಕೊಳ್ಳುತ್ತ ಬೆಳೆದಿದೆ.

ಭಾರತೀಯ ಪರಂಪರೆಯಲ್ಲಿ ಕಥನಕ್ಕೆ ಮಹತ್ವದ ಪ್ರಾಶಸ್ತ್ಯವಿದ್ದು ಇಲ್ಲಿ ಒಂದು ಕಥೆ ಹುಟ್ಟಿತೆಂದರೆ, ಅದು ಅನೇಕ ಕಥೆ ಮತ್ತು ಉಪಕಥೆಗಳಿಗೆ ಹಾದಿ ಮಾಡಿಕೊಡುತ್ತಿರುತ್ತದೆ. ಮಹಾಭಾರತವೇ ಅದಕ್ಕೆ ಸೂಕ್ತವಾದ ಉದಾಹರಣೆಯಾಗಿದೆ. ಜನಪದ ಮಹಾಭಾರತ ಇದೇ ರೀತಿಯಲ್ಲಿ ಮೂಲಮಹಾಭಾರತದ ಚೌಕಟ್ಟನ್ನು ಮುರಿಯದೆ ಆ ಚೌಕಟ್ಟಿನಲ್ಲಿಯೇ ಕಥೆಯನ್ನು ವಿಸ್ತರಿಸುವ ಕೆಲಸ ಮಾಡುತ್ತದೆ. ಜನಪದರಿಗೆ ಮೂಲ ಮಹಾಭಾರತ ಆದಿಯಿಂದ ಒದಗಿ ಬಂದು, ಅಲ್ಲಿ ಬರುವ ಪ್ರಧಾನ ಕಥೆಗಳು ಹಾಗೂ ಉಪಕಥೆಗಳು ಜನರ ಜೀವನ ಪ್ರವಾಹದಲ್ಲಿ ಹಾಸು ಹೊಕ್ಕಾಗಿವೆ. ಆದರೆ ಯಾವುದೇ ಜನಪದ ಸಂಪ್ರದಾಯದ ಕಥನಕಲೆ ಸಿದ್ಧಕಥಾಮಾದರಿ ಅಥವಾ ನಿರೂಪಣೆಯನ್ನಷ್ಟೇ ಮುಂದುವರಿಸಿಕೊಂಡು ಹೋಗಲು ಮಾತ್ರ ಸಿದ್ಧವಿರುವುದಿಲ್ಲ. ಜನಪದ ಮಹಾಭಾರತದ ಕಥಾಹಂದರಗಳನ್ನು ಕುರಿತು ವಿದ್ವಾಂಸರಾದ ಎಚ್.ಎಸ್. ಶಿವಪ್ರಕಾಶ್ ಅವರು 'ವಿಶೇಷವೆಂದರೆ ಜನಪದ ಮನಸ್ಸು ಇಲ್ಲಿ ಕತೆಯೊಳಗೆ ಕತೆಯನ್ನು ನೇಯುತ್ತಾ ಹೋಗುವ ಬಗೆ ಇದೆ. ಗಣೇಶ, ಷಣ್ಮುಖರ ಮಾವಿನಹಣ್ಣಿನ ಕಥೆ ಗಣೇಶನನ್ನು ಇಲ್ಲಿ ವ್ಯಾಸನ ಲಿಪಿಕಾರನನ್ನಾಗಿಸುತ್ತದೆ. ಇಲ್ಲಿಯ ಗಂಗೆ ಶಾಪಗ್ರಸ್ಥಳಾದ ಕೈಲಾಸದ ಗಂಗೆ. ಇಲ್ಲಿಯ ಕೃಷ್ಣ ಅವತಾರ ಮಾತ್ರವಲ್ಲ, ಪಾಂಡವರೂ ಅವತಾರಿಗಳು. ಅವರು ಶಿವನ ಐದು ರೂಪಗಳು, ದ್ರೌಪದಿ ಸಾಕ್ಷಾತ್ ಪಾರ್ವತಿ ಅಂಶಿಕಳು. ಹೀಗಾಗಿ ದ್ರೌಪದಿಯ ಬಹುಪತಿತ್ವಕ್ಕೆ ಇಲ್ಲಿ ಸಾಮಾಜಿಕ ನೀತಿದೋಷದ ಸೋಂಕಿಲ್ಲ. ದ್ರೌಪದಿಯ ಆದಿಶಕ್ತಿತ್ವ ಭಿಲ್ಲರ ಮಹಾಭಾರತವನ್ನು ಹೋಲುವಂಥದು. ಜನಪದ ಕಥೆಗಳು ಪಾತ್ರ ವಿಶೇಷಕ್ಕಿಂತ ಹೆಚ್ಚಿನ ಒತ್ತನ್ನು ಪಾತ್ರ-ರೂಪಗಳಿಗೆ ನೀಡುತ್ತದೆ. ಆದ್ದರಿಂದ ಶಕುನಿಯ ಖಳನಾಯಕತ್ವವನ್ನು ಅತ್ಯಂತ ತೀವ್ರಗೊಳಿಸಲಾಗಿದೆ. ಅವನೂ ಒಂದು ಅವತಾರ. ಪಾತ್ರ ಮತ್ತು ಆಗುಹೋಗುಗಳ ಅಂತರ್ವಿರೋಧವನ್ನು ತಾರ್ಕಿಕವಾಗಿ ಸಾರಿಸಿ ಹಾಕುವ ಪ್ರಯತ್ನ ಜನಪದ ಪ್ರತಿಭೆಗೆ ಒಗ್ಗದ ಮಾತು. ಉದಾಹರಣೆಗೆ ಇಲ್ಲಿನ ಕೃಷ್ಣ ಅವತಾರಿಯಾದರೂ ಹಲವು ಸಲ ಕೇವಲ ಮನುಷ್ಯರ ಹಾಗೆ ನಡೆದುಕೊಳ್ಳುತ್ತಾನೆ. ಅಭಿಮನ್ಯುವಿನ ಸಾವಿಗೆ ಮೂಲಕಾರಣನಾಗುತ್ತಾನೆ. ಹೀಗೆ ದೈವತ್ವ ಮತ್ತು ಮನುಷ್ಯತ್ವಗಳನ್ನು ಒಟ್ಟೊಟ್ಟಿಗೆ ಇರಿಸುವುದೂ ಜನಪದರ ಲಕ್ಷಣ. ಆದರೆ ಇಡೀ ಜನಪದ ಕಲ್ಪನೆ

ಅವತಾರ ಕಲ್ಪನೆಯ ಮೂಲಕ ಒಟ್ಟು ಘಟನೆಗಳಿಗೆ ಕಾಸ್ಮಿಕ ಸಮರ್ಥನೆಯನ್ನು ನೀಡುತ್ತದೆ. ಯಾಕೆಂದರೆ ಜನಪದದ ಒತ್ತು ಬಿಡಿಯಾದುದರ ಮೇಲಲ್ಲ ಇಡಿಯಾದುದ್ದರ ಮೇಲೆ'[3] ಎಂಬ ಅಭಿಪ್ರಾಯವನ್ನು ತಳೆದಿರುವುದು ಉಚಿತವೆನ್ನಬಹುದು.

ಜನಪದ ಭಾರತದ ವಿವರಗಳಿಗೆ ತಾರ್ಕಿಕತೆಯ ಹೊರೆಯಿಲ್ಲ, ಅಥವಾ ಕಲಾತ್ಮಕತೆಯ ಹರವೂಯಿಲ್ಲ. ಇಲ್ಲಿ ಕಥೆಗೆ ಕಥೆಯೇ ಗುರಿ, ರಂಜನೆಗೆ ದಾರಿ. ಕಾವ್ಯ ಉಪಮೆ ಉಪಮೆಗಳನ್ನು ಬೆಸೆದರೆ ಜನಪದ ಕಥೆಯ ಅನುಕೂಲವನ್ನು ಒಂದುಗೂಡಿಸುತ್ತದೆ. ಇಲ್ಲಿ ಇತರ ಪ್ರಸಿದ್ಧ ಪುರಾಣ ಮೂಲಗಳಿಂದ ಬಂದ ಪಾತ್ರಗಳನ್ನು ನಿರಾಯಾಸವಾಗಿ ಕಥೆಯಲ್ಲಿ ಸೇರಿಸಿಕೊಳ್ಳುವ ತಂತ್ರವಾಗಿದೆ. ಇಲ್ಲಿ ಕರ್ಣನ ಸಾಕುತಂದೆ ಅಂಬಿಗರ ಚೌಡಯ್ಯ. ಬೇರೆ ಭಾರತದಲ್ಲೆಲ್ಲೂ ಕಾಣದ ಕರ್ನಾಟಕಕ್ಕೆ ವಿಶಿಷ್ಟವಾದ ಬಸವಣ್ಣನ ದೇವಸ್ಥಾನಗಳು ಇಲ್ಲಿ ಬರುತ್ತವೆ. ಹಾಗೆಯೇ ಕರ್ಣ ತನ್ನ ದಾನಶೂರತ್ವವನ್ನು ಮೆರೆಯುವ ಬಗೆಯು ಅತ್ಯಂತ ದೇಸಿಯಾದ್ದದ್ದು. ಅದು ಸ್ಥಳೀಯ ಸೊಬಗಿನಿಂದ ಚಿತ್ರಿತವಾಗಿದೆ. '...ಜನಪದ ಮಹಾಭಾರತದ ಸಾಂಸ್ಕೃತಿಕ ಮಹತ್ವ ಅದರ ಸಾಹಿತ್ಯಿಕ ಗುಣಗಳಿಗಿಂತ ವಿಶಾಲವಾದದ್ದು. ಕಾಲದ ಪರಿಧಿಗಳನ್ನು ದಾಟುತ್ತಾ ಪುರಾಣದಲ್ಲಿ ವರ್ತಮಾನವನ್ನು ಪ್ರತ್ಯೇಕಗೊಳಿಸುತ್ತಾ ಉಪಕಥೆಯಿಂದ ಉಪಕಥೆಗೆ ನೆಗೆಯುತ್ತಾ ಬೆಳೆಯುವ ಈ ಕೃತಿ ಜನಪದ ಕಥನ ಕ್ರಮಗಳ ಒಂದು ವಿಶ್ವಕೋಶ. ಮಲೆಮಾದೇಶ್ವರ, ಮಂಟೇಸ್ವಾಮಿ ಮತ್ತು ಜನಪದ ಬಸವಪುರಾಣಗಳು ವಿಶಿಷ್ಟವಾದ ಲೋಕದೃಷ್ಟಿಯನ್ನು ಕಟ್ಟಿಕೊಡುತ್ತವೆ. ಈ ಕೃತಿ ಹಾಗೆ ಮಾಡುವುದಿಲ್ಲವೆನ್ನುವುದು ನಿಜ. ಆದರೆ ಕನ್ನಡ ಗ್ರಾಮೀಣ ದೈನಿಕಗಳ ವಿಪುಲ ವಿವರಗಳು ಇಲ್ಲಿ ಯಥೇಚ್ಛವಾಗಿ ಇಟ್ಟಾಡಿದಂತಿವೆ'[4] ಎಂಬ ಹೇಳಿಕೆಯನ್ನು ಗಮನಿಸಬಹುದು. ಪ್ರಸ್ತುತ ಅಧ್ಯಾಯದಲ್ಲಿ ವ್ಯಾಸ, ಪಂಪ ಹಾಗೂ ಕುಮಾರವ್ಯಾಸ ಭಾರತಗಳಲ್ಲಿ ಕಂಡುಬರದೇ ಇರುವ, ಜನಪದ ಮಹಾಭಾರತದಲ್ಲಿ ಮಾತ್ರ ಸೇರ್ಪಡೆಯಾಗಿರುವ ಉಪಕಥೆಗಳು ಹಾಗೂ ಪ್ರಸಂಗಗಳನ್ನು ಕುರಿತು ಸಮೀಕ್ಷಿಸಲಾಗಿದೆ.

ಮಹಾಭಾರತದ ಕಥೆ ಸುಪ್ರಸಿದ್ಧ ಶಂತನು-ಗಂಗೆಯರ ಪ್ರಕರಣದಿಂದಲೇ ಆರಂಭವಾದರೂ ಜನಪದ ಮಹಾಭಾರತ ಅದಕ್ಕೆ ದೈವಿಕ ಮೂಲವನ್ನು ಆರೋಪಿಸುತ್ತದೆ. ಆ ಪ್ರಕಾರ ಶಿವನೇ ಶಂತನು ಆಗಿ ಗಂಗೆಯೇ ಜನ್ಮತಳೆಯುವುದು ಇಲ್ಲಿನ ವಿಶೇಷ. ದೇವತೆಗಳು ಮಾನವ ವ್ಯವಹಾರದಲ್ಲಿ ನೇರ ಹಸ್ತಕ್ಷೇಪ ಮಾಡುವುದು ಕಾವ್ಯದಲ್ಲಿ ಸಾಮಾನ್ಯ ಆಶಯವೆನ್ನಬಹುದು. ಶಾಂತರಾಜನ ಒಪ್ಪಂದ, ಅಷ್ಟ ವಸುವಿನ ಪ್ರಸಂಗ ಯಥಾವತ್ತಾಗಿದ್ದರೂ ವ್ಯಾಸಭಾರತದಲ್ಲಿ ಎಂಟನೇ ಮಗ ಅಂದರೆ ಭೀಷ್ಮನನ್ನು

ಉಳಿಸುವುದಕ್ಕಾಗಿ ಶಂತನು ಒಪ್ಪಂದವನ್ನು ಉಲ್ಲಂಘಿಸಿದರೆ ಇಲ್ಲಿ ಮಗುವೇ ಪ್ರತಿಭಟಿಸಿರುವಂತೆ ಕಲ್ಪಿಸಲಾಗಿದೆ.

ಮುಂದೆ ಮತ್ಸ್ಯಗಂಧಿ ವಿಷಯದಲ್ಲೂ ಜನಪದ ಮಹಾಭಾರತ ಮೂಲವನ್ನೇ ಅನುಸರಿಸಿದ್ದರೂ ಅಲ್ಪಸ್ವಲ್ಪ ಬದಲಾವಣೆಗೊಳಗಾಗಿದೆ. ಮತ್ಸ್ಯಗಂಧಿಯನ್ನು ಇಲ್ಲಿ ದುರ್ಗಂಧದೇವಿಯೆಂದು ಸಂಭೋದಿಸುತ್ತಾ ಆಕೆ ದಾಸರಾಜನ ಸಾಕುಮಗಳು ಪರಾಶರರ ಸಮಾಗಮದಿಂದ ಸುಗಂಧದೇವಿಯಾಗಿ ಪರಿವರ್ತಿತಳಾಗುವಳು. ಮಂಜಿನ ತೆರೆಯ ಪ್ರಸಂಗ, ವೇದವ್ಯಾಸರ ಜನನ, ಶಾಂತರಾಜ-ಸುಗಂಧಿನಿಯರ ಭೇಟಿ, ಭೀಷ್ಮ ಪ್ರತಿಜ್ಞೆ ಮುಂತಾದವು ಯಾವ ಬದಲಾವಣೆಗಳಿಲ್ಲದೇ ಯಥಾವತ್ತಾಗಿವೆ. ಆದರೆ ಭೀಷ್ಮಪ್ರತಿಜ್ಞೆಯ ನಂತರ ಬುದ್ದಿ ಹೇಳಲು ಬಂದ ಕಾಮನನ್ನು ಸುಟ್ಟು ಭಸ್ಮಮಾಡಿ ಹಣೆಗಿಟ್ಟುಕೊಂಡದ್ದು ಇತರ ಮಹಾಭಾರತಕ್ಕಿಂತ ಭಿನ್ನವಾಗಿದ್ದು ನೂತನವಾಗಿ ಸೇರ್ಪಡೆಯಾದ ಪ್ರಸಂಗವಾಗಿದೆ. ಜೊತೆಗೆ ಶಿವನ ಕಾಮದಹನ ಪ್ರಸಂಗವನ್ನು ಹೋಲುವಂತಿದೆ. ಇದು ಭೀಷ್ಮನ ವ್ಯಕ್ತಿತ್ವವನ್ನು ಮತ್ತಷ್ಟು ಉಜ್ವಲಗೊಳಿಸುವುದರಲ್ಲಿ ಪರಿಣಾಮಕಾರಿಯಾಗಿದೆ. ಜನಪದಕವಿ ಈ ಪ್ರಸಂಗವನ್ನು ಮುಖ್ಯವೆನ್ನುವಂತೆ ನಿರೂಪಿಸುವುದಿಲ್ಲವಾದರೂ ಕಥೆಯ ವೇಗದಲ್ಲಿ ಇದು ಬಂದು ಓದುಗರ ಗಮನವನ್ನು ಸೆಳೆಯುವುದನ್ನು ಕಾಣಬಹುದಾಗಿದೆ. ಅಂದಿನಿಂದ ಗಂಗಾಪುತ್ರನಿಗೆ ಭೀಷ್ಮನೆಂಬ ಹೆಸರಾಯಿತು ಎಂದು ಹೇಳುವ ಜನಪದ ಕವಿ ಭೀಷ್ಮ ಎಂಬ ಹೆಸರಿಗೆ ನೀಡುವ ಕಾರ್ಯಕಾರಣ ಸಂಬಂಧ ಉಚಿತವೆನ್ನಬಹುದಾಗಿದೆ.

ಮಹಾಭಾರತದ ಎಲ್ಲಾ ಆಗುಹೋಗುಗಳಿಗೆ ಚಿತ್ರವೀರ ಹಾಗೂ ವಿಚಿತ್ರವೀರರ ಜನನ ಪ್ರಸಂಗವೇ ಮೊದಲಾಗುತ್ತದೆ. ಪಂಪ, ಕುಮಾರವ್ಯಾಸ ಭಾರತದಲ್ಲಿನ ಕಥೆಯಂತೆಯೇ ಇಲ್ಲಿಯೂ ಆ ಪ್ರಸಂಗ ಯಥಾವತ್ತಾಗಿದ್ದರೂ ಮುಂದಿನ ಕಥೆ ಮಾತ್ರ ಭಿನ್ನವಾಗಿದೆ. ಅಂಬೆಯ ಕಾರಣದಿಂದ ಪರಶುರಾಮ-ಭೀಷ್ಮರ ನಡುವೆ ಯುದ್ಧ ನಡೆಯುವುದನ್ನು ಯಥಾವತ್ತಾಗಿ ಚಿತ್ರಿಸಲಾಗಿದೆ. ಆದರೆ ಚಿತ್ರವೀರನ ಮರಣಾನಂತರ ತಾಯಿ ಸುಗಂಧಿನಿ ನಾದಿನಿ ಅಂಬಿಕೆಯ ದುಃಖ ನಿವಾರಣೆಗಾಗಿ ಭೀಷ್ಮ ಮಾಡಿದ ವ್ಯವಸ್ಥೆಯೊಂದರ ಬಗೆಗೆ ಅನುಮಾನ ತಳೆದು ಅನಂತರ ನಿಜತಿಳಿದು ಅಪರಾಧಿ ಭಾವದಿಂದ ವಿಚಿತ್ರವೀರ ಆತ್ಮಹತ್ಯೆ ಮಾಡಿಕೊಂಡಿದ್ದು ಜನಪದ ಮಹಾಭಾರತದಲ್ಲಿನ ನೂತನ ಪ್ರಸಂಗವಾಗಿದೆ. ಜನಪದರ ಆವರಣವನ್ನು ಕಟ್ಟಿಕೊಡಲು ಈ ಕಥಾಕಲ್ಪನೆಯನ್ನು ಕಥನಕಾರ ಮಾಡಿರಬಹುದೆಂದು ಊಹಿಸಬಹುದು. ಜನಪದ ಮಹಾಭಾರತದಲ್ಲಿ ಯಾವುದೂ ಸರಳವಾಗಿ

ಸಹಜವಾಗಿ ನಡೆಯುವುದಿಲ್ಲ. ಎಲ್ಲವುಗಳಿಗೂ ಸಂಬಂಧವಿರುತ್ತದೆ ಎಂಬುದನ್ನು ವಿವರಣಾತ್ಮಕವಾಗಿ ಹೇಳುವ ಕಥೆಗಳು ಪ್ರಸಂಗಗಳು ಬಂದು ಸೇರಿಕೊಳ್ಳುತ್ತದೆ.

ಜನಪದ ಮಹಾಭಾರತದ ಕೃಷ್ಣ ಕೇವಲ ಲೌಕಿಕ ಪಾತ್ರವಾಗಿರದೆ ಸಾಕ್ಷಾತ್ ವಿಷ್ಣುವಿನ ಅವತಾರವಾಗಿ ಕಂಡಿದ್ದಾನೆ. ಧೃತರಾಷ್ಟ್ರ ಹುಟ್ಟು ಕುರುಡನಾದುದಕ್ಕೆ ಜನಪದ ಮಹಾಭಾರತದಲ್ಲಿ ನಾಗರುಸಿಯ ಕಥೆಯನ್ನು ಹೆಣೆಯಲಾಗಿದೆ.

ನಾಗರುಸಿ ಪರ್ವದಲ್ಲಿ ಬರುವ ನಾಗರುಸಿಯ ಕಥೆ ಇಡೀ ಕೌರವರಾದಿ ಜನನಕ್ಕೆ ಮೂಲವಾಗಿದೆ. ಆ ಮೂಲಕ ಕೌರವರ ಜನನಕ್ಕೆ ಹಿನ್ನಲೆಯನ್ನು ಒದಗಿಸುತ್ತದೆ. ಸೌರಂಭ ರಾಜ್ಯದ ದೊರೆ ಸುವರ್ಣಕೇಶಿ ತನ್ನ ಐವರು ಮಕ್ಕಳೊಂದಿಗೆ ರಾಜ್ಯವಾಳುತ್ತಾ ಇರುತ್ತಿರಲು ಸುವರ್ಣಕೇಶಿಗೆ ತ್ರಿಲೋಕವನ್ನು ಗೆಲ್ಲಬೇಕೆಂಬ ಬಯಕೆಯುಂಟಾಗಿ ತಮ್ಮ ಸ್ವೇತಕೇಶಿ ಹಾಗೂ ಗುರು ಓಂಕಾರಕೇಶಿಯ ಜೊತೆಗೂಡಿ ದೇವಲೋಕಕ್ಕೆ ಲಗ್ಗೆಯಿಟ್ಟು ದೇವಾನುದೇವತೆಗಳನ್ನೆಲ್ಲಾ ಸೋಲಿಸಿ ಸೆರೆಗೈದು ಅವರನ್ನು ಕಾಯಲಿಕ್ಕೆ ತನ್ನ ಐವರು ಮಕ್ಕಳನ್ನು ನಿಯಮಿಸುತ್ತಾನೆ. ಹೆದರಿ ಪಲಾಯನ ಗೈದಂತಹ ದೇವತೆಗಳು ನಾರಾಯಣನ ಮೊರೆಹೋಗಲು, ನಾರಾಯಣ ಸೆರೆಯಲ್ಲಿದ್ದ ದೇವತೆಗಳನ್ನು ಬಿಡಿಸುವೆನೆಂದು ಮೋಹಿನಿಯ ವೇಷವನ್ನು ಧರಿಸಿ ಸುವರ್ಣಕೇಶಿಯ ಮಕ್ಕಳನ್ನು ಆಕರ್ಷಿಸುವಂತೆ ನಟಿಸುತ್ತಾನೆ. ಮೋಹಿನಿಯ ರೂಪಕ್ಕೆ ಮರುಳಾದ ಐವರು ಮೋಹಿನಿಯನ್ನು ಪಡೆಯಲು ಆಕೆಯ ಮಾತಿನಂತೆ ಪರಸ್ಪರ ಕಾದಾಡಿ ಎಲ್ಲರೂ ಹತರಾಗುತ್ತಾರೆ. ನಾರಾಯಣ ಬಂಧನದಲ್ಲಿದ್ದ ದೇವಾನುದೇವತೆಗಳನ್ನು ಬಿಡುಗಡೆಗೊಳಿಸುತ್ತಾನೆ.

ಇತ್ತ ಸುವರ್ಣಕೇಶಿಯು ತನ್ನ ಮಕ್ಕಳು ಸತ್ತ ವಿಷಯವನ್ನು ಕೇಳಿ ಅದಕ್ಕೆ ಕಾರಣವಾದ ಮೋಹಿನಿವೇಷದ ನಾರಾಯಣನನ್ನು ಕೊಲ್ಲಬೇಕೆಂದು ಅದಕ್ಕೆ ಬೇಕಾದ ಶಕ್ತಿಯನ್ನು ಪಡೆಯಲು ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ಬ್ರಹ್ಮನಿಂದ ನೂರಾವೊಂದು ಮಕ್ಕಳನ್ನು ಅದರಲ್ಲೂ ನಾರಾಯಣನನ್ನು ಕೊಲ್ಲುವಂತಹ ಮಕ್ಕಳನ್ನು ವರ ಬೇಡುತ್ತಾನೆ. ಅದಕ್ಕೆ ಬ್ರಹ್ಮನು ನಾರಾಯಣನನ್ನು ಕೊಲ್ಲಲು ಸಾಧ್ಯವಿಲ್ಲ, ಆದರೆ ಅವನಿಂದ ನಿನ್ನ ಮಕ್ಕಳನ್ನು ಉಳಿಸುವಂತೆ ವರ ನೀಡುವೆ; ಆದರೆ ನೀನು ನೂರು ಮಕ್ಕಳು ಶೂರರಾಗಿ ಹುಟ್ಟುವವರೆಗೂ ಶುದ್ಧ ಮನಸ್ಸಿನಿಂದ ವ್ರತವನ್ನಾಚರಿಸಬೇಕೆಂದು ಹೇಳುತ್ತಾನೆ.

ಒಂದು ದಿನ ಸುವರ್ಣಕೇಶಿ ತನ್ನ ಮಡದಿ ಚಿತ್ರಾಂಗಿಯ ಜೊತೆಯಲ್ಲಿ ವಿಹಾರಕ್ಕೆಂದು ನಾಗರುಸಿಯ ಆಶ್ರಮಕ್ಕೆ ಬರಲು ಋಷಿಯು ನಾರಾಯಣನ ಧ್ಯಾನದಲ್ಲಿರುವಾಗ ಸುವರ್ಣಕೇಶಿಯ ಹೆಂಡತಿ ನನ್ನ ಮಕ್ಕಳನ್ನು ಕೊಂದ ಪಾಪಿ ನಾರಾಯಣನ ಹೆಸರು ಹೇಳುವ ಇವನನ್ನು ಸುಮ್ಮನೆ ಬಿಡಬ್ಯಾಡಿ ಎಂದು ಹೇಳಲು ರಾಜನು ಕತ್ತಿಯಿಂದ ಋಷಿಯ ಕಣ್ಣನ್ನು ಚುಚ್ಚಿದಾಗ ಸಿಟ್ಟುಗೊಂಡ ಮುನಿಗಳು 'ಅಯ್ಯೋ ಪಾಪಿ ನನ್ನ ಕಣ್ಣುಗಳ ಚುಚ್ಚಿ ಕುರುಡು ಮಾಡಿದ ನೀನು ಮುಂದಿನ ಜನ್ಮಕ್ಕೆ ಹುಟ್ಟು ಕುರುಡನಾಗಿ ಕೆಟ್ಟ ಮಕ್ಕಳ ತಂದೆಯಾಗು' ಎಂದು ಶಾಪ ನೀಡಿದರು. ಇದರಿಂದ ಚಿತ್ರಾಂಗಿ ಇನ್ನು ಅಪಹಾಸ್ಯ ಮಾಡುತ್ತಾ ಅವರ ಜಡೆಯೆಳೆದು ಅಪಮಾನಿಸಿದಾಗ ಋಷಿಗಳು ನಾಗನೆಂದು ಕರೆಯಲು ಹುತ್ತದಿಂದ ಘಟಸರ್ಪವೊಂದು ಹೊರಬಂದು ಸುವರ್ಣಕೇಶಿಯನ್ನು ಕಚ್ಚಿ ಕೊಂದಿತು. ಈ ಭಯಂಕರ ದೃಶ್ಯವನ್ನು ಕಂಡ ಚಿತ್ರಾಂಗಿ ಮೂರ್ಛೆಹೋದಾಗ ಸರ್ಪ ಅವಳ ಬಾಯಿಯ ಮೂಲಕ ಉದರ ಸೇರಿ ಅಲ್ಲೇ ನೂರೊಂದು ಮೊಟ್ಟೆಯನ್ನಿಟ್ಟು ಹೊರಬಂದಿತು. ಅನಂತರ ಚಿತ್ರಾಂಗಿ ದೇಹವು ಭಗ್ಗನೆ ಹತ್ತಿಕೊಂಡು ಧಗಧಗನೆ ಉರಿದು ಬೂದಿಯಾಯಿತು.

ಅಣ್ಣನ ಸಾವಿನ ಸುದ್ದಿಯನ್ನು ಕೇಳಿದ ತಮ್ಮ ಸ್ವೇತಕೇಶಿ ನಾಗರುಸಿಯನ್ನು ಕೊಲ್ಲಲೆತ್ನಿಸಿದಾಗ ಮುನಿಯ ಹೆಂಡತಿಯಾದ ನಾಗವೇಣಿ ತಡೆಯಲು ಸ್ವೇತಕೇಶಿ ಅವಳನ್ನು ಹಿಡಿದು ಶೀಲಭಂಗ ಮಾಡಲೆತ್ನಿಸಿದಾಗ ನಾಗರುಸಿಗಳು ಕೋಪಗೋಂಡು 'ಪಾಪಿಗಳೆ ನೀವು ಮಾನವರಾಗಿ ಹುಟ್ಟಿ; ಪರರ ಹೆಂಡತಿಯ ಬಯಸಿದ ನಿಮಗೆ ಮಾನವರಾದಾಗ ನಿಮ್ಮಿಬ್ಬರಿಗೂ ಸಂಸಾರ ಸುಖ ಅನ್ನುವಂತದು ಇಲ್ಲದಂತಾಗಲಿ' ಎಂದು ಶಾಪಕೊಟ್ಟು ಅವನನ್ನು ಸುಟ್ಟು ಭಸ್ಮ ಮಾಡಿದರು. ಹೀಗೆ ನಾಗರುಸಿಯಿಂದ ಶಾಪ ಪಡೆದ ಸುವರ್ಣಕೇಶಿ ಹಾಗೂ ಸ್ವೇತಕೇಶಿಯೇ ಧೃತರಾಷ್ಟ್ರ ಹಾಗೂ ಪಾಂಡುವಾಗಿ ಜನಿಸಿದರೆಂದು ಜನಪದರು ಧೃತರಾಷ್ಟ್ರ, ಪಾಂಡುವಿನ ಜನನವನ್ನು ಪುರಾಣಕ್ಕೆ ಕೊಂಡ್ಯೊಯ್ಯದಿರುವುದನ್ನು ಕಾಣಬಹುದು. ಇದು ಸ್ವಲ್ಪಮಟ್ಟಿಗೆ ಶುಂಭ ನಿಶುಂಭರ ಕಥೆಯನ್ನು ಹೋಲುವಂತಿದೆ. ಜೊತೆಗೆ ಇಲ್ಲಿನ ಪಾತ್ರಗಳೆಲ್ಲವೂ ಒಂದಲ್ಲ ಒಂದು ಕಾರಣದಿಂದಾಗಿ ದೇವಲೋಕದಿಂದ ಇಳಿದು ಭೂಲೋಕದಲ್ಲಿ ಜನ್ಮತಳೆಯುತ್ತವೆ. ಧೃತರಾಷ್ಟ್ರ-ಪಾಂಡು ಕೌರವರ ಜನನಕ್ಕೆ ಕಾರಣವಾದ ಹಿನ್ನಲೆಯನ್ನು ಹೇಳುವ ನಾಗರುಸಿಯ ಈ ಕಥೆ ಒಂದು ಉಪಕಥೆಯಂತಿದ್ದು ಓದುಗರ ಗಮನವನ್ನು ಸೆಳೆಯುತ್ತದೆ. ಜೊತೆಗೆ ದುರ್ಯೋಧನನ ಸರ್ಪಮತ್ಸರಕ್ಕೂ ವಿವರಣೆ ನೀಡುತ್ತದೆ.

ಜನಪದ ಮಹಾಭಾರತದಲ್ಲಿ ದ್ರೌಪದಿಯ ಪಂಚಪತಿತ್ವಕ್ಕೂ ಹಾಗೂ ಪಾಂಡವರ ಜನನಕ್ಕೂ ಶಿವ-ಪಾರ್ವತಿಯರ ದೈವಿಕ ಹಿನ್ನಲೆಯನ್ನು ಆರೋಪಿಸಲಾಗಿದೆ. ತಾಮ್ರಕೇಶಿ ಶಿವನನ್ನು ಕುರಿತು ತಪಸ್ಸು ಮಾಡಿ ಶಿವನಿಂದ ತಾನು ಯಾರ ತಲೆಯ ಮೇಲೆ ಕೈಯಿಡಲು ಅವರು ಸುಟ್ಟು ಭಸ್ಮವಾಗುವಂತಹ ವರ ಪಡೆದು ಪರೀಕ್ಷೆಗಾಗಿ ಶಿವನ ತಲೆಯ ಮೇಲೆಯೇ ಕೈಯಿಡಲು ಹೋದಾಗ ಶಿವ ಪರಾರಿಯಾಗುತ್ತಾನೆ. ಕಂಗಾಲದ ಪಾರ್ವತಿ ಬ್ರಹ್ಮನನ್ನು ಪತಿದೇಹಿ ಎಂದು ಐದು ಸಲ ಬೇಡಿದಾಗ ಅದರಂತೆ ವರ ನೀಡುತ್ತಾನೆ. ಶಿವನೇ ತನ್ನ ಒಟ್ಟು ಶಕ್ತಿಯ ಭಾಗವೇ ಆದ ಯಮ, ವಾಯು, ಇಂದ್ರ, ಅಶ್ವಿನಿದೇವತೆಗಳ ರೂಪದಲ್ಲಿ ಅವಳಿಗೆ ಮುಂದಿನ ಜನ್ಮದಲ್ಲಿ ಗಂಡನಾಗಿ ಹುಟುತ್ತಾನೆ. ಹೀಗೆ ದ್ರೌಪದಿ ಹಾಗೂ ಪಾಂಡವರ ಹುಟ್ಟಿಗೂ ಜನಪದರು ತಮ್ಮದೇ ಆದ ಹಿನ್ನಲೆಯನ್ನು ಕಲ್ಪಿಸಿಕೊಂಡಿರುವುದು. ಅದರಲ್ಲೂ ಎಲ್ಲಾ ಅಂಶಗಳಲ್ಲೂ ಶಿವನ ಪಾರಮ್ಯವನ್ನೇ ಎತ್ತಿ ಹಿಡಿಯಲು ಹೊರಟಿರುವುದು ವಿಶೇಷವೆನಿಸುತ್ತದೆ.

ಜನಪದ ಮಹಾಭಾರತದ ಕಾವ್ಯದುದ್ದಕ್ಕೂ ಶೂದ್ರ ಸಮುದಾಯದ ಸಾಂಸ್ಕೃತಿಕ ಆವರಣದ ಹೂರಣವೇ ತುಂಬಿಕೊಂಡಿದೆ. ಇಲ್ಲಿ ಕುಂತಿಯ ಹುಟ್ಟು, ಬೆಳವಣಿಗೆ, ಮದುವೆ, ಅನಂತರದ ಬವಣೆ ಎಲ್ಲವೂ ಕೃಷಿಕ ಸಮುದಾಯದ ಅಭಿವ್ಯಕ್ತಿಯೇ ಆಗಿದೆ. ಕುಂತಿ ನೆಲದ ಮಗಳು, ಧಾನ್ಯಲಕ್ಷ್ಮಿಯ ರೂಪ. ಈ ನೆಲಕ್ಕೆ ಬಗೆಬಗೆಯ ಧಾನ್ಯಗಳನ್ನು ದೇವಲೋಕದಿಂದ ತರಿಸಿದವಳು. ರಾಜನ ಪುತ್ರಿಯಾದರೂ ರೈತನ ಮಗಳೇ, ಅವಳಪ್ಪ ಬೇಸಾಯಗಾರ. ಪ್ರಕೃತಿಮಾತೆಯನ್ನು ಜನಪದರು ಅರ್ಥೈಸಿಕೊಂಡಿರುವ ರೀತಿ ಅನನ್ಯವಾಗಿದೆ. 'ಮೇಲೆ ಮಳೆಕರೆಯೋ ಆಕಾಶದಮ್ಮ ತಾಯಿ; ಕೆಳಗೆ ಸಾರವ ಕೊಡುವ ಪಾತಾಳದಮ್ಮ ತಾಯಿ; ನೆಲದ ಮೇಲೆ ನಮಗೆ ಫಲಕೊಡುವ ಭೂಮಿ ತಾಯಿ' ಇಂಥ ಮೌಲ್ಯಗಳ ನಡುವೆ ಬಾಳುತ್ತಿರುವ ಜನಪದ ಸಂಸ್ಕೃತಿ ಶ್ರಮ ಮತ್ತು ಸತ್ಯಗಳನ್ನು ಆಗಾಧವಾಗಿ ಗೌರವಿಸುತ್ತದೆ. ಸುಳ್ಳು ತಟವಟ ಗುಣವನ್ನು ಒಪ್ಪುವುದಿಲ್ಲವೆನ್ನುವುದನ್ನು ಬ್ರಹ್ಮರಿಗೆ ಅಹಂಕಾರ ಹುಟ್ಟಿದ ಪರ್ವದಲ್ಲಿ ಬರುವ ವೀಳ್ಯೆದೆಲೆ ಸರ್ಪರಾಜ ಹಾಗೂ ಕೇತಕಿರಾಜನಿಗೆ ಶಾಪಕೊಡುವ ಕಥೆ ಬಿಂಬಿಸುತ್ತದೆ.

ಒಮ್ಮೆ ಬ್ರಹ್ಮನ ಜೊತೆ ಸಂವಾದ ನಡೆಸುವ ವೇದಗಳು 'ನೀನು ತ್ರಿಷ್ಣೆಗೆ ಹೊರತು ರಕ್ಷಣೆಗೆಲ್ಲ' ಎಂದು ನಗಾಡಿದವು. ಇದರಿಂದ ಬ್ರಹ್ಮನಿಗೆ ಅಸಾಧ್ಯ ಸಿಟ್ಟು ಬಂದು ತಾನು ವಿಷ್ಣುವಿಗಿಂತ ದೊಡ್ಡವನೆಂದು ಅಹಂಕಾರ ಮೂಡಲು ಬ್ರಹ್ಮ, ವಿಷ್ಣು ಇವರಲ್ಲಿ ಅಧಿಕರಾರು ಎಂಬುದನ್ನು ಪರೀಕ್ಷಿಸಲು ಶಿವನು ತನ್ನ ಬೆವರಿನಿಂದ ಗೊಂಬೆ ಮಾಡಿ ಅದಕ್ಕೆ ಶಕ್ತಿ ತುಂಬಿ, ವಿಷ್ಣುವನ್ನು ಗೊಂಬೆಯ

ಸೊಂಟದಿಂದ ಕೆಳಕ್ಕೆ ಪಾದ ಮುಟ್ಟಿ ಬರುವಂತೆಯೂ, ಬ್ರಹ್ಮನನ್ನು ಗೊಂಬೆಯ ಸೊಂಟದಿಂದ ಮೇಲಕ್ಕೆ ಶಿರವನ್ನು ಮುಟ್ಟಿ ಬರುವಂತೆಯೂ ತಿಳಿಸುತ್ತಾನೆ. ವಿಷ್ಣು ಗೊಂಬೆಯ ಸೊಂಟದ ಕೆಳಗಿನ ಮಹತ್ತು, ವಿಸ್ತಾರಗಳಿಗೆ ಬೆರಗಾಗಿ ಅದರ ಪಾದ ಮುಟ್ಟಲು ತನ್ನಿಂದ ಸಾಧ್ಯವಾಗಲಿಲ್ಲವೆಂದು ಶಿವನಿಗೆ ಸತ್ಯವನ್ನೇ ತಿಳಿಸುತ್ತಾನೆ. ಆದರೆ ಬ್ರಹ್ಮ ಗೊಂಬೆಯ ಮೇಲ್ಭಾಗವನ್ನು ಕ್ರಮಿಸಲು ಯತ್ನಿಸಿ ಶಿರವನ್ನು ಮುಟ್ಟಲು ಅಸಮರ್ಥನಾಗುತ್ತಾನೆ. ಆದರೆ ಅದನ್ನು ಒಪ್ಪಿಕೊಳ್ಳದೇ ಸುಳ್ಳು ಹೇಳಲು ಸಿದ್ಧನಾಗಿ ಕೇತಕಿರಾಜ, ಕಾಮಧೇನು, ಸರ್ಪರಾಜ ಮತ್ತು ವಿಳ್ಯೆದೆಲೆಗಳನ್ನು ಸಾಕ್ಷಿಗಳನ್ನಾಗಿ ಶಿವನ ಮುಂದೆ ನಿಲ್ಲಿಸಿ ತಾನು ಗೊಂಬೆಯ ಶಿರ ನೋಡಿ ಬಂದಿರುವನೆಂದೂ ಇವು ಸಾಕ್ಷಿಗಳೆಂದೂ ತೋರುತ್ತಾನೆ. ಸತ್ಯ ಬಯಲಾಗಿ ಬ್ರಹ್ಮನ ಆಟ ಬಹಿರಂಗಗೊಂಡು ಬ್ರಹ್ಮನು ಶಾಪಕ್ಕೊಳಗಾಗುತ್ತಾನೆ. ಸುಳ್ಳು ಸಾಕ್ಷಿ ಹೇಳಿದ ಕೇತಕಿರಾಜ ಮುಳ್ಳು ಹಿಡಿದ ತಾಳೆಮರವಾಗುವಂತೆಯೂ, ಕಾಮಧೇನು ಮುದಿಕಳೆ ಪಡೆಯುವಂತೆಯೂ, ಸರ್ಪರಾಜನಿಗೆ ಜನ ಕಂಡಕಂಡಲ್ಲಿ ಹೊಡೆದು ಸಾಯಿಸುವಂತೆಯೂ ನಾಲಿಗೆ ಸೀಳಾಗುವಂತೆಯೂ ವೀಳ್ಯೆದೆಲೆ ತುದಿ ತೊಟ್ಟು ಚಿವುಟಿ ಅಗಿದು ಉಗಿಯುವಂತೆಯೂ ಶಾಪ ಪಡೆಯುತ್ತವೆ. ಈ ಅಂಶಗಳು ಜನಪದರು ತಮ್ಮ ನಿತ್ಯ ಬದುಕಿನ ರೀತಿನೀತಿಯನ್ನು ಅರ್ಥ ಮಾಡಿಕೊಂಡ ಬಗೆಯನ್ನು ತಿಳಿಸುತ್ತವೆ. ಜೊತೆಗೆ ಸುಳ್ಳು ಹೇಳುವುದರಿಂದ ಸಿಗುವ ಶಿಕ್ಷೆಯನ್ನು ಹೇಳುವ ಮೂಲಕ ಸಮಾಜದಲ್ಲಿ ಜನರು ಸತ್ಯ, ನ್ಯಾಯ, ನೀತಿಗಳನ್ನು ಪರಿಪಾಲಿಸುವಂತೆ ಮಾರ್ಗದರ್ಶನ ಮಾಡುವ ಕಾರ್ಯವನ್ನು ಜನಪದ ಕವಿಗಳು ಪರೋಕ್ಷವಾಗಿ ಕಥೆಗಳ ಮೂಲಕ ನಿರೂಪಿಸುವುದನ್ನು ಕಾಣಬಹುದು.

ಕುಂತಿ ಜನಪದರ ಆಸಕ್ತಿಯ ಕೇಂದ್ರಬಿಂದು, ಆಕೆ ಭೂಮಿಯ ಮಗಳು. ನೇಗಿಲ ಕುಳಕ್ಕೆ ಅವಳು ಸಿಕ್ಕಿದಳೆಂಬ ಸಂದರ್ಭವಿರುವುದರಿಂದ ಈ ಪ್ರಸಂಗವನ್ನು ರಾಮಾಯಣದ ಸೀತಾ ಜನನ ವೃತ್ತಾಂತದಿಂದ ತೆಗೆದುಕೊಂಡಿರುವಂತಿದೆ. ಇದಕ್ಕೆ ಪೂರಕವಾಗಿ ಇಂದಿಗೂ ಮೈಸೂರಿನ ಸುತ್ತಮುತ್ತ ಹೆಗ್ಗಡದೇವನಕೋಟೆ, ಪಿರಿಯಾಪಟ್ಟಣ, ಹುಣಸೂರಿನ ಕಡೆಯಲ್ಲಿ ಕುಂತಿ ಪೂಜೆಯನ್ನು ಆಚರಿಸುವುದನ್ನು ಕಾಣಬಹುದು. ಭೋಜರಾಜನು ಭೂಮಿತಾಯಿಗೆ ನಮಿಸಿ ಶ್ರದ್ಧಾಭಕ್ತಿಯಿಂದ ನೇಗಿಲು ಹೂಡಿದ. ಅವನು ಉಳುತ್ತಿದ್ದ ನೇಗಿಲ ಕುಳಕ್ಕೆ ಸಿಕ್ಕಿದ ಪೆಟ್ಟಿಗೆಯನ್ನು ತೆಗೆದು ನೋಡಿದರೆ ಅದರಲ್ಲಿ ಧನಲಕ್ಷ್ಮಿ, ಧಾನ್ಯಲಕ್ಷ್ಮಿ, ಭಾಗ್ಯಲಕ್ಷ್ಮಿ, ರಾಜ್ಯಲಕ್ಷ್ಮಿ ಹಾಗೂ ಸಂತಾನಲಕ್ಷ್ಮಿ ಎಂಬ ಐದು ಹೆಣ್ಣುಮಕ್ಕಳಿದ್ದವು. ಮಕ್ಕಳಿಲ್ಲದ ರಾಜ ಐವರಲ್ಲಿ ಧಾನ್ಯಲಕ್ಷ್ಮಿಯಾದ ಕೊಂತಮ್ಮನನ್ನು ಸ್ವೀಕರಿಸುತ್ತಾನೆ. ಹೀಗೆ ಕುಂತಿ ಭೂಮಿ ತಾಯಿಯ ಮಗಳು ಧಾನ್ಯಲಕ್ಷ್ಮಿಯ ಪ್ರತಿರೂಪ. ಆಕೆಯಿಂದಲೇ ಭೂಮಿಯಲ್ಲಿ ಧಾನ್ಯ ಸಮೃದ್ಧಿಯಾಗಿ ಬೆಳೆಯುತ್ತದೆಂಬ ಜನಪದ ಕಲ್ಪನೆ ವಿಶೇಷವಾಗಿದ್ದು ಭೂಮಿ ಮೇಲಿರುವ

ಅವರ ನಂಬಿಕೆ ಮತ್ತು ಭಕ್ತಿ ಶ್ರದ್ಧೆಯನ್ನು ಬಿಂಬಿಸುತ್ತದೆ. ಶ್ರದ್ಧೆಯಿಂದ ದುಡಿಯುವವನನ್ನು ಭೂಮಿ ಎಂದಿಗೂ ಕೈಬಿಡುವುದಿಲ್ಲವೆಂಬ ತತ್ವ ಇಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಹಾಗೆಯೇ ಕುಂತಿಯ ಗಂಡನಾದ ಪಾಂಡುವಿಗೆ ಶಾಪ ನೀಡುವುದಿಲ್ಲಿ ಶಿವಪಾರ್ವತಿಯರು. ಅವರಿಬ್ಬರು ಹುಲ್ಲೆಗಳಾಗಿ ಕ್ರೀಡೆಯಲ್ಲಿ ತೊಡಗಿದಾಗ ಪಾಂಡುವಿನ ಬಾಣದಿಂದ ಗಂಡು ಜಿಂಕೆ ಮರಣ ಹೊಂದುತ್ತದೆ. ಇದರಿಂದ ನೊಂದ ಹೆಣ್ಣು ಹುಲ್ಲೆ ರೂಪದ ಪಾರ್ವತಿ ಪಾಂಡುವಿಗೆ ಶಪಿಸುತ್ತಾಳೆ.

ಜನಪದ ಮಹಾಭಾರತದ ಪ್ರಕಾರ ಕೌರವರ ಸರ್ವನಾಶಕ್ಕೆ ಒಂದು ಕಡೆ ಕೃಷ್ಣ ಪ್ರಯತ್ನಿಸಿದರೆ ಮತ್ತೊಂದು ಕಡೆ ಅದೇ ಕಾರ್ಯಕ್ಕೆ ಶಕುನಿ ಪ್ರಯತ್ನಿಸುತ್ತಾನೆ. ಈ ನಿಮಿತ್ತದಿಂದಾಗಿ ಕೃಷ್ಣ ಒಂದು ಶಕ್ತಿಯಾದರೆ ಶಕುನಿ ಮತ್ತೊಂದು ಶಕ್ತಿಯಾಗುತ್ತಾನೆ. ವ್ಯತ್ಯಾಸವೆಂದರೆ ಕೃಷ್ಣ ಏಳಿಗೆಯ ಕ್ರಿಯೆಗೆ ಸಂಕೇತವಾದರೆ ಶಕುನಿ ಅವನತಿಯ ಕ್ರಿಯೆಗೆ ಪ್ರತೀಕನಾಗುತ್ತಾನೆ. ಜನಮಾನಸದಲ್ಲಿ ಬಹಳ ಕಾಲದಿಂದ ಜನಪ್ರಿಯವಾಗಿರುವ ಶಕುನಿಯ ಮೂಲ ಪ್ರಕರಣಕ್ಕೆ ಜನಪದ ಮಹಾಭಾರತ ವಿಶೇಷ ಅಭಿವ್ಯಕ್ತಿ ನೀಡಿದೆ. ಇಲ್ಲಿ ಸೇಡಿನ ಶಕುನಿ ಪರ್ವವೆಂದು ಕರೆದು ಅವನ ಸೇಡಿಗೆ ಹಿನ್ನಲೆಯನ್ನು ಜನಪದ ಕವಿ ನೀಡುತ್ತಾನೆ.

ಭೀಮ ಮತ್ತು ಉರಿಸಿಂಗಿಯರ ವಿವಾಹದ ಕಥೆ ಯಕ್ಷಗಾನಶೈಲಿಯಲ್ಲಿದೆ. ಉರಿಸಿಂಗಿ ಭೀಮರ ಸಮಾಗಮದಿಂದ ಭದ್ರಬಾಹುವಿನ ಜನನವಾಗುತ್ತದೆ. ಪುಟ್ಟಕಂದ ಪಾತಾಳದಿಂದ ಭೂಮಿಗೆ ಹಿಂದಿರುಗಲು ಸಿದ್ಧನಾದಾಗ ತಂದೆ ಭೀಮನನ್ನು ಭದ್ರವಾಗಿ ತನ್ನ ಬಾಹುಗಳಿಂದ ಹಿಡಿದುಕೊಂಡಿದ್ದರಿಂದ ಆ ಮಗುವಿಗೆ ಭದ್ರಬಾಹು ಎಂಬ ಹೆಸರಾಯಿತಂತೆ. ಭದ್ರಬಾಹುವಿನ ಪಾತ್ರ ಜನಪದ ಮಹಾಭಾರತಕ್ಕೆ ಹೊಸ ಆಯಾಮವನ್ನೇ ಒದಗಿಸಿಕೊಡುತ್ತದೆ.

ಭದ್ರಬಾಹು ಭೂಲೋಕಕ್ಕೆ ಬಂದು ಭೂಮಿತಾಯಿಗೆ ನಮಸ್ಕರಿಸಿ ಕತ್ತಿ ಮಸೆಯುತ್ತಿದ್ದ. ಕೃಷ್ಣ ಇದನ್ನು ನೋಡಿದ. ಹಾಲು ಸಮುದ್ರದಲ್ಲೊಂದು ಕಾಲು, ಜಾಲ ಸಮುದ್ರದಲೊಂದು ಕಾಲು ಹಾಕಿಕೊಂಡು ಕತ್ತಿ ಮಸೆಯುತ್ತಿರಲು ಆತನ ಹತ್ತಿರ ಭಿಕ್ಷುಕನಂತೆ ನಿಂತ ಪರಮಾತ್ಮ ನೀನ್ಯಾರು? ಎಂದ. 'ನಾನು ಭೀಮಸೇನನ ಮಗ ಭದ್ರಬಾಹು ಹದಿನೆಂಟು ದಿನ ಯುದ್ಧವನ್ನು ಒಂದು ದಿನದಲ್ಲೇ ಮುಗಿಸುತ್ತೇನೆ' ಎಂದ.

'ಒಂದೇ ದಿನದಲ್ಲಿ ಹ್ಯಾಗೆ ಮಾಡ್ತೀ?' ಎನ್ನಲು; ಆಗ ಆತ ಶುಕ್ರಾಚಾರ್ಯರನೆನೆದು ವಜ್ರಗಿರಿಗೆ ಒಂದು ಏಟು ಹೊಡೆದ. ಅದು ಪುಡಿ ಪುಡಿಯಾಯಿತು. ಇಬ್ಬರೂ ಹಸ್ತಿನಾವತಿಗೆ ಹೊರಟರು. ಪಾಂಡವ-ಕೌರವರ ಕಥೆ ಹೇಳಿದ. 'ನೀನು ರಣಗಂಬ ಕಾಯ್ತಿರು. ನಾನು ನಿಮ್ಮ ತಂದೆಗೇಳ್ತೀನಿ' ಎಂದು ಹೊರಟ. ಕೃಷ್ಣ ಭೀಮನಿಗೆ ಹೇಳಿದ 'ಯಾವನೋ ರಣಗಂಬ ಕೀಳ್ತಿದ್ದಾನೆ. ಆತನನ್ನು ಬಲಿಕೊಟ್ಟರೆ ನಿಮಗೆ ಜಯ' ಎಂದರು.

ಭೀಮ ಆತನನ್ನು ಗದೆಯಲ್ಲಿ ಹೊಡೆದ. 'ಭೀಮನ ನೋಡಲು ಬಂದು ಹೀಗಾಯ್ತಲ್ಲಾ ಭೀಮಸೇನನ ನೋಡದೆ ಸಾಯುವಂತಾಯ್ತಲ್ಲ, ತಾಯಿಗೆ ಕೊಟ್ಟ ಮಾತು ಉಳಿಸಲಿಲ್ಲವಲ್ಲಾ' ಎಂದಾಗ ಭೀಮ ಗದೆ ಬೀಸಾಡಿ 'ನೀನು ಮೊದಲೇ ಹೇಳದೆ ಪ್ರಾಣ ಹೋಗುವಾಗ ಹೇಳ್ತಿಯಲ್ಲಾ' ಎಂದು ಶೋಕ ಮಾಡುತ್ತಾನೆ. ಪಾಂಡವರಿಗೂ ಕೌರವರಿಗೂ ನಡೆವ ಯುದ್ಧ ನೋಡಬೇಕು. ಅಲ್ಲಿವರೆಗೂ ನಿನ್ನ ಪ್ರಾಣ ಉಂಟು ರಣಗಂಬದಲ್ಲಿ ಕೂತು ನೋಡು ಎಂದು ಹೇಳಿ ಪರಮಾತ್ಮ ಹೊರಟುಹೋದ.

ಈ ಪಾತ್ರ ಪುರಾಣನಾಮಚೂಡಾಮಣಿಯಲ್ಲಿ ಬರುವ ಊರ್ಧ್ವಮುಖ ಅಥವಾ ರೋಮಹರ್ಷಣನ ಕಥೆಯನ್ನೇ ಹೋಲುತ್ತದೆ. ತಂದೆಯನ್ನು ಕೂಡಿಕೊಳ್ಳಲು ಬರುತ್ತಿದ್ದ ಉರಿಸಿಂಗಿಯ ಮಗ ಭದ್ರಬಾಹುವನ್ನು ಕೃಷ್ಣ ಕುತಂತ್ರದಿಂದ ಅವನ ತಂದೆಯಿಂದಲೇ ಕೊಲ್ಲಿಸಿದ. ತಾನು ಕೊಂದದ್ದು ತನ್ನ ಮಗನನ್ನು ಎಂದು ತಿಳಿದ ಭೀಮ ಅವನ ಕೋರಿಕೆಯಂತೆ ಮಹಾಭಾರತದ ಯುದ್ಧವನ್ನು ವೀಕ್ಷಿಸಲು ಶಿರವನ್ನು ಮಾತ್ರ ಜೀವಂತಗೊಳಿಸಿದ. ಮುಂದೆ ಕುರುಕ್ಷೇತ್ರವನ್ನು ಗೆದ್ದವರು ಯಾರೆಂಬ ಚರ್ಚೆ ಬಂದು ಇಡೀ ಯುದ್ಧವನ್ನು ನೋಡಿದ ಭದ್ರಬಾಹುವಿನ ಶಿರವನ್ನು ಕೇಳಲು ಆತ ದ್ರೌಪದಿಯೇ ಆದಿಶಕ್ತಿಯ ರೂಪದಿಂದ ಸೈನ್ಯವನ್ನು ನಾಶಪಡಿಸಿದ್ದನ್ನು ಕಂಡುದ್ದಾಗಿಯೂ ಇನ್ಯಾರ ಯುದ್ಧವೂ ನನ್ನ ಕಣ್ಣಿಗೆ ಬೀಳಲಿಲ್ಲ ಎನ್ನುವುದು, ಮೂಲಕ್ಕಿಂತ ಇಲ್ಲಿಯ ಕಥೆ ಭಿನ್ನವಾಗಿರುವುದನ್ನು ಕಾಣಬಹುದು. ಅದರ ಕುರುಹಿನಂತೆ ಈಗಲೂ ಮನೆಗಳ ದೃಷ್ಟಿನಿವಾರಣೆಗೆ ಶಿರವನ್ನು ಮಾತ್ರ ನೇತುಹಾಕುವುದನ್ನು ಕಾಣಬಹುದು.

ಜನಪದರಿಗೆ ಮಾಯ-ಮಂತ್ರ-ತಂತ್ರಗಳಲ್ಲಿ ಶ್ರದ್ಧೆ ಆಸಕ್ತಿಗಳಿರುವುದನ್ನು ಮಲೆಯಾಳಿ ಮಂತ್ರವಾದಿ ಕೊನುಗಯ್ಯನ ಪ್ರಸಂಗವೇ ನಿದರ್ಶನವಾಗಿದೆ. ಶಕುನಿಯ ಪ್ರೇರಣೆಯಿಂದ ದುರ್ಯೋಧನ ಪಾಂಡವರ ಮೇಲಿನ ಸೇಡಿಗಾಗಿ ಮಾಟ ಮಂತ್ರ ವಿದ್ಯೆಗೆ ಕೈ ಹಾಕುತ್ತಾನೆ. ಅವನ ಆದೇಶದಂತೆ ಕೇರಳದ ಮಂತ್ರವಾದಿ ಕೊನುಗಯ್ಯನೆಂಬುವನು ಒಂದು ಭೂತ ಸೃಷ್ಟಿ ಮಾಡಿ

ಪಾಂಡವರ ಮೇಲೆ ಕಾರ್ಯಾಚರಣೆ ನಡೆಸುತ್ತಾನೆ. ಆದರೆ ಅವನ ಪೆಡಂಭೂತ ಯಕ್ಷಪ್ರಶ್ನೆಯ ಸಂದರ್ಭದಲ್ಲಿ ಪಾಂಡವರನ್ನು ಮುಟ್ಟಲಾರದೆ ಹಿಂದಿರುಗಿ ಬಂದು ಕೊನುಗಯ್ಯನನ್ನೇ ತಿಂದು ಹಾಕುವುದು. ಇನ್ನು ವಿಶೇಷವೆಂದರೆ ಆ ಭೂತ ದುರ್ಯೋಧನನ ಹೆಗಲೇರಿ ಕುಳಿತು ಕಾಡುತ್ತಾ ಧರ್ಮರಾಯನ ಹೊಡೆತದಿಂದ ಅವನನ್ನು ಬಿಟ್ಟು ತೊಲಗುತ್ತದೆ. ಈ ಸಂದರ್ಭ ಜನಪದ ಗಾಯಕನ ಸ್ವೋಪಜ್ಞ ಕಲ್ಪನೆಗೆ ಒಂದು ನಿದರ್ಶನ. ಮೂಲ ಮಹಾಭಾರತದಲ್ಲಿಲ್ಲದ ಈ ಪ್ರಸಂಗ ಪಂಪನಲ್ಲಿಯೂ ಕಾಣಿಸಿಕೊಂಡಿದೆ.

ಅದೇ ಯಕ್ಷಪ್ರಶ್ನೆಯ ಸಂದರ್ಭದಲ್ಲಿ 'ಕನಕನ ಬೇಳ್ವೆ ತಗಳ್ದುದು ಕನಕನನ್(ಪ.ಭಾ. ೮-೪೪) ಅವನ ಪ್ರಕಾರ ಪಾಂಡವರನ್ನು ನಾಶಪಡಿಸಲು ದುರ್ಯೋಧನನ ಕೇಳಿಕೆಯಂತೆ ಕನಕಸ್ವಾಮಿ ಎಂಬ ವಾಮಾಚಾರಿ ಪಂಡಿತನು ಯಜ್ಞ ಮಾಡಿದನಂತೆ. ಆ ಯಾಗದಲ್ಲಿ ಕೀರ್ತಿಕೆ (ಕೃತಿಕಾ) ಎಂಬ ಉಗ್ರದೇವತೆಯೊಬ್ಬಳು ಪ್ರತ್ಯಕ್ಷಳಾಗುತ್ತಾಳೆ. ಅವಳಿಗೆ ಪಾಂಡವರ ನೆಲೆಯನ್ನು ತಿಳಿಸಲು ಅವರನ್ನು ಹುಡುಕಿಕೊಂಡು ಬಂದಾಗ ಸರೋವರದ ಬಳಿ ಅವರಲ್ಲಿ ನಾಲ್ಕು ಜನ ಸತ್ತುಬಿದ್ದಿದ್ದರು. ಅವರ ಹೆಣಗಳನ್ನು ತಿನ್ನಲು ಹೋದಾಗ ಅವರ ಸಾವಿಗೆ ಕಾರಣವಾದ ಯಕ್ಷದೇವತೆಯು ಪ್ರತ್ಯಕ್ಷವಾಗಿ ಅವಳನ್ನು ತಡೆಯುತ್ತದೆ. ಉಗ್ರದೇವತೆ ಈಗ ನಾನೇನು ಮಾಡಲಿ ಎಂದು ಪ್ರಶ್ನಿಸಿದಾಗ ಯಕ್ಷನು ನಿನ್ನ ಹುಟ್ಟಿಸಿದವನು ಯಾವನೋ ಅವನನ್ನೇ ಹೋಗಿ ತಿನ್ನು ಎನ್ನಲು ಅದರಂತೆ ಕೃತಿಕೆಯು ಕನಕನನ್ನು ಬೆನ್ನಟ್ಟಿ ಹೋಗಿ ತಿಂದುಹಾಕಿತು. ಆಮೇಲೆ ಕಥೆ 'ಕನಕನ ಬೇಳ್ವೆ ತಗುಳ್ದುದು ಕನಕನನ್' ಎಂದು ಜನಜನಿತ ನಾಣ್ಣುಡಿಯಾಯಿತು. ಈ ಪ್ರಸಂಗ ಮೂಲದಲ್ಲಿ ಯಾರದ್ದು ಎಂಬುದೇ ಸ್ಪಷ್ಟವಿಲ್ಲ. ಬಹುಶಃ ಪಂಪನೂ ಸಹ ಯಾವುದೋ ಒಂದು ಜನಪದ ಭಾರತದ ಆವೃತ್ತಿಯಿಂದಲೇ ಗ್ರಹಿಸಿರಬಹುದು. ಮಲೆಯಾಳಿ ಕೊನುಗಯ್ಯನೇ ಪಂಪನಲ್ಲಿ ಕನಕನೆಂದು ಸಂಸ್ಕೃತೀಕರಣಗೊಂಡಿರುವಂತೆ ಕಂಡು ಬರುತ್ತದೆ. ಇದೇ ಮಲೆಯಾಳದ ಗಡಿಸೀಮೆಯಲ್ಲಿದ್ದ ಗಾಯಕ ಸಿದ್ದಶೆಟ್ಟರು ಇಂಥ ಒಂದು ಪ್ರಸಂಗವನ್ನು ಸಮಯೋಚಿತವಾಗಿ ಬಳಸಿಕೊಂಡಿರುವಂತೆ ಕಾಣುತ್ತದೆ.

ಜನಪದ ಮಹಾಭಾರತದಲ್ಲಿ ಕಥೆಯನ್ನು ಜನಸಾಮಾನ್ಯರ ನೆಲೆಯಲ್ಲಿ ಬೆಳೆಸುವ, ಅಲ್ಲಿಗೆ ಕೊಂಡೊಯ್ಯುವ ಅನೇಕ ನೂತನ ಅಂಶಗಳನ್ನು ಜನಪದ ಕವಿಯಲ್ಲಿ ಕಾಣಬಹುದು. ಅರಗಿನ ಮನೆಯ ಉರಿಯಿಂದ ತಪ್ಪಿಸಿಕೊಂಡು ಬಂದು ಏಕಚಕ್ರನಗರದಲ್ಲಿ ಬಕಾಸುರನನ್ನು ವಧಿಸಿ ಸಂಬ್ರಾಸುರನ ಸಂಹಾರ ಮಾಡಿ ಮುಂದೆ ಬರುವಾಗ ಕುಂಬಾರ ಗುಂಡಯ್ಯನ ಪ್ರಸಂಗ, ಮುದ್ದೇಗೌಡನ ದರಕಾಸು ಭೂಮಿಯಲ್ಲಿ ದುಡಿಯುವ ಭೀಮ, ಅವನ ದುಡಿಮೆಗೆ ಮೆಚ್ಚಿ

ಹೊರುವಷ್ಟು ರಾಗಿ ಕೊಡುವ ಪ್ರಕರಣ ಅದರಿಂದ ಕುಪಿತನಾದ ಧರ್ಮರಾಯ ದಿನದ ಕೂಲಿಗಿಂತ ಹೆಚ್ಚು ಪಡೆಯುವುದು, ಅಧರ್ಮವೆಂದು ಹೇಳುವ ಮೂಲಕ ಕರ್ತವ್ಯ ಪ್ರಜ್ಞೆ, ದುಡಿಮೆ ಮತ್ತು ಪ್ರತಿಫಲಗಳ ಸಮಾನ ಹಂಚಿಕೆಯ ವಿವರಗಳು ಸುಂದರವಾಗಿ ಚಿತ್ರಣಗೊಂಡಿವೆ. ಮೌಲ್ಯ ಪ್ರತಿಪಾದನೆಯ ಪ್ರಾಮುಖ್ಯತೆಯನ್ನೇ ಆಧಾರವಾಗಿಟ್ಟುಕೊಂಡು ಜನಪದ ಕವಿ ಕಥಾಹಂದರವನ್ನು ಕಟ್ಟಿಕೊಡುವ ಪ್ರಯತ್ನದಲ್ಲಿ ಸಫಲನಾಗಿದ್ದಾನೆ. ಅದೆಷ್ಟು ಬದಲಾವಣೆಗಳು ಸ್ಥಳೀಯ ಭೌಗೋಳಿಕ ಸನ್ನಿವೇಶವನ್ನು ಬಿಚ್ಚಿಡುತ್ತವೆ. ಅರಗಿನ ಮನೆಯಿಂದ ಪಾರಾಗಿ ಬಂದು ತಾವು ಅಲ್ಪಕಾಲ ನೆಲಸಿದ ಊರಿಗೆ 'ಪಾಂಡವರಪುರ'ವೆಂದು ಹೆಸರಿಡಿ ಎಂದು ಕೇಳುವ ಮೂಲಕ ಅದು ಬಿತ್ತರಗೊಳ್ಳುತ್ತದೆ. ಶ್ರಮಿಕರ ಬದುಕನ್ನು ಕಟ್ಟಿಕೊಡುವ ಕವಿಗೆ ಬಕಾಸುರನನ್ನು ಕೊಂದ ಭೀಮ ಗರಡಿಮನೆಯಲ್ಲಿ ಮಲಗುವ ಮೂಲಕ ಅದೊಂದು ವಿಶೇಷವಾದ ವಿಷಯವಲ್ಲವೆಂದು ನಿರ್ಲಿಪ್ತನಾಗುತ್ತಾನೆ.

ಧರ್ಮರಾಯನ ಅಹಂನ ಅನಾವರಣವನ್ನು ಪಗಡೆಯಾಟದ ಮೂರನೆಯ ಪ್ರಸಂಗದಲ್ಲಿ ದ್ರೌಪದಿಯ ಆಟವನ್ನು ಒಪ್ಪದಿರುವಲ್ಲಿ ನೋಡಬಹುದು ಇದು ಗಂಡಸರ ಮನಸ್ಥಿತಿಯನ್ನೇ ಬಿಂಬಿಸುವಂತಹದು. ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಹೆಂಗಸರ ಸಾಧನೆಗಳು ಅವರ ದುಡಿಮೆಗಳು ಲೆಕ್ಕಕ್ಕೆ ಬರುವುದಿಲ್ಲ. ಈ ಹಿನ್ನಲೆಯಲ್ಲಿ ದ್ರೌಪದಿಯ ಗೆಲುವನ್ನು ಧರ್ಮರಾಯಾದಿ ಗಂಡಸರು ಒಪ್ಪಿಕೊಳ್ಳದಿರುವುದು ಆ ಕಾಲಮಾನದ ಪರಿಸ್ಥಿಯನ್ನು ಧ್ವನಿಸುವಂತಿದೆ.

ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಪುರುಷನಿಲ್ಲದೇ ಸ್ತ್ರೀ ಅನುಭವಿಸುವ ಅಸಂಖ್ಯಾತ ನೋವುಗಳನ್ನು ಜನಪದ ಮಹಾಭಾರತ ಪರಿಣಾಮಕಾರಿಯಾಗಿ ಚಿತ್ರಿಸಿದೆ. ವಿಧವಾ ಸ್ತ್ರೀ ತನ್ನ ನೋವನ್ನು ಅನುಭವಿಸಬೇಕೇ ಹೊರತು ಅನ್ಯ ಮಾರ್ಗದಿಂದ ಪರಿಹಾರ ಕಾಣುವಂಥದಲ್ಲವೆಂಬುದು ಪ್ರಧಾನ ಸಂಸ್ಕೃತಿಯ ನಿಲುವು. ಈ ಬಗೆಯ ಧೋರಣೆಗೆ ಪ್ರತಿಕ್ರಿಯೆಯಾಗಿ 'ಕುಂತಿಯ ಗಜಗೌರಿ ವ್ರತದ ಪ್ರಸಂಗವು ಚಿತ್ರಿತವಾಗಿರುವುದನ್ನು ಕಾಣಬಹುದು. ವಿಧವೆಯಾದ ಕುಂತಿಯಿಂದ ಗಜಗೌರಿ ವ್ರತವನ್ನು ನಡೆಸುವುದು ಒಂದು ಪ್ರಬಲ ಪ್ರತಿಭಟನೆಯಾಗಿದೆ. ಆಕೆಯ ವ್ರತಕ್ಕಾಗಿ ಪಾಂಡುರಾಜನನ್ನು ಕರೆಯಿಸಿಕೊಳ್ಳುವ ಕಲ್ಪನೆ ವಿನೂತನವಾದುದ್ದಾಗಿದೆ. ಮೃತ್ಯುದೇವತೆಯಾದ ಯಮಧರ್ಮ ಹಾಗೂ ಸ್ವರ್ಗಾಧಿಪತಿಯಾದ ದೇವೇಂದ್ರ ಅನುಕ್ರಮವಾಗಿ ಧರ್ಮರಾಯ ಮತ್ತು ಅರ್ಜುನನ ಜನ್ಮದಾತರಾಗಿರುವುದರಿಂದ ಈ ಬಗೆಯ ಕರೆಸಿಕೊಳ್ಳುವಿಕೆ ಹುಸಿ ಕಲ್ಪನೆಯಾಗದೆ ತಾರ್ಕಿಕ ಸಂಬಂಧವನ್ನು ಪಡೆದುಕೊಳ್ಳುತ್ತದೆ. ಆದರೆ ಮುಂದೆ ಭೀಮ ಮೊದಲಾದವರು ಪಾಂಡುವನ್ನು ಹಿಂತಿರುಗಿಸಲು ನಿರಾಕರಿಸಿದಾಗ ಕೃಷ್ಣ ಅವರೆಲ್ಲರಿಗೂ ಮಾಯೆ ಮುಸುಕುವಂತೆ ಮಾಡಿ ಪಾಂಡುವನ್ನು

ಹಿಂತಿರುಗಿಸುವುದು. ತದನಂತರ ಇನ್ನು ಮುಂದೆ ಸತ್ತವರು 'ಕಾಗೆ ರೂಪದಲ್ಲಿ ಬರಲಿ' ಎಂದು ಹೇಳುವುದು ವಿಶೇಷವಾಗಿದೆ. ಈಗಲೂ ಸತ್ತವರು ಕಾಗೆ ರೂಪದಲ್ಲಿ ಬರುವರೆಂಬ ನಂಬಿಕೆ ಜನಸಾಮಾನ್ಯರದಾಗಿದೆ.

ಜನಪದ ಮಹಾಭಾರತದ ಮತ್ತೊಂದು ಪ್ರಮುಖವಾದ ಪ್ರಸಂಗವೆಂದರೆ ಕುಸುಮಾಲೆ-ಚಿತ್ರಾಂಗಿಯರ ನೋವಿಗೆ ಸಂಬಂಧಿಸಿದ್ದು. ಪುರುಷರ ಸಂಚಾರಿ ಸ್ವಭಾವದಿಂದ ಅನೇಕ ಹೆಣ್ಣುಗಳು ಶೋಷಣೆಗೆ ಗುರಿಯಾಗುತ್ತಾರೆ. ಈ ಹೆಣ್ಣುಗಳು ಸಂಚಾರಿಯಾಗಿ ಬಂದ ಅರ್ಜುನನ್ನು ಸಂಧಿಸಿ ಮೋಹಿಸಿ ಮದುವೆಯಾದವರು. ಹಾಗೇ ಅವನಿಂದ ದೂರವಾಗಿ ಹನ್ನೆರಡು ವರ್ಷಗಳವರೆಗೆ ನಿರಂತರ ನೋವಿಗೆ ಗುರಿಯಾದವರು. ಪುರುಷನ ದುಡುಕು ಬುದ್ಧಿ, ನಿರ್ಲಕ್ಷ್ಯ ಮನೋಭಾವ ಮತ್ತು ಸಾಂದರ್ಭಿಕ ಬಯಕೆ ಈಡೇರಿಕೆ- ಇವುಗಳಿಗೆ ಬಲಿಯಾಗಿ ನರಳುವ ನಾರಿಯರ ಪ್ರತಿನಿಧಿಯಾಗಿ ಈ ಎರಡು ಪಾತ್ರಗಳು ಕಂಡುಬರುತ್ತವೆ. ಶಿಷ್ಟಭಾರತಗಳಲ್ಲಿ ಕವಿಹೃದಯ ಇಂತಹ ನೊಂದ ಜೀವಿಗಳ ಬಗ್ಗೆ ಅಷ್ಟು ಸ್ಪಂದಿಸಿಲ್ಲವೆನ್ನಬಹುದು. ಆದರೆ ಜನಪದ ಕಾವ್ಯ ಈ ಕುರಿತಂತೆ ಹೆಚ್ಚು ಗಮನ ಹರಿಸಿರುವುದುಂಟು. ಕುಸುಮಾಲೆ-ಚಿತ್ರಾಂಗಿಯರು ತಮ್ಮ ಪತಿರಹಿತ ಪರಿತಾಪವನ್ನು 'ತಪಸ್ಸು ಮಾಡಿ ಕಳೆದುಕೊಳ್ಳೋಣ' ಎನ್ನುತಾ, ಸಹಿಸಿಕೊಳ್ಳುವುದು ವಿಶೇಷವಾಗಿದೆ. ಕುಸುಮಾಲೆ-ಚಿತ್ರಾಂಗಿಯರ ಈ ತಪಸ್ಸು ಒಳತಿಗಾಗಿ ಕಾಯುವಿಕೆ ಆಗಿರುವಂತೆ ಶೋಷಿಸಿದವರಿಗೆ ಬಿಸಿ ಮುಟ್ಟಿಸುವ ಕ್ರಿಯೆಯೂ ಆಗಿದೆ. ಇವರ ತಪಸ್ಸಿನ ಪ್ರಖರತೆ ಭೂಲೋಕ ಹೊತ್ತಿ ಉರಿಯುವಂತೆ ಮಾಡುತ್ತದೆ. ಶೋಷಣೆ ಎಂಬುದು ನಿಲ್ಲದಿದ್ದರೆ, ಶೋಷಿತರಿಗೆ ನ್ಯಾಯ ದೊರಕದಿದ್ದರೆ ಲೋಕಕ್ಕೆ ಉಳಿಗಾಲವಿಲ್ಲ ಎಂಬುದೆ ಇಲ್ಲಿನ ಸೂಚನೆಯಾಗಿದೆ. ಶೋಷಣೆಯನ್ನು ಗುರುತಿಸುವುದಕ್ಕಷ್ಟೇ ತನ್ನ ಉದ್ದೇಶವನ್ನು ಈ ಕಾವ್ಯ ಸೀಮಿತಗೊಳಿಸಿಕೊಂಡಿಲ್ಲ ಶೋಷಣೆರಹಿತ ಬದುಕೇ ಜನಪದರ ಹಂಬಲವಾಗಿರುವುದರಿಂದ ಇಲ್ಲಿಯೂ ನೊಂದ ನಾರಿಯರ ಸಂಕಟ ನಿವಾರಣೆಯ ನೆಲೆಗಳನ್ನು ಜನಪದ ಮಹಾಭಾರತ ಶೋಧಿಸುತ್ತದೆ. ಪಾರ್ವತಿ ಗಿಳಿಗಳನ್ನು ಸೃಷ್ಟಿಸಿ, ಅವುಗಳಿಂದ ಅರ್ಜುನನಿಗೆ ಕುಸುಮಾಲೆ-ಚಿತ್ರಾಂಗಿಯರ ಸಂಕಟವನ್ನು ತಿಳಿಪಡಿಸಿ ಮತ್ತೆ ಅವರನ್ನು ಭೇಟಿಯಾಗುವಂತೆ ಮಾಡುವ ಕ್ರಿಯಾವಿಧಾನ ಸಮಸ್ಯೆಗಳಿಗೆ ಪರಿಹಾರ ಸೂಚಿಸುವ ಕ್ರಮವೇ ಆಗಿದೆ. ಈ ನೆಲೆಯಲ್ಲಿ ಜನಪದ ಮಹಾಭಾರತದ ನಿಲುವು ಮಾನವೀಯ ಹಾಗೂ ವೈಜ್ಞಾನಿಕವಾಗಿರುವುದು ಘನತೆಯ ವಿಚಾರವಾಗಿದೆ ಎನ್ನಬಹುದು.

ಕುಸುಮಾಲೆ-ಚಿತ್ರಾಂಗಿಯರ ಸಂದರ್ಭಕ್ಕೆ ಸಂಬಂಧಿಸಿದಂತೆ ಬಂದಿರುವ 'ಪ್ರೀತಿ ಮಾಡಿದ ಮೇಲೆ ನೀತಿ ಬಿಡಬ್ಯಾಡ' ಎಂಬ ಮಾತು ಗಮನಾರ್ಹವಾಗಿದೆ. ನೀತಿ ಬಿಡುವುದೇ ಎಲ್ಲಾ ಬಗೆಯ ನೋವಿಗೂ ಮೂಲಕಾರಣವಾಗಿರುತ್ತದೆ. ಪ್ರೀತಿ ನೀತಿಗಳು ಒಟ್ಟಿಗೆ ಸಾಗುವುದೇ ಜೀವನ್ಮುಖಿ ಸಮಾಜ ನಿರ್ಮಾಣದ ಸೂತ್ರವಾಗಿರುವುದು ಇಲ್ಲಿ ಧ್ವನಿತವಾಗುತ್ತದೆ. ಹೆಣ್ಣುಮಕ್ಕಳ ನೋವು ನಿವಾರಣೆಯ ಉದ್ದೇಶದ ಈ ಭಾಗವನ್ನು ಜನಪದ ಕವಿ ಹಲವು ಪರ್ವಗಳಲ್ಲಿ ಮನಮುಟ್ಟುವಂತೆ ವರ್ಣಿಸಿರುವುದು ಆತನ ಸೃಜನಶೀಲತೆಗೆ ಸಾಕ್ಷಿಯಾಗಿದೆ. ಕುಸುಮಾಲೆ-ಚಿತ್ರಾಂಗಿಯರ ಸಮಸ್ಯೆಯು ಇಲ್ಲಿ ಹೊಂದಾಣಿಕೆಯ ಮೂಲಕ ಇತ್ಯರ್ಥಗೊಳ್ಳುತ್ತದೆ. ಹಾಗೆಯೇ ಇಲ್ಲಿ ಹೇಳಬೇಕಾದ ಮತ್ತೊಂದು ಮುಖ್ಯ ಸಂಗತಿಯೆಂದರೆ ಸಮಸ್ಯೆಯಿಂದ ಮುಕ್ತಿ ಪಡೆಯುವ ಮಾರ್ಗವಾಗಿ ನಕಾರಾತ್ಮಕ ವರ್ತನೆಯಾದ ಆತ್ಮಹತ್ಯೆಯನ್ನು ಕಾವ್ಯ ಸೂಚಿಸದಿರುವುದು. ಆತ್ಮಹತ್ಯೆಯನ್ನು ಜನಪದ ಮಹಾಭಾರತ ಸಣ್ಣಬುದ್ಧಿ ಎಂದು ನಿರಾಕರಿಸುತ್ತದೆ. ಆತ್ಮಹತ್ಯೆಗಳು ಹೆಚ್ಚುತ್ತಿರುವ ಇಂದಿನ ಸನ್ನಿವೇಶದಲ್ಲಿ ಈ ಕಾವ್ಯ ಖಂಡಿತ ಸಂಜೀವಿನಿ ಶಕ್ತಿಯಾಗಿ ತನ್ನನ್ನು ಸ್ಥಾಪಿಸಿಕೊಳ್ಳುತ್ತದೆ ಎನ್ನಬಹುದು.

ಮಹಾಭಾರತದ ಭಾನುಮತಿ ಒಂದು ರೀತಿ ಅಲಕ್ಷ್ಯಕ್ಕೆ ಒಳಗಾದ ಮಹಿಳೆಯಾಗಿದ್ದಾಳೆ. ಗಂಧರ್ವರ ಕಟ್ಟಿಗೆ ಒಳಗಾದ ದುರ್ಯೋಧನನನ್ನು ದ್ರೌಪದಿ ಬಿಡುಗಡೆಗೊಳಿಸುವ ಸಂದರ್ಭದಲ್ಲಿ ಈ ಸಂಗತಿಯನ್ನು ಗಮನಿಸಬಹುದು. ಗಂಧರ್ವರ ಕಟ್ಟಿನಿಂದ ದುರ್ಯೋಧನನನ್ನು ಬಿಡಿಸಲು ಪತಿವ್ರತೆಯಾದ ದ್ರೌಪದಿ ನಿಯೋಜಿತಳಾಗುವುದು ಉಚಿತವಾಗಿದೆ. ಆದರೆ ಈ ಸನ್ನಿವೇಶದಲ್ಲಿ ಭಾನುಮತಿಯನ್ನು ಮೌನಿಯಾಗಿಸುವುದು ಇಲ್ಲದ ಆಪಾದನೆಯೊಂದನ್ನು ಆಕೆಯ ಮೇಲೆ ಹೊರೆಸಿದಂತಾಗುತ್ತದೆ. ಮುಖ್ಯವಾದ ವಿಷಯವೆಂದರೆ ಈ ಸಂದರ್ಭದಲ್ಲಿ ಪತಿ ದುರ್ಯೋಧನನನ್ನು ಗಂಧರ್ವರ ಕಟ್ಟಿನಿಂದ ಬಿಡಿಸಲು ಪ್ರಯತ್ನಿಸದಿರುವುದಕ್ಕೆ ಭಾನುಮತಿ ಸ್ವಯಂ ಕಾರಣವನ್ನು ನೀಡುವಂತೆ ಜನಪದ ಕವಿ ಚಿತ್ರಿಸಿದ್ದಾನೆ. 'ಬಾವ ಧರ್ಮರಾಜ, ನೀವು ಹೇಳಿದಂತೆ ನಾನು ಪತುರೊತೆ ನಿಜ. ಆದರೆ ಎಂಥಾ ಕಷ್ಟದಲ್ಲೂ ನಾನು ನನ್ನ ಪತಿದೇವರನ್ನು ಕಾಲುಸೋಂಕಿಸಿ ನನ್ನ ಪತುರೋತಾ ಧರ್ಮವನ್ನು ಕಳೆದುಕೊಳ್ಳಲಾರೆ' ಎನ್ನುವ ಭಾನುಮತಿಯ ಮಾತುಗಳು ಸಾಂದರ್ಭಿಕ ಅಲಕ್ಷ್ಯದಿಂದಾಗಿ ಅವಮಾನಕ್ಕೊಳಗಾಗಿದ್ದ ಮುಗ್ಧ ಮಹಿಳೆಯನ್ನು ಸಂರಕ್ಷಿಸುವ ಆಶಯದ ಕವಿಯ ಮಾತುಗಳೂ ಆಗಿದೆ.

ಮುಕ್ತರಾದವರು ಧರ್ಮದ ಆರಾಧಕರಾಗದಿದ್ದರೆ ಏನಾಗುತ್ತದೆಂಬುದಕ್ಕೆ ಮಾಣಿಕಸಿದ್ದ-ಈರಮ್ಮರ ಕಥೆ ನಿದರ್ಶನವಾಗುತ್ತದೆ. ಶಿಷ್ಯ ಮಾಣಿಕಸಿದ್ದನಿಗೆ ಹೇಳಬೇಕಾದ ಉಪದೇಶದ ಮಾತುಗಳನ್ನು ನೆಲದ ಮೇಲೆ ಬರೆದು ಗುರು ಗೋರಕಸಿದ್ದ ಮರಣವನ್ನಪ್ಪುತ್ತಾನೆ. ಆಕಸ್ಮಿಕವಾಗಿ ಅಲ್ಲಿಗೆ ಬಂದ ಈರಮ್ಮ ಎಂಬ ಮಹಿಳೆ ನೆಲದಲ್ಲಿದ್ದ ಲಿಪಿಯನ್ನು ತಾನು ಬರೆದಿಟ್ಟುಕೊಂಡು ಅದನ್ನು ಅಳಿಸಿಹಾಕುತ್ತಾಳೆ. ಮರಣ ಸ್ಥಿತಿಯಲ್ಲಿದ್ದ ಗುರುಗಳಿಗೆ ನೀರು ತರಲೆಂದು ಹೋಗಿದ್ದ ಮಾಣಿಕಸಿದ್ದ ಅಲ್ಲಿಗೆ ಬಂದು ಗುರುಗಳ ಮರಣಕ್ಕೆ ಕಂಬನಿ ಮಿಡಿಯುತ್ತಾನೆ. 'ಸಾಯುವ ಗಳಿಗೆಯಲ್ಲಿ ಗುರುಗಳು ನನಗೆ ಏನನ್ನಾದರೂ ಹೇಳಿದರೆ ಎಂದು ಅಲ್ಲಿದ್ದ ಈರಮ್ಮನನ್ನು ಪ್ರಶ್ನಿಸುತ್ತಾನೆ. ಅದಾಗಲೇ ಗುರುವಾಕ್ಯವನ್ನು ದಾಖಲಿಸಿಕೊಂಡಿದ್ದ ಆಕೆ ಅದನ್ನು ತಿಳಿಸದೇ ಆತನನ್ನು ತನ್ನ ಜೀತದಾಳಾಗಿ ಮಾಡಿಕೊಂಡು ದುಡಿಸಿಕೊಳ್ಳುತ್ತಾಳೆ. ಅವಕಾಶ ಸಿಕ್ಕಿದ ಕಾರಣಕ್ಕೆ ಶೋಷಣೆ ಮಾಡುವ ವಿಧಾನವಾಗಿದೆ. ಇಲ್ಲಿನ ಈರಮ್ಮ ಸಾಮಾಜಿಕವಾಗಿಯಾಗಲಿ, ಆರ್ಥಿಕ ನೆಲೆಯಲ್ಲಾಗಲಿ ಬಲಾಢ್ಯಳಲ್ಲ. ಆದರೂ ಅವಕಾಶ ಸಿಕ್ಕಿದರೆ ಅವಳು ಶೋಷಿತಳಾಗುತ್ತಾಳೆ. ಜನಪದ ಮಹಾಭಾರತ ಇಂತಹ ಘಟನೆಗಳನ್ನು ವಿರೋಧಿಸುತ್ತದೆ. ಆಕಸ್ಮಿಕಗಳಿಗೆ ಕ್ಷಮೆ ಇರುತ್ತದೆಯಾದರೂ ಉದ್ದೇಶಪೂರ್ವಕ ಅಥವಾ ಸಹಾನುಭೂತಿರಹಿತ ಅಲಕ್ಷ್ಯಕ್ಕೆ ಕಾರಣವಾದ ಶೋಷಣೆಗಳಿಗೆ ಕ್ಷಮೆ ಇಲ್ಲ ಎನ್ನುವುದು ಜನಪದ ಮಹಾಭಾರತದ ಮುಖ್ಯ ತಾತ್ವಿಕತೆಯಾಗಿದೆ. ಹಾಗಾಗಿ ಈರಮ್ಮನಿಗೆ ಶಿಕ್ಷೆಯಾಗುತ್ತದೆ.

ಇಂತಹುದೇ ಸಂದರ್ಭವನ್ನು ಓತಿಕ್ಯಾತನ ಪ್ರಸಂಗದಲ್ಲೂ ಕಾಣಬಹುದಾಗಿದೆ. 'ಅತ್ಯುನ್ನತಿಯೊಳ್ ಅಮರಸಿಂಧೂದ್ಭವಂ' ಎಂದು ಪಂಪನಿಂದ ಹೊಗಳಿಸಿಕೊಂಡ ಭೀಷ್ಮಚಾರ್ಯರು ಅಂತ್ಯಕಾಲದಲ್ಲಿ ಶರಶಯ್ಯೆಯಲ್ಲಿ ಇಚ್ಛಾಮರಣಿಯಾಗಿ ಚಿತ್ರಹಿಂಸೆಯನ್ನು ಅನುಭವಿಸುವುದಕ್ಕೆ ಕಾರಣವನ್ನು ಯಾವ ಶಿಷ್ಟಭಾರತವೂ ಹೇಳಿಲ್ಲ. ಆದರೆ ಜನಪದ ಮಹಾಭಾರತ ಇದಕ್ಕೆ ಕಾರಣ ಸನ್ನಿವೇಶವೊಂದನ್ನು ನಿರೂಪಿಸುವ ಮೂಲಕ ಹೊಸ ಆಯಾಮವೊಂದರ ಚರ್ಚೆಗೆ ಅವಕಾಶ ಕಲ್ಪಿಸಿದೆ. ಭೀಷ್ಮ ಹಾಗೆ ಚಿತ್ರಹಿಂಸೆ ಅನುಭವಿಸಲು ಓತಿಯ ಶಾಪವೇ ಕಾರಣವೆನ್ನುವ ಪ್ರಸಂಗ ಕಾಣಬಹುದು. ಹೀಗೆ ವಿನಾಕಾರಣ ನೋವನ್ನುಂಟುಮಾಡಿದವರು ತಮ್ಮ ತಪ್ಪಿಗೆ ಶಿಕ್ಷೆ ಅನುಭವಿಸಬೇಕೆಂಬ ಸಾಮಾನ್ಯ ತತ್ವವನ್ನಿಲ್ಲಿ ಕಾಣುತ್ತೇವೆ. ಆ ಮೂಲಕ ನೊಂದ ಜೀವಿಗೆ ಸಮಾಧಾನವನ್ನುಂಟುಮಾಡುವುದು ಮಾನವ ಧರ್ಮ ಎಂಬ ತತ್ವ ಪ್ರತಿಪಾದನೆಯನ್ನು ಕಾಣುತ್ತೇವೆ.

ಹೆಣ್ಣಿನ ತಾಯ್ತನದ ಪ್ರಾಮುಖ್ಯತೆಯನ್ನು 'ನಿಜತಾಯಿ ಪರ್ವ'ದಲ್ಲಿ ಕಾಣಬಹುದು. ಹೇಗೆ ಜನಪದ ಮಹಾಭಾರತದಲ್ಲಿ ಹೆಣ್ಣು ಹೆಂಡತಿಯಾಗಿ, ತಾಯಿಯಾಗಿ, ದೇವತೆಯಾಗಿ ಚಿತ್ರಿತವಾಗಿದ್ದಾಳೆ. ಹೆಣ್ಣು ಅಬಲೆಯಲ್ಲ ಸಬಲೆ ಎಂಬುದನ್ನೇ ಬಹಳ ಸಂದರ್ಭದಲ್ಲಿ ಎತ್ತಿ ತೋರಿಸಲಾಗಿದೆ. ಹೆಣ್ಣಿನ ಬದ್ಧತೆ ಇಲ್ಲಿ ಎದ್ದು ಕಾಣುತ್ತದೆ. ಒಟ್ಟಿನಲ್ಲಿ ಹೆಣ್ಣಿನ ಇಂಗಿತದ ಸಂಗತಿಗಳೆಲ್ಲಾ ಇಲ್ಲಿ ದಾಖಲಾಗಿದ್ದು ಜನಪದ ಕವಿಯ ಅದ್ಭುತ ಪ್ರತಿಭೆಯ ಸೃಷ್ಟಿಯಾಗಿ ವಿಜೃಂಭಿಸಿವೆ.

ದೈನಂದಿನ ಧಾರ್ಮಿಕ ನಂಬಿಕೆಯಾಗಿ ಪೂಜಿಸುವ ನಾಗರಕಲ್ಲಿನ ಪೂಜೆಗೆ ಜನಪದ ಕವಿ ಅರ್ಜುನ ಮತ್ತು ಉಲುಪಿಯ ಮಗನಾದ ನಾಗಾರ್ಜುನನ ಸಾವಿನ ಘಟನೆಯನ್ನು ಜೋಡಿಸಿದ್ದಾನೆ. ಉಲೂಪಿಯ ಮಗ ನಾಗಾರ್ಜುನ ತಾಯಿಯನ್ನು 'ನನ್ನ ತಂದೆ ಯಾರು?' ಎಂದು ಕೇಳಿದ. ಅದಕ್ಕೆ ಆಕೆ 'ಅರ್ಜುನ' ಎಂದಳು. 'ಮತ್ತೆ ಆತ ಎಲ್ಲಿ?', 'ಕೃಷ್ಣನ ತಂಗಿ ಸುಭದ್ರೆ ಅರ್ಜುನನ ಪಟ್ಟದ ರಾಣಿ. ಪರಮಾತ್ಮ ತನ್ನ ತಂಗಿಗಾಗಿ ಆತ ಎಲ್ಲಿಗೂ ಹೋಗದಂತೆ ಜೊತೆಯಲ್ಲಿದ್ದಾನಪಾ', 'ನೀನು ನನ್ನನ್ನು ಆಶೀರ್ವಾದ ಮಾಡಿ ಕಳುಹಿಸಮ್ಮ ಆ ಕೃಷ್ಣನ ಮುಗಿಸುವೆ' ಎಂದು ನಾಗಾರ್ಜುನ ಕತ್ತಿ ಝಳಪಿಸುತ್ತಾ ಹೊರಡಲು ಸಿದ್ಧನಾದ. ತಾಯಿ ಆತನನ್ನು ಆಶೀರ್ವದಿಸಿ ಬೇಗ ನಿನ್ನ ತಂದೆ ಕರೆದು ತಾ ಎಂದು ಕಳುಹಿಸುವಳು. ಮರಗಿಡಗಳನ್ನು ಕೊಚ್ಚುತ್ತಾ ಸರ್ಪವಾಗಿ ಸರಸರನೆ ಬಂದು, ಜಿಂಕೆಯಂತೆ ಓಡಾಡಿದ. ಈತನನ್ನು ಪರಮಾತ್ಮ ನೋಡಿ, ಇವನನ್ನು ಮುಗಿಸಬೇಕು ಇಲ್ಲದಿದ್ದರೆ ಈತ ನನ್ನ ಬಿಡುವುದಿಲ್ಲ ಎಂದುಕೊಂಡ. ಅರ್ಜುನನಿಗೆ ತಂದೆ ಪಾಂಡುರಾಜನ ತಿಥಿಗೆ ಒಂದು ಜಿಂಕೆ ಹೊಡೆದು ತಾ ಎನ್ನಲು, ಜಿಂಕೆ ರೂಪಿನಲ್ಲಿದ್ದ ನಾಗಾರ್ಜುನನನ್ನು ಶಬ್ಧವೇಧಿ ವಿದ್ಯೆ ಬಳಸಿ ಹೊಡೆದಾಗ ಬಾಣ ನಾಟಿಕೊಂಡು ಅನಂತರ ಆತ ಉಲೂಪಿಯ ಮಗನೆಂಬುದು ತಿಳಿಯಿತು. ಈ ವಿಚಾರವನ್ನು ಉಲೂಪಿಗೆ ಹೇಳಿದಾಗ ಅವಳು 'ಅವನಿಗೂ ಅವನ ಮಗನಿಂದಲೇ ಸಾವಾಗ್ಲಿ' ಎಂದು ಶಾಪಕೊಟ್ಟಳು. ಆತನ ಹೆಸರಲ್ಲಿ ಒಂದು ನಾಗರ ಕಲ್ಲುನೆಟ್ಟು ಹಾಲೆರೆದು ಪೂಜೆ ಮಾಡಿದಳು. ನಾಗರ ಕಲ್ಲು ಪೂಜಿಸುವ ಬಂಜೆಯರಿಗೂ ಮಕ್ಕಳಾಗಲೀ ಎಂದು ಹೇಳಿ ಕಣ್ಣೀರ ಕೋಡಿ ಹರಿಸಿದಳು. ಆ ಮೂಲಕ ನಾಗರಕಲ್ಲಿನ ಪೂಜೆಯನ್ನು ದೈವದ ನೆಲೆಯಲ್ಲಿ ಗುರುತಿಸುವಿಕೆಯನ್ನು ಕಾಣಬಹುದು.

ಹಾಗೆಯೆ ದೈನಂದಿನ ಬದುಕಿನಲ್ಲಿ ಬಳಸುವ ಈರುಳ್ಳಿಯನ್ನು ಕುರಿತಂತೆ ಜನಪದ ಕವಿ ಹೇಳುವ ಕಥೆ ವಿಶೇಷವಾಗಿದೆ. ವಿರಾಟನಗರದಲ್ಲಿದ್ದ ದ್ರೌಪದಿಯ ದುಃಖವನ್ನು ಕೇಳಿದ ಕೃಷ್ಣ ಈರುಳ್ಳಿಯನ್ನು ಸೃಷ್ಟಿಸಿ ಅಡಿಗೆ ಮಾಡುತ್ತಿದ್ದ ಭೀಮನ ಅಡುಗೆ ಮನೆಯಲ್ಲಿ ಇರಿಸಿದನಂತೆ. ಆ ದಿನ ಅಡುಗೆ ಮಾಡುವಾಗ ಭೀಮ ಹೊಸ ತರಕಾರಿಯಾದ ಈರುಳ್ಳಿಯ ಸಿಪ್ಪೆ ಸುಲಿಯುವಾಗ

ಅದುವರೆಗೂ ನೆನಪಿಗೆ ಬಾರದ ದುಶ್ಶಾಸನ ದ್ರೌಪದಿಯ ವಸ್ತ್ರ ಸೆಳೆಯುವ ದೃಶ್ಯ ನೆನಪಾಯಿತು. ಈರುಳ್ಳಿಯನ್ನು ಕತ್ತರಿಸಿದಾಗ ಆ ಸಂದರ್ಭದಲ್ಲಿ ಕಣ್ಣೀರು ಸುರಿಸುತ್ತಿದ್ದ ದ್ರೌಪದಿಯ ಸ್ಥಿತಿಯು ನೆನಪಿಗೆ ಬಂದು ತಾನು ಮಾಡಿದ ಪ್ರತಿಜ್ಞೆಗಳನ್ನು ನೆನಪಿಸಿಕೊಂಡನು.

ಭೀಮನು ಅಡಿಗೆ ಮಾಡಿ ಸುಖವಾಗಿ ಉಂಡು ಪ್ರತಿಜ್ಞೆಗಳನ್ನು ಮರೆಯಬಾರದೆಂದೆ ಕೃಷ್ಣ ಈರುಳ್ಳಿಯನ್ನು ಸೃಷ್ಟಿಸಿ ಲೋಕಕ್ಕೆ ಕೊಟ್ಟನು. ಅದಕ್ಕೆ ಸಾಕ್ಷಿಯಾಗಿ ಈರುಳ್ಳಿಯನ್ನು ಅಡ್ಡಡ್ಡ ಕತ್ತರಿಸಿದರೆ ಚಕ್ರವಾಗಿಯೂ, ಉದ್ದುದ್ದ ಕತ್ತರಿಸಿದರೆ ಶಂಖವಾಗಿಯೂ ಕಾಣುತ್ತದೆ ಎನ್ನುವ ಕಥೆ ಜನಪದ ಕವಿ ಸಣ್ಣ ಸಣ್ಣ ವಸ್ತುವನ್ನೂ ನಿರ್ಲಕ್ಷಿಸದೆ ದೈವಿಕ ನೆಲೆಯಲ್ಲೇ ಕಾಣುತ್ತಾನೆ.

ಜನಪದ ಮಹಾಭಾರತದಲ್ಲಿ ಬಂದಿರುವ ಉಪಕಥೆಗಳಲ್ಲಿ ಬಭ್ರುವಾಹನ ಕಥೆಯೂ ಒಂದಾಗಿದೆ. ಜನಪದ ಕವಿಗೆ ಮಹಾಭಾರತದ ನಂತರ ನಡೆಯುವ ಕಥೆಯೂ ಬೇರೆಯಲ್ಲ ಎಂಬ ಭಾವನೆಯಿಂದ ತನಗೆ ಬರುವ ಎಲ್ಲಾ ಕಥೆಗಳನ್ನು ಸೇರಿಸುತ್ತಾ ಹಾಡುತ್ತಾ ಹೋಗಿರುವುದನ್ನು ಕಾಣಬಹುದು. ಇದರ ಜೊತೆಗೆ ಮಯೂರಧ್ವಜನ ಕತೆಯೂ ಸೇರ್ಪಡೆಯಾಗಿದೆ. ಅಶ್ವಮೇಧ ಯಾಗದ ಕುದುರೆಯೊಡನೆ ಸಹದೇವ ಹೊರಡುತ್ತಾನೆ. ಮಾಯದ ಕನ್ನಡಿಯಲ್ಲಿ ಈ ದೃಶ್ಯವನ್ನು ನೋಡಿದ ಮಯೂರಧ್ವಜನ ಮಗ ತಾಮ್ರಧ್ವಜ ರತ್ನಪುರಿಯನ್ನು ಪ್ರವೇಶ ಮಾಡಿದ ಕುದುರೆಯನ್ನು ಬನ್ನಿಮರಕ್ಕೆ ಕಟ್ಟಿ ಯುದ್ಧಕ್ಕೆ ನಿಲ್ಲುತ್ತಾನೆ. ಈ ದೃಶ್ಯವನ್ನು ತನ್ನ ಜ್ಞಾನದಿಂದ ಕಂಡ ಕೃಷ್ಣ ಅರ್ಜುನನ ಜೊತೆ ರತ್ನಪುರಿಗೆ ಬಂದು ಮಯೂರಧ್ವಜನೊಡನೆ ಸಂಧಾನ ನಡೆಸಿ ಕುದುರೆಯನ್ನು ಬಿಡಿಸಿ ಕಪ್ಪ ಕಾಣಿಕೆಯನ್ನು ಪಡೆದುಕೊಂಡು ಹೋಗುತ್ತಾನೆ. ಈ ಸಂದರ್ಭದಲ್ಲಿ ಬರುವ ಮಾತುಗಳು ಜನಪದ ಕವಿಯ ಕಲ್ಪನೆ ಹಾಗೂ ಪ್ರತಿಭೆಯನ್ನು ಹೊರಸೂಸುತ್ತವೆ. ತಾನಿರುವಲ್ಲಿಯೇ ಇದ್ದು ಎಲ್ಲವನ್ನು ಕಲ್ಪಿಸಿಕೊಳ್ಳಬಲ್ಲ ವಿಭಿನ್ನ ಶಕ್ತಿ ಜನಪದ ಕವಿಗೆ ಮಾತ್ರ ಸಾಧ್ಯವೆನ್ನುವುದು ಅತಿಶಯೋಕ್ತಿಯಲ್ಲ.

ಅನಂತರ ಯಾಗದ ಕುದುರೆ ಮಣಿಪುರದ ಅರಸು ಬಭ್ರುವಾಹನನ ಹೂವಿನ ವನಕ್ಕೆ ನುಗ್ಗಿ ಧ್ವಂಸ ಮಾಡುವ ಪ್ರಸಂಗ ಗಮನ ಸೆಳೆಯುತ್ತದೆ. ಕುದುರೆಯ ಹಣೆಗೆ ಬಿಗಿದ ಲಿಪಿ ಪಟ್ಟಿಯನ್ನು ಕವಿ ವಿವರಿಸುತ್ತಾ 'ಹಸ್ತಿನಾಪುರದ ರಾಜ ಪಾಂಡುರಾಜನ ಮಕ್ಕಳ... ಧರ್ಮ ಲೋಕಕ್ಕೆ ದೊಡ್ಡದು. ಇದ ಓದಿಕೊಂಡು ತಿಳಕೊಂಡು. ಅವರ ಆಳ್ವಿಕೆ ಒಪ್ಪಿ ಕಪ್ಪಕಾಣಿಕೆ ಕೊಡಿ. ಒಪ್ಪದೆ ಕಟ್ಟಾಕಿದರೆ ಕಾದಾಡಿ ಸೊರಗ ಪಡಿ...' ಎನ್ನುವ ಲಿಪಿ ಓದಿ 'ಎಂಥ ದುರಾಂಕಾರ ಇವರ ಅಂಕಾರ ಅಡವಿಪಾಲ ಮಾಡಬೇಕು ಅನುತೇಳಿ ಬಭ್ರುವಾಹನ ಕಟಕಟನೆ ಹಲ್ಲುಗಳ ಕಡಿಯುತ ನಿಂತನು', ಈ ಭಾಗದಲ್ಲಿ

ಬರುವುದೇನೆಂದರೆ ಸಾಮಾನ್ಯರಲ್ಲಿನ ಗುಣಗಳೇ ಅಸಾಮಾನ್ಯರಲ್ಲಿ ಅಂತರ್ಗತಿಸಿಕೊಂಡಿದೆಯಾದರೂ ಹೇಗೆ ಜನಪದ ಕವಿ ಅವುಗಳನ್ನು ತನ್ನ ಪ್ರತಿಭೆಯ ಮೂಲಕ ಹೊರಗೆಡಹುತ್ತಾನೆ ಎಂಬುದನ್ನು ಗಮನಿಸಬಹುದಾಗಿದೆ.

ಈರೇಗೌಡ-ಬೋರೇಗೌಡರ ಪ್ರಕರಣ ಕಾವ್ಯದ ವಿಶಿಷ್ಟ ಭಾಗವಾಗಿದೆ. ಬಡವನಾದ ಈರೇಗೌಡನ ಆತಿಥ್ಯವನ್ನು ಸ್ವೀಕರಿಸಿದ ಬೋರೇಗೌಡ ತನ್ನ ಆಸ್ತಿಯ ಒಂದಷ್ಟನ್ನು ಈರೇಗೌಡನಿಗೆ ಕ್ರಯಕ್ಕೆ ಮಾರುತ್ತಾನೆ. ಈರೇಗೌಡ ಅದನ್ನು ಉಳುಮೆ ಮಾಡುವಾಗ ಏಳು ಕೊಪ್ಪರಿಗೆ ಹಣ ದೊರೆಯುತ್ತದೆ. ಆಗ ಈರೇಗೌಡ ಅದನ್ನು ಬೋರೇಗೌಡನಿಗೆ ಕೊಡಲು ಹೋದಾಗ ತೆಗೆದುಕೊಳ್ಳಲು ನಿರಾಕರಿಸುತ್ತಾನೆ. ಆಗ ಈರೇಗೌಡ ನಾನು ಜಮೀನನ್ನು ಮಾತ್ರ ಕೊಂಡುಕೊಂಡದ್ದು, ನಿನ್ನ ಹಿರೀಕರು ಕಷ್ಟಪಟ್ಟು ಸಂಪಾದಿಸಿ ಹೊಟ್ಟೆ ಬಟ್ಟೆ ಕಟ್ಟಿ ಕೂಡಿಸಿದ್ದ ಹಣದ ಕೊಪ್ಪರಿಕೆಗಳು ನಿನಗೇ ಸೇರಬೇಕಾದ್ದು, ಅದನ್ನು ಸ್ವೀಕರಿಸು ಎನ್ನುತ್ತಾನೆ. ಆದರೆ ಬೋರೇಗೌಡ ಮಾರಾಟ ಮಾಡಿಯಾದ ಮೇಲೆ ಅಲ್ಲಿ ಏನೇ ಸಿಕ್ಕಿದರೂ ಅದೆಲ್ಲ ನಿನ್ನದೇ ಸ್ವತ್ತು. ನನಗೆ ಅದರ ಮೇಲೆ ಯಾವುದೇ ಅಧಿಕಾರ ಇರುವುದಿಲ್ಲವೆಂದು ಹೇಳುತ್ತಾನೆ. ಅದೇ ಸಮಯಕ್ಕೆ ಕೃಷ್ಣ ಧರ್ಮರಾಯರು ಅಲ್ಲಿಗೆ ಬರುತ್ತಾರೆ. ಇಬ್ಬರೂ ತಮ್ಮ ಅಹವಾಲುಗಳನ್ನು ತಿಳಿಸುತ್ತಾರೆ ಹಾಗೂ ನ್ಯಾಯ ಹೇಳುವಂತೆ ಕೇಳಿಕೊಳ್ಳುತ್ತಾರೆ. ಆದರೆ ಕೃಷ್ಣ ನಾನೀಗ ನ್ಯಾಯ ಹೇಳಲು ಸಾಧ್ಯವಿಲ್ಲ. ನಾಳೇ ದಿನ ಬಂದು ಹೇಳುತ್ತೇನೆಂದು ಅಲ್ಲೇ ಪಕ್ಕದಲ್ಲಿದ್ದ ಧರ್ಮಪುರಕ್ಕೆ ಹೋಗುತ್ತಾರೆ.

ಧರ್ಮಪುರದ ಮಯೂರಧ್ವಜನ ಆಸ್ಥಾನಕ್ಕೆ ಕೃಷ್ಣ ಹೋಗಿ ಧರ್ಮರಾಯರು ಹೊರಗೇ ಇದ್ದಾರೆಂದು ತಿಳಿಸುತ್ತಾರೆ. ಕೂಡಲೇ ಮಯೂರಧ್ವಜ ಮೆರವಣಿಗೆಯಲ್ಲಿ ಧರ್ಮರಾಯನನ್ನು ಕರೆದುಕೊಂಡುಬರಲು ಹೊರಡುತ್ತಾನೆ. ಪ್ರವೇಶ ದ್ವಾರದಲ್ಲಿ ಹಸುವೊಂದನ್ನು ಕಾಲು ಮೇಲೆ ಮಾಡಿ ತೂಗಿ ಬಿಟ್ಟಿರುವ ದೃಶ್ಯವನ್ನು ಕಂಡ ಧರ್ಮರಾಯ ಅದನ್ನು ಬಿಟ್ಟುಬಿಡುವಂತೆ ಹೇಳುತ್ತಾನೆ. ಹಾಗೊಂದು ವೇಳೆ ಗೋವನ್ನು ಬಿಡದಿದ್ದರೆ ತಾನು ಬರುವುದಿಲ್ಲವೆಂದು ಹಟ ಮಾಡುತ್ತಾನೆ. ಚೀಲದಲ್ಲಿ ಕಟ್ಟಿಹಾಕಿದ್ದ ಕಲಿಯು ಧರ್ಮರಾಯರಿಗೆ ಗೋವಿನ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಧರ್ಮರಾಯನ ಮಾತಿಗೆ ಕಟ್ಟುಬಿದ್ದು ಕಲಿಯನ್ನು ಬಿಡುಗಡೆಗೊಳಿಸಲಾಗುತ್ತದೆ. ಅನಂತರ ಆತಿಥ್ಯವನ್ನು ಸ್ವೀಕರಿಸಿ ಧರ್ಮರಾಯ ಹಿಂತಿರುಗಿ ಬರುವಾಗ ಅದೇ ಈರೇಗೌಡ ಮತ್ತು ಬೋರೇಗೌಡ ಹಣಕ್ಕಾಗಿ ಜಗಳವಾಡುತ್ತಿರುವುದನ್ನು ಕಂಡು ಧರ್ಮರಾಯ ಇದು ಯಾಕೆ ಹೀಗಾಯ್ತು ಎಂದು ಕೇಳಲು ಕೃಷ್ಣ ಕಲಿಯ ಪ್ರಭಾವ ಎಂದು ಹೇಳುತ್ತ ಅವನ ಆಟೋಪಗಳನ್ನು ವಿವರಿಸುತ್ತಾನೆ. ಅಲ್ಲಿನ ವಿವರಣೆಗಳು

ಇಂದಿನ ಜನರ ವರ್ತನೆಗಳ ಸಾರವಾಗಿದೆ ಎಂದರೆ ತಪ್ಪಾಗಲಾರದು. ಅಲ್ಲದೆ ಮುಂದೆ ಇದೆಲ್ಲಾ ಸಾಮಾನ್ಯವಾದ ಘಟನೆಗಳಾಗುತ್ತದೆಂದು ವರ್ತಮಾನದ ಮುದ್ರೆ ಒತ್ತುತ್ತಾನೆ. ಇಲ್ಲೆಲ್ಲಾ ಜನಪದ ಕವಿಯ ಕಲ್ಪನಾಶಕ್ತಿ ಮತ್ತು ಅನುಭವದ್ರವ್ಯ ಅದ್ಭುತವಾಗಿ ಗೋಚರಿಸುತ್ತದೆ.

ಕೃಷ್ಣನ ಕೊನೆಯ ದಿನಗಳಲ್ಲಿ ಬರುವ ಪ್ರಸಂಗವನ್ನು ಜನಪದ ಕವಿ ಬಿಡದೇ ಪ್ರಸ್ತಾಪಿಸಿರುವುದು ವಿಶೇಷವೆನ್ನಬಹುದು. ಮಲಗಿದ್ದ ಕೃಷ್ಣನ ಕಾಲಿಗೆ ಬೇಡನೊಬ್ಬ ಬಾಣ ಬಿಡುತ್ತಾನೆ. ಅನಂತರ ತಪ್ಪಿನ ಅರಿವಾಗಿ ಕ್ಷಮೆಯಾಚಿಸುವಾಗ 'ನಿನ್ನ ತಪ್ಪೇನೂ ಇಲ್ಲ. ಕಳೆದ ಜನ್ಮದಲ್ಲಿ ನಾನು ಮಾಡಿದ ತಪ್ಪಿಗೆ ಶಿಕ್ಷೆ ನೀಡಿದೆ. ರಾಮನ ಅವತಾರದಲ್ಲಿ ನೀನು ವಾಲಿಯಾಗಿದ್ದೆ. ಮರೆಯಲ್ಲಿ ನಿಂತು ನಿನ್ನನ್ನು ನಾನು ಅಂದು ಕೊಂದಿದ್ದೆ. ಇಂದು ನೀನದನ್ನು ತೀರಿಸಿಕೊಂಡೆ. ನಮ್ಮಿಬ್ಬರ ಹಗೆ ಮುಗಿಯಿತು' ಎಂದು ಸಮರ್ಥನೆ ನೀಡುತ್ತಾನೆ. ಅಲ್ಲದೆ ಕೃಷ್ಣ ಸತ್ತ ಮೇಲೂ ಉಪಕಾರಿಯಾಗಿರಬೇಕು ತನ್ನ ಅಸ್ತಿತ್ವವಿರಬೇಕೆಂಬ ಹಂಬಲವನ್ನು ಕೃಷ್ಣನ ಮೂಲಕ ಜನಪದ ಕವಿ ವ್ಯಕ್ತ ಪಡಿಸುತ್ತಾನೆ.

ಜನಪದ ಮಹಾಭಾರತದ ಕೊನೆಯ ಭಾಗ ಸ್ವರ್ಗಾರೋಹಣ ಪರ್ವ ವಿಡಂಬನಾತ್ಮಕವಾಗಿ ಮೂಡಿಬಂದಿದೆ. ಸೀಲಾನದಿ, ಭೀಮನ ಸತ್ತ ದೇಹ ಹೊತ್ತು ನಡೆಯುವ ಧರ್ಮರಾಯ–ಪೆದ್ದದಾಸಯ್ಯನ ವೇಷತಾಳಿ ತುಳಿಸಿ ಗಿಡವನ್ನು ತಲೆಕೆಳಗಾಗಿ ನೆಟ್ಟು ತೂತು ಪಾತ್ರೆಯಲ್ಲಿ ನೀರು ತಂದುಹಾಕುವ ದೃಶ್ಯ ಕಣ್ಣಿಗೆ ಕಟ್ಟುವಹಾಗೆ ಮೂಡಿಬಂದಿದೆ. ಗಿಡವನ್ನು ಸರಿಯಾಗಿ ನೆಟ್ಟಿಲ್ಲ ಎಂದು ಬುದ್ಧಿವಾದ ಹೇಳುವ ಧರ್ಮರಾಯನಿಗೆ 'ಈ ದ್ರೀಯದಲ್ಲಿ ಆತ್ಮ ಇರೋನ್ಗಂಟ ಮನುಸಂಗೆ ಬೆಲೆ ಇರ್ತದೆ. ವಸ್ತು ಹೋದೇಟ್ಗೆ ಹೆಣ ಆಯ್ತಿದೆ. ಹೆಣ ಅಂದ್ರೆ ಕೊಳ್ತು ಹುಳ್ತು ನಾರೋ ವಸ್ತು. ಅದರಿಂದ ಅದ ಒಪ್ಪಮಾಡಬೇಕು. ಅದಬಿಟ್ಟು ನೀನು ಹೆಣ ಹೊತ್ಕೊಂಡೊಯ್ತಿರೋದ್ ನೋಡ್ತಾ ಇದ್ರೆ ಇಷ್ಟು ಆತ್ಮ ಗ್ಯಾನ ಇಲ್ಲದೇ ಇರೋರು ಪೆದ್ದರಲ್ಲದೆ ಬುದ್ದಿವಂತ್ರೆ' ಎಂದು ಹೇಳುವ ಈ ಸನ್ನಿವೇಶ ಸೂಕ್ಮ ಸಂವೇದನಾಶೀಲನಾದ ವ್ಯಕ್ತಿಗೆ ಇದಕ್ಕಿಂತ ಕಠೋರವಾದ ಮಾತುಗಳು ಬೇಕಿಲ್ಲ. ಇದನ್ನು ಆಧ್ಯಾತ್ಮಿಕ ನೆಲೆ ಮತ್ತು ಲೌಖಿಕದ ನೆಲೆಯಲ್ಲಿ ನೋಡಲು ಅರ್ಥೈಸಿಕೊಳ್ಳಲು ಅನೇಕ ಅವಕಾಶಗಳಿವೆ. ಸಾಮಾನ್ಯ ವಿಚಾರಗಳನ್ನು ಅಸಾಮಾನ್ಯ ನೆಲೆಯಲ್ಲಿ ಆಲೋಚನೆ ಮಾಡಲು ಅನೂಕೂಲ ಕಲ್ಪಿಸಿಕೊಡುವ ಜನಪದ ಕವಿಯ ಪ್ರತಿಭೆ ಅದ್ಭುತವೆನ್ನಬಹುದು. ಜೊತೆಗೆ ಎಲ್ಲಾ ನಿಟ್ಟಿನಲ್ಲೂ ಧರ್ಮನಿರಪೇಕ್ಷವಾಗಿ ವರ್ತಿಸುವ ಕವಿ ಧಾರ್ಮಿಕ ಮೂಲಭೂತವಾದವನ್ನು ನಿರ್ಮೂಲನಗೊಳಿಸಲು ಬೇಕಾದ ಸೂತ್ರಗಳನ್ನು ಉದ್ಘೋಷಿಸುವುದು ವಿಶೇಷವಾಗಿದೆ. ಈ ಬಗೆಯ ಉದ್ಘೋಷಣೆ ಕೃತಿಬಾಹ್ಯವಾಗದೇ ಅಂತರ್ಗತ ಒಳಸೂತ್ರವಾಗಿರುವುದು ಗಮನಾರ್ಹವಾಗಿದೆ.

'ಜನಪದ ಮಹಾಭಾರತ, ಆಧುನಿಕ ಮಹಾಭಾರತದ ಆವೃತ್ತಿಯೆಂದು ಸ್ಪಷ್ಟಪಡಿಸಬಹುದಾಗಿದೆ. ರಾಂಗ್, ಟಾರ್, ದರಕಾಸ್ ಮೊದಲಾದ ವಿದೇಶಿ ಪದಗಳನ್ನೊಳಗೊಂಡ ಆಧುನಿಕ ಕನ್ನಡ ಭಾಷೆ ಕಾವ್ಯದುದ್ದಕ್ಕೂ ವಿಜೃಂಭಿಸುತ್ತದೆ. ಸಮಕಾಲೀನ ಪ್ರಸಂಗಗಳಿಂದಾಗಿ ಹಳೆಯ ಕಥೆಗೆ ವಿನೂತನ ಆಧುನಿಕತೆ ಸಮನಿಸುತ್ತದೆ. ಜನಪ್ರಿಯವೂ ಸುಪ್ರಸಿದ್ಧವೂ ಪೂಜಾರ್ಹ ಆದ ಕಥೆಯಲ್ಲಿ ಪ್ರಚಲಿತ ಸಂಗತಿಗಳು ಸೇರ್ಪಡೆಗೊಂಡದಾದ್ದರೂ, ಅವಕ್ಕೂ ಬೆಲೆ ಬರುತ್ತದೆ. ಸರ್ವರ ಗೌರವಕ್ಕೆ ಭಾಜನವಾಗುತ್ತದೆಯೆಂಬ ವಿಶ್ವಾಸ ಜನಪದರರದು. ಹೀಗಾಗಿ ಭಾರತದ ಕಥೆ ಕೆಲವೆಡೆ ಕೇವಲ ತಡಿಕೆಯಾಗಿ ಹೊಸ ಸಂಗತಿಗಳು ರಕ್ತಮಾಂಸ ಜೀವಸತ್ವಗಳಂತೆ ಹೂರಣಗೊಳ್ಳುತ್ತವೆ. ಕೃಷಿಗೆ ಸಂಬಂಧಿಸಿದ ಇಂಥ ಹಲವಾರು ಪ್ರಸಂಗಗಳು ಈ ಮಹಾಭಾರತದ ಕುಕ್ಷಿಯಲ್ಲಿ ಹುದುಗಿವೆ. ಕೃಷಿ ಸಂಸ್ಕೃತಿಯ ಹೆಗ್ಗಳಿಕೆಯ ನಿರೂಪಣೆಯೇ ಈ ಮಹಾ ಕೃತಿಯ ಮಹೋದ್ದೇಶವೆಂಬುದು ಮೇಲಣ ಪ್ರಸಂಗಗಳನ್ನು ಅಧ್ಯಯನ ಮಾಡಿದಾಗ ಸ್ಪಷ್ಟವಾಗುತ್ತದೆ. ಜಗತ್ತಿನ ಮೂಲ ಸಂಸ್ಕೃತಿಯೇ ಕೃಷಿಸಂಸ್ಕೃತಿ. ಅದೇ ಸಹಜವಾದ ಶಾಶ್ವತ ಸಂಸ್ಕೃತಿ, ಪ್ರಾಮಾಣಿಕವಾದ ಉದ್ಯೋಗವೆಂದರೆ ಅದು, ಜಗತ್ತಿನ ಬದುಕಿನ ಆಧಾರವೇ ಅದು. ಜಗತ್ತಿನ ಅಳಿವುಳಿವು ಏಳ್ಗೆಗಳಿಗೆ ಅದೇ ಕಾರಣವೆಂಬುದು ಈ ಮಹಾಕಾವ್ಯದಿಂದ ವ್ಯಕ್ತವಾಗುತ್ತದೆ'[೫], ಎಂಬ ವಿದ್ವಾಂಸರ ಮೌಲ್ಯಯುತ ಮಾತುಗಳು ಜನಪದ ಮಹಾಭಾರತರ ಆಂತರ್ಯದ ತಿರುಳನ್ನು ನಮಗೆ ತಿಳಿಸುತ್ತದೆ. ಈ ನಿಟ್ಟಿನಲ್ಲಿ ಜನಪದ ಮಹಾಭಾರತ ರೈತ ಮಹಾಭಾರತವೇ ಆಗಿದೆ. ಬಲರಾಮ ರೈತ ಪ್ರತಿನಿಧಿಯೇ ಎಂಬಂತೆ ಹೋದ ಬಂದಲ್ಲಿ ತನ್ನ ನೇಗಿಲನ್ನು ಹೊತ್ತು ತಿರುಗುತ್ತಾನೆ. ಹಾಗೆಯೇ ಕುಂತಿ ಧಾನ್ಯ ಬೀಜಗಳನ್ನು ಸಂರಕ್ಷಿಸಿಕೊಂಡು ಬರುವುದು. ಇವೆಲ್ಲವುಗಳಲ್ಲಿ ಜನಪದ ಕವಿಯ ಕೃಷಿಪ್ರೇಮ ವ್ಯಕ್ತವಾಗಿರುವುದನ್ನು ಕಾಣಬಹುದಾಗಿದೆ.

ಮೂಲಭಾರತದ ಕಥೆಯೊಂದಿಗೆ ಒಕ್ಕಲು ಮಕ್ಕಳ ಹುಟ್ಟು, ಬೆಳೆವಣಿಗೆ, ಅವರ ಬದುಕಿನ ಕಥೆಯನ್ನು ಸಮೀಕರಿಸಿ ಜನಪದ ಮಹಾಭಾರತವನ್ನು ಕಟ್ಟಲಾಗಿದೆ. ಒಕ್ಕಲು ಮಕ್ಕಳನ್ನು ಕಂಡರೆ ಜನಪದ ಗಾಯಕರಿಗೆ ಅಪಾರ ಅಭಿಮಾನ. ಅದಕ್ಕಾಗಿಯೇ ಒಕ್ಕಲಿಗ ಎಂಬ ಪದದ ನಿಷ್ಪತ್ತಿಗೆ ಒಂದು ಉಪಕಥೆಯನ್ನೇ ಹೆಣೆಯಲಾಗಿದೆ. ಜೋಗಿಯಾದ ಅರ್ಜುನನ ಹಾಡಿಗೆ ಮನಸೋತ ಹೆಣ್ಣು ತಾನು ಕತ್ತರಿಸುತ್ತಿದ್ದ ಸೋರೆಕಾಯಿ ಎಂದು ಭಾವಿಸಿ ತನ್ನ ತೊಡೆಯ ಮೇಲಿದ್ದ ತನ್ನ ಮಗುವಿನ ಕಾಲನ್ನೇ ಅರಿವಿಲ್ಲದೆ ಕತ್ತರಿಸಿದಳಂತೆ. ಅಷ್ಟರಮಟ್ಟಿಗೆ ಜೋಗಿಯ ಹಾಡು ನೃತ್ಯ ಆಕರ್ಷಣೀಯವಾಗಿ ಹೆಂಗಳರ ಮನವನ್ನು ಸೆಳೆಯುತ್ತಿತ್ತು. ಮುಂದಿನ ಬೀದಿಗೆ ಜೋಗಿ ಹೋದ ಮೇಲೆ ತಾನು ಮಾಡಿದ ಅಚಾತುರ್ಯ ಅರಿವಾಗಿ ಆ ಮೂಲಕ ಮಗುವಿನ ಪ್ರಾಣವನ್ನು ವಾಪಸ್ಸು ಪಡೆದರೂ ಕಾಲು ಮಾತ್ರ ಸರಿಯಾಗಲಿಲ್ಲ. ಹಾಗಾಗಿ ಒಂದು ಕಾಲಿನವನೇ ಮುಂದೆ ಒಕ್ಕಲಿಗನಾದನೆಂಬ ಕಥೆಯನ್ನು

ಹೆಣೆಯಲಾಗಿದೆ. ಏಕೆಂದರೆ ಪಂಪನಿಗೆ ಆಶ್ರಯ ಕೊಟ್ಟ ಅರಿಕೇಸರಿಯ ಹಾಗೇ ಬೆಟ್ಟದ ಬೀಡಿನ ಒಕ್ಕಲ ಮಕ್ಕಳು ಇವರ ಜೀವನಮಾರ್ಗಕ್ಕೆ ನೆರವಾದರು ಎಂಬುದು ಜನಪದ ಗಾಯಕ ಸಿದ್ದಶೆಟ್ಟರ ಆತ್ಮವೃತ್ತಾಂತದಿಂದಲೇ ತಿಳಿದುಬರುತ್ತದೆ. ಸಿದ್ದಶೆಟ್ಟರ ಕೃತಿ 'ಹೆಸರಿಗೆ ಮಹಾಭಾರತ ಎಂದಿದ್ದರೂ ಅದು ಇವತ್ತಿನ ನಮ್ಮದೇ ಚರಿತ್ರೆಯೆನ್ನುವಷ್ಟರ ಮಟ್ಟಿಗೆ ಅದರಲ್ಲಿ ಸಮಕಾಲೀನ ಸಂಗತಿಗಳು ಸಮೀಕರಣಗೊಂಡಿವೆ. ಹಳೆಯ ಮೈಸೂರು ಸೀಮೆಯ ಜನಪದ ಧಾರೆಯೇ ಈ ಬೃಹತ್ ಕಥಾಮಂಜರಿ. ಅದಕ್ಕಾಗಿ ಯಾವ ಪ್ರಸಂಗವಾದರೂ ಸಮೀಕ್ಷಿಸಿ ನೋಡಬಹುದು. ಜನಪದ ಮಹಾಭಾರತದ ಜೀವನಾಡಿಯಾಗಿರುವ ಅರ್ಜುನಜೋಗಿ ಹಾಡಿಗೆ ಸಂಬಂಧಿಸಿದ ಹದಿಮೂರು ಪರ್ವಗಳು ಸಂಭವಿಸಿರುವುದು ಆದಿಚುಂಚನಗಿರಿ ಶ್ರೀಕ್ಷೇತ್ರದಲ್ಲದೆ ಬೇರೆಡೆ ಸಂಭವಿಸಲು ಸಾಧ್ಯವಿಲ್ಲ ಎನ್ನುವಷ್ಟರ ಮಟ್ಟಿಗೆ ಈ ನೆಲದ ಸಾವಯವ ಸಂಬಂಧ ಏರ್ಪಟ್ಟಿದೆ ಇಲ್ಲಿ. ಇಷ್ಟು ಬೃಹತ್‌ಗಾತ್ರದ ಇಂಥ ಸೋಪಜ್ಞ ಕೃತಿಯನ್ನು ಕಟ್ಟಿ ಹಾಡಿದ ಗಾಯಕನ ಪ್ರತಿಭಾವಿಲಾಸ ಅಚ್ಚರಿ ಹುಟ್ಟಿಸುವಂತಿದೆ'[1] ಎಂಬ ಅಭಿಪ್ರಾಯ ಉಚಿತವಾಗಿಯೇ ಇದೆ.

ಒಟ್ಟಾರೆ ಜನಪದ ಮಹಾಭಾರತ ಹಲವು ಆಯಾಮಗಳ ಚರ್ಚೆಗೆ ತನ್ನನ್ನು ಒಡ್ಡಿಕೊಳ್ಳುವ ಮೌಲಿಕ ಕೃತಿಯಾಗಿದೆ. 'ಮಹಾಭಾರತದ ಕಥಾಹಂದರಗಳೇ ಈ ಕೃತಿಯ ಸಾರ ಸರ್ವಸ್ವ, ಶಿಷ್ಟ ಭಾರತದಲ್ಲಿ ಕಾಣದ ಸುವರ್ಣಕೇಶಿ, ಸ್ವೇತಕೇಶಿ, ತಾಮ್ರಕೇಶಿ, ಶಂಬರಾಸುರ, ಡಂಬಕಾಸುರರೆಂಬ ಪುರಾಣಪುರುಷರು ಇಲ್ಲಿ ಕಂಗೊಳಿಸುತ್ತಾರೆ. ಕರ್ಣನ ತಂದೆಯಾಗಿ ಅಂಬಿಗರ ಚೌಡಯ್ಯ, ಪಾಂಡುವಿಗೆ ಪ್ರಾಪ್ತಿಯಾಗಿಸುವನಾಗಿ ಮಾಣಿಕಸಿದ್ದ, ಏಕಚಕ್ರನಗರದಲ್ಲಿ ಪಾಂಡವರಿಗೆ ವಾಸ್ತವ್ಯ ನೀಡುವವನಾಗಿ ಕುಂಬಾರಗುಂಡಯ್ಯ ಸುಳಿಯುತ್ತಾರೆ. ಮುದ್ದೇಗೌಡರ ದರಕಾಸ್ ಭೂಮಿಯಲ್ಲಿ ಭೀಮ ದುಡಿಯುತ್ತಾನೆ. ಅರ್ಜುನ ಜೋಗಿಯಾಗಿ ಎಲ್ಲಾ ಕೇರಿ ಸುತ್ತುತ್ತಾನೆ. ಭೀಮನ ಮಗನಾಗಿ ಭದ್ರಬಾಹು ಬಂದರೆ ಕರಗದ ಕತೆಯಲ್ಲಿ ದ್ರೌಪದಿ ವಿಜೃಂಭಿಸುತ್ತಾಳೆ. ಓತಿಕ್ಯಾತ ಭೀಷ್ಮರಿಗೆ ಶರಶಯ್ಯೆಯಾಗಲಿ ಎಂದು ಶಾಪವಿತ್ತರೆ, ನಾಯಿಗಳಿಗೆ ಭೀಮ ಶಾಪ ನೀಡುತ್ತಾನೆ. ಮೈಸೂರು, ಪಾಂಡವಪುರ, ನಾಗಮಂಗಲ, ಆದಿಚುಂಚನಗಿರಿ ಪ್ರಸ್ತಾಪಗೊಳ್ಳುವಂತೆ ಉರ್ದು, ತಮಿಳು, ತೆಲುಗು ಶಬ್ದಗಳು ಈ ಕಾವ್ಯದಲ್ಲಿ ಬಳಕೆಗೊಂಡಿವೆ. ಇದನ್ನು ಒಮ್ಮೆ ಓದಲು ಆರಂಭಿಸಿದರೆ ಕೂತುಹಲ ಕೆರಳುತ್ತದೆ, ವಿಸ್ಮಯ ವರ್ಧಿಸುತ್ತದೆ. ಅರಿವು ವಿಸ್ತಾರಗೊಳುತ್ತದೆ. ಪ್ರಾಚೀನತೆಯನ್ನು ಆಧುನಿಕತೆಯೊಂದಿಗೆ, ಶಿಷ್ಟವನ್ನು ಜಾನಪಾದದೊಂದಿಗೆ ಸಮೀಕರಿಸುವ ವಿನೂತನ ಸೃಜನ ಪ್ರಕ್ರಿಯೆ ಈ ಕಾವ್ಯದಲ್ಲಿದೆ'[2] ಎಂಬ ಎನ್.ಎಸ್ ತಾರಾನಾಥ ಅವರ ಅಭಿಪ್ರಾಯ ಔಚಿತ್ಯಪೂರ್ಣವಾಗಿದೆ.

ಜನಪದ ಮಹಾಭಾರತದಲ್ಲಿ ಪಂಪನ ಹಿತಮಿತ ಮೃದು ವಚನವಾಗಲೀ ಅಥವಾ ಕುಮಾರವ್ಯಾಸನ ಕೃಷ್ಣಕಥೆಯ ಉಜ್ವಲವಾಗ್ವಿಲಾಸವಾಗಲಿ ಇಲ್ಲ. ಇದು ಕಟ್ಟುಗಳನ್ನು ಕಿತ್ತೆಸೆದ ಜನಪದ ಪ್ರತಿಭೆಯ ಸ್ವಚ್ಛಂದ ಅಭಿವ್ಯಕ್ತಿಯಾಗಿದೆ. ಸಾಹಿತ್ಯಿಕ ಭಾರತಗಳ ಏಕಸೂತ್ರತೆ ಇಲ್ಲಿಲ್ಲ. ಅದರೆ ಇಲ್ಲಿ ಬಹುಸೂತ್ರತೆ ಮೇರೆವರಿದಿದೆ, ಸಾಹಿತ್ಯದಲ್ಲಿ ಕಾವ್ಯಸಹಜವಾದ ವ್ಯಂಜನಾ ನಿರ್ಮಿತಿಗಾಗಿ ಕಥೆ ಬಳಕೆಯಾದರೆ, ಇಲ್ಲಿ ಕಥೆಗಳೇ ಬಹುನಿರ್ಮಿತಿಗೆ ಕಾವ್ಯಾತ್ಮಕತೆಗೆ ಕಾರಣವಾಗಿದೆ ಎನ್ನಬಹುದು.

**ಅಡಿ ಟಿಪ್ಪಣಿಗಳು:**

೧. ಜಾನಪದ ಸಂಭಾವನೆ: ಸಂ. ಡಿ.ಕೆ. ರಾಜೇಂದ್ರ ಮತ್ತು ಇತರರು, ತಳುಕಿನ ವೆಂಕಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೯೧ ಪುಟ ೨೫೯.

೨. ಕನ್ನಡ ಜನಪದ ಕಥೆಗಳು: ಕೆ.ಆರ್. ಸಂಧ್ಯಾರೆಡ್ಡಿ, ಕನ್ನಡ ಸಾಹಿತ್ಯ ಪರಿಷತ್ತು, ೧೯೮೨, ಪುಟ ೧೪೦.

೩. ಜಾನಪದ ಜೋಗಿ: ಸಂ. ಶಿವರಾಮ ಕಾಡನಕುಪ್ಪೆ ಮತ್ತು ಇತರರು, ಲಾವಣ್ಯ ಮುದ್ರಣ, ಬೆಂಗಳೂರು, ೨೦೦೮, ಪುಟ ೪೬೮.

೪. ಅದೇ, ಪುಟ ೪೬೯.

೫. ಅದೇ, ಪುಟ ೪೫೮-೫೯.

೬. ಜನಪದ ಮಹಾಭಾರತ ವಿಚಾರ ಸಂಕಿರಣ: ಸಂ. ಬಿ.ಎಸ್.ತಲ್ವಾಡಿ, ರೋಹಿಣಿ ಎಂಟರ್‌ಪ್ರೈಸಸ್, ಬೆಂಗಳೂರು ೨೦೧೧, ಪುಟ ೩೧.

೭. ಜನಪದ ಮಹಾಭಾರತ: ಸಂ. ಪಿ.ಕೆ. ರಾಜಶೇಖರ, ಲಾವಣ್ಯ ಮುದ್ರಣ, ಬೆಂಗಳೂರು, ೨೦೦೪, ಪುಟ. ೧೯.

# ಅಧ್ಯಾಯ ಎಂಟು:
# ಜನಪದ ಮಹಾಭಾರತ, ಪಂಪಭಾರತ ಮತ್ತು ಕುಮಾರವ್ಯಾಸ ಭಾರತಗಳ ಒಂದು ಸಮಗ್ರ ನೋಟ

## ಅಧ್ಯಾಯ ಎಂಟು

# ಜನಪದ ಮಹಾಭಾರತ, ಪಂಪಭಾರತ ಮತ್ತು ಕುಮಾರವ್ಯಾಸ ಭಾರತಗಳ ಒಂದು ಸಮಗ್ರ ನೋಟ

ವ್ಯಾಸರ ಮಹಾಭಾರತ ಕಾವ್ಯದ ವ್ಯಾಪಕತೆ ಮತ್ತು ಹರಹುವಿನ ದಿಸೆಯಿಂದಾಗಿ ಕವಿ ಗೌಣನಾಗಿ ಕಾವ್ಯವೇ ಪ್ರಧಾನವಾಗಿ ಜನಸಾಮಾನ್ಯರಿಗೆ ಆ ಕಾವ್ಯ ಭಿತ್ತಿಯಲ್ಲಿರುವ ಹಲವು ಕಥನಗಳು ಜನಮಾನಸದಲ್ಲಿ ಚಿರಸ್ಥಾಯಿಯಾಗಿ ಉಳಿದಿದೆ ಎಂಬುದು ಒಂದು ವಾದವಾದರೆ ಜನಪದ ಮೂಲದ ಕಥಾವಸ್ತುವನ್ನು ಆಧರಿಸಿ ತಮ್ಮ ಬುದ್ದಿ ಸಾಮರ್ಥ್ಯ, ಪ್ರತಿಭಾಶಕ್ತಿ, ಮನೋಧರ್ಮಗಳಿಗೆ ಅನುಗುಣವಾಗಿ ಶಿಷ್ಟಕವಿಗಳು ಸೃಜನಾತ್ಮಕವಾಗಿ ಅಭಿವ್ಯಕ್ತಿಸಿದ್ದಾರೆಂಬುದು ಮತ್ತೊಂದು ವಾದ. ಈ ಎರಡು ವಾದಗಳು ಪರಸ್ಪರ ಸಾಪೇಕ್ಷವಾಗಿದೆ. ಅಲ್ಲದೆ ಜನಪದ ಮತ್ತು ಶಿಷ್ಟಸಾಹಿತ್ಯ ಪರಸ್ಪರ ಸ್ಪರ್ಶಿಸುವಂತೆಯೇ ಘರ್ಷಿಸುತ್ತಿರುತ್ತದೆ. ಈ ಸ್ಪರ್ಶ ಘರ್ಷಗಳ ಕೊಳುಕೊಡುವಿಕೆಯಿಂದ ಶಿಷ್ಟ ಹಾಗೂ ಜನಪದ ಸಾಹಿತ್ಯ ನಿರಂತರವಾಗಿ ಬೆಳೆಯುತ್ತದೆ. ಈ ಕಾರಣದಿಂದಲೇ ಲಿಖಿತರೂಪಕ್ಕಿಳಿದ ಮೇಲೂ ಮಹಾಭಾರತ ಹಲವು ಪ್ರಕ್ಷೇಪಗಳಿಂದ ವಿಕಸನಗೊಳ್ಳುತ್ತಾ ಮಹಾಕಾವ್ಯವಾಗಿ ಲೋಕವ್ಯಾಪ್ತಿಯಾಗಿದೆ.

ವ್ಯಾಸ ಮಹಾಭಾರತದಲ್ಲಿ ಬರುವ ಅದ್ಭುತ ಕಥಾನಕ ಉದಾತ್ತ ವ್ಯಕ್ತಿತ್ವ ಮಾನವ ಸ್ವಭಾವದ ಭಾವಾವೇಶಗಳ ಚಿತ್ರಣವು ಪಂಪ ಮತ್ತು ಕುಮಾರವ್ಯಾಸ ಹಾಗೂ ಜನಪದ ಕವಿಗಳನ್ನು ಸೆಳೆದಿದ್ದು ಮೂವರಿಗೂ ಆಕರ ಗ್ರಂಥ ಒಂದೇ ಆಗಿದ್ದರೂ ವಿಭಿನ್ನ ದೃಷ್ಟಿಕೋನಗಳಿಂದಾಗಿ ಅವರ ಕೃತಿಗಳ ಸ್ವರೂಪವು ವಿಭಿನ್ನವಾಗಿದೆ. ಪಂಪ ಜಿನಭಕ್ತನಾಗಿದ್ದು ಲೌಕಿಕ ಶ್ರದ್ಧೆಯನ್ನು ಹೊಂದಿದ್ದರೆ, ಕುಮಾರವ್ಯಾಸ ಶ್ರೀಕೃಷ್ಣಭಕ್ತನೂ ಆಧ್ಯಾತ್ಮಿಕ ಶ್ರದ್ಧೆಯುಳ್ಳವನೂ ಆಗಿದ್ದಾನೆ. ಪಂಪ ತನ್ನ ಆಶ್ರಿತ ಅರಸನ ಪ್ರೀತ್ಯರ್ಥವಾಗಿ ಕೃತಿ ಬರೆದರೆ, ಕುಮಾರವ್ಯಾಸ ಕೃಷ್ಣಪಾರಮ್ಯಕ್ಕಾಗಿ ಕಾವ್ಯ ರಚಿಸಿದ್ದಾನೆ. ಪಂಪ ಅರ್ಜುನನ್ನು ಕಥಾನಾಯಕನನ್ನಾಗಿಸಿ ಅವನ ಸುತ್ತ ಮಹಾಭಾರತದ ಕಥೆಯನ್ನು ಹೊಂದಿಸಿದರೆ, ಕುಮಾರವ್ಯಾಸನ ಕಾವ್ಯದಲ್ಲಿ ಕೃಷ್ಣನೇ ಕೇಂದ್ರಬಿಂದುವಾಗಿದ್ದು ಅವನ ಲೀಲಾವಿಲಾಸವೇ ಮಹಾಭಾರತವಾಗಿದೆ.

ಇವರಿಬ್ಬರ ಕಾವ್ಯಗಳಿಗಿಂತ ಭಿನ್ನವಾದದ್ದು ಜನಪದ ಮಹಾಭಾರತ. ಜನಪದ ಕವಿ ಕಾವ್ಯದಲ್ಲಿ ಯಾವುದೇ ಲೌಕಿಕ ಹಿತಾಶಕ್ತಿಯನ್ನಾಗಲೀ ಅಥವಾ ಧಾರ್ಮಿಕ ಆಶಯವಾಗಲಿ ಭೋದಿಸದೇ ಜನಸಾಮಾನ್ಯರಿಗೆ ಮಹಾಭಾರತದ ಕಥೆಯನ್ನು ಹೇಳಿದ್ದಾನೆ. ಅವನು ಮಹಾಭಾರತದ ಕಥಾನಕವನ್ನು

ತನ್ನ ಶಕ್ತಿ ಸಾಮರ್ಥ್ಯ ಹಾಗೂ ಭಾಷಾ ಸಾಮರ್ಥ್ಯಕ್ಕನುಸಾರವಾಗಿ ಹಿಗ್ಗಿಸಿ, ಕುಗ್ಗಿಸಿ ತನ್ನ ಪ್ರಾದೇಶಿಕ ಪರಿಮಿತಿಯೊಳಗೆ ಬದಲಿಸಿಕೊಂಡಿದ್ದಾನೆ. ಹಾಗಾಗಿ ಶಿಷ್ಟ ಮಹಾಭಾರತಕ್ಕೂ ಜನಪದ ಮಹಾಭಾರತಕ್ಕೂ ಕೆಲಮಟ್ಟಿಗೆ ಸಾಮ್ಯತೆ ಕಂಡುಬಂದರೆ ಬಹುಮಟ್ಟಿಗೆ ಭಿನ್ನತೆಗಳಿವೆ. ಜನಪದ ಕವಿಗೆ ಎಲ್ಲವನ್ನು ಮಹಾಭಾರತದ ಕಥೆಯಲ್ಲಿ ಸಮೀಕರಿಸಿ ಹೇಳುವ ಗುಣವಿದೆ ಆದ್ದರಿಂದಲೇ ಆತ 'ಶಿವ ನಮ್ಮ ಪರಮದೈವ', ಪಾಂಡವರು ಶಿವನ ಅಂಶದವರು, ಪಾರ್ವತಿಯೇ ದ್ರೌಪದಿ ಎಂದು ಪರಿಭಾವಿಸಿದಂತಿದೆ.

ಹೀಗಾಗಿಯೆ ಮೂವರು ತಮ್ಮ ಅಭಿರುಚಿ ಹಾಗೂ ಕಾವ್ಯದ ಉದ್ದೇಶಗಳಿಗನುಗುಣವಾಗಿ ಸ್ವಾತಂತ್ರ್ಯ ವಹಿಸಿ ಮೂಲಕಥಾಧಾರೆಯಲ್ಲಿ ಹಲವಾರು ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಈ ಮಾರ್ಪಾಡು ಮಾಡಿಕೊಳ್ಳುವಾಗ ಮೂಲ ಮಹಾಭಾರತದ ಎಷ್ಟೋ ಅಂಶಗಳನ್ನು ಬಿಟ್ಟು, ಹೊಸ ಅಂಶಗಳನ್ನು ಸೇರಿಸಿ ವಿಸ್ತಾರವಾದ ಕಥೆಯನ್ನು ಪುನರ್‌ಸೃಷ್ಟಿಯಾಗಿ ಹೊರಹೊಮ್ಮಿಸಿದ್ದಾರೆ. ಈ ಹಿನ್ನಲೆಯಲ್ಲಿ ತೌಲನಿಕವಾಗಿ ವಿಶ್ಲೇಷಿಸಿ ಇವುಗಳಲ್ಲಿರುವ ಸಾಮ್ಯತೆ ಹಾಗೂ ಭಿನ್ನತೆಗಳಿಗೆ ಕಾರಣವಾದ ದೃಷ್ಟಿ ಮತ್ತು ಧೋರಣೆಗಳನ್ನು ಹಿಂದಿನ ಅಧ್ಯಾಯಗಳಲ್ಲಿ ವಿವೇಚಿಸಿದ್ದರೂ ಇಲ್ಲಿ ಈ ಮೂರು ಮಹಾಭಾರತಗಳ ಸಮಗ್ರ ನೋಟವನ್ನು ವಿವೇಚಿಸಲಾಗಿದೆ.

ಕನ್ನಡದಲ್ಲಿ ಸಮಸ್ತ ಭಾರತವನ್ನು ರಚಿಸಬೇಕೆಂಬುದು ಪಂಪನ ಉದ್ದೇಶಗಳಲ್ಲೊಂದು. ಅದಕ್ಕನುಗುಣವಾಗಿ ಆಶ್ರಯದಾತನಾದ ಅರಿಕೇಸರಿಯ ಹಾಗೂ ಆಸ್ಥಾನದ ಪಂಡಿತರ ಪ್ರೇರಣೆ ದೊರೆತರೂ ಪಂಪನಿಗೆ ಮಹಾಭಾರತದ ಕಥೆಯನ್ನು ಯಥಾವತ್ತಾಗಿ ಅನುವಾದಿಸುವುದು ಇಷ್ಟವಿರಲಿಲ್ಲ. ಹಾಗಾಗಿ ಮುಖ್ಯ ಕಥೆಯನ್ನಷ್ಟೇ ಕೇಂದ್ರವಾಗಿಟ್ಟುಕೊಂಡು ಇತರ ಉಪಾಖ್ಯಾನಗಳನ್ನು ಕೈಬಿಟ್ಟಿದ್ದಾನೆ. ಪಂಪ ಅರಿಕೇಸರಿಯ ಜೀವನದ ಘಟನೆಗಳನ್ನು ತುಂಬಾ ಹತ್ತಿರದಿಂದ ಬಲ್ಲವನಾದ್ದರಿಂದ ಹೊಸದಾಗಿ ಮತ್ತೆ ಅವನನ್ನು ಅರಿತು ಮೆಚ್ಚಿಸಬೇಕಾಗಿರಲಿಲ್ಲ. ಆದರೆ ಅವನನ್ನು ಮಹಾಭಾರತದ ನಾಯಕನನ್ನಾಗಿ ಮಾಡುವುದು ಸುಲಭ ಸಾಧ್ಯವಾಗಿರಲಿಲ್ಲ. ಏಕೆಂದರೆ ವ್ಯಾಸ ಮಹಾಭಾರತದಲ್ಲಿ ಏಕನಾಯಕತ್ವ ಪರಿಕಲ್ಪನೆ ಇಲ್ಲವಾದರೂ ಮೂಲ ಮಹಾಭಾರತದ ಕಥೆಯನ್ನು ಉಳಿಸಿಕೊಂಡು ಅರಿಕೇಸರಿಯನ್ನು ಸಮೀಕರಿಸಿ ಕಥೆಯನ್ನು ಹೇಳಿದರೆ ಉದ್ಭವವಾಗುವ ಪ್ರಶ್ನೆಗಳ ಅರಿವೂ ಅವನಿಗಿದ್ದಿತು. ಆದ್ದರಿಂದಲೇ

**ವ್ಯಾಸಮುನೀಂದ್ರ ರುಂದ್ರ ವಚನಾಮೃತವಾರ್ಧಿಯನೀಸುವೆಂ ಕವಿ**
**ವ್ಯಾಸನೆನೆಂಬ ಗರ್ವಮೆನಗಿಲ್ಲ ಗುಣಾರ್ಣವನೊಳ್ಪು ಮನ್ಮನೋ**
**ವ್ಯಾಸಮನೆಯ್ದೆ ಪೇಟ್ದಪೆನದಲ್ಲದೆ ಗರ್ವಮೆ ದೋಷಮಟ್ತೆಗಂ**
**ದೋಷಮೆ ಕಾಣೆನೆನ್ನಱಿವ ಮಾಟ್ಕೆಯೆ ಪೇಟ್ವೆನಿದಾವ ದೋಷಮೋ**

**(ಪ.ಭಾ. ೧–೧೩)**

ಎನ್ನುತ್ತಾ,

**ವಿಪುಳ ಯಶೋವಿತಾನ ಗುಣಮಿಲ್ಲದನಂ ಪ್ರಭು ಮಾಡಿ ಪೂರ್ವ ಭೂ**
**ಮಿಪರ ಪದಂಗಳಂ ಪುಗಿಸಿ ಪೋಲಿಪೊಡೀತನುದಾತ್ತ ಪೂರ್ವ ಭೂ**
**ಮಿಪರುಮನೊಳ್ಪಿನೊಳ್ ತಗುಳೆವಂದೊಡೆಯಿ ಕಥೆಯೊಳ್ ತಗುಳ್ಚಿ ಪೋ**
**ಲಿಪೊಡೆನಗಟ್ತೆಯಾದುದು ಗುಣಾರ್ಣವ ಭೂಭುಜನಂ ಕಿರೀಟಿಯೊಳ್**

**(ಪ.ಭಾ. ೧–೧೪)**

ಎಂದು ಅರಿಕೇಸರಿಯ ಗುಣ ತನ್ನ ಮನಸ್ಸನ್ನು ಮುಟ್ಟಿದ್ದರಿಂದ ತನ್ನ ಅರಿವಿಗೆ ಬಂದಂತೆ ಹೇಳುತ್ತಿದ್ದೇನೆ. ಇದರಲ್ಲಿ ಯಾವ ದೋಷವಿದೆ ಎಂಬ ಪ್ರಶ್ನೆಯಿಂದ ಅರಿಕೇಸರಿಯ ಶೌರ್ಯ, ಸಾಹಸದ ಕಥೆಯನ್ನು ಹೇಳವುದರ ಜೊತೆಯಲ್ಲಿ 'ಸಮಸ್ತ ಭಾರತ'ವನ್ನು ಹೇಳಿರುವುದಾಗಿ ಅನೇಕ ಬಾರಿ ಒತ್ತಿ ಹೇಳಿದ್ದಾನೆ. 'ಕತೆಪಿರಿದಾದೊಡಂ ಕತೆಯಮೆಯ್ಗಿಡಲೀಯದೆ' ಎಂದು ಹೇಳುವುದರಲ್ಲಿ ಈ ಮಾತು ಸ್ಪಷ್ಟವಾಗುತ್ತದೆ. ಅದಕ್ಕನುಗುಣವಾಗಿ ವಿಕ್ರಮಾರ್ಜುನ ವಿಜಯಂ ಕಾವ್ಯದ ಪ್ರಾರಂಭದಲ್ಲಿ;

**ಶ್ರೀಯನರಾತಿ ಸಾಧನ ಪಯೋನಿಧಿಯೊಳ್ ಪಡೆದುಂ ಧರಿತ್ರಿಯಂ**
**ಜೀಯೆನೆ ಬೇಡಿಕೊಳ್ಳದೆ ವಿರೋಧಿ ನರೇಂದ್ರರನೊತ್ತಿಕೊಂಡುಮಾ**
**ತ್ಮೀಯ ಸುಪುಷ್ಪಪಟ್ಟಮನೊಡಂಬಡೆ ತಾಳ್ದಿಯುಮಿಂತುದಾತ್ತ ನಾ**
**ರಾಯಣನಾದ ದೇವನೆಮಗೀಗರಿಕೇಸರಿ ಸೌಖ್ಯಕೋಟಿಯಂ**

**(ಪ.ಭಾ. ೧–೧)**

ಎಂಬ ಪ್ರಾರ್ಥನಾ ಪದ್ಯಗಳಲ್ಲಿ ನಾರಾಯಣನಿಗಿಂತ ಉದಾತ್ತನೂ, ಶಿವನಿಗಿಂತ ಉದಾರನೂ ಮನೋಜನನ್ನು ಗೆದ್ದ ಸಹಜ ಮನೋಜನೂ ಆದ ಅರಿಕೇಸರಿಯಿಂದ ಸೌಖ್ಯ ಭೋಗಗಳನ್ನು ಕವಿ ಕೇಳಿಕೊಳ್ಳುತ್ತಾನೆ. ವೈದಿಕ ಕವಿಯೊಬ್ಬ ತನ್ನ ರಾಜ ಮತ್ತು ದೇವರಲ್ಲಿ ಹೆಚ್ಚೆಂದರೆ ಅಭೇದವನ್ನು ಕಲ್ಪಿಸಬಹುದೇ ಹೊರತು ದೈವಕ್ಕೆ ರಾಜನನ್ನು ಸಮೀಕರಿಸುವುದಿಲ್ಲ. ಆದರೆ ಜಿನಧರ್ಮಿಯನಾದ ಪಂಪನಿಗೆ ಈ ರೀತಿ ಹೇಳುವುದು ಅಷ್ಟು ಕಷ್ಟವಾಗಿಲ್ಲ. ಆದ್ದರಿಂದಲೇ 'ನಿರಂತರ ಸುಖವ್ಯಾಪ್ತಿಗೆ ನೀನೆ ಮೊತ್ತಮೊದಲಿಗರಿಕೇಸರಿ ಲೋಕಮುಳ್ಳಿನಂ' ಎಂದು ಮನದುಂಬಿ ಹಾರೈಸುತ್ತಾನೆ.

ಪಂಪ ತನ್ನ ಕಾವ್ಯಕ್ಕೆ ಮಹಾಭಾರತದ ವಸ್ತುವನ್ನು ಆಯ್ದುಕೊಂಡು ಪಾಂಡವರ ಜನನದಿಂದ ಅರ್ಜುನನ ಪಟ್ಟಾಭಿಷೇಕದವರೆಗೆ ಮಹಾಭಾರತದ ಮುಖ್ಯ ಕಥೆಯನ್ನೆಲ್ಲಾ ತನ್ನ ಕಾವ್ಯದಲ್ಲಿ ಹೇಳಿದ್ದಾನೆನ್ನಬಹುದು. ಅರಿಕೇಸರಿಯಂಥ ರಾಜನೊಬ್ಬನನ್ನು ಕಥಾನಾಯಕನನ್ನಾಗಿಸಿ ತನ್ನ ಯುಗಧರ್ಮ ಮತ್ತು ಸಾಮಾಜಿಕ ಸನ್ನಿವೇಶಕ್ಕನುಗುಣವಾಗಿ ಸ್ವತಂತ್ರ್ಯ ಕಾವ್ಯ ರಚಿಸಿದ ನಿದರ್ಶನ ಪಂಪಪೂರ್ವ ಸಂದರ್ಭದಲ್ಲಿ ಕಾಣುವುದಿಲ್ಲ. ಅರ್ಜುನನ ಪಾತ್ರ ಮಾತ್ರ ಅರಿಕೇಸರಿಗೆ ಸಮೀಕೃತವಾಗಿಸಿದ್ದೂ ಉಳಿದ ಎಲ್ಲ ಪಾತ್ರಗಳೂ ಮೂಲ ಮಹಾಭಾರತದಂತೆಯೇ ಉಳಿಸಿಕೊಂಡಿದ್ದಾನೆ ಪಂಪ. ಅರಿಕೇಸರಿಯ ವಂಶಾವಳಿಯನ್ನು ಹೇಳುವ ಸಂದರ್ಭದಲ್ಲಿ ಅವನ ವಿಚಾರವನ್ನು ಪ್ರಸ್ತಾಪಿಸಿರುವುದನ್ನು ಬಿಟ್ಟರೆ ಕವಿ ಮತ್ತಾವುದೇ ಐತಿಹಾಸಿಕ ಸಂಗತಿಗಳನ್ನು ಕಾವ್ಯದಲ್ಲಿ ಹೇಳುವ ಪ್ರಯತ್ನ ಮಾಡಿಲ್ಲ. ಆಶ್ವಾಸಗಳ ಆರಂಭ ಮತ್ತು ಅಂತ್ಯದಲ್ಲಿ ಅರಿಕೇಸರಿಯ ಗುಣಗಾನವಿದ್ದರೂ ಅದರಲ್ಲಿ ಐತಿಹಾಸಿಕ ಅಂಶಗಳಿಲ್ಲವೆನ್ನಬಹುದು. ಪಂಪನಿಗಿಂತ ಹಿಂದೆಯೇ ಸಂಸ್ಕೃತ ವಾಙ್ಮಯದ ಕಾಳಿದಾಸ, ಭಾರವಿ ಮುಂತಾದ ಕವಿಗಳು ಈ ರೀತಿಯ ಬದಲಾವಣೆಗಳನ್ನೊಳಗೊಂಡ ಕಾವ್ಯ ರಚಿಸಿದ್ದನ್ನು ಕಂಡ ಪಂಪ ತಾನೂ ಆ ಮಾರ್ಗವನ್ನೇ ಆಯ್ದುಕೊಂಡನು. ಹಾಗಾಗಿಯೇ ಅರಿಕೇಸರಿಯನ್ನು ಅರ್ಜುನನಿಗೆ ಸಮೀಕರಿಸಿ ಕಾವ್ಯ ರಚಿಸುವುದಕ್ಕೆ ಮುಂದಾದನು.

ಪಂಪ ತನ್ನ ಕಾಲದ ಶ್ರೇಷ್ಠ ಮೌಲ್ಯಗಳಾದ ಶೌರ್ಯ, ತ್ಯಾಗ, ಛಲ ಮುಂತಾದವುಗಳನ್ನು ತನ್ನ ಕಾವ್ಯದ ಪಾತ್ರಗಳಲ್ಲಿ ಸಮೀಚನಗೊಳಿಸಲು ಪ್ರಯತ್ನಿಸಿದ್ದಾನೆ. ಆದ್ದರಿಂದಲೇ ಮಹಾಭಾರತದ ಸೂತ್ರಧಾರಿಯಾದ ಕೃಷ್ಣನನ್ನು ವೈಭವೀಕರಿಸದೆ ಸಾಮಾನ್ಯ ವ್ಯಕ್ತಿಯಂತೆ ಚಿತ್ರಿಸಿದ್ದಾನೆ. ಉಳಿದಂತೆ ಛಲಕ್ಕೆ ದುರ್ಯೋಧನ, ಪರಾಕ್ರಮಕ್ಕೆ ಭೀಮಸೇನ, ಬಲಕ್ಕೆ ಶಲ್ಯ, ಅತ್ಯುನ್ನತಿಗೆ ಭೀಷ್ಮ, ಚಾಪಾವಿದ್ಯಾಬಲಕ್ಕೆ ದ್ರೋಣ, ಧರ್ಮಕ್ಕೆ ಧರ್ಮಪುತ್ರನೆಂದು ಹೆಸರಿಸಿ ಇವರುಗಳಿಂದಲೇ ಭಾರತ ಲೋಕಪೂಜ್ಯವಾಯಿತ್ತೆಂದು ಹೇಳಿದ್ದಾನೆ. ಹೀಗೆ ತನ್ನ ಕಾಲ ಧರ್ಮದ ಹಿನ್ನಲೆಯಲ್ಲಿ ಒಬ್ಬೊಬ್ಬರಿಗೆ ಒಂದೊಂದು ಗುಣವನ್ನು ಪ್ರಧಾನವಾಗಿಸಿ ಅದರಂತೆಯೇ ಆಯಾ ಪಾತ್ರಗಳ ಗುಣಸ್ವಭಾವವನ್ನು ಪೋಷಿಸಿ ಸಂವರ್ಧಿಸಿದ್ದಾನೆ.

ವ್ಯಾಸಭಾರತಕ್ಕಿಂತ ಭಿನ್ನವಾಗಿ ಪಂಪ ಕಾವ್ಯ ರಚಿಸಲು ಹೊರಟಿದ್ದರಿಂದ ಮೂಲ ಭಾರತದ ಅನೇಕ ಘಟನೆಗಳನ್ನು ಪ್ರಸಂಗಗಳನ್ನು ತನ್ನ ಕಾವ್ಯದ ಓಘಕ್ಕನುಗುಣವಾಗಿ ಬದಲಾಯಿಸಿಕೊಂಡಿದ್ದಾನೆ. ಮೂಲ ಮಹಾಭಾರತದಲ್ಲಿ ಧೀರ್ಘವಾಗಿ ಬಂದಿರುವ ಭೀಷ್ಮನ ಜನ್ಮವೃತ್ತಾಂತವನ್ನು ಎರಡೇ

ಪದ್ಯಗಳಲ್ಲಿ ಸಂಗ್ರಹಿಸಿ ಹೇಳಿದರೂ ಅದರಲ್ಲಿ ಪ್ರಕೃತವಾದಷ್ಟು ಸಂಗತಿಯಿದೆ. ಸಂಗ್ರಹಣ ದೃಷ್ಟಿಗಿಂತಲೂ ಅಧಿಕವಾಗಿ ಸನ್ನಿವೇಶದ ಸ್ವಾರಸ್ಯದ ಕಡೆಗೆ ಕವಿಯ ಗಮನವಿದೆ. ಇದರಿಂದ ಶಂತನುವಿನ ಗೌರವವು ಉಳಿದು ಭೀಷ್ಮನ ಘನತೆಯೂ ಹೆಚ್ಚಾಗಿದೆ. ಹಾಗೆಯೇ ಭೀಷ್ಮ ಶಿಖಂಡಿಯೊಡನೆ ಹೋರಾಡಿ ಯುದ್ಧ ಮಾಡುವುದಿಲ್ಲ, ಪಾಂಡವರನ್ನು ಕೊಲ್ಲುವುದಿಲ್ಲವೆಂದು ಯುದ್ಧ ಪೂರ್ವದಲ್ಲಿಯೇ ಸಾರುವುದು ಸ್ವಾಮಿ ದ್ರೋಹವೆನಿಸಿ ಅವನ ಘನತೆಗೆ ಕುಂದು ಎಂಬ ಭಾವನೆಯಿಂದ ಪಂಪ ಆ ಸಂಗತಿಯನ್ನು ಅಂಬೆಯ ಕಥೆ ಬರುವ ಅಂಬೋಪಾಖ್ಯಾನದಲ್ಲಿ ಸೇರ್ಪಡೆಗೊಳಿಸಿರುವುದು ಔಚಿತ್ಯಪೂರ್ಣವಾಗಿದೆ. ಇದರಿಂದ ಭೀಷ್ಮನ ಪೌರುಷ, ಸಂಯಮ, ಪ್ರತಿಜ್ಞಾಪಾಲನೆಗಳು ಹೆಚ್ಚು ಸಹಜವಾಗಿಯೂ ಸ್ಫುಟವಾಗಿಯೂ ಬಂದಿದೆ.

ಪಂಪ ತನ್ನ ಕಾವ್ಯದಲ್ಲಿ ಅವಿವಾಹಿತಳಾಗಿದ್ದ ಕುಂತಿಯ ಮುಗ್ಧತೆಯನ್ನು ಕರ್ಣನ ಬಾಲ್ಯದಲ್ಲಿ ಅವನ ಪಾತ್ರ ವಿಕಾಸಕ್ಕೆ ಅಗತ್ಯವಾದ ಪೋಷಣೆಯನ್ನು ಔಚಿತ್ಯಕ್ಕನುಗುಣವಾಗಿ ಅಳವಡಿಸಿ ಕೊಂಡಿರುವುದನ್ನು ಕಾಣಬಹುದು. ಹಾಗೆಯೆ ಶಾಪಗ್ರಸ್ತನಾದ ಪಾಂಡು ಜಿತೇಂದ್ರಿಯತ್ವದಿಂದ ನಿಶ್ಚಿಂತವಾಗಿರುವುದು ಕುಂತಿ ಪುತ್ರವಾತ್ಸಲ್ಯದಿಂದ ಕೊರಗುವಂತೆಯೂ ಮಾರ್ಪಡಿಸಿರುವುದು ನೈಜವಾಗಿದೆ. ಪಾಂಡು ಮಾದ್ರಿಯನ್ನಪ್ಪಿ ಋಷಿ ಶಾಪಕ್ಕೆ ಬಲಿಯಾದುದ್ದನ್ನು ಮನಕರಗುವಂತೆ ಚಿತ್ರಿಸಿದ್ದಾನೆ.

ಮೂಲ ಮಹಾಭಾರತದಲಿಲ್ಲದ ಪಾಂಡವರ ಬಾಲಲೀಲೆಗಳನ್ನು ಪಂಪ ತನ್ನ ಕಾವ್ಯದಲ್ಲಿ ಅತಿಶಯವಾಗಿ ವರ್ಣಿಸಿರುವುದಕ್ಕೆ ಅವನು ಕಂಡಿದ್ದ ಜನಜೀವನ ಕ್ರಮದ ಆಟೋಟಗಳ ಪ್ರಭಾವವೇ ಕಾರಣವಿರಬಹುದು. ಹಾಗೆಯೆ ದ್ರೋಣ ದ್ರುಪದರ ಪ್ರಸಂಗ ಅತ್ಯುಂತ ನಾಟಕೀಯವಾಗಿದೆ. ದ್ರೋಣ ಸೇಡು ತೀರಿಸಿಕೊಳ್ಳುವ ಪ್ರಸಂಗ ಅಂದಿನ ದುಷ್ಟಶಿಕ್ಷಣದ ಲೌಕಿಕ ಹಿತಾಶಕ್ತಿಗೆ ತಕ್ಕಂತಿದೆ. ಲಾಕ್ಷಗೃಹ ನಿರ್ಮಾಣಕ್ಕೆ ಮೊದಲು ದುರ್ಯೋಧನ ಧೃತರಾಷ್ಟ್ರನ ಬಳಿ ಗೋಳಾಡುವಂತೆ ಮಾಡಿರುವ ಮಾರ್ಪಾಡು ಹೆಚ್ಚು ಮಾರ್ಮಿಕವಾಗಿದೆ. ದ್ರೌಪದಿಗೆ ಸ್ವಯಂ ವರಿಸುವ ಅವಕಾಶವನ್ನು ಕಲ್ಪಿಸಿದರೂ ಆಕೆ ಯಾರನ್ನು ವರಿಸದೆ ಹಿಂತಿರುಗಿದರಿಂದ ಲಕ್ಷ್ಯಭೇದನದ ಪಣವನ್ನು ಏರ್ಪಡಿಸಲಾಗಿದೆ.

ಪಂಪ ತನ್ನ ಕಾವ್ಯದಲ್ಲಿ ದುರೋಧನ–ಶಕುನಿಯರ ಮೋಸದ ಪಗಡೆಯಾಟದ ಉದ್ದೇಶವನ್ನು ರಹಸ್ಯವಾಗಿಟ್ಟು ಆ ಸಂಚಿನಿಂದ ಧೃತರಾಷ್ಟ್ರನನ್ನೂ, ಭೀಷ್ಮದ್ರೋಣಾದಿಗಳನ್ನು ಹೊರಗಿಟ್ಟಿದ್ದಾನೆ. ಯುಧಿಷ್ಠರನೂ ಸಹ ಅರಿವಿಲ್ಲದೆ ಅಜ್ಞಾನದಿಂದ ಅವರ ಜಾಲದಲ್ಲಿ ಬಿದ್ದು ತನ್ನ

ಮನೋದೌರ್ಬಲ್ಯದಿಂದಾಗಿ ವನವಾಸವನ್ನು ಅನುಭವಿಸುವಂತಾಯಿತು. ಆದರೆ ಅವನು ತನ್ನ ತಮ್ಮಂದಿರನ್ನು ಪಣಕ್ಕಿಟ್ಟು ಸೋಲುವುದಿಲ್ಲ. ಬದಲಾಗಿ ತಾನೇ ಒಂದೇ ಸಲಕ್ಕೆ ವನವಾಸ ಅಜ್ಞಾತವಾಸಗಳ ಪಣವನ್ನೊಡ್ಡಿ ಸೋಲುತ್ತಾನೆ. ಆದರೆ ಶಕುನಿಯ ಮಾತಿಗೆ ಮರುಳಾಗಿ ದ್ರೌಪದಿಯನ್ನು ಪಣಕ್ಕಿಟ್ಟು ಸೋಲುತ್ತಾನೆ. ಮತ್ತೆ ದ್ಯೂತವಾಡುವುದು ಅನಾವಶ್ಯಕವೆಂದೂ ಭಾವಿಸಿ ಕೈಬಿಟ್ಟಿದ್ದಾನೆ. ಅದಕ್ಕೆ ಬದಲು ಮಾನವ ಹೃದಯವ್ಯಾಪಾರಕ್ಕೆ ಪ್ರಾಧಾನ್ಯತೆ ನೀಡಿದ್ದಾನೆ. ಆದರೆ ದ್ಯೂತ ಸಭೆಯಲ್ಲಿ ಕರ್ಣನ ಅಕ್ಷಮ್ಯ ಉದ್ಧಟ ವರ್ತನೆಯನ್ನು ಪಂಪ ಅಡಗಿಸಿ ಬಿಟ್ಟಿದ್ದಾನೆ.

ಹಾಗೆಯೆ ಊರ್ವಶಿ ತಾನಾಗಿಯೇ ಮನಸೋತು ಅರ್ಜುನನ ಬಳಿ ಹೋಗುವಂತೆ ಚಿತ್ರಿಸಿರುವುದರಿಂದ ಹೆಣ್ಣು-ಗಂಡಿನ ಆಕರ್ಷಣೆ ಸಹಜವೆನಿಸುವಂತೆ ತೋರುತ್ತದೆ. ದುರ್ಯೋಧನ ಸ್ವತಃ ತಾನೇ ತನ್ನ ಪರಿವಾರದೊಡನೆ ಪಾಂಡವರನ್ನು ಅವಮಾನಿಸುವ ಉದ್ದೇಶದಿಂದ ಜೈತ್ರಯಾತ್ರೆಯ ನೆಪವೊಡ್ಡಿ ಹೋಗುವುದರಿಂದ ಧೃತರಾಷ್ಟ್ರನಿಗೆ ಅಂಟಬಹುದಾಗಿದ್ದ ಮನೋದೌರ್ಬಲ್ಯದ ಕಳಂಕ ತಪ್ಪಿತು. ಪಂಪನ ಕಾವ್ಯದಲ್ಲಿ ಕೌರವರಿಗೂ, ಗಂಧರ್ವರಿಗೂ ಕದನವಿಲ್ಲ. ಬದಲಿಗೆ ಪೂರ್ವಜನ್ಮ ವೈರದಿಂದ ಚಿತ್ರಾಂಗದನೆಂಬ ಗಾಂಧರ್ವ ದುರ್ಯೋಧನನ್ನು ಹೊತ್ತುಕೊಂಡು ಹೋಗುತ್ತಾನೆ. ಇದರಿಂದ ಕರ್ಣ ಸೋತು ತಲೆ ತಪ್ಪಿಸಿಕೊಂಡು ಹೋಗುವ ಸನ್ನಿವೇಶವಿಲ್ಲ. ಭಾನುಮತಿ ಯುಧಿಷ್ಠರನಲ್ಲಿ ಹೋಗಿ ಮೊರೆಯಿಟ್ಟು ಪತಿಯನ್ನು ರಕ್ಷಿಸುವ ಪ್ರಸಂಗದಲ್ಲಿನ ಯುಧಿಷ್ಠರನ ನಿಷ್ಕಲ್ಮಶ ಹೃದಯವು ಸಹಜ ಸಹಾನುಭೂತಿಯೂ ಅವನ ವ್ಯಕ್ತಿತ್ವದ ಸಹಜತೆಯನ್ನು ಅನಾವರಣಗೊಳಿಸುತ್ತದೆ. ದುರ್ಯೋಧನ ಜೀವದಾನ ಪಡೆದ ಸನ್ನಿವೇಶವೂ ಅತ್ಯುಂತ ಮಾರ್ಮಿಕವಾಗಿದೆ. ಈ ಸಂದರ್ಭದಲ್ಲಿ ವ್ಯಕ್ತವಾಗುವ ದ್ರೌಪದಿಯ ಸಂತಸಭಾವ ಅವಳ ಕ್ಷಾತ್ರಗುಣಕ್ಕೆ ಸಹಜವೆನಿಸುತ್ತದೆ.

ಯಕ್ಷ ಪ್ರಶ್ನೆಯ ಭಾಗದಲ್ಲಿ ಕನಕದ ಬೇಳ್ವೆಯ ಕಥೆ ಬಂದಿದೆ. ಈ ರೀತಿಯ ಕಥೆ ಜನಪದ ಮಹಾಭಾರತದಲ್ಲೂ ಕಾಣಬಹುದಾಗಿದೆ. ಅಲ್ಲೂ ಕೂಡ ಶಕುನಿಯು ತನ್ನ ಗುರುವಾದ ಭೂದೇರನಾಥನಿಂದ ಪೆಡಂಭೂತವನ್ನು ಸೃಷ್ಟಿಸಿ ಪಾಂಡವರನ್ನು ನಾಶಮಾಡಲು ಕಳಿಸುವ ಪ್ರಸಂಗವಿದೆ.

ಉತ್ತರ ಗೋಗ್ರಹಣದಲ್ಲಿ ಗೋಪಾಲಕರೇ ಕೌರವರ ಸೇನೆಯನ್ನು ಎದುರಿಸಿ ಯುದ್ಧ ಮಾಡುವುದು ಅಂದಿನ ವೀರ ಜೀವನದ ಪರಿಯನ್ನು ಪರಿಚಯಿಸುತ್ತದೆ. ಹತ್ತನೆಯ ಶತಮಾನ ಕ್ಷಾತ್ರ ಯುಗ ವೀರರಸ ಜನಜೀವನದಲ್ಲಿ ಹಾಸುಹೊಕ್ಕಾಗಿದ್ದಂತೆಯೇ ಕಾವ್ಯದಲ್ಲೂ ಪ್ರಧಾನವಾಗಿದ್ದ ಕಾಲ.

ಅಂದಿನ ಜನ ತನ್ನೊಡೆಯನಿಗಾಗಿಯೇ ತಮ್ಮ ಜೀವವನ್ನು ಮುಡುಪಿಟ್ಟು ಸಾವನ್ನು ಸ್ವಾಗತಿಸುತ್ತಿದ್ದರು. ಆದ್ದರಿಂದಲೇ ಆ ಶತಮಾನದ ಪ್ರಧಾನ ಮೌಲ್ಯವಾದ ವೀರತ್ವ ಪಂಪಭಾರತದಲ್ಲಿ ಚಿತ್ರಿತವಾಗಿದೆ. ಅಲ್ಲದೆ ಪಂಪನೇ ಸ್ವತಃ ಕಲಿಯಾಗಿ ಅರಿಕೇಸರಿಯ ಅನೇಕ ಯುದ್ಧಗಳಲ್ಲಿ ಭಾಗವಹಿಸಿದ್ದನು ಎಂಬುದನ್ನು ತಿಳಿಸುವ ಪದ್ಯವನ್ನು ಕಾಣಬಹುದು.

**ಕವಿತೆ ನೆಗಟ್ತೆಯಂ ನಿಜಿಸೆ ಜೋಳದ ಪಾಟಿ ನಿಜಾಧಿನಾಥನಾ**
**ಹವದೊಳರಾತಿನಾಯಕರ ಪಟ್ಟನ ಪಾಜಿಸೆ ಸಂದ ಪೆಂಪು ಭೂ**
**ಭೂವನದೊಳಾಗಳುಂ ಬೆಳಗೆ ಮಿಕ್ಕಭಿಮಾನದ ಮಾತು ಕೀರ್ತಿಯಂ**
**ವಿವರಿಸೆ ಸಂದನೇಂ ಕಲಿಯೂ ಸತ್ಕವಿಯೋ ಕವಿತಾಗುಣಾರ್ಣವಂ**
**(ಪ.ಭಾ. ೧೪-೫೦)**

ಆದ್ದರಿಂದಲೇ ಉತ್ತರನ ಅಳ್ಳೆದೆಯ ಶೌರ್ಯ ಪ್ರಸಂಗವನ್ನು ತೇಲಿಸಿ ಬಿಟ್ಟಿದ್ದಾನೆ. ವಿರಾಟನೊಡನೆ ಪಾಂಡವರು ನಡೆಸುವ ಪರಿಹಾಸವೂ ಅವರ ಘನತೆ ಗಾಂಭಿರ್ಯಗಳಿಗೆ ಕುಂದುಂಟಾಗುವುದೆಂದು ಕೈ ಬಿಟ್ಟಿದ್ದಾನೆ. ಶಲ್ಯ ದುರ್ಯೋಧನನಿಂದ ವಂಚಿತನಾದ ಕಥೆ, ಕರ್ಣನ ತೇಜೋವಧೆ ಮಾಡುವಂತೆ ಯುಧಿಷ್ಠರ ಶಲ್ಯನನ್ನು ಕೇಳಿಕೊಳ್ಳುವುದು. ಅದನ್ನು ಶಲ್ಯನು ಒಪ್ಪುವುದು ಈ ಪ್ರಸಂಗಗಳನ್ನಿಲ್ಲಿ ಪಂಪ ಬಿಟ್ಟಿರುವುದರಿಂದ ಅವರ ವ್ಯಕ್ತಿತ್ವಕ್ಕೆ ಕುಂದುಂಟಾಗುವುದನ್ನು ತಪ್ಪಿಸಿದಂತಾಗಿದೆ. ಕೃಷ್ಣ ಸಂಧಾನಕ್ಕೆ ಹೊರಟಾಗ ಭೀಕರ ಪ್ರತಿಜ್ಞೆಗೈದಿದ್ದ ಭೀಮ ಯುದ್ಧ ವಿಷಯದಲ್ಲಿ ನಿರುತ್ಸಾಹಿಯಾಗಿ ಶಾಂತಚಿತ್ತದಿಂದಿದ್ದು ನಿರ್ವೀಯವಾದ ಮಾತುಗಳನ್ನಾಡುವುದು, ಕೃಷ್ಣನೇ ಯುದ್ಧವನ್ನು ಪ್ರಚೋದಿಸುವುದು ಅನುಚಿತವೆನಿಸುತ್ತದೆ. ಪಂಪ ಅದನ್ನು ಬದಲಿಸಿ ಇಬ್ಬರ ವ್ಯಕ್ತಿತ್ವಕ್ಕೂ ಘನತೆಯಿತ್ತಿದ್ದಾನೆ. ಉಳಿದವರನ್ನು ಸಂಧಿಯ ಮಾತಿಗೆ ಸೆಳೆಯದೇ ಸನ್ನಿವೇಶ ಗಾಂಭೀರ್ಯವನ್ನು ಉಳಿಸಿದ್ದಾನೆ. ಅರ್ಜುನ, ನಕುಲ, ಸಹದೇವ, ದ್ರೌಪದಿಯರನ್ನು ಸಂಧಿಯ ಮಾತಿಗೆ ಸೆಳೆಯದೆ ಸನ್ನಿವೇಶಕ್ಕೆ ಗಾಂಭೀರ್ಯವನ್ನುಂಟು ಉಳಿಸಿದ್ದಾನೆ.

ಸಂಧಾನಕ್ಕಾಗಿ ಸ್ವಯಂ ಕೃಷ್ಣನೇ ಬಂದು ನಿಂತರೂ ದುರ್ಯೋಧನ ಸ್ವಾಗತಿಸದೇ ಅಲಕ್ಷ್ಯಮಾಡಿ ಕುಳಿತಲ್ಲಿಂದಲೇ 'ಬರ ಹೇಳು' ಎನ್ನುವುದು. ಅವನು ಒಳಕ್ಕೆ ಬಂದ ಮೇಲೆ ವಿಧಿಯಿಲ್ಲದಂತೆ ಎದ್ದು ಸತ್ಕರಿಸುತ್ತಾನೆ. ಸಂಧಾನದ ಮಾತುಗಳು ನೇರವಾಗಿ ಕೃಷ್ಣ ದುರ್ಯೋಧನರಲ್ಲಿ ನಡೆಯುವುದು. ಈ ಪ್ರಸಂಗದಲ್ಲಿ ಪಂಪ ಮೂಲ ಕಾವ್ಯದಲ್ಲಿನ ಕಥೆಯನ್ನು ಸಾರಸಂಗ್ರಹಿಸಿದ್ದಾನೆ. ವಿದುರನ ಧನುರ್ಭಂಗದ ಪ್ರಸಂಗ ಹೊಸದಾಗಿದೆ.

ಪಂಪಭಾರತದಲ್ಲಿ ಕರ್ಣಭೇದ ಪ್ರಸಂಗದಲ್ಲಿನ ಕೃಷ್ಣನ ರಾಜಕೀಯ ಸಂಚನ್ನು ಪಂಪ ಚೆನ್ನಾಗಿ ಅಭಿವ್ಯಕ್ತಗೊಳಿಸಿರುವುದನ್ನು ಕಾಣಬಹುದು. ಕರ್ಣನನ್ನು ಭೇದಿಸುವಂತೆ ಕುಂತಿಯನ್ನು ಕೃಷ್ಣನೇ ಪ್ರಚೋದಿಸುತ್ತಾನೆ. ಅಲ್ಲದೆ ತಾನೂ ಮೇಲೆ ಬಿದ್ದು ಅವನ ಮನೆಗೆ ಹೋಗಿ ಆತನ ಜನ್ಮ ವೃತ್ತಾಂತವನ್ನು ತಿಳಿಸುವ ಮೂಲಕ ಪಾಂಡವರನ್ನು ಸಂಹರಿಸಬೇಕೆಂಬ ಸಂಕಲ್ಪ ಮತ್ತು ಉತ್ಸಾಹದಲ್ಲಿದ್ದ ಕರ್ಣನನ್ನು ವಿಮುಖಗೊಳಿಸುತ್ತಾನೆ. ಈ ಸಂದರ್ಭದಲ್ಲಿ ಬರುವ ಕರ್ಣನ ಮನದ ಒಳತೋಟಿ ಅತ್ಯಂತ ಹೃದಯ ವಿದ್ರಾಯಕವಾಗಿದೆ. ಇದೇ ಸಂದರ್ಭದಲ್ಲಿ ವ್ಯಾಸಭಾರತದಲ್ಲಿ ಕಾಣದ ಸತ್ಯಂತಪ ಋಷಿಯ ಪ್ರಸಂಗವನ್ನು ಪಂಪ ಉಲ್ಲೇಖಿಸಿದ್ದಾನೆ. ಇದರಿಂದ ಕರ್ಣ ದುರ್ಯೋಧನರ ಸ್ನೇಹಕ್ಕೆ ಕುಂದುಂಟಾಗಿದೆ ಎನ್ನಬಹುದು. ಅದನ್ನು ಮೀರಿ ಕರ್ಣ ದುರ್ಯೋಧನರ ಸ್ನೇಹ ಆದರ್ಶಪ್ರಾಯವಾಗಿದೆ. ವ್ಯಾಸನಲ್ಲಿರದ ಕರ್ಣ ಭಾನುಮತಿಯರು ಪಗಡೆಯಾಡುವ ಪ್ರಸಂಗ ಕರ್ಣ ಕೌರವರ ನಿಷ್ಕಳಂಕ, ಅಚಲ ಸ್ನೇಹದ ದ್ಯೋತಕದಂತಿದೆ.

ಪಂಪಭಾರತದಲ್ಲಿ ಕುಂತಿಯ ಪಾತ್ರ ತಾಯ್ತನದ ಘನತೆಯಿಂದ ಕೂಡಿದೆ. ಮಗ ಕರ್ಣನನ್ನು ಕಂಡು ಮರಗುವ ಕುಂತಿಯ ಅಸಹಾಯಕ ಸ್ಥಿತಿ ರಾಜಕಾರಣದ ತಂತ್ರಗಳಿಗೆ ಬಲಿಯಾದ ಅವಳ ತಾಯ್ತನದ ಸಂಕಟ ತಲ್ಲಣಗಳನ್ನು ಪಂಪ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಹಾಗೆಯೆ ನನ್ನಿಗೆ ಹೆಸರಾದ ಇನತನಯ ಕರ್ಣನ ವ್ಯಕ್ತಿತ್ವವೂ ಪ್ರಕಾಶಿತವಾಗಿದೆ. ತಂದೆ ಸೂರ್ಯದೇವ ಬಂದು ಕುಂತಿಯ ಮಾತಿನಂತೆ ನಡೆಯಬೇಡವೆಂದೂ ಪ್ರೇರೇಪಿಸಿದರೂ ಕರ್ಣ ತನ್ನ ಹಿತವನ್ನು ಬದಿಗೊತ್ತಿ ತಾಯಿಗೆ ವಚನ ನೀಡುತ್ತಾನೆ. ಈ ಪ್ರಸಂಗದಲ್ಲಿ ಕರ್ಣನ ದಾನಶೀಲತೆ, ಔದಾರ್ಯ, ಮಾತೃಭಕ್ತಿ, ಸತ್ಯಸಂಧತೆ, ಪರಾಕ್ರಮಗಳು ಪ್ರಜ್ವಲಿಸುತ್ತಾ ಪುಟಕ್ಕಿಟ್ಟ ಚಿನ್ನದಂತೆ ಕರ್ಣ ಶೋಭಿಸುತ್ತಾನೆ. ಭೀಷ್ಮರನ್ನು ಅಪಮಾನಗೊಳಿಸಿದರೂ ಅದು ವೈಯಕ್ತಿಕ ದ್ವೇಷದಿಂದಲ್ಲ, ಗೆಳೆಯನ ಮೇಲಿನ ಪ್ರೀತಿಯಿಂದ, ಪಾಂಡವ ಪಕ್ಷಪಾತಿಯಾದ ಭೀಷ್ಮರಿಂದ ತನ್ನೊಡೆಯನಿಗೆಲ್ಲಿ ಸೋಲಾದಿತೋ ಎಂಬ ಕಳವಳದಿಂದ ಅವನು ಹಾಗೆ ನಡೆದುಕೊಳ್ಳುತ್ತಾನೆ. ದ್ರೋಣ ಕರ್ಣನ ಕುಲವನ್ನು ಹಿಡಿದು ಮೂದಲಿಸಿದುದು ಮಾತ್ರ ಹಿಂದೆಲ್ಲಾ ಕುಲದ ಅಳುಕಿನಲ್ಲಿ ಮೌನದಿಂದಿದ್ದ ಕರ್ಣ ಇಂದು ತನ್ನ ಜನ್ಮರಹಸ್ಯ ಅರಿತು ತಾನು ಕುಲಜನೆಂದರಿತ್ತಿದ್ದರಿಂದ ಪ್ರತಿಭಟಿಸುತ್ತಾನೆ.

ಹೀಗೆ ಪಂಪ ತನ್ನ ಕಾವ್ಯಕ್ಕೆ ವ್ಯಾಸಭಾರತದ ಕಥೆಯನ್ನು ಆರಿಸಿಕೊಂಡರೂ ಅದನ್ನು ಯಥೋಚಿತವಾಗಿ ತನ್ನ ಕಾಲಘಟ್ಟದ ಕ್ಷಾತ್ರ, ವೀರಜೀವನ ಹಾಗೂ ಯುಗಧರ್ಮಗಳನ್ನು ಅಳವಡಿಸಿಕೊಂಡು ಸತ್ವಪೂರ್ಣವಾದ ಕಾವ್ಯವನ್ನು ರಚಿಸಿದ್ದಾನೆ. ಅಷ್ಟಾದಶವರ್ಣನೆಗಳು ಸೇರಿದಂತೆ

ಹಲವು ಬಗೆಯ ವರ್ಣನೆಗಳನ್ನು ಕಥನ ಕ್ರಮದಲ್ಲಿ ಬಳಸಿಕೊಂಡಿದ್ದಾನೆ. ಕಾವ್ಯಭಾಷೆ ಅಲಂಕಾರಿಕವಾಗಿದ್ದು ಪಂಪನೇ ಹೇಳುವಂತೆ ಸಮಗ್ರ ಕಾವ್ಯ ವರ್ಣಕದೊಡನೆ ಪ್ರಾರಂಭವಾಗಿ ದೇಸಿಯತೆಯಲ್ಲಿ ಮುಕ್ತಾಯವಾಗುತ್ತದೆ.

ಪುರಾಣ, ಇತಿಹಾಸ, ಐತಿಹ್ಯ, ದಂತಕಥೆ, ಸಮಕಾಲೀನ ಕಥೆಗಳು ಸಮಾವೇಶಿತವಾದ ಜನಪದ ಮಹಾಭಾರತವು ಕಾವ್ಯವಾಗಿದೆ. ವಸ್ತುವಿನ್ಯಾಸದಲ್ಲಿ ವ್ಯಾಸಭಾರತದ ಚೌಕಟ್ಟಿದ್ದರೂ ಕಥಾನಿರ್ವಹಣೆಯಲ್ಲಿ ಭಿನ್ನತೆಯಿದೆ. ಆರ್ಷ ಮತ್ತು ಆಧುನಿಕತೆ ಹಾಗೆಯೆ ಶಿಷ್ಟ ಮತ್ತು ಜನಪದೀಯ ಅಂಶಗಳು ಸಮೀಚನಗೊಂಡ ವಿನೂತನ ಸೃಜನಾತ್ಮಕ ಅಭಿವ್ಯಕ್ತಿಯಾಗಿದೆ. ಜನಪದ ಮಹಾಭಾರತ ಉದ್ದಕ್ಕೂ ವ್ಯಾಸಭಾರತದ ಕಥಾ ಪರಂಪರೆಯನ್ನು ಅನುಸರಿಸಿ ಒಂದರ್ಥದಲ್ಲಿ ಕುಮಾರವ್ಯಾಸಭಾರತಕ್ಕೆ ಹತ್ತಿರದಲ್ಲಿದೆ. ಪರಂಪರೆಯ ಕಥೆಯ ಜೊತೆಗೆ ಸ್ಥಳೀಯ ಮತ್ತು ಆಯಾಯ ಕಾಲದ ಯುಗಧರ್ಮದ ಮೌಲ್ಯಗಳು ಭಿನ್ನವಾಗುತ್ತಾ ಹೋಗುತ್ತವೆ.

ಜನಪದರು ಮಹಾಭಾರತದ ಕಥನದ ಪರಿಧಿಯೊಳಗೆ ತಮ್ಮ ವಾಸ್ತವ ಬದುಕಿನ ಸಾಮಾನ್ಯ ಮನುಷ್ಯ ಪಾತ್ರಗಳನ್ನು ಹಾಕಿದ್ದಾರೆ. ಮುದ್ದೇಗೌಡ ತನ್ನ ಭೂಮಿಯನ್ನು ಹಸನು ಮಾಡಲು ಭೀಮನನ್ನು ಕೂಲಿಯಾಳಾಗಿ ನೇಮಿಸಿಕೊಳ್ಳುವುದು, ಪಾಂಡುರಾಜನ ಸ್ವರ್ಗ ಪ್ರಾಪ್ತಿ ಸಂದರ್ಭದಲ್ಲಿ ಕಾಣಿಸಿಕೊಳ್ಳುವ ಮಡಿವಾಳ ಮಾಚಯ್ಯ, ಅವನ ಮಗಳು ಈರಮ್ಮ, ಏಕಚಕ್ರನಗರದಲ್ಲಿ ಪಾಂಡವರಿಗೆ ಆಶ್ರಯ ನೀಡುವ ಕುಂಬಾರಗುಂಡಯ್ಯ, ಕರ್ಣನ ಸಾಕು ತಂದೆ ಅಂಬಿಗರ ಚೌಡಯ್ಯ ಇಂತಹ ಹಲವಾರು ಪಾತ್ರಗಳು ಜನಪದ ಮಹಾಭಾರತದಲ್ಲಿವೆ.

ಜನಪದ ಕವಿ ತೆಗೆದುಕೊಳ್ಳುವ ಕಥೆ ಮಾರ್ಗ ಸಂಪ್ರದಾಯವಾದರೂ ಅದನ್ನು ನಿರ್ವಚಿಸುವ ಕ್ರಮ ತಮ್ಮ ಪರಿಸರ ಮತ್ತು ಸನ್ನಿವೇಶಗಳ ವಾಸ್ತವ ಬದುಕಿನ ಪಾತ್ರಗಳ ಮೂಲಕವೇ ಎನ್ನುವುದು ಗಮನಾರ್ಹ. ಜೊತೆಗೆ ವಚನಕಾರರ ಪ್ರಭಾವವೂ ಜನಪದ ಕವಿಯ ಮೇಲಾಗಿರುವುದುಂಟು. ಕಲಿಪ್ರಭಾವದಲ್ಲಿ ಕಾಣಿಸಿಕೊಳ್ಳುವ ಈರೇಗೌಡ, ಬೋರೇಗೌಡರು ಗ್ರಾಮೀಣ ಭಾರತದ ಕೃಷಿ ಸಂಸ್ಕೃತಿಯಲ್ಲಿ ಕಾಣುವ ಧೃಢ ಪಾತ್ರಗಳಾಗಿವೆ.

ಶಿಷ್ಟ ಸಾಹಿತ್ಯ ಪುರುಷ ಪ್ರಧಾನವಾಗಿದ್ದರೆ ಜನಪದ ಸಾಹಿತ್ಯ ಮಹಿಳಾಪರವಾಗಿದೆ. ಜನಪದ ಮಹಾಭಾರತದಲ್ಲಿನ ಕೊಂತಮ್ಮ ದ್ರೌಪದಿ ಹಾಗೂ ಇತರ ಸ್ತ್ರೀ ಪಾತ್ರಗಳು ವಿಶಿಷ್ಟವಾಗಿದೆ. ಕುಂತಿಯ ಗಜಗೌರಿ ವ್ರತದ ಆಚರಣೆ ವಿಧವೆಯೊಬ್ಬಳ ಆಸೆ, ಕನಸು, ನೋವು ನಲಿವುಗಳನ್ನು ಮಾರ್ಮಿಕವಾಗಿ ಬಿಂಬಿಸಲಾಗಿದೆ. ಕೆಲವೇ ದಿನಗಳ ಮಟ್ಟಿಗೆ ಪಾಂಡುರಾಜನನ್ನು ಕರೆಸಿಕೊಳ್ಳುವ ಕಲ್ಪನೆ ಹೆಣ್ಣಿನ ಸೌಭಾಗ್ಯದ ಅಭೀಪ್ಸೆಯನ್ನು ಪ್ರಕಟಿಸುತ್ತದೆ. ಈ ದಿಸೆಯಲ್ಲಿ ಪಂಪನ ವಿಕ್ರಮಾರ್ಜುನ ವಿಜಯವಾಗಲೀ, ಕುಮಾರವ್ಯಾಸನ ಕೃಷ್ಣ ಪಾರಮ್ಯವಾಗಲೀ ಆಗದೆ ಮಹಿಳಾ ಕೇಂದ್ರಿತ ಭಾರತವಾಗಿದ್ದು ರಾಗೌರವರ ಮಾತಿನಂತೆ ವೀರವನಿತೆ ದ್ರೌಪದಿ ವಿಜಯ ಎನ್ನುವಂತಿದೆ.

ಜನಪದ ಮಹಾಭಾರತವು ಶಿಷ್ಟ ಮಹಾಕಾವ್ಯಗಳಿಗಿಂತ ಭಿನ್ನವಾಗಿದೆ. ಪಂಪ ದ್ರೌಪದಿಯನ್ನು ಪಂಚವಲ್ಲಭೆಯಾಗಿಸಲು ಇಚ್ಚಿಸದೇ ಅವಳನ್ನು ಅರ್ಜುನನ ಮಡದಿಯಾಗಿಸಿದರೇ, ಕುಮಾರವ್ಯಾಸ ಅವಳನ್ನು ಪಂಚವಲ್ಲಭೆಯಾಗಿಯೇ ಚಿತ್ರಿಸಿದ್ದಾನೆ. ಜನಪದ ಮಹಾಭಾರತದಲ್ಲೂ ಆಕೆ ಪಂಚವಲ್ಲಭೆಯಾದರೂ ಅವಳನ್ನು ವಿವಾಹವಾಗುವ ರೀತಿ ಮಾತ್ರ ಬೇರೆ ಬೇರೆಯಾಗಿದೆ. ಪಂಪ ಮತ್ತು ಕುಮಾರವ್ಯಾಸರಲ್ಲಿ ಮತ್ಸ್ಯಯಂತ್ರ ಭೇಧಿಸಿದವರಿಗೆ ದ್ರೌಪದಿಯನ್ನು ವಿವಾಹಾವಾಗುವ ಯೋಗವಾದರೆ, ಜನಪದ ಮಹಾಭಾರತದಲ್ಲಿ ಶಬ್ದವೇಧಿ ವಿದ್ಯೆ ಪ್ರದರ್ಶಿಸಬೇಕಾಗುತ್ತದೆ. ಅರ್ಜುನ ಶಬ್ದವೇಧಿ ವಿದ್ಯೆಯಿಂದ ತೊಂದರೆ ಕೊಡುತ್ತಿದ್ದ ಮಾರೀಚ ಕಾಗೆಯನ್ನು ಕೊಂದು ಆಕೆಯನ್ನು ವರಿಸಿದ ಅನಂತರ ಕುಂತಿಯ ಮಾತಿನಂತೆ ಐವರು ದ್ರೌಪದಿಯನ್ನು ವಿವಾಹವಾಗುತ್ತಾರೆ.

ಪಂಪ-ಕುಮಾರವ್ಯಾಸರು ತಮ್ಮ ಕಥೆಯ ಆಶಯಕ್ಕನುಗುಣವಾಗಿ ಕಾವ್ಯರಚಿಸಿರುವುದರಿಂದ ವ್ಯಾಸಭಾರತದಲ್ಲಿ ಬರುವ ನಳ-ದಮಯಂತಿ, ಋಷ್ಯಶೃಂಗ, ಶಕುಂತಲೆ, ಯಾಯಾತಿ, ರಾಮೋಪಾಖ್ಯಾನ ಮುಂತಾದ ಪುರಾಣಪುರುಷರ ಕಥೆಗಳನ್ನು ಜನಪದ ಮಹಾಭಾರತದಲ್ಲಿ ಕಾಣುವುದಿಲ್ಲ. ಆದರೆ ಪರ್ಯಾಯವೆಂಬಂತೆ ನಾಗರುಸಿಯ ಕಥೆ, ಮಾರ್ಕಂಡಯ್ಯ ಕಥೆ, ಅಂಬಿಗರ ಚೌಡಯ್ಯನ ಕಥೆ, ಭದ್ರಬಾಹು ಕಥೆ, ಬಭ್ರುವಾಹನನ ಕಥೆ, ಅಂಗಗೊರಬನ ಕಥೆ ಮುಂತಾದ ಸಿದ್ಧ ಪುರುಷರ ಕಥೆಗಳಿವೆ. ಗಜಗೌರಿವ್ರತ ಪಂಪಭಾರತ, ಕುಮಾರವ್ಯಾಸಭಾರತದಲ್ಲಿ ಕಾಣದ ಜನಪದ ಮಹಾಭಾರತದಲ್ಲಿ ಕಾಣುವ ಪ್ರಸಂಗವಾಗಿದೆ. ಹಾಗೆಯೆ ಅರ್ಜುನ ಜೋಗಿಯಾಗುವ ಪ್ರಸಂಗವು ಶಿಷ್ಟಭಾರತದಲ್ಲಿಲ್ಲ. ಮೊದಲಿಗೆ ಜೋಗಿ ಹಾಡು ಪ್ರಚಲಿತದಲ್ಲಿದ್ದು ಅದೇ ಮುಂದೆ ಪೂರ್ಣ ಮಹಾಭಾರತಕ್ಕೆ ಕಾರಣವಾಗಿರಬಹುದೆಂಬ ಅಭಿಪ್ರಾಯವು ವಿದ್ವಾಂಸರಲ್ಲಿದೆ. ಹೀಗೆ ಜನಪದ ಮಹಾಭಾರತ ಪಂಪಭಾರತಕ್ಕಿಂತ ಕುಮಾರವ್ಯಾಸಭಾರತಕ್ಕೆ ಹತ್ತಿರವಾಗುತ್ತದೆ. ಪಂಪ ಮಹಾಭಾರತದ

ಕಥೆ ಹೇಳುತ್ತೇನೆಂದು ಹೊರಟರೂ ಅವನು ಆಯ್ಕೆ ಮಾಡಿಕೊಂಡಿದ್ದು ಅರ್ಜುನನ ಸಾಹಸವನ್ನು ಮಾತ್ರ. ಕುಮಾರವ್ಯಾಸನಿಗಾದರೂ ಪಾಂಡವರು ಮುಖ್ಯರಾಗದೆ ಕೃಷ್ಣಮಹಿಮೆಯನ್ನು ಸಾರಲು ತನ್ನ ಕಾವ್ಯ ಮುಡುಪಾಗಿಟ್ಟನು. ಜನಪದ ಕವಿಗೆ ಪಾಂಡವರು ಮುಖ್ಯರಾಗದೆ ಎಲ್ಲರನ್ನು ಸಮದೃಷ್ಟಿಯಿಂದ ಪರಿಭಾವಿಸುವ ಮನೋಧರ್ಮವಿದೆ. ಹೀಗಾಗಿ ವ್ಯಕ್ತಿನಿಷ್ಠತೆ ಗೌಣವಾಗಿ, ವಸ್ತುನಿಷ್ಠತೆ ಪ್ರಧಾನವಾಗಿ ಜನಪದ ಮಹಾಭಾರತವು ಸಮದರ್ಶಿತ್ವದ ಕಾವ್ಯವಾಗಿ ರೂಪು ತಳೆದಿದೆ.

ಪಂಪ ಕುಮಾರವ್ಯಾಸ ಯುಗಪ್ರವರ್ತಕರಾಗಿ ಜನಪ್ರಿಯರಾದರೆ ಜನಪದ ಕವಿ ಅಜ್ಞಾತಕವಿ. ಪರಂಪರಾಗತವಾಗಿ ತಲೆಮಾರಿನಿಂದ ತಲೆಮಾರಿಗೆ ಬೆಳೆದು ಬಂದ ಕಾವ್ಯವನ್ನು ಗಾಯಕ ಕೇಳಿ ಕಲಿತು ಸಮಗ್ರ ಭಾರತವನ್ನು ಹಾಡಿರುವುದು ವಿಸ್ಮಯ. ಪಂಪ ಕಲಿತವರಿಗೆ ಕಲ್ಪತರುವಾದರೆ ಕುಮಾರವ್ಯಾಸ ಕಲಿಯದವರಿಗೂ ಕಾಮಧೇನು. ಆದರೆ ಜನಪದ ಕವಿ ಕಲ್ಪಿತ ರೂಪಕಕ್ಕಿಂತ ವಾಸ್ತವ ಜೀವನಾನುಭವದಿಂದ ಆವಿರ್ಭವಿಸಿದ ಪ್ರತಿಭಾಸಂಪನ್ನನಾಗಿದ್ದಾನೆ. ಕಥೆಯನ್ನು ತನ್ನ ಕಾಲದ ಸಾಮಾಜಿಕ ಸಿತ್ಯಂತರಗಳಿಗೆ ಭೌಗೋಳಿಕ ಹಿನ್ನಲೆಗಳಿಗೆ ಅನುಗುಣವಾಗಿ ಹಾಡಿದರೂ ಅವು ಯಾವುವು ಅಸಹಜವೆನ್ನಿಸದೆ ಇಂದಿಗೂ ಸಹಜವಾಗಿದೆ. ಜನಪದ ಮಹಾಭಾರತದ ಮೇಲೆ ಕುಮಾರವ್ಯಾಸಭಾರತದ ಪ್ರಭಾವವಿದೆಯೇ ಅಥವಾ ಕುಮಾರವ್ಯಾಸಭಾರತದ ಜನಪದ ಮಹಾಭಾರತದ ಪ್ರೇರಣೆ ಲಭಿಸಿತೇ ಎಂದು ಖಚಿತವಾಗಿ ಹೇಳಲಾಗದಿದ್ದರೂ ಒಂದು ಅಂತರಸಂಬಂಧಿತ ಇರಬಹುದು ಎನಿಸುತ್ತದೆ. ಆದರೆ ಕುಮಾರವ್ಯಾಸಭಾರತ ಪಂಪಭಾರತದಿಂದ ಪ್ರೇರಣೆಯಾಗಿರುವುದಕ್ಕೆ ಕಾವ್ಯದಲ್ಲಿ ಆಧಾರಗಳಿವೆ. ಕಥಾಧಾರೆಯಲ್ಲಿ ಸನ್ನಿವೇಶಗಳ ಆಯ್ಕೆ, ಘಟನೆಗಳ ವಿಸ್ತರಣೆ, ಸಂಗ್ರಾಹ್ಯಶೀಲತೆ, ಸನ್ನಿವೇಶಪಲ್ಲಟ, ವ್ಯಕ್ತಿ ಚಿತ್ರಣ, ವರ್ಣನೆ, ಭಾವಉಕ್ತಿ ಮುಂತಾದ ಹಲವು ವಿಶಿಷ್ಟ ಗುಣಗಳು ಪಂಪನ ಪ್ರಭಾವವನ್ನು ಶ್ರುತಪಡಿಸುತ್ತದೆ. ಕೆಲವೆಡೆ ಅದು ಸ್ಫುಟವಾಗಿದ್ದರೆ ಕೆಲವೆಡೆ ಅದು ಅಸ್ಫುಟವಾಗಿ ಕಾಣಿಸುತ್ತವೆ.

ಜನಪದ ಮಹಾಭಾರತ ಅನೇಕ ವೈಶಿಷ್ಟ್ಯಗಳನ್ನು, ಸ್ಥಳೀಯ ವಿಚಾರಗಳನ್ನು ಪಡೆದುಕೊಂಡಿದೆ. ಮೂಲಭಾರತದ ಅನುಸರಣೆಯಂತಿದ್ದರೂ ದಟ್ಟ ವಿವರಗಳಲ್ಲಿ ಸ್ಥಳೀಯ ವಿಚಾರಗಳು ಐತಿಹ್ಯಗಳು ಸೇರಿವೆ. ಜನಪದ ಮಹಾಕಾವ್ಯವೊಂದು ರೂಪ ತಳೆದ ಹಿನ್ನಲೆಯಲ್ಲಿ ಇದು ಅವಶ್ಯಕವೂ ಸಹಜವೂ ಆಗಿದೆ. ಜನಪದ ಮಹಾಭಾರತದ ಅನೇಕ ಘಟನೆಗಳಿಗೆ ವ್ಯಾಸಭಾರತ ಮೂಲ ಆಕರವಾದರೂ ವಿಭಿನ್ನ ಮೂಲಗಳಿಂದ ಜನಪದ ಕವಿ ಹಲವು ಕಲಾ ಪ್ರಕಾರಗಳಲ್ಲಿನ ಕಥನಗಳನ್ನು ಸಂಗ್ರಹಿಸಿ ತನ್ನ ಕಥನ ವಿನ್ಯಾಸದಲ್ಲಿ ಅಂತರ್ಗತಗೊಳಿಸಿಕೊಂಡಿರುವುದು ಸ್ಪಷ್ಟ. ಪ್ರಸಿದ್ಧ ವಿದ್ವಾಂಸರಾದ ರಾಗೌರವರ

ಅಭಿಪ್ರಾಯದಂತೆ 'ಜನಪದ ಭಾರತ ಒಮ್ಮೆಲೆ ರೂಪುಗೊಂಡ ಕಥೆ ಇದಲ್ಲವಾದ್ದರಿಂದ ಇಂತಹ ಸಾಮಾಯಿಕ ಸೇರ್ಪಡೆಗಳು ಅನಿವಾರ್ಯವೆನಿಸುತ್ತದೆ.' ಹೀಗಾಗಿ ಮೂಲ ಕಥಾನಕವನ್ನು ಸಮಗ್ರವಾಗಿ ಪರಿಭಾವಿಸಲು ಸಾಧ್ಯವಾಗಿದೆ.

ಜನಪದ ಮಹಾಭಾರತದ ಮೇಲೆ ಪಂಪಭಾರತದ ಪ್ರೇರಣೆ ಕರ್ಣನ ಜನ್ಮ ವೃತ್ತಾಂತ ಹಾಗೂ ಇನ್ನಿತರ ಪ್ರಸಂಗಗಳಲ್ಲಿ ಆಗಿರುವುದನ್ನು ಹೊರತುಪಡಿಸಿದರೆ ಉಳಿದ ಪ್ರಸಂಗಗಳಲ್ಲಿ ನೇರವಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ. ಆದರೆ ಕುಮಾರವ್ಯಾಸಭಾರತದ ಪ್ರಭಾವ ಜನಪದ ಮಹಾಭಾರತ ಬಹುಪಾಲು ಪ್ರಸಂಗಗಳಲ್ಲಿ ನಿಚ್ಚಳವಾಗಿ ಕಾಣಿಸುತ್ತದೆ.

ಕುಮಾರವ್ಯಾಸನ ದೇಸಿ ಶಬ್ದ ಪರಿಣಿತಿ ಮತ್ತು ಹಲವು ಅರ್ಥ ಹೊಮ್ಮಿಸುವ ಪರಿ ಅನನ್ಯ. ಅವನ ಭಾಷೆ ಬಹುಪಾಲು ಜನಪದೀಯವಾದ್ದದು. ಜನಪದ ನುಡಿಗಟ್ಟು, ಗಾದೆ ಪಡೆನುಡಿಗಳು ನಿಬಿಡವಾಗಿವೆ. ವ್ಯಾಸಭಾರತವನ್ನು ಆಕರವಾಗಿಟ್ಟುಕೊಂಡಿದ್ದರೂ, ವಸ್ತುನಿರ್ವಹಣೆಯಲ್ಲೂ ಮುಖ್ಯ ಘಟ್ಟಗಳಲ್ಲಿ ಬರುವ ವರ್ಣನೆಗಳನ್ನು ಸಂಸ್ಕೃತ ಭೂಯಿಷ್ಟಗೊಳಿಸುವುದರಲ್ಲೂ ಅವನ ವ್ಯಕ್ತಿತ್ವ ಮತ್ತು ಅನುಭವ ಪೂರ್ಣಸ್ವರೂಪ ಪ್ರಕಟಗೊಂಡಿದ್ದರೆ ಜನಪದ ಭಾಷೆ ನುಡಿಗಟ್ಟು, ಗಾದೆ, ಬೈಗುಳ, ಒರಟುತನಗಳಲ್ಲಿ ಜನಪದೀಯತೆ ಮೈವೆತ್ತಿದೆ. ಆತ ಒಂದು ಕಡೆ ತನ್ನ ವ್ಯಕ್ತಿತ್ವದ ಮೇಲ್ಮೆಯನ್ನು ಲೆಕ್ಕಿಸದೆ ಅತ್ಯಂತ ಕೆಳಮಟ್ಟಕ್ಕೆ ಇಳಿದು ಬೈದಾಡಿಕೊಳ್ಳುವ ನಡಾವಳಿಯನ್ನು ತನ್ನ ಪಾತ್ರಗಳಿಗೆ ನೀಡಿರುವಂತೆಯೇ ಸಂಪೂರ್ಣ ಚಿನ್ಮಯವಾದ ಮಹಾನ್ ಸಾಧಕನಿಗೆ ಮಾತ್ರ ಸಾಧ್ಯವಾಗುವಂತಹ ಆಧ್ಯಾತ್ಮದ ಪರಿಭಾಷೆಯಲ್ಲೂ ಮಾತನಾಡಬಲ್ಲವನಾಗಿದ್ದಾನೆ. ಒಟ್ಟಿನಲ್ಲಿ ಅವನದು ಸಂಕೀರ್ಣಮಯವಾದ ವ್ಯಕ್ತಿತ್ವವಾದ್ದರಿಂದ ಜನಸಾಮಾನ್ಯರಿಗೆ ಪಂಪಭಾರತಕ್ಕಿಂತ ಕುಮಾರವ್ಯಾಸಭಾರತ ಹೆಚ್ಚು ಪ್ರಿಯವಾಗುವುದರ ಜೊತೆಗೆ ಹಾಡುಗಬ್ಬವಾಗಿಯೂ ಪರಿಣಮಿಸಿತು. ಈ ಹಿನ್ನಲೆಯಲ್ಲಿಯೇ ಜನಪದ ಮಹಾಭಾರತದ ಮೇಲೆ ಪಂಪಭಾರತದ ಪ್ರಭಾವಕ್ಕಿಂತ ಕುಮಾರವ್ಯಾಸಭಾರತದ ಪ್ರಭಾವ ಹೆಚ್ಚಾಗಿರುವುದನ್ನು ಗುರುತಿಸಬಹುದು.

ಜನಪದ ಮಹಾಭಾರತದಲ್ಲಿ ಕಾಣುವ ಮತ್ತೊಂದು ವೈಶಿಷ್ಟ್ಯವೆಂದರೆ ಗಾಯಕನ ಅಭಿವ್ಯಕ್ತಿವಿಧಾನ. ಸಂಭಾಷಣೆಯ ಮೂಲಕವೇ ಕಥೆಯನ್ನು ಮುಂದುವರಿಸಿರುವುದು ಅವನ ಮುಖ್ಯಲಕ್ಷಣ. ಅವನ ಸುಲಭಸಾಧ್ಯವಾದ ಸ್ಮರಣಾಶಕ್ತಿ ಗಮನೀಯ. ಅವನು ಕಥೆಯನ್ನು ಮರುಸೃಷ್ಟಿಸುವಂತೆ ಸಂದರ್ಭೌಚಿತ್ಯ ನಿರರ್ಗಳ ಸಂಭಾಷಣೆಯನ್ನು ಹೆಣೆಯಬಲ್ಲ. ಈ ದಿಸೆಯಲ್ಲಿ ಆತನ ಮೇಲಾಗಿರಬಹುದಾದ ಯಕ್ಷಗಾನ ಬಯಲಾಟದ ಪ್ರಭಾವ ಸ್ಪಷ್ಟವಾಗಿದೆ.

ಪಂಪಭಾರತ ಮತ್ತು ಕುಮಾರವ್ಯಾಸಭಾರತಗಳಿಗಿಂತ ಜನಪದ ಮಹಾಭಾರತದಲ್ಲಿ ನಾಟಕೀಯತೆ ಸೊಗಸಾಗಿ ಮೂಡಿಬಂದಿದೆ. ಇದರಿಂದಾಗಿ ವಾಚನ ಮತ್ತು ಶ್ರವಣ ಸಾಧ್ಯತೆ ಹೆಚ್ಚಾಗಿ ಜನಪದರ ಮನಸ್ಸಿನಲ್ಲಿ ನೆಲೆಸಲು ಸಹಾಯವಾಗಿದೆ. ಜನಪದ ಮಹಾಭಾರತದಲ್ಲಿ ಜನಪದರು ತಮ್ಮ ಸುತ್ತಮುತ್ತಲಿನ ಗ್ರಾಮೀಣ ಬದುಕನ್ನು ತಂದಿರುವುದರಿಂದ ಸಂಸ್ಕೃತಿ ಮುಂದಿನ ಪೀಳಿಗೆಯವರಿಗೂ ಲಭ್ಯವಾಗುತ್ತದೆ. ಶಿಷ್ಟ ಮಹಾಭಾರತಕ್ಕೆ ಹೆಚ್ಚಿನ ಭಾಗದಲ್ಲಿ ಅದರಲ್ಲೂ ವ್ಯಾಸ ಮತ್ತು ಕುಮಾರವ್ಯಾಸಭಾರತಕ್ಕೆ ಸಾದೃಶ್ಯವಾಗಿ ಚಿತ್ರಣಗೊಂಡಿದ್ದರೂ ಜನಪದ ಮಹಾಭಾರತ ತನ್ನದೇ ಆದ ವೈಶಿಷ್ಟ್ಯಗಳಿಂದಾಗಿ ಬೇರೆಯಾಗಿಯೇ ನಿಲ್ಲುತ್ತದೆ.

ಒಟ್ಟಿನಲ್ಲಿ ಜನಪದ ಮಹಾಭಾರತ ಜನಪದರ ಬದುಕಿನ ಸರ್ವಮುಖಗಳನ್ನು ಅನಾವರಣಗೊಳಿಸುತ್ತದೆ. ಹೀಗೆ ತಮ್ಮದೇ ಆದ ಸಂಸ್ಕೃತಿಯ ನೆಲೆಗಟ್ಟಿನಲ್ಲಿ ಪಂಪಭಾರತ, ಕುಮಾರವ್ಯಾಸಭಾರತದಲ್ಲಲ್ಲಿದ ಅನೇಕ ಬಗೆಯ ಹೊಳಹುಗಳನ್ನು ಕಾಣುವುದರ ಮೂಲಕ ಕಾವ್ಯ ಭಿನ್ನ ಮತ್ತು ವಿಶಿಷ್ಟವಾಗಿ ನಿಲ್ಲುತ್ತದೆ. ಶಿಷ್ಟ ಮತ್ತು ಜನಪದಕ್ಕೆ ಸಾಮ್ಯತೆ ಕೆಲವೆಡೆ ಕಂಡರೂ ಶಿಷ್ಟ ಮತ್ತು ಜನಪದಗಳ ನಡುವೆ ಕೊಳುಕೊಡುಗೆ ನಡೆಯುವುದು ಸಹಜ. ಜನಪದ ಮಹಾಭಾರತ ಜನರ ನಾಲಗೆಯ ಮೇಲೆ ನಲಿದಾಡುತ್ತಾ ನಿತ್ಯ ಪರಿವರ್ತನಾಶೀಲವಾಗಿ ಸಜೀವವಾಗಿದೆ.

ಪಂಪಭಾರತ, ಕುಮಾರವ್ಯಾಸಭಾರತದ ಹಾಗೂ ಜನಪದ ಮಹಾಭಾರತಗಳನ್ನು ತೌಲನಿಕವಾಗಿ ಪರಿಶೀಲಿಸಿ ಅರ್ಥೈಸಿಕೊಳ್ಳುವ ನೆಲೆಯಲ್ಲಿ ಸ್ಪಷ್ಟವಾಗುತ್ತದೆ. ಅಭಿಜಾತೀಯ ಕಾವ್ಯ ಪರಂಪರೆಗೆ ಸಮಾನಾಂತರದಲ್ಲಿ ಮುಖಾಮುಖಿಯಾಗಿರುವ ಜನಪದ ಮಹಾಭಾರತ ಇಹದ ಬದುಕಿನಿಂದಲೇ ಆವಿರ್ಭವಿಸಿದ ಒಂದು ಅನನ್ಯ ಮಹಾಕಾವ್ಯ ಎಂದು, ಈ ನಾಡಿನ ಮುಖ್ಯಧಾರೆಯಲ್ಲಿನ ಧರ್ಮ ಸಂಸ್ಕೃತಿಗಳಿಗೆ ವೈರುಧ್ಯದಲ್ಲಿ ನಿಂತು ಅಪ್ರಧಾನ, ಅವೈದಿಕಸ್ತರದಲ್ಲಿರುವ ಕಿರು ಸಂಸ್ಕೃತಿಯ ಮತ್ತು ಸಮಾಜದ ಅಂಚಿಗೆ ತಳ್ಳಲ್ಪಟ್ಟ ಸಮುದಾಯಗಳ ಜೀವನಕ್ರಮ, ದೈವಶ್ರದ್ಧೆ, ನಂಬಿಕೆ, ಆಚರಣೆ, ನೆಲದ ಗುಣಕ್ಕನುಗುಣವಾಗಿ ಅಂಕುರಿಸಿ ಹೊಮ್ಮಿ ಹಬ್ಬುವ ಪ್ರಕೃತಿ ಸಹಜ ಪ್ರತಿಭೆ, ಕಲಾವಂತಿಕೆ ಮುಂತಾದ ವಾಸ್ತವ ಬದುಕಿಗೆ ಹತ್ತಿರವಾದ, ನೈಜವಾದ, ಅನೂಹ್ಯವಾದ ಅನುರೂಪ ಪ್ರತಿಭೆಯನ್ನು ಜನಪದ ಮಹಾಕಾವ್ಯ ತನ್ನ ಒಡಲಲ್ಲಿ ಹುದುಗಿಸಿಕೊಂಡಿದೆ.

ಹೀಗಾಗಿ, ಪ್ರಭುತ್ವ, ಧರ್ಮಗಳ ಸರಹದ್ದು ಮೀರಿ ನಿಂತ ಕಿರುಸಂಸ್ಕೃತಿ ಸಮುದಾಯಗಳ ಜೀವನಾದರ್ಶ ಮತ್ತು ಜೀವಸೆಲೆ ಚಿಮ್ಮಿಸುವ ಮಹಾಕಾವ್ಯ ಜನಪದ ಮಹಾಭಾರತ ಎನಿಸುತ್ತದೆ.

# ಉಪಸಂಹಾರ

ವ್ಯಾಸಮಹರ್ಷಿಗಳ ಮಹಾಭಾರತ ಭಾರತೀಯ ಸಂಸ್ಕೃತಿ ಮತ್ತು ಸೃಜನಶೀಲ ಅಭಿವ್ಯಕ್ತಿಯ ಪ್ರತೀಕವಾಗಿದೆ. ಸಮಗ್ರ ಸಮುದಾಯದ ಆಶೋತ್ತರಗಳು ಮನುಷ್ಯ ಸ್ವಭಾವದ ವೈರುಧ್ಯಗಳು ಮನುಷ್ಯ ಸಂಬಂಧದ ಸಂಕೀರ್ಣತೆಯನ್ನು ಮತ್ತು ಧರ್ಮ ಸೂಕ್ಷ್ಮ ಸಂಬಂಧಿತ ಸಂಗತಿಗಳು ಮುಂತಾದವುಗಳನ್ನು ಗರ್ಭೀಕರಿಸಿಕೊಂಡಿರುವ ಈ ಮಹಾಕಾವ್ಯ ಎಲ್ಲಾ ಕಾಲಘಟ್ಟಗಳ, ಸಮಾಜ ಜೀವನದ ಒಂದು ಅವಿನಾಭಾವ ಜೀವಸೆಲೆಯಂತಿದೆ. ಆಯಾ ಯುಗ ಧರ್ಮಗಳ ಆಶಯಕ್ಕೆ ಅನುಗುಣವಾಗಿ ಹಲವು ಪಲ್ಲಟಗಳನ್ನು ಕಂಡರೂ ಮೂಲ ಕಥಾಧಾರೆ ಅಭಾದಿತವಾಗಿ ಉಳಿದಿದೆ. ಅಲ್ಲದೆ ವರ್ತಮಾನ ಸಂದರ್ಭದಲ್ಲಿ ಕಾಣುವ ವೈವಿಧ್ಯಮಯ ಸಾಹಿತ್ಯಿಕ ಚಳುವಳಿಗಳ, ಸಿದ್ಧಾಂತಗಳ ನೆಲೆಯಿಂದಲ್ಲೂ ಅಭ್ಯಾಸಯೋಗ್ಯವಾಗಿರುವುದು ಈ ಮಹಾಕಾವ್ಯದ ಬಹು ಆಯಾಮಿಯ ಜೀವಂತಿಕೆಯನ್ನು ಶೃತಪಡಿಸುತ್ತದೆ.

ದಾರ್ಶನಿಕ ಕವಿ ವ್ಯಾಸರಿಗೆ ತಮ್ಮ ಕಥನದಲ್ಲಿ ಯಾರು ಮುಖ್ಯರಲ್ಲ, ನಾಯಕರಲ್ಲ, ಹೀಗಾಗಿ ಇಲ್ಲಿನ ಹಲವು ಪಾತ್ರಗಳು ಮನುಷ್ಯನ ವಿಭಿನ್ನ ವೈಲಕ್ಷಣ್ಯ ವಿಶಿಷ್ಟ ವ್ಯಕ್ತಿತ್ವದ ದ್ಯೋತಕದಂತಿವೆ. ಇದೊಂದು ಯುದ್ಧಕೇಂದ್ರಿತ ಮಹಾಕಥನವಾಗಿದ್ದರೂ, ವೀರಕ್ಕಿಂತ ಮಿಗಿಲಾಗಿ ಮನುಷ್ಯನ ಅಂತರಂಗದ ಶೋಧದಲ್ಲಿ ಕವಿಮನಸ್ಸು ನಿರತವಾದಂತಿದೆ. ವ್ಯಾಸರು ಚಿತ್ರಿಸಿದ ವಿವಿಧ ರಸಾಭಾವಗಳ ವ್ಯಕ್ತಿಗಳು ಮುಂದಿನ ಅನೇಕ ಬಿಡಿ ಬಿಡಿ ವ್ಯಕ್ತಿಚಿತ್ರಣ ಮಾಡುವ ಕಾವ್ಯಗಳಿಗೆ ಪ್ರೇರಣೆಯಂತಿದೆ. ಈ ಕಾರಣದಿಂದಲೇ ನಳ, ಸಾವಿತ್ರಿ, ಶಕುಂತಲೆ, ಯಯಾತಿ ಮುಂತಾದ ಹತ್ತು ಹಲವು ವಿಭಿನ್ನ ಪಾತ್ರಗಳು ಈ ಮಹಾಕಾವ್ಯದ ಒಡಲಿಂದ ಹೊಮ್ಮಿಬಂದು ಬಿಡಿಯಾದ ಕಾವ್ಯಗಳಾಗಿ ರೂಪುತಳೆದಿದೆ. ತ್ರೈಗುಣೋದ್ಭವನಾದ ಮನುಷ್ಯ ವಿಧಿನಿಯಂತ್ರಿತ ಕರ್ಮದಲ್ಲಿ ತೊಡಗಿಕೊಳ್ಳುವುದು ಅವನ ಕರ್ತವ್ಯ. ಆದರೆ ಅದರ ಫಲಾಫಲಗಳು ದೈವನಿಯಾಮಕ ಎಂಬ ತಾತ್ವಿಕ ನಿಲುವು ವ್ಯಾಸನಲ್ಲಿದ್ದು, ಅದರ ವಿಶ್ವಸತ್ಯ, ವಿಶ್ವಸಾಮರಸ್ಯದ ತತ್ವವನ್ನು ಪ್ರತಿಪಾದಿಸುವುದಷ್ಟೇ ಅವನ ಉದ್ದಿಷ್ಟವಾಗಿತ್ತು ಎಂಬುದಕ್ಕೆ ಭಗವದ್ಗೀತೆಯೇ ಸಾಕ್ಷಿಯಾಗಿದೆ. ಮಹಾಕಾವ್ಯದ ಒಂದು ಅನೂಚಾನ ಅಂಗವಾಗಿ ಕಾವ್ಯದ ಒಟ್ಟು ಬಂಧದಲ್ಲಿ ಭಗವದ್ಗೀತೆ ಸ್ಥಾನ ಪಡೆದಿರುವುದು ಅವನ ದಾರ್ಶನಿಕ ಚಿಂತನೆಯನ್ನು ಶ್ರುತ ಪಡಿಸುತ್ತದೆ. ಮಹಾಭಾರತದಲ್ಲಿರುವುದು ಎಲ್ಲಿಯೂ ಇರಬಹುದು. ಆದರೆ ಇಲ್ಲಿ ಇಲ್ಲದುದು ಎಲ್ಲಿಯೂ ಇರಲಾರದೆಂದು ಹೇಳುವುದು ಅಕ್ಷರಶಃ ನಿಜ. ಮಹಾಭಾರತ ಪ್ರಾಚೀನ ಭಾರತದ ಜ್ಞಾನಕೋಶವಾಗಿದ್ದರೆ, ಆಧುನಿಕರಿಗೆ ಪ್ರೇರಣಾತ್ಮಕವಾಗಿದೆ.

ಹೀಗೆ ಮಹಾಭಾರತವೆಂದರೆ ಕಾವ್ಯ, ಇತಿಹಾಸ, ನೀತಿ, ಜ್ಞಾನ, ಧರ್ಮ, ತತ್ತ್ವವಿಚಾರ ಎಲ್ಲವೂ ಅಡಕವಾದ ವಿಶ್ವಕೋಶವೆಂಬಂತಿದೆ. ಓದುವವರಿಗೆ ಕಾವ್ಯದೃಷ್ಟಿಯಂತೆಯೇ ಧರ್ಮದೃಷ್ಟಿಯೂ ಇದೆ. ಮಹಾಭಾರತದ ಪಠಣದಿಂದ ಸದ್ಗತಿ ಲಭಿಸುತ್ತದೆಂಬ ನಂಬಿಕೆ ಸನಾತನೀಯರದಾಗಿದೆ. ಹಾಗಾಗಿ ಮಹಾಭಾರತ ಕವಿಗಳ ರಚನೆಗೆ, ನಾಟಕಕಾರರಿಗೂ, ಕೀರ್ತನಕಾರರಿಗೂ ಪ್ರೇರಕ ಪೋಷಕವಾಗಿದ್ದು ಇಂದಿಗೂ ಭಾರತೀಯರ ಮನಸ್ಸಿನಲ್ಲಿ ನಿತ್ಯನೂತನವಾಗಿದೆ.

ಭಾರತೀಯ ಭಾಷೆಗಳಲ್ಲಿರುವ ಎಲ್ಲಾ ಕಾವ್ಯಗಳಿಗೂ ಪ್ರೇರಣೆಯಾಗಿರುವಂತಿರುವ ಮಹಾಭಾರತ ಕನ್ನಡ ಕಾವ್ಯಪರಂಪರೆಗೂ ಇದು ಪ್ರೇರಣೆಯಾಗಿದೆ. ಪಂಪಕವಿ ರಚಿಸಿದ 'ವಿಕ್ರಮಾರ್ಜುನ ವಿಜಯಂ' ಅಥವಾ ಪಂಪಭಾರತ, ವ್ಯಾಸಮಹಾಭಾರತದ ಕಥಾವಸ್ತುವನ್ನು ಅವಲಂಬಿಸಿದ್ದರೂ ಅದನ್ನು ಯಥಾವತ್ತಾಗಿ ಅನುಸರಿಸದೆ ತನಗೆ ಆಶ್ರಯ ನೀಡಿದ ಅರಿಕೇಸರಿಯನ್ನು ಹೊಗಳಲು ಅನುವಾಗುವಂತೆ ಕಥೆಯನ್ನು ಮಾರ್ಪಡಿಸಿಕೊಂಡನು. ಜೊತೆಗೆ ತಾನು ಬಾಳಿ ಬದುಕಿನ ಕಾಲಘಟ್ಟದ ಇತಿಹಾಸ, ರಾಜಕೀಯ, ಪೌರುಷ ಮತ್ತು ಸಾಮಾಜಿಕ ಸನ್ನಿವೇಶಗಳನ್ನು ಕಾವ್ಯದಲ್ಲಿ ಸಮೀಕರಿಸಿರುವುದನ್ನು ಕಾಣಬಹುದು. ಹೀಗಾಗಿ ಪಂಪಭಾರತ ಚಾರಿತ್ರಿಕ ಹಾಗೂ ಲೌಕಿಕ ಕಾವ್ಯವೆನಿಸಿದೆ.

ಕುಮಾರವ್ಯಾಸನೆಂದು ಪ್ರಸಿದ್ಧನಾದ ಗದುಗಿನ ನಾರಾಣಪ್ಪನೂ ವ್ಯಾಸಭಾರತವನ್ನು ತನ್ನ ಕಾವ್ಯದ ಆಕರವನ್ನಾಗಿ ಆರಿಸಿಕೊಂಡಿದ್ದರೂ, ಭಾಗವತ ಪರಂಪರೆಯ ಕೃಷ್ಣನನ್ನು ನಾಯಕನನ್ನಾಗಿಸಿದಂತಹ ಮಹಾಭಾರತದ ಕಥೆಯನ್ನು ನಿರೂಪಿಸಿದ್ದಾನೆ. ಅಲ್ಲದೆ ಕುಮಾರವ್ಯಾಸ ತನಗಿಂತ ಹಿಂದೆ ರಚಿತವಾಗಿದ್ದ ಕನ್ನಡ ಮಹಾಭಾರತಗಳನ್ನು ಅವಲೋಕಿಸಿ ಸ್ಫೂರ್ತಿ ಪಡೆದವನಾಗಿದ್ದಾನೆ. ಕಥೆಯ ಜೊತೆಗೆ ತನ್ನ ಕಾಲದಲ್ಲಿನ ಸಾಮಾಜಿಕ ಸಿತ್ಯಂತರಗಳನ್ನು ಕಾವ್ಯದಲ್ಲಿ ಒಡಮೂಡಿಸಿರುವುದನ್ನು ಕಾಣಬಹುದು. ಈ ನಿಟ್ಟಿನಲ್ಲಿ ಪಂಪ ಮತ್ತು ಕುಮಾರವ್ಯಾಸರಿಬ್ಬರೂ ವ್ಯಾಸಭಾರತವನ್ನು ತಮ್ಮದೇ ನಿರ್ದಿಷ್ಟ ಬದ್ಧತೆ ಹಾಗೂ ಆಶಯಕ್ಕನುಗುಣವಾಗಿ ಮಾರ್ಪಡಿಸಿಕೊಂಡಿರುವುದನ್ನು ಕಾಣಬಹುದು.

ಬೆಟ್ಟದಬೀಡು ಸಿದ್ದಶೆಟ್ಟಿಯವರು ಹಾಡಿರುವ ಪಿ.ಕೆ. ರಾಜಶೇಖರ ಅವರು ಸಂಗ್ರಹಿಸಿರುವ 'ಜನಪದಮಹಾಭಾರತ' ಕನ್ನಡದಲ್ಲಿ ದೊರಕಿರುವ ಸಂಪೂರ್ಣ ಮಹಾಭಾರತದ ಮೊಟ್ಟಮೊದಲ ಕೃತಿಯಾಗಿದೆ. ಇದಕ್ಕೂ ಹಿಂದೆ ಮಹಾಭಾರತದ ಕಥೆಯನ್ನಾದರಿಸಿದ ಅನೇಕ ಜನಪದ ಕೃತಿಗಳು ಲಭ್ಯವಾಗಿದ್ದರೂ ಸಂಪೂರ್ಣ ಕಥೆಯನ್ನೊಳಗೊಂಡ ಕೃತಿ ಇದೇ ಆಗಿದೆ. ಜನಪದ ಮಹಾಭಾರತ

ಶಿಷ್ಟ ಕವಿಗಳಿಗಿದ್ದಂತೆ ಯಾವುದೇ ನಿಯಮ ನಿಬಂಧಗಳಿಗೆ ಒಳಪಡದೆ ಮೌಖಿಕವಾಗಿ ಹರಿದು ಬಂದ ಕಾವ್ಯವಾಗಿದೆ. ಹೀಗೆ ಪರಂಪರಾನುಗತವಾಗಿ ಹರಿದು ಬಂದಂತಹ ಸಂದರ್ಭದಲ್ಲಿ ಅಂದಿನ ಪ್ರಾದೇಶಿಕ ಸಾಮಾಜಿಕ ಸ್ಥಿತಿಗಳಿಗೆ ಅನುಗುಣವಾಗಿ ಮಾರ್ಪಡುತ್ತಾ ಪ್ರಾದೇಶಿಕ ಸಾಂಸ್ಕೃತಿಕ ಸೊಗಡನ್ನು ತನ್ನೊಡಲಲ್ಲಿ ಸೇರಿಸಿಕೊಳ್ಳುತ್ತಾ ಬಂದಿದೆ. ಹೀಗೆ ಜನಪದ ಮಹಾಭಾರತ ರಚನಾವಿನ್ಯಾಸದಿಂದ ಪಂಪಭಾರತ ಹಾಗೂ ಕುಮಾರವ್ಯಾಸಭಾರತಕ್ಕಿಂತ ಭಿನ್ನವಾಗಿದೆ. ಪಂಪಭಾರತ ಲೌಕಿಕ ಕಾವ್ಯವಾದರೆ, ಕುಮಾರವ್ಯಾಸಭಾರತ ವೈದಿಕೋತ್ತರ ಸಂವೇದನೆಯ ಕಾವ್ಯವಾಗಿದೆ. ಇವೆರಡಕ್ಕೂ ವ್ಯಾಸಮಹಾಭಾರತ ಮೂಲವಾದರೂ ಅವುಗಳ ಸ್ವರೂಪದ ನೆಲೆಯಲ್ಲೇ ಈ ಕಾವ್ಯಗಳೆರಡೂ ರಚನೆಗೊಂಡ ಕಾಲಧರ್ಮಕ್ಕೆ ಬದ್ಧವಾಗಿರುವುದು ಸ್ಪಷ್ಟವಾಗಿದೆ. ಇವೆರಡು ಕಾವ್ಯಗಳು ಅಭಿಜಾತೀಯ ಪರಂಪರೆಯಲ್ಲಿ ಬಂದ ಪರಮೋತ್ಕೃಷ್ಟ ಕಾವ್ಯಗಳಾಗಿವೆ. ಆದರೆ ಈ ಎರಡೂ ಕಾವ್ಯಗಳ ಭಿನ್ನನೆಲೆಯಿಂದ ಜನಪದ ಮಹಾಭಾರತ ಒಡಮೂಡಿದೆ.

ಜನಪದ ಮಹಾಭಾರತ ಲಿಖಿತರೂಪವಲ್ಲದ ಮೌಖಿಕ ಕಾವ್ಯವಾದರೂ ಜನಮಾನಸದಲ್ಲಿರುವ ಐತಿಹ್ಯ, ಪುರಾಣ, ಇತಿಹಾಸ, ಮಹಾಕಾವ್ಯ ಕಥೆ ಇವೆಲ್ಲವುಗಳು ಒಂದರೊಡನೊಂದು ಬೆರತು ವಿಶಿಷ್ಟರೂಪ ಪಡೆದಿದೆ. ಪಂಪ ಕುಮಾರವ್ಯಾಸರು ಸಮಾಜದ ಮುಖ್ಯವಾಹಿನಿಗೆ ಸೇರಿದ್ದು ಅವರಿಗೆ ನೆಲೆ ಹಾಗೂ ಚಹರೆಯಿದೆ. ಹಾಗೆಯೆ ಪರಂಪರೆ ಮತ್ತು ಸಂಸ್ಕೃತಿಗಳಿವೆ. ಆದರೆ ಜನಪದ ಮಹಾಭಾರತದ ಕವಿ/ಗಾಯಕ ಅನಾಮಧೇಯ, ಅನಕ್ಷರಸ್ಥನಾಗಿದ್ದು ಚಹರೆಯಿಲ್ಲದ ಕಿರು ಸಂಸ್ಕೃತಿಯ ನೆಲೆಯಿಂದ ಬಂದ ಅನನ್ಯ ದನಿಯಾಗಿದೆ.

ಹೀಗಾಗಿ ಈ ಮೂರು ಮಹಾಕಾವ್ಯಗಳು ಸಮಾನಾಂತರ ಅಂಶಗಳಿಗಿಂತ ಹೆಚ್ಚಾಗಿ ತಮ್ಮದೇ ಕಾಲ, ದೇಶ, ಸಂಸ್ಕೃತಿ ಚಿಂತನಾಕ್ರಮ ಮುಂತಾದ ಹಲವು ವಿಶಿಷ್ಟತೆಗಳಿಂದ ಭಿನ್ನವಾಗಿ ನಿಂತ ಕಾವ್ಯಗಳಾಗಿವೆ. ಇವುಗಳ ವೈಶಿಷ್ಟ್ಯ ಮತ್ತು ರಚನೆಯಪ್ರೇರಣೆ, ಕಾವ್ಯ ಮನೋಧರ್ಮಗಳು ಭಿನ್ನವಾಗಿದೆ. ಶಿಷ್ಟಕಾವ್ಯ ಪರಂಪರೆಯೊಂದಿಗೆ ಮುಖಾಮುಖಿಯಾಗಿ ನಿಂತಿರುವ ಮೌಖಿಕ ಪರಂಪರೆಯ ಸೃಜನಶೀಲ ಅಭಿವ್ಯಕ್ತಿ ಜನಪದ ಮಹಾಭಾರತ. ಈ ಹಿನ್ನಲೆಯಿಂದ ಮೂರು ಮಹಾಕಾವ್ಯಗಳನ್ನು ತೌಲನಿಕವಾಗಿ ಅಧ್ಯಯನ ಮಾಡಲಾಗಿದೆ. ಅಲ್ಲದೆ ಜನಪದ ಜೀವನಾನುಭವದ ಆವರಣದಿಂದ ರೂಪ ತಳೆದು ಆವಿರ್ಭವಿಸಿರುವ ಜನಪದ ಮಹಾಭಾರತ ಶಿಷ್ಟ ಪರಂಪರೆಯ ಅಭಿಜಾತೀಯ ಕವಿಯಾದ ಕುಮಾರವ್ಯಾಸನ ಮೇಲೂ ತೀವ್ರ ಪ್ರಭಾವ ಬೀರಿರುವುದು ಕಾವ್ಯದ ಹಲವು ಸನ್ನಿವೇಶಗಳಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಜನಪದ ಜೀವನ ಕ್ರಮ ಅವಿಚಿನ್ನ ಭಾಗವೇ ಆಗಿರುವ ನುಡಿಗಟ್ಟುಗಳು, ಗಾದೆಗಳು, ಉಪಮೇಯ ರೂಪಕಗಳು ಮುಂತಾದವುಗಳಿಂದ ಕುಮಾರವ್ಯಾಸ

ಉಪಕೃತನಾಗಿದ್ದಾನೆ, ಎಂಬುದಕ್ಕೆ ಅವನ ಕಾವ್ಯದಲ್ಲಿ ಹಲವಾರು ನಿದರ್ಶನಗಳನ್ನು ಕಾಣುತ್ತೇವೆ. ಪ್ರಾಯಶಃ ಈ ದಿಸೆಯಿಂದಾಗಿಯೇ ಕುಮಾರವ್ಯಾಸನ ಕಾವ್ಯ ದೇಸಿಪರಂಪರೆಯ ಒಂದು ಉತ್ಕೃಷ್ಟ ಮಾದರಿ ಎನಿಸಿದೆ.

ಜನಪದ ಮಹಾಭಾರತ ಪುರಾಣ ಮತ್ತು ವರ್ತಮಾನದ ಒಂದು ಕೊಂಡಿಯಂತಿದ್ದು ಸಮಕಾಲೀನ ಪ್ರಜ್ಞೆಯನ್ನು ತನ್ನ ಆಂತರ್ಯದಲ್ಲಿ ಹುದುಗಿಸಿಕೊಂಡಿದೆ. ಸಿ.ಪಿ.ಕೆಯವರು ಹೇಳಿರುವಂತೆ 'ಇದೊಂದು ಬಹು ಶಾಖಾ ಸಮನ್ವಿತ ವಟವೃಕ್ಷ'. ಮಾರ್ಗಕಾವ್ಯ ಪದ್ಧತಿಯಲ್ಲಿ ರಚಿತವಾದ ಪಂಪನ ಭಾರತ ಕಾವ್ಯಕ್ಕಿಂತಲ್ಲೂ ಕುಮಾರವ್ಯಾಸನ ಕರ್ನಾಟ ಕಥಾಮಂಜರಿ ಸಮುದಾಯದ ಬದುಕಿಗೆ ಭಾವನೆಗೆ ಹೆಚ್ಚು ನಿಕಟವಾಗಿದೆ. ಆದರೆ ಜನಪದ ಮಹಾಭಾರತ ಈ ಇಬ್ಬರೂ ಶಿಷ್ಟಕವಿಗಳ ಅಭಿಜಾತೀಯ ಕಾವ್ಯಗಳಿಗೆ ದೇಸಿಯತೆ ಸೊಗಡನ್ನು ಈ ನೆಲದ ಜನಸಂಸ್ಕೃತಿಯನ್ನು ಪ್ರದಾನಿಸಿದ ಒಂದು ಅನನ್ಯ ಅಸ್ಮಿತೆಯ ಮಹಾಕಾವ್ಯವಾಗಿದೆ.

ವಾಚಿಕ ಪರಂಪರೆಯ ಜನಪದ ಮಹಾಭಾರತ ತನ್ನ ಮೌಲ್ಯಪ್ರಜ್ಞೆ ಸಾಂಸ್ಕೃತಿಕ ಸಂಘರ್ಷಗಳನ್ನೊಳಗೊಂಡಿದ್ದು ಇವುಗಳ ನೆಲೆಯಿಂದಲೇ ಮನುಷ್ಯ ಜೀವನದ ಸಂಕೀರ್ಣತೆಗೆ ಒಂದು ಹೊಸ ಪರಿಭಾಷೆಯನ್ನು ಕಟ್ಟಿಕೊಟ್ಟಿದೆ ಎನಿಸುತ್ತದೆ. ಒಟ್ಟಾರೆ, ಪಂಪ ಕುಮಾರವ್ಯಾಸರಂಥ ಶಿಷ್ಟ ಕವಿಗಳಾಗಲೀ, ಅನಾಮಧೇಯ ಜನಪದಕವಿಗಳಾಗಲೀ ಸೃಷ್ಟಿಸಿರುವ ಈ ಮಹಾಕಾವ್ಯಗಳು ಜೀವನಮೌಲ್ಯ, ಆದರ್ಶ ಮತ್ತು ತಾತ್ವಿಕತೆಯನ್ನು ಇಹದ ಸಂದರ್ಭದಿಂದಲೇ ಶೋಧಿಸುವ ಒಂದು ತೀವ್ರ ಸೃಜನಶೀಲ ಕ್ರಿಯೆಯಲ್ಲಿ ತೊಡಗಿಕೊಂಡಿರುವುದು ಗಮನೀಯ. ಕುಮಾರವ್ಯಾಸ ಕೃಷ್ಣ ಕೇಂದ್ರಿತವಾಗಿ ಕಥಿಸಿದ್ದರೂ ಇಲ್ಲಿನ ಕೃಷ್ಣ ಮನುಷ್ಯರೂಪ ಎಂಬುದನ್ನು ಮರೆಯುವಂತಿಲ್ಲ.

ಪಂಪ ಕುಮಾರವ್ಯಾಸರ ಶಿಷ್ಟ ಕಾವ್ಯಗಳಿಗಿಂತಲ್ಲೂ ಪ್ರಕೃತಿ ಸ್ವರೂಪಿ ಮಹಾಕಾವ್ಯದಂತಿರುವ ಜನಪದಮಹಾಭಾರತ ಕಾಲಘಟ್ಟಗಳಲ್ಲಿನ ಸಮಾಜ ಸಮುದಾಯಗಳ ಮನೋವಿಕಾಸದ ಪ್ರಕ್ರಿಯೆಗಳನ್ನು ಅಂತರ್ಗತ ಮಾಡಿಕೊಂಡು, ರೂಪು ತಳೆದ ಅವ್ಯಾಹತವಾಗಿ ಪ್ರವಹಿಸುತ್ತಲೇ ಇರುವ ಕಾವ್ಯಸಲಿಲದಂತಿದೆ. ಏಕೆಂದರೆ ಜನಪದ ಎಂದಿಗೂ ಸ್ಥಾವರವಲ್ಲ ಅದು ಗತಿಶೀಲ. ಹೀಗಾಗಿ ಜನಪದ ಮಹಾಭಾರತವು ಮನುಷ್ಯ ಸಮುದಾಯದ ಸಾಂಸ್ಕೃತಿಕ ಸಾಮಾಜಿಕ ಬದುಕಿನ ಒಂದು ಪ್ರತಿಮಾತ್ಮಕ ಮಹಾಕಾವ್ಯ ಎನಿಸುತ್ತದೆ.

ಗ್ರಂಥ ಋಣ

## ಅನುಬಂಧ - I

**ಆಧಾರ ಗ್ರಂಥಗಳು:**


**ಅಳಸಿಂಗರಾಚಾರ್ಯ (ಅನು)** : ಶ್ರೀ ಮಹಾಭಾರತವು- ಅದಿಪರ್ವವು (ಭಾಗ-೧), ಕರ್ಣಾಟಕಡೆಪೊ, ಮದರಾಸು?

ಶ್ರೀ ಮಹಾಭಾರತವು-ಸಭಾಪರ್ವವು, ಕರ್ಣಾಟಕಡೆಪೊ, ಮದರಾಸು, ೧೯೩೬(?)

ಶ್ರೀ ಮಹಾಭಾರತವು-ಉದ್ಯೋಗಪರ್ವವು (ಭಾಗ-೧), ಕರ್ಣಾಟಕಡೆಪೊ, ಮದರಾಸು, ೧೯೩೬(?)

ಶ್ರೀ ಮಹಾಭಾರತವು-ಉದ್ಯೋಗಪರ್ವವು (ಭಾಗ-೨), ಕರ್ಣಾಟಕಡೆಪೊ, ಮದರಾಸು, ೧೯೩೬(?)

ಶ್ರೀ ಮಹಾಭಾರತವು-ಭೀಷ್ಮಪರ್ವವು, ಕರ್ಣಾಟಕ ಡೆಪೊ, ಮದರಾಸು, ೧೯೩೩

ಶ್ರೀ ಮಹಾಭಾರತವು-ದ್ರೋಣಪರ್ವವು (ಭಾಗ-೧), ಕರ್ಣಾಟಕ ಡೆಪೊ, ಮದರಾಸು, ೧೯೩೬(?)

ಶ್ರೀ ಮಹಾಭಾರತವು-ಉದ್ಯೋಗಪರ್ವವು (ಭಾಗ-೨), ಕರ್ಣಾಟಕ ಡೆಪೊ, ಮದರಾಸು, ೧೯೩೬(?)

ಶ್ರೀ ಮಹಾಭಾರತವು-ಕರ್ಣಪರ್ವವು (ಭಾಗ-೧), ಕರ್ಣಾಟಕ ಡೆಪೊ, ಮದರಾಸು, ೧೯೩೫(?)

**ಆನಂದರಾಮ ಉಪಾಧ್ಯ. ಸಿ** : ಯಕ್ಷಗಾನ ಮಹಾಭಾರತ ಪ್ರಸಂಗಗಳು, ಕೃತಿ ಪ್ರಕಾಶನ, ಬೆಂಗಳೂರು, ೧೯೯೦.

**ಕಾವ್ಯಜೀವಿ (ಸಂ)** : ಹಾಡ್ಹೇಳೆ ತಂಗಿದನಿ ಎತ್ತಿ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ೧೯೭೯.

**ಕುವೆಂಪು ಮತ್ತು ಮಾಸ್ತಿ ವೆಂಕಟೇಶ್ ಅಯ್ಯಂಗಾರ್** : ಕರ್ಣಾಟ ಭಾರತ ಕಥಾಮಂಜರಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೪.

ಸಿ.ಪಿ. ಕೃಷ್ಣಕುಮಾರ್ (ಅನು) : ಕನ್ನಡ ಮಹಾಭಾರತ: ವಿರಾಟಪರ್ವ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ ಮೈಸೂರು, ೧೯೯೦.

ಕೃಷ್ಣಸ್ವಾಮಿ. ಕ.ರಾ (ಸಂ) : ೧. ಹಣತಿ ಉರಿಯುತ್ತಿದೆ, ಜನಪದ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೭೪.
೨. ಜನಪದ ಗೀತೆಗಳಲ್ಲಿ ಮಹಾಭಾರತ, ಭಾಗ–I, ಜನಪದ ಸಾಹಿತ್ಯ ಅಕಾಡೆಮಿ, ಮೈಸೂರು, ೧೯೬೫.

ಕೃಷ್ಣಾಜೋಯಿಸ್. ಎಸ್.ಎನ್. (ಸಂ) : ಉದ್ಯೋಗಪರ್ವ, ಪ್ರಾಚ್ಯವಿದ್ಯಾಸಂಶೋಧನಾಲಯ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೫೫.

ಗುಂಡ್ಮಿ ಚಂದ್ರಶೇಖರ ಐತಾಳ (ಸಂ) : ಕೈಯಲ್ಲಿ ಕರೆದನೊರೆ ಹಾಲು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೦.

ನಾಯಕ. ಎನ್.ಆರ್. (ಸಂ) : ೧. ಗಾಮೊಕ್ಕಲ ಮಹಾಭಾರತ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨.
೨. ಹೇಳುತೇವೋಗುಮ್ಮೆ ಪದನಾವಾ, ಜನಪದ ಪ್ರಕಾಶನ, ಹೊನ್ನಾವರ, ೧೯೮೩.

ಪುಟ್ಟಣ್ಣ (ಸಂ) : ಅರ್ಜುನ ಜೋಗೀ ಹಾಡು, ರಾಜೇಶ್ವರೀ ಮುದ್ರಣಾಲಯ, ಬೆಂಗಳೂರು, ೧೯೯೬.

ಬಸವರಾಜು, ಎಲ್. (ಸಂ) : ಪಂಪಭಾರತ, ವಿಶ್ವಾಸ್ ಪ್ರಿಂಟ್ಸ್, ಬೆಂಗಳೂರು, ೨೦೦೯.

ಪಿ.ಕೆ. ರಾಜಶೇಖರ್ (ಸಂ) : ೧. ಜನಪದ ಮಹಾಭಾರತ, ಲಾವಣ್ಯ ಮುದ್ರಣ, ಬೆಂಗಳೂರು, ೨೦೦೪.
೨. ಪಾರ್ಥನ ಜೋಗಿ ಹಾಡು, ಲಾವಣ್ಯ ಮುದ್ರಣ, ಬೆಂಗಳೂರು, ೨೦೦೪.

ರಾಮಯ್ಯ ಬಿ. ರಾಮದೇವನಹಳ್ಳಿ : ಜನಪದ ಮಹಾಭಾರತ, ಸರಸ್ವತಿ ಮಂದಿರ, ರಾಮದೇವನಹಳ್ಳಿ, ೧೯೭೮.

ತ.ಸು. ಶಾಮರಾವ್ : ೧. ಸಭಾಪರ್ವ ಸಂಗ್ರಹ ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೭೨.
೨. ಉದ್ಯೋಗಪರ್ವ ಸಂಗ್ರಹ ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೮೪.

ಶಾಸ್ತ್ರಿ.ಕೆ.ಜಿ. (ಸಂ) : ಐರಾವತ ನೋಂಪಿ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೪.

ಶೇಷಾಚಲಶರ್ಮ. ಎಸ್. (ಅನು) : ಕನ್ನಡ ಮಹಾಭಾರತ: ಆದಿಪರ್ವ (೨) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೦

ಸಣ್ಣಯ್ಯ ಬಿ.ಎಸ್. ಮತ್ತು ರಾಮೇಗೌಡ (ರಾ.ಗೌ) : ಲಕ್ಷ್ಮೀಶನ ಜೈಮಿನಿಭಾರತ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೩.

ಸೀತಾರಾಮಯ್ಯ. ಎಂ.ವಿ. : ಕುಮಾರವ್ಯಾಸಭಾರತ ಸಂಗ್ರಹ, ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೯೦.

ಸೋಮಶೇಖರ ಇಮ್ರಾಪುರ (ಸಂ) : ಜನಪದ ಮಹಾಭಾರತ, ಚೇತನ ಪ್ರಕಾಶನ, ಧಾರವಾಡ, ೧೯೭೬.

## ಅನುಬಂಧ – II

ಪರಾಮರ್ಶನ ಗ್ರಂಥಗಳು:

ಅಕ್ಕಮಹಾದೇವಿ (ಸಂ) : ಭಾರತ ಕಥಾ ಸಂಗ್ರಹ ಮತ್ತು ಕನ್ನಡ ಕಾದಂಬರಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೧೧.

ಅನಂತಬುರ್ಲಿ : ಕುಮಾರವ್ಯಾಸನ ಭಾಗವತ ದೃಷ್ಟಿ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೭೨.

ಆರ್.ಎಲ್. ಅನಂತರಾಮಯ್ಯ : ಪಂಪಭಾರತ ಕಥಾಲೋಕ, ಅಪರ್ಣಾ ಪ್ರಕಾಶನ, ಮೈಸೂರು, ೧೯೭೫.

ಅ.ರಾ. ಮಿತ್ರ : ಮಹಾಭಾರತದ ಪಾತ್ರ ಸಂಗತಿಗಳು, ವಸಂತ ಪ್ರಕಾಶನ, ಬೆಂಗಳೂರು, ೨೦೧೦.

ಕೀರ್ತಿನಾಥ ಕುರ್ತಕೋಟಿ : ೧. ಕುಮಾರವ್ಯಾಸ ಸಾಹಿತ್ಯ ಅಕಾಡೆಮಿ,ದೆಹಲಿ, ೧೯೮೯.
೨. ಯುಗಧರ್ಮ ಹಾಗೂ ಸಾಹಿತ್ಯ ದರ್ಶನ ಮನೋಹರ ಗ್ರಂಥ ಮಾಲೆ, ಧಾರವಾಡ, ೧೯೬೨.

ಕುಲಕರ್ಣಿ ಎನ್ಕೆ : ಕುಮಾರವ್ಯಾಸ ಮತ್ತು ಕೃಷ್ಣ ಕಥೆ ಕರ್ನಾಟಕ ಸಹಕಾರೀ ಪ್ರಕಾಶನ, ಬೆಂಗಳೂರು, ೧೯೬೮.

ಸಿ.ಪಿ. ಕೃಷ್ಣಕುಮಾರ್ : ೧. ಕುಮಾರವ್ಯಾಸಭಾರತ: ಒಂದು ನೋಟ, ಸುವಿದ್ಯಾ ಪ್ರಕಾಶನ, ಬೆಂಗಳೂರು, ೧೯೮೮.
೨. ಷಷ್ಠಿಲೇಖ, ಚೇತನಬುಕ್‌ಹೌಸ್, ಮೈಸೂರು, ೧೯೯೯

ಕೆ. ಕೃಷ್ಣಮೂರ್ತಿ : ಮಹಾಭಾರತ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೮೨.

ಎ.ಆರ್. ಕೃಷ್ಣಶಾಸ್ತ್ರೀ : ವಚನಭಾರತ, ಗೀತಾಬುಕ್‌ಹೌಸ್, ಮೈಸೂರು, ೧೯೮೧.

ಎಸ್. ಗಣಪಯ್ಯಶೆಟ್ಟಿ : ಯಕ್ಷಗಾನ ಕೃಷ್ಣಾರ್ಜುನ ಕಾಳಗ, ಯಂ. ವೆಂಕಟರಾವ್ ಪ್ರಕಾಶನ, ಮಂಗಳೂರು, ೧೯೭೨.

ಕೆ.ಎಲ್. ಗೋಪಾಲಕೃಷ್ಣಯ್ಯ : ಪುರಾಣ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೧೯೯೮.

ಗೋವಿಂದಾಚಾರ್ಯ ಬನ್ನಂಜೆ : ಮಹಾಭಾರತ ತಾತ್ಪರ್ಯ ನಿರ್ಣಯ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ, ೧೯೯೩.

ಪ್ರೊ. ಜಿ.ಎನ್. ಚಕ್ರವರ್ತಿ (ಮೂಲ) ಮಾ. ವರದರಾಜು (ಕನ್ನಡಕ್ಕೆ) : ಇತಿಹಾಸ ಪ್ರದೀಪ, ಅಕ್ಷರ ಪ್ರಕಾಶನ ಹೆಗ್ಗೋಡು, ಸಾಗರ, ೨೦೦೩.

ಡಾ. ದೇ. ಜವರೇಗೌಡ : ಗದುಗಿನ ಭಾರತ–ಒಂದು ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೭೮.

ಬಿ.ಎಸ್. ತಲ್ವಾಡಿ : ಜಾನಪದ ಮಹಾಭಾರತ: ಒಂದು ವಿಚಾರ ಸಂಕಿರಣ, ರೋಹಿಣಿ ಎಂಟರ್‌ಪ್ರೈಸಸ್, ಬೆಂಗಳೂರು, ೨೦೧೧.

ಬಿ.ಎಸ್. ತಲ್ವಾಡಿ, ಕಿತ್ತೂರು ಡಿ. ಸತೀಶ್ ಮೈಸೂರು ಕೃಷ್ಣಮೂರ್ತಿ : ಜಾನಪದ ಜೋಗಿ, ಪಿ.ಕೆ. ರಾಜಶೇಖರ ಅಭಿನಂದನಾ ಗ್ರಂಥ, ಲಾವಣ್ಯ ಮುದ್ರಣ, ಬೆಂಗಳೂರು, ೨೦೦೮.

ಎಚ್. ತಿಪ್ಪೇರುದ್ರಸಾಮಿ : ತೌಲನಿಕ ಕಾವ್ಯ ಮೀಮಾಂಸೆ, ಡಿ.ವಿ.ಕೆ. ಮೂರ್ತಿ, ಮೈಸೂರು ವಿಶ್ವವಿದ್ಯಾನಿಲಯ, ೧೯೭೭.

ಕೆ.ಎಲ್. ನರಸಿಂಹಶಾಸ್ತ್ರೀ : ೧. ಪಂಪ ಮಹಾಕವಿ ವಿರಚಿತ ಆದಿಪುರಾಣ ಗದ್ಯಾನುವಾದ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೦.
೨. ಪಂಪ ಮಹಾಕವಿ ವಿರಚಿತ ಆದಿಪುರಾಣ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳುರು, ೧೯೯೯.

ಪಿ.ವಿ. ನಾರಾಯಣ : ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ–೪ ಚಂಪೂ ಕವಿಗಳು, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೦.

ಕೆ.ಎಸ್. ನಾರಾಯಣಾಚಾರ್ಯ : ೧. ಶ್ರೀ ಮಹಾಭಾರತ ಕಾಲ ನಿರ್ಣಯ ಮತ್ತು ಇತರ ಲೇಖನಗಳು, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ, ೨೦೦೮.
೨. ಶ್ರೀ ಮಹಾಭಾರತ ಪಾತ್ರ ಪ್ರಪಂಚ, ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ– ೨೦೦೮.

ಜೀ.ಶಂ. ಪರಮಶಿವಯ್ಯ : ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೯.

ಪುಟ್ಟಸ್ವಾಮಿ : ಕನ್ನಡ ಜಾನಪದದಲ್ಲಿ ರಾಮಾಯಣ ಮಹಾಭಾರತ, ಶ್ರೀರಾಜೇಂದ್ರ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್, ಮೈಸೂರು, ೨೦೦೩.

ಎಲ್. ಬಸವರಾಜು : ಪಂಪನ ಸಮಸ್ತ ಭಾರತ ಕಥಾಮೃತ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧.

ಬಿಂದು ಮಾಧವ ಬರ್ಲಿ : ಮಹಾಭಾರತದ ಮಹಿಳೆಯರು, ಮಿಂಚಿನ ಬಳ್ಳಿ ಕಾವ್ಯಾಲಯ, ಧಾರವಾಡ, ೧೯೬೯.

ಬೆಳ್ಳಾವೆ ವೆಂಕಟನಾರಾಯಣಪ್ಪ (ಸಂ) : ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೭.

ಬೋರೇಗೌಡ ಚಿಕ್ಕಮರಳಿ : ಕುಮಾರವ್ಯಾಸ ಒಂದು ಅಧ್ಯಯನ, ಶ್ರೀರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಮೈಸೂರು, ೧೯೯೯.

ಜಿ. ಬ್ರಹ್ಮಪ್ಪ : ಜೈನ ಮಹಾಪುರಾಣ ಮತ್ತು ವೈದಿಕ ಪುರಾಣಗಳ ತೌಲನಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೨೦೦೪.

ರಂ.ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ಉಷಾ ಸಾಹಿತ್ಯ ಮಾಲೆ, ಮೈಸೂರು, ೧೯೮೪.

ಮೈಸೂರು ಕೃಷ್ಣಮೂರ್ತಿ, ಹೆಚ್.ಆರ್. ತಿಮ್ಮೇಗೌಡ, ಮೈಸೂರು ಉಮೇಶ್ : ಬಸವಭಾಗ್ಯ, ಬಿ.ಎಸ್. ತಲ್ವಾಡಿ ಅಭಿನಂದನಾ ಗ್ರಂಥ ಲಾವಣ್ಯ ಮುದ್ರಣ, ಬೆಂಗಳೂರು, ೨೦೧೧.

ಎಸ್.ವಿ. ರಂಗಣ್ಣ : ೧. ಕುಮಾರವ್ಯಾಸ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೧.
೨. ಶೈಲಿ–೧, ಕಾವ್ಯಾಲಯ, ಮೈಸೂರು, ೧೯೭೧.

ರಾಗೌ : ೧. ಷಷ್ಠಿ ಸಂಪದ, ಶ್ರೀರಾಜೇಂದ್ರ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್, ಮೈಸೂರು, ೨೦೦೫.
೨. ಜನಪದ ಸಾಹಿತ್ಯ ರೂಪಗಳು, ಸಂವಹನ ಪ್ರಕಾಶನ, ಮೈಸೂರು, ೧೯೯೯.

ಕೆ.ಈ. ರಾಧಾಕೃಷ್ಣ (ಸಂ) : ಪಂಪಾಧ್ಯಯನ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೦.

ಕ್ಯಾತನಹಳ್ಳಿ ರಾಮಣ್ಣ (ಸಂ) : ಕೊಂತಿಪೂಜೆ: ಒಂದು ಅಧ್ಯಯನ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೫.

ಎಸ್.ಆರ್. ರಾಮಸ್ವಾಮಿ : ಮಹಾಭಾರತದ ಬೆಳವಣಿಗೆ, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೭೨.

ಎಂ.ಆರ್. ಲಕ್ಷ್ಮೀದೇವಿ : ಕುಮಾರವ್ಯಾಸ ಮತ್ತು ಜಾನಪದ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೭.

ಲಿಂಗದೇವರು ಹಳೆಮನೆ : ಸಮನ್ವಯ, ಬಿ.ನಂ.ಚ. ಅಭಿನಂದನ ಗ್ರಂಥ, ೧೯೯೮.

ಎಸ್. ವಿದ್ಯಾಶಂಕರ : ಆರಾಧ್ಯ ಸಂಪದ ಎನ್. ಬಸವರಾಧ್ಯ–೮೦ ಸಮಗ್ರ ಸಾಹಿತ್ಯ ಸಂಪುಟ, ಸ್ನೇಹಾ ಪ್ರಿಂಟರ್ಸ್, ಬೆಂಗಳೂರು, ೨೦೦೫.

ಸಿ. ವೀರಣ್ಣ : ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೮೬.

ಜಿ. ವೆಂಕಟಸುಬ್ಬಯ್ಯ : ಒಂದಿಷ್ಟು ರಾಮಾಯಣ ಒಂದಿಷ್ಟು ಮಹಾಭಾರತ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೧.

ತ.ಸು. ಶಾಮರಾಯ : ಕುಮಾರವ್ಯಾಸಭಾರತ ನಿಘಂಟು, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೦೭.

ಟಿ.ವಿ. ವೆಂಕಟಾಚಲಶಾಸ್ತ್ರೀ (ಸಂ) : ೧. ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, ೪–೧, ೫–೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೭.

೨. ಶಾಸ್ತ್ರೀಯ ಸಂಪುಟ ೧,೨,೩,೪, ಎಸ್.ಬಿ.ಎನ್. ಪಬ್ಲಿಷರ್ಸ್ ಡಸ್ಟ್ರಿಬ್ಯೂಟರ್ಸ್, ಬೆಂಗಳೂರು, ೧೯೯೯.
೩. ಪಂಪ ಸಂಪುಟ (ಆದಿ ಪುರಾಣಂ, ವಿಕ್ರಮಾರ್ಜುನ ವಿಜಯಂ) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೬.

ಜಿ.ಎಸ್. ಶಿವರುದ್ರಪ್ಪ : ೧. ಕನ್ನಡ ಸಾಹಿತ್ಯ ಸಮೀಕ್ಷೆ, ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ, ಬೆಂಗಳೂರು, ೧೯೮೫.
೨. ಮಹಾಕಾವ್ಯ ಸ್ವರೂಪ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೭೬.
೩. ಪಂಪ: ಒಂದು ಅಧ್ಯಯನ (ಸಂ), ಪ್ರಸಾರಾಂಗ, ಬೆಂಗಳೂರು ವಿದ್ಯಾಲಯ, ಬೆಂಗಳೂರು, ೧೯೯೧.

ಡಿ.ಎಸ್. ಶೆಟ್ಟಿ (ಸಂ) : ಕನ್ನಡ ಸಾಹಿತ್ಯ ಪರಂಪರೆ ಮತ್ತು ಅಭಿವ್ಯಕ್ತಿ, ಕನ್ನಡ ಸಂಘ, ಶ್ರೀಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ, ದಕ್ಷಿಣಕನ್ನಡ, ೨೦೦೬.

ಎಚ್. ಸಿದ್ಧಲಿಂಗಯ್ಯ : ವಚನ ಪಂಪಭಾರತ, ಶ್ರೀರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್, ಮೈಸೂರು, ೨೦೦೧.

ಸೀತಾರಾಮ ಜಾಗೀರ್‌ದಾರ್ : ೧. ಕುಮಾರವ್ಯಾಸ: ಒಂದು ಅಧ್ಯಯನ, ಶ್ರೀವೆಂಕಟೇಶ ಪ್ರಕಾಶನ, ಬೆಂಗಳೂರು, ೧೯೯೮.
೨. ಸಾಪೇಕ್ಷ (ಪಂಪನನ್ನು ಕುರಿತ ವಿಮರ್ಶಾತ್ಮಕ ಸಂ ಪ್ರಬಂಧಗಳು) ಶ್ರೀ ವೆಂಕಟೇಶ ಪ್ರಕಾಶನ, ಬೆಂಗಳೂರು, ೧೯೯೦.

ಎಂ.ವಿ. ಸಿತಾರಾಮಯ್ಯ (ಸಂ) : ೧. ಕುಮಾರವ್ಯಾಸ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೭೩.
೨. ಕುಮಾರವ್ಯಾಸ ಪ್ರಶಸ್ತಿ, ಕರ್ನಾಟಕ ಸಂಘ, ಮೈಸೂರು, ೧೯೪೦.

ಸುಜನಾ : ೧. ಕುಮಾರವ್ಯಾಸ ಡಿ.ವಿ.ಕೆ. ಮೂರ್ತಿ, ಮೈಸೂರು, ೧೯೭೧.
೨. ಯುಗಸಂಧ್ಯಾ.

ನ. ಸುಬ್ರಹ್ಮಣ್ಯ : ಮಹಾಭಾರತ ಸಮೀಕ್ಷೆ, ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೭೩.

ಬಿ.ಎಸ್. ಸ್ವಾಮಿ : ಜನಪದ ಮಹಾಭಾರತ-ಒಂದು ಸಮೀಕ್ಷೆ, ಶ್ರೀವೆಂಕಟೇಶ್ವರ ಪ್ರಿಂಟರ್ಸ್, ಬೆಂಗಳೂರು, ೨೦೦೬.

ಜಿ. ಹನುಮಂತರಾವ್ : ಜೈನ ಧರ್ಮ ದರ್ಶನ, ಡಿ.ವಿ.ಕೆ. ಮೂರ್ತಿ, ಮೈಸೂರು, ೨೦೦೪.

ಎಲ್.ಆರ್. ಹೆಗ್ಗಡೆ : ಕುಮಾರವ್ಯಾಸನ ಪಾತ್ರ ಸೃಷ್ಟಿ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ, ೧೯೭೮.

ಮುರಳೀಧರ ಉಪಾಧ್ಯ ಹಿರಿಯಡಕ, ಹೆರಂಜೆ ಕೃಷ್ಣಭಟ್ಟ : ಗೋವಿಂದ ಪೈ ಸಂಶೋಧನ ಸಂಪುಟ, ರಾಷ್ಟ್ರ ಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ, ೧೯೯೫.

ಸಿ.ಬಿ. ಹೊನ್ನಯ್ಯ : ಕನ್ನಡ ಸಾಹಿತ್ಯ ಸಂಸ್ಕೃತಿ ಮೀಮಾಂಸೆ, ಜೈಭೀಮ್ ಪ್ರಕಾಶನ, ಬೆಂಗಳೂರು, ೨೦೦೮.

**Romesh Chunder Dutt** : Mahabharata, The Epic of Ancient India condensed into English verse, London, 1899.

**Shymanarayana Pandeya** : Geographical Horizon of the Mahabharata, Bharatha Bharati Oriental Publishers and Book sellers, Varanasai.

**V.S. Sukthanakar** : Prolegomena to the Adiparvam, critical edition of the Mahabharata, Bhandarkar Oriental Research Institute, Poona, 1993.

# ಅನುಬಂಧ - III

**ಲೇಖನಗಳು:**


೧. **ಕೀರ್ತಿನಾಥ ಕುರ್ತುಕೋಟಿ:** ಕನ್ನಡ ಸಾಹಿತ್ಯ ಸಂಗಾತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫.

೨. **ಕೃಷ್ಣಮೂರ್ತಿ. ಕೆ:** ಪಂಪ ಕವಿ ಸಂಸ್ಕೃತದ ಹಿನ್ನಲೆ, ಪಂಪ: ಒಂದು ಅಧ್ಯಯನ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೪.

೩. **ಕಲಬುರ್ಗಿ ಎಂ.ಎಂ.:** ಪಂಪನ ಧಾರ್ಮಿಕ-ಐತಿಹಾಸಿಕ ಹಿನ್ನಲೆ, ಪಂಪ ಒಂದು ಅಧ್ಯಯನ, ಬೆಂಗಳೂರು ವಿಶ್ವವಿದ್ಯಾನಿಲಯ, ೧೯೭೪.

೪. **ಪ್ರಭುಶಂಕರ:** ಪಂಪ ಕವಿ, ಕೃತಿಶೀಲ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೭.

೫. **ವೆಂಕಟಸುಬ್ಬಯ್ಯ. ಜಿ.:** ಪಂಪ:ಕೆಲವು ಟಿಪ್ಪಣಿಗಳು, ಪಂಪಾಧ್ಯಯನ ಗ್ರಂಥ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೦.

೬. **ನಾಗರಾಜಯ್ಯ. ಹಂ.ಪ.:** ಪಂಪ: ಕೆಲವು ಟಿಪ್ಪಣ್ಣಿಗಳು, ಪಂಪಾಧ್ಯಯನ, ೨೦೧೦.

೭. **ವೆಂಕಟೇಶ. ಜಿ. ಮಲ್ಲೇಪುರಂ:** ಪಂಪನ ಓದು: ಒಂದು ಸಾಂಸ್ಕೃತಿಕ ಅಧ್ಯಯನ, ಪಂಪಾಧ್ಯಯನ ಗ್ರಂಥ, ೨೦೧೦.

೮. **ಬಸವಾರಾಧ್ಯ. ಎನ್:** ಪಂಪ ಕವಿಯ ಪ್ರಸ್ತುತತೆ, ೨೦೧೦.

೯. **ನಾವಡ. ಎ.ವಿ:** ವಿಕ್ರಮಾರ್ಜುನ ವಿಜಯ: ಸಮಸ್ತ ಭಾರತದ ಪರಿಕಲ್ಪನೆ, ೨೦೧೦.

೧೦. **ತಾರಾನಾಥ್. ಎನ್.ಎಸ್:** ಪಂಪನ ಕಾವ್ಯಗಳು ಮತ್ತು ಕಾರ್ಕಳ ಶಾಸನ, ಕರೀಂನಗರ ಶಾಸನ: ಪ್ರೇರಣೆ, ಸಂಬಂಧ, ೨೦೧೦.

೧೧. **ಕುಮಾರಚಲ್ಯ,** ವಿಕ್ರಮಾರ್ಜುನ ವಿಜಯಂ: ಧಾರ್ಮಿಕ ವಿನ್ಯಾಸ, ೨೦೧೦.

೧೨. **ಶಾಂತಿನಾಥ ದಿಬ್ಬದ,** ಪಂಪಭಾರತ: ಹಿಂಸೆ-ಪ್ರತಿಹಿಂಸೆಯ ದೃಷ್ಟಿಕೋನ, ೨೦೧೦.

೧೩. **ಕೃಷ್ಣಮೂರ್ತಿ ಹನೂರು,** ಪಂಪ-ಆದಿಪುರಾಣ: ಕಾವ್ಯಬಂಧದ ವಿನ್ಯಾಸ, ೨೦೧೦.

೧೪. **ನಾಗರಾಜ. ಎಂ.,** ಆದಿಪುರಾಣಂ ಕಾವ್ಯ ಭಾಷೆಯ ನೇಯ್ಗೆ, ೨೦೧೦.

೧೫. **ಬಸವರಾಜ ಸಬರದ,** ಆದಿಪುರಾಣ: ಹಿಂಸೆ-ಅಹಿಂಸೆಗಳ ಸಂಘರ್ಷ, ೨೦೧೦.

# ಅನುಬಂಧ - IV

**ನಿಘಂಟುಗಳು-ವಿಶ್ವಕೋಶಗಳು-ಪತ್ರಿಕೆಗಳು:**


೧. **ಸಂಕ್ಷಿಪ್ತ ಕನ್ನಡ ನಿಘಂಟು** - ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭.

೨. **ಕನ್ನಡ-ಕನ್ನಡ ನಿಘಂಟು ಸಂಪುಟಗಳು** - ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩. **ಇಂಗ್ಲಿಷ್-ಕನ್ನಡ ನಿಘಂಟು** - ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೫.

೪. **ಇಂಗ್ಲಿಷ್-ಕನ್ನಡ ನಿಘಂಟು (ಪರಿಷ್ಕೃತ)** - ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೯.

೫. **ಕನ್ನಡ ವಿಶ್ವಕೋಶ ಸಂಪುಟಗಳು** - ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೬. **ಕರ್ನಾಟಕ ಜಾನಪದ ವಿಶ್ವಕೋಶ ಸಂ. ೧-೨** - ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೭. **ಕನ್ನಡ ವಿಷಯ ವಿಶ್ವಕೋಶ** - ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

